# ಉಪನಿಷತ್ ರಹಸ್ಯವು

ಅಥವಾ

## ಭಾರತೀಯ ಅಧ್ಯಾತ್ಮಶಾಸ್ತ್ರದ ಪೀಠಿಕೆಯು

ಪ್ರೊ. ರಾ. ದ. ರಾನಡೇಯವರ

A Constructive survey of Upanishadic Philosophy

ಎಂಬ ಗ್ರಂಥದ ಕನ್ನಡ ಅನುವಾದವು

ಅನುವಾದಕರು:—

ರಂಗನಾಥ ರಾಮಚಂದ್ರ ದಿವಾಕರ. ಎಮ್. ಎ., ಎಲ್ಎಲ್. ಬಿ.
ಸಂಪಾದಕ, 'ಕರ್ಮವೀರ'

ದತ್ತಾತ್ರೇಯ ರಾಮಚಂದ್ರ ಬೇಂದ್ರೆ. ಬೀ. ಎ.
ಸಂಪಾದಕ, 'ಸ್ವಧರ್ಮ'

ಶಂಕರ ಬಾಳಕೃಷ್ಣ ಜೋಶಿ.

ಗ್ರಂಥಕರ್ತರು.

ವಿಭವ ಸಂವತ್ಸರ ೧೮೫೦

( ಇ. ಸ. ೧೯೨೮ )

ಅಧ್ಯಾ[illegible]ಲಯ








ಮುದ್ರಕ:— ಮಾಧವ ಕೃಷ್ಣ ಜೋಶಿ

ಮುದ್ರಣಾಲಯ:— ಕರ್ನಾಟಕ ಪ್ರಿಂಟಿಂಗ ವರ್ಕ್ಸ ಧಾರವಾಡ

ಪ್ರಕಾಶಕ:— ರಂಗನಾಥ ರಾಮಚಂದ್ರ ದಿವಾಕರ

ಪ್ರಕಾಶನದ ಸ್ಥಳ:— ಅಧ್ಯಾತ್ಮಕಾರ್ಯಾಲಯ ಧಾರವಾಡ





ಭಾಗ ೧

ಮುನ್ನುಡಿಗಳು, ಪ್ರಸ್ತಾವನೆ, ಅನುಕ್ರಮಣಿಕೆ

ಮತ್ತು

# ಉಪನಿಷತ್-ರಹಸ್ಯವು

# ಗ್ರಂಥಕರ್ತನ ಮುನ್ನುಡಿ

ಉಪನಿಷತ್ತುಗಳೊಳಗಿನ ತತ್ವಜ್ಞಾನದ ಸರ್ವಾಂಗೀನ ವಿಚಾರಗಳನ್ನೊಳಗೊಂಡ 'A constructive survey of Upanishadic Philosophy' ಎಂಬ ಆಂಗ್ಲಗ್ರಂಥವನ್ನು ನಾನು ಬರೆದು ಎರಡು ವರ್ಷಗಳಾಗಿ ಹೋದವು. ಇಂಗ್ಲೀಷದಲ್ಲಿ ಬರೆದ ಈ ಗ್ರಂಥದ ಭಾಷಾಂತರವು ನಮ್ಮ ದೇಶೀಯ ಭಾಷೆಗಳಲ್ಲಿ ಆದರೆ ನನ್ನ ಎಲ್ಲ ಬಾಂಧವರಿಗೂ ಹೆಚ್ಚು ಉಪಯುಕ್ತವಾಗುವದೆಂದು ನನ್ನ ಸ್ನೇಹಿತರು ನನಗೆ ಹೇಳಿದ್ದರಿಂದ ನಾನು ಈ ವರೆಗೆ ಮರಾಠಿಯಲ್ಲಿಯೂ ಕನ್ನಡದಲ್ಲಿಯೂ ಇದರ ಭಾಷಾಂತರಗಳನ್ನು ಮಾಡಿಸಿರುವೆನು. ಮರಾಠೀ ಭಾಷಾಂತರಕ್ಕಿಂತಲೂ ಕನ್ನಡ ಭಾಷಾಂತರವು ತೀವ್ರವೆ ಮುದ್ರಿಸಲ್ಪಟ್ಟದ್ದನ್ನು ನೋಡಿ ನನಗೆ ಬಹಳ ಸಂತೋಷವೆನಿಸುತ್ತಿದೆ.

ಕನ್ನಡದಲ್ಲಿ ಪ್ರಸಿದ್ಧವಾಗುತ್ತಿರುವ ಈ ಗ್ರಂಥವು ನನ್ನ ಸ್ನೇಹಿತರಾದ ಶ್ರೀ. ರಂಗನಾಥ ದಿವಾಕರ, ಶ್ರೀ. ದತ್ತೋಪಂತ ಬೇಂದ್ರೆ ಮತ್ತು ಶ್ರೀ. ಶಂಕರರಾವ ಜೋಶೀ ಇವರಿಂದ ಅನುವಾದಿಸಲ್ಪಟ್ಟದೆಯೆಂದು ಹೇಳಿದರೆ ಸಾಕು. ಆಮೇಲೆ ಅದು ಎಷ್ಟು ಚನ್ನಾಗಿ ಆಗಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮೇಲೆ ಹೇಳಿದ ನನ್ನ ಮೂವರು ಸ್ನೇಹಿತರು ಕನ್ನಡ ಭಾಷಾಪ್ರವೀಣರೆಂದು ಕನ್ನಡಿಗರಿಗೆ ಹೊಸದಾಗಿ ಹೇಳುವದವಶ್ಯವಿಲ್ಲ. ಇವರು ಕನ್ನಡದಲ್ಲಿ ಭಾಷಾಂತರಿಸಿದ ಈ ಉಪನಿಷದ್ರಹಸ್ಯವೆಂಬ ಪುಸ್ತಕವನ್ನು ಓದಿ ನೋಡಲಾಗಿ ಮೂಲ ಇಂಗ್ಲೀಷ ಗ್ರಂಥಕ್ಕಿಂತ ಕೆಲವೆಡೆಗೆ ಇದು ಹೆಚ್ಚು ಸರಸವಾಗಿದೆ ಯೆಂದು ನಾನು ಧಾರಾಳವಾಗಿ ಹೇಳಬಲ್ಲೆನು.

ಇನ್ನು ಇಂಥ ಪುಸ್ತಕಗಳನ್ನು ಪ್ರಸಿದ್ಧಪಡಿಸಲಿಕ್ಕೆ ಧನಸಹಾಯವು ಬೇಕೇ ಬೇಕು. ಈ ಸಹಾಯವನ್ನು ನನ್ನ ಸ್ನೇಹಿತರಾಗ ಗದಗಿನ ರಾಜೇಶ್ರೀ ಗೋಪಾಳರಾವ ಅಸುಂಡಿ, ಬೀ. ಎ. ಧಾರವಾಡದ ರಾಜೇಶ್ರೀ ಬೋಧರಾವ ಸಾವಕಾರ ಬೀ. ಎ. ಎಲೆಲ್. ಬೀ. ಮತ್ತು ಕರ್ನಾಟಕ ಪ್ರಿಂಟಿಂಗ ವರ್ಕ್ಸಿನ ಒಡೆಯರಾದ ರಾಜೇಶ್ರೀ. ಯಶವಂತ ಭಾಸ್ಕರ ಜಠಾರ ಬೀ. ಎ. ಎಲೆಲ್. ಬೀ. ಇವರು ಸಕಾಲಕ್ಕೆ ಒದಗಿಸಿಕೊಟ್ಟರೆಂದು ಹೇಳಲಿಕ್ಕೆ ನನಗೆ ತುಂಬಾ ಸಂತೋಷವಾಗುತ್ತದೆ.

ನಾನು ಬರೆದ ಗ್ರಂಥದ ಕನ್ನಡ ಅನುವಾದವು ಎಲ್ಲಕ್ಕೂ ಮೊದಲು ಪ್ರಸಿದ್ಧವಾಗುತ್ತಿರುವದನ್ನು ನೋಡಿ ನನಗೆ ಬಹಳೇ ಆನಂದವಾಗುತ್ತದೆ. ಯಾಕಂದರೆ ಯಾರ ಕಡೆಯಿಂದ ನನಗೆ ಪರಮಾರ್ಥಜ್ಞಾನದ ದಾರಿಯು ಗೊತ್ತಾಯಿತೊ ಆ ಗುರುಗಳ ಸ್ಥಾನವು ಕರ್ನಾಟಕದಲ್ಲಿಯೆ ಇದೆ. ಇದಲ್ಲದೆ ನನ್ನ ಜನ್ಮಭೂಮಿಯು ಜಮಖಂಡಿಯಾದುದರಿಂದ ಚಿಕ್ಕಂದಿನಿಂದಲೂ ನನಗೆ ಕನ್ನಡದ ಪರಿಚಯವು ಅಲ್ಪಸ್ವಲ್ಪ ಇದ್ದೇ ಇದೆ. ಇನ್ನೊಂದು ವಿಶೇಷವೇನಂದರೆ, ಉಪನಿಷತ್ತುಗಳನ್ನು ಕುರಿತು ಮೊಟ್ಟಮೊದಲು ನಾನು ಉಪನ್ಯಾಸಗಳನ್ನು ಕೊಟ್ಟದ್ದಾದರೂ ಕರ್ನಾಟಕದ ಕೇಂದ್ರವಾದ ಬೆಂಗಳೂರಿನಲ್ಲಿಯೆ. ಈ ಎಲ್ಲ ಕಾರಣಗಳ ಮೂಲಕ ನನ್ನ ಇಂಗ್ಲೀಷ ಪುಸ್ತಕದ ಕನ್ನಡ ಅನುವಾದವು ಪುಸ್ತಕರೂಪದಿಂದ ಧಾರವಾಡದಲ್ಲಿ ಪ್ರಸಿದ್ಧಿಸಲ್ಪಡುವದು ವಿಶೇಷ ಮಹತ್ವದ ಸಂಗತಿಯಾಗಿದೆ.

ಈ ಪುಸ್ತಕವನ್ನು ಓದಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ತತ್ವಜ್ಞಾನಕ್ಕನುಸರಿಸಿ ಸಾಕ್ಷಾತ್ಕಾರವೆಂದರೇನು ಎಂಬುದನ್ನು ಜಿಜ್ಞಾಸುಗಳು ತಿಳಿದುಕೊಳ್ಳಲು ಸಮರ್ಥರಾದರೆ ನನಗೆ ಅತ್ಯಂತ ಸಮಾಧಾನವಾಗುವದು.

ಇಲ್ಲಿ ಆಗಿಹೋದ ಅನೇಕ ಶೈವ ಮತ್ತು ವೈಷ್ಣವ ಸತ್ಪುರುಷರು ಪರಮಾರ್ಥಸಾಕ್ಷಾತ್ಕಾರದ ಭಾಂಡಾರವನ್ನು ಕನ್ನಡದಲ್ಲಿ ಸಂಗ್ರಹಿಸಿರುವರು. ಇದೇ ಕರ್ನಾಟಕದ ವೈಶಿಷ್ಟ್ಯವು. ಈ ಎಲ್ಲ ಭಾಂಡಾರದ ಮೂಲ ಕಣಿಯೆಂದರೆ ಉಪನಿಷತ್ತುಗಳು. ಆದುದರಿಂದ ಈ ಉಪನಿಷದ್ರಹಸ್ಯದ ಅಧ್ಯಯನದಿಂದ ಕರ್ನಾಟಕದಲ್ಲಿಯ ಸಾಧಕರ ಆಧ್ಯಾತ್ಮಿಕ ಜಿಜ್ಞಾಸೆಯು ತಿಲಮಾತ್ರವಾದರೂ ತಣಿದರೆ ನನಗೆ ಪರಮಸಂತೋಷವಾಗುವದು.

ಇಷ್ಟು ಹೇಳಿ ಈ ಗ್ರಂಥವನ್ನು ನನ್ನ ಪ್ರಿಯ ಕನ್ನಡಿಗರಿಗೆ ಅರ್ಪಿಸುತ್ತೇನೆ.

ಆಷಾಢ, ವಿಭವಸಂವತ್ಸರ ೧೮೫೦
ಅಧ್ಯಾತ್ಮಭವನ, ನಿಂಬಾಳ

**ರಾ. ದ. ರಾನಡೆ**

# ಅನುವಾದಕರ ಮುನ್ನುಡಿ



ಭಾರತೀಯ ಅಧ್ಯಾತ್ಮಶಾಸ್ತ್ರದ ಅಡಿಗಲ್ಲಾದ ಉಪನಿಷತ್‌ಗ್ರಂಥಗಳು; ಅವುಗಳನ್ನು ಕುರಿತು ಬರೆಯುವವರು ವಿದ್ವನ್ಮಣಿಗಳೂ ಸಾಧಕಾಗ್ರಣಿಗಳೂ ಅನುಭವಿಕರೂ ಆದ ಪ್ರೊ. ರಾ. ದ. ರಾನಡೇಯವರು. ಅಂದಮೇಲೆ ' A constructive survey of Upanishadic Philosophy '–' ವಿಧಾಯಕ ರೀತಿಯಿಂದ ಉಪನಿಷತ್ತತ್ವಜ್ಞಾನದ ವಿಚಾರವು ' ಎಂಬ ಅವರ ಇಂಗ್ಲೀಷ ಗ್ರಂಥವು ಎಷ್ಟು ಉತ್ತಮವಿರಬಹುದೆಂಬುದನ್ನು ಸಹಜವಾಗಿ ಊಹಿಸಬಹುದು. ಭಾರತೀಯ ತತ್ವಜ್ಞಾನವನ್ನು ಆಮೂಲಾಗ್ರವಾಗಿ ಅಭ್ಯಸಿಸುವದಲ್ಲದೆ ಪಾಶ್ಚಾತ್ಯ ತತ್ವಜ್ಞಾನವನ್ನು ಅವರು ಸ್ವತಃ ಗ್ರೀಕ ಭಾಷೆಯನ್ನು ಕಲಿತು ಮೂಲದಲ್ಲಿ ಪರಿಶೀಲಿಸಿದವರು. ಅಧ್ಯಾತ್ಮವು ಬರಿಯ ಬೌದ್ಧಿಕವಿಷಯವಲ್ಲವೆಂಬುದನ್ನು ಮನಗಂಡವರಾದುದರಿಂದ ಸತತವೂ ಅಧ್ಯಾತ್ಮಸಾಧನದಲ್ಲಿರುವವರು. ಈ ಪರಿಯಾಗಿ ಸಕಲ ತತ್ವಜ್ಞಾನಗಳ ತುಲನಾತ್ಮಕ ಅಭ್ಯಾಸಮಾಡಿ ಸ್ವತಃ ಸಾಧಕರಾಗಿ ಉಪನಿಷತ್ತಿನಲ್ಲಿ ಹೇಳಿದ ಆಧ್ಯಾತ್ಮಿಕ ಅನುಭಾವವಾದವು–ಸಾಕ್ಷಾತ್ಕಾರವಾದವು ಎಲ್ಲ ತತ್ವದರ್ಶನಗಳ ಸಮನ್ವಯವಿರುವದೆಂದು ಪ್ರತಿಪಾದಿಸುವವರವರು. ಇಂಥವರು ಭಾರತೀಯ ಸಂಸ್ಕೃತಿಯ ಸಾಧಾರ ಸ್ವಾಭಿಮಾನದ ಸ್ಫೂರ್ತಿಯಿಂದ ಪ್ರೇರಿತರಾಗಿ ಬರೆದ ಗ್ರಂಥವಿದು. ಇಂಥ ಗ್ರಂಥದ ಅನುವಾದವನ್ನು ಕನ್ನಡದಲ್ಲಿ ಮಾಡುವ ಸುಸಂಧಿಯು ನಮಗೆ ದೊರೆತುದು ನಮ್ಮ ಒಳ್ಳೇ ಸುದೈವವೆಂದು ನಾವು ತಿಳಿಯುವೆವು.

೧೯೩೭ ರಲ್ಲಿ ಫೆಬ್ರುವರಿ ತಿಂಗಳ ಕೊನೆಗೆ ಶ್ರೀ. ರಾನಡೇಯವರು ನಿಂಬಾಳದ ಅಧ್ಯಾತ್ಮಭವನದಿಂದ ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಉಪನ್ಯಾಸವನ್ನು ಕೊಡಲಿಕ್ಕೆಂದು ಬಂದಿದ್ದರು. ಅದೇ ಕಾಲಕ್ಕೆ ಈ ಅನುವಾದದ ಮಾತು ಹೊರಟು ಪ್ರೊ. ರಾನಡೇಯವರು ಈ ಕಾರ್ಯವನ್ನು ನಮಗೆ ಒಪ್ಪಿಸಿದರು ಮತ್ತು ನಾವು ಅದನ್ನು ಅದೇ ವರ್ಷದ ಆಗಸ್ಟ ತಿಂಗಳಲ್ಲಿ ಕೈಕೊಂಡೆವು. ಆಗಿನಿಂದ ಮಾಡುತ್ತಬಂದ ಪ್ರಯತ್ನದ ಫಲವನ್ನೆ ನಾವು ಈಗ ಕನ್ನಡಿಗರ ಕೈಯಲ್ಲಿ ಕೊಡುತ್ತಿರುವೆವು.

ವಿಷಯವು ಗಹನವಾದರೂ ಪ್ರೊ. ರಾನಡೇಯವರು ಇಂಗ್ಲಿಷದಲ್ಲಿ ಅದನ್ನು ತೀರ ತಿಳಿಯಾಗಿ ಬರೆದಿರುವರು. ಆದರೂ ಕನ್ನಡದಲ್ಲಿ ಇಷ್ಟು ಸಾಂಗೋಪಾಂಗವಾಗಿ ಈ ವಿಷಯವನ್ನು ಇದುವರೆಗೆ ಯಾರೂ ಚರ್ಚಿಸಿರಲಿಲ್ಲ. ವಿಷಯಾನುಕ್ರಮಣಿಕೆಯನ್ನು ಸೂಕ್ಷ್ಮ

ವಾಗಿ ನಿರೀಕ್ಷಿಸಿದರೆ ಈ ಗ್ರಂಥದಲ್ಲಿ ಅಡಕವಾದ ಅನೇಕ ತಾತ್ವಿಕ ವಿಷಯಗಳ ಸ್ಪಷ್ಟ ಕಲ್ಪನೆಯು ಬರುವನು. ಗ್ರಂಥಕರ್ತರು ಅಲ್ಲಲ್ಲಿ ಉಪನಿಷದ್ವಿಚಾರಗಳನ್ನು ಪಾಶ್ಚಾತ್ಯ ತತ್ವಜ್ಞಾನಕ್ಕೆ ಹೋಲಿಸಿ ಉಪನಿಷತ್ತುಗಳ ಶ್ರೇಷ್ಠತೆಯನ್ನು ತೋರಿಸಿದ್ದರಿಂದ ಪಾಶ್ಚಾತ್ಯ ಪರಿಭಾಷೆಯೂ ಮೂಲ ಗ್ರಂಥದಲ್ಲಿ ಬಂದಿದೆ. ಪಾಶ್ಚಾತ್ಯ ತತ್ವಜ್ಞಾನದಲ್ಲಿಯ ಅನೇಕ ಶಬ್ದಗಳೂ ವಿಚಾರಗಳೂ ಕನ್ನಡಿಸಲಿಕ್ಕೆ ಬಹಳೇ ಕಠಿಣವಾದವುಗಳೆಂಬಲ್ಲಿ ಸಂಶಯವಿಲ್ಲ. ಹೀಗಿದ್ದರೂ ನಮ್ಮ ಕೈಲಾದಮಟ್ಟಿಗೆ ಪ್ರಯತ್ನಪಟ್ಟು ನಾವು ಈ ಅನುವಾದವನ್ನು ತಿಳಿಗನ್ನಡದಲ್ಲಿ ಹೊರಪಡಿಸಿದ್ದೇವೆ. ಮೂಲ ಗ್ರಂಥದ ಶಬ್ದಶಃ ಭಾಷಾಂತರ ಮಾಡುವ ಗೋಜಿಗೆ ಹೋಗದೆ ಆದಷ್ಟು ಹುರುಳಿನ ಅನುವಾದವನ್ನು ಕೊಡುವ ಉದ್ದೇಶವನ್ನೇ ನಾವು ಮುಂದಿಟ್ಟುಕೊಂಡು ಈ ಕಾರ್ಯವನ್ನು ಮಾಡಿರುವೆವು. ಹೀಗೆ ಮಾಡುವಾಗ ಕನ್ನಡಿಗರಿಗೆ ಹೊಸನೆಂದು ತೋರುವ ಅಥವಾ ಹಳೆಯವಿದ್ದರೂ ಹೊಸ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವ ಕೆಲವು ಶಬ್ದಗಳ ಅರ್ಥಗಳನ್ನೂ ಕೆಲವು ಕಠಿಣವೆಂದೆನಿಸಬಹುದಾದ ಶಬ್ದಗಳ ಅರ್ಥಗಳನ್ನೂ ಪುಸ್ತಕದ ಕೊನೆಗೆ ಕೊಟ್ಟಿದ್ದೇವೆ.

ಪ್ರೊ. ರಾನಡೇಯವರು ತಾವು ಮಾಡಿದ ಪ್ರತಿಯೊಂದು ವಿಧಾನಕ್ಕೆ ಪ್ರಮಾಣಗಳೆಂದು, ಆಧಾರಗಳೆಂದು ಉಪನಿಷನ್ಮಂತ್ರಗಳನ್ನು ಪ್ರತಿ ಪ್ರಕರಣದ ಕೊನೆಗೆ ಕೊಟ್ಟಿರುವರು. ಮೂಲ ಗ್ರಂಥದಲ್ಲಿ ಎರಡು ಭಾಗಗಳಿಲ್ಲದಿದ್ದರೂ ನಾವು ಈ ಗ್ರಂಥದಲ್ಲಿ ಎರಡು ಭಾಗಗಳನ್ನು ಕಲ್ಪಿಸಿ ಆ ಮಂತ್ರಗಳನ್ನು ಎರಡನೆಯ ಭಾಗದಲ್ಲಿ ಆಧಾರಮಂತ್ರಗಳೆಂದು ಬೇರೆಯಾಗಿ ಕನ್ನಡ ಲಿಪಿಯಲ್ಲಿ ಅಚ್ಚುಹಾಕಿಸಿದ್ದೇವೆ. ನಾಗರೀ ಲಿಪಿಯಲ್ಲಿ ಅವುಗಳನ್ನು ಅಚ್ಚು ಹಾಕಿಸಿದರೆ ಒಳಿತೆಂದು ಕೆಲವರಿಗೆ ತೋರಬಹುದು. ಆದರೆ ಆ ಲಿಪಿಯು ಕರ್ನಾಟಕದ ಅರ್ಧಭಾಗವಾದ ಮೈಸೂರ ಮಂಗಳೂರದವರಿಗೆ ತೀರ ಅಪರಿಚಿತವು. ಆದುದರಿಂದ ಸಕಲ ಕನ್ನಡಿಗರಿಗೂ ಸಾಮಾನ್ಯವಾದ ಕನ್ನಡ ಲಿಪಿಯಲ್ಲಿಯೆ ಅವುಗಳನ್ನು ಮುದ್ರಿಸುವ ಪ್ರಸಂಗವು ಬಂದಿತು. ಸಂಸ್ಕೃತವನ್ನು ಕನ್ನಡ ಲಿಪಿಯಲ್ಲಿ ಓದುವದು ಉತ್ತರ ಕರ್ನಾಟಕದವರಿಗೆ ಸ್ವಲ್ಪ ಎಡಚೆಡಚು ಎನಿಸಿದರೂ ಅದು ಅವರಿಗೆ ಸಾಧ್ಯವು. ಯಾಕಂದರೆ ಕನ್ನಡ ಲಿಪಿಯು ಅವರಿಗೆ ಅಪರಿಚಿತವಲ್ಲ. ಇಡೀ ಕರ್ನಾಟಕದಲ್ಲಿ ಒಂದೇ ಲಿಪಿಯು ಪ್ರಚುರವಾಗುವವರೆಗೆ ಈ ಅಡಚಣೆಯು ದೂರವಾಗಲಾರದೆಂಬದು ಸ್ಪಷ್ಟವೇ ಇದೆ.

ಈ ಬಗೆಯಾಗಿ ನಮ್ಮ ಸನಾತನ ತತ್ವಭಾಂಡಾರದ ಗ್ರಂಥವಾದ ಈ ಉಪನಿಷತ್ ರಹಸ್ಯವನ್ನು ನಾವು ಬ್ರಹ್ಮಜಿಜ್ಞಾಸೆಯುಳ್ಳ ಕನ್ನಡಿಗರಿಗೆ ಸಾದರಪಡಿಸುತ್ತಿರುವೆವು. ಈ

ಕಾರ್ಯವನ್ನು ಕೈಕೊಳ್ಳುವಾಗ ಇದನ್ನು ಅಚ್ಚುಹಾಕಿಸುವ ಹಣವನ್ನು ಕೊಡುವವರಾರು, ಇದನ್ನು ಚನ್ನಾಗಿ ಅಚ್ಚುಹಾಕಿ ಕೊಡುವವರಾರು, ಎಂಬ ಅನೇಕ ವಿಚಾರಗಳು ನಮ್ಮ ಮನಸ್ಸಿನಲ್ಲಿ ತಲೆದೋರಿದವು. ಆದರೆ ಭಗವದನುಗ್ರಹದಿಂದ, ಗ್ರಂಥಕರ್ತರು ತಮ್ಮ ಮುನ್ನುಡಿಯಲ್ಲಿ ಕಾಣಿಸಿದ ಶ್ರೀಯುತರಾದ ಬೋಧರಾವ ಸಾವಕಾರ, ಗೋಪಾಳರಾವ ಅಸುಂಡಿ ಮತ್ತು ಯಶವಂತರಾವ ಜಠಾರ ಇವರು, ಆ ಭಾರವನ್ನು ಹೊತ್ತು ನಮ್ಮ ಚಿಂತೆಯನ್ನು ದೂರಮಾಡಿ ಶಾಂತಚಿತ್ತದಿಂದ ಅನುವಾದವನ್ನು ಪ್ರಸಿದ್ಧಗೊಳಿಸಲಿಕ್ಕೆ ಸಹಾಯಮಾಡಿದರು ; ಅದಕ್ಕಾಗಿ ನಾವು ಅವರಿಗೆ ತುಂಬಾ ಉಪಕೃತರಿರುವೆವು. ಇವರೆಲ್ಲರು ಮನಗೊಟ್ಟು ಕೈಬಿಚ್ಚಿ ಸಹಾಯಮಾಡಿದ್ದರಿಂದಲೆ ಈ ಕಾರ್ಯವು ನಾವು ಕೈಕೊಂಡ ಒಂದು ವರ್ಷದಲ್ಲಿಯೆ ಮೂರ್ತಸ್ವರೂಪವನ್ನು ಹೊಂದಿ ಕನ್ನಡಿಗರ ಕೈಸೇರಿರುವದು.

ಇನ್ನೊಂದೇ ಒಂದು ಮಾತು ಉಳಿಯಿತು. ಅದಾವದೆಂದರೆ ಗುಣಗ್ರಾಹಿಗಳಾದ ಗ್ರಾಹಕರು ದೊರೆತು ಈ ಪುಸ್ತಕದ ಪ್ರಸಾರವಾಗುವದು. ಅಧ್ಯಾತ್ಮ ಭೂಮಿಯಾದ ಈ ನಮ್ಮ ಉದಯೋನ್ಮುಖ ಕರ್ನಾಟಕದಲ್ಲಿ ಅದಕ್ಕೂ ಯಾವ ತಡೆಯುಂಟಾಗಲಿಕ್ಕಿಲ್ಲವೆಂದು ನಮ್ಮ ನಂಬಿಗೆ. ಮೂಲಗ್ರಂಥದ ಬೆಲೆಯು ೧೦ ರೂಪಾಯಿ ಇದ್ದರೂ ಅಷ್ಟೇ ವಿಷಯವಿದ್ದ ಈ ಅನುವಾದಗ್ರಂಥವು ಕನ್ನಡಿಗರಿಗೆ ಅದರ ಅರ್ಧಕ್ಕಿಂತ ಕಡಿಮೆ ಬೆಲೆಗೆ ದೊರೆಯುತ್ತಿರುವುದು. ಉಪನಿಷತ್ತುಗಳಲ್ಲಿದ್ದ ಅಧ್ಯಾತ್ಮಾಮೃತವನ್ನು ಸೇವಿಸಲಿಕ್ಕೆ ಸಹಾಯಕವಾದ ಈ ಉಪನಿಷದ್ರಹಸ್ಯವನ್ನು ಓದಿ ಕೆಲ ಕನ್ನಡಿಗರಾದರೂ ತೃಪ್ತರಾದರೆ ನಾವು ಯಥಾಶಕ್ತಿಮಾಡಿದ ಪ್ರಯತ್ನವು ಸಾರ್ಥಕವೆಂದು ಭಾವಿಸುವೆವು. ಈ ಕೃತಾರ್ಥತೆಯನ್ನು ನಮಗೂ ಪ್ರೊ. ರಾನಡೇಯವರಿಗೂ ದೊರಕಿಸಿಕೊಡುವ ಶ್ರೇಯಸ್ಸನ್ನು ಬ್ರಹ್ಮವಿದ್ಯೆಯ ಪಕ್ಷಪಾತಿಗಳೂ ಕನ್ನಡದ ಅಭಿಮಾನಿಗಳೂ ಆದ ಕರ್ನಾಟಕಸ್ಥರು ಪಡೆಯಲೆಂದು ಬಯಸಿ, ಇದೊಂದು ನಮ್ಮ ಅಲ್ಪಸೇವೆ ಎಂಬ ಭಾವನೆಯಿಂದ ಈ ಗ್ರಂಥವನ್ನು ಸಕಲಾಂತರ್ಯಾಮಿಯಾದ ಜನತಾಜನಾರ್ದನನ ಅಡಿದಾವರೆಗಳಿಗೆ ಅರ್ಪಿಸುತ್ತೇವೆ.

ಆಷಾಢ, ವಿಭವಸಂವತ್ಸರ ೧೮೫೦
ಧಾರವಾಡ

**ರಂಗನಾಥ ದಿವಾಕರ**
**ದತ್ತಾತ್ರೇಯ ಬೇಂದ್ರೆ**
**ಶಂಕರ ಜೋಶಿ**

---

# ಪ್ರಸ್ತಾವನೆ

೧. **ಗ್ರಂಥರಚನೆಯ ಪ್ರಸಂಗವು**—ಕ್ರಿಸ್ತಾಬ್ದ ೧೯೧೫ ರ ಜುಲೈ ತಿಂಗಳಲ್ಲಿ ಬೆಂಗಳೂರ ಪಟ್ಟಣದಲ್ಲಿ ಸಂಸ್ಕೃತ ವಿದ್ಯಾಮಂದಿರದ ಸ್ಥಾಪನೆಯಾಯಿತು. ಆಗ ಬಡೋದೆಯ ಮಹಾರಾಜರಾದ ಸಯಾಜಿರಾವ ಗಾಯಕವಾಡ ಇವರ ಅಧ್ಯಕ್ಷತೆಯಲ್ಲಿ ನಾನು ಬೆಂಗಳೂರಿನ ಮತ್ತು ಮೈಸೂರಿನ ನಾಗರಿಕರ ಮುಂದೆ ಮಾಡಿದ ಉಪನ್ಯಾಸಗಳಲ್ಲಿ ಉಪನಿಷತ್‌–ತತ್ವಜ್ಞಾನದ ಈ ವಿವೇಚನೆಯನ್ನು ಬೀಜರೂಪದಿಂದ ಮೊದಲು ಉಪಕ್ರಮಿಸಬೇಕಾಯಿತು. ಅಂದಿನಿಂದ ಉಪನಿಷತ್ತುಗಳ ಒಳ್ಳೇ ತಾತ್ವಿಕ ಪರಿಶೀಲನವನ್ನು ಜನರ ಮುಂದಿಡಬೇಕೆಂಬ ಬುದ್ಧಿಯಿಂದಲೂ ಉಪನಿಷತ್ತಿನ ರಹಸ್ಯವನ್ನು ಹುಡುಕುವ ಎಲ್ಲ ಜಿಜ್ಞಾಸುಗಳ ತೃಪ್ತಿಯಾಗುವಂತೆ ಸಂಕ್ಷೇಪದಲ್ಲಿ ತತ್ವಾನುಕ್ರಮದಿಂದ ಉಪನಿಷತ್ತಿನ ತತ್ವಜ್ಞಾನವನ್ನು ಮಂಡಿಸುವ ಆಶೆಯಿಂದಲೂ ನಾನು ಈ ಉಪನ್ಯಾಸಗಳ ವಿಷಯವನ್ನು ಸತತವಾಗಿ ಅಭ್ಯಸಿಸುತ್ತಿರುವೆನು. ಬೆಂಗಳೂರ ಮೈಸೂರಿನ ಪಂಡಿತಮಹಾಶಯರೆದುರಿಗೆ ನನ್ನ ವಿಚಾರಗಳನ್ನಿಡುವದಕ್ಕಾಗಿ ಅವಕಾಶಕೊಟ್ಟ ಬಗ್ಗೆ ನಾನು ಪೂರ್ವಾಶ್ರಮದ ಪಂಡಿತ ಕುರ್ತಕೋಟಿ ಮಹಾಭಾಗವತರಾದ ಶ್ರೀಮತ್ ಶಂಕರಾಚಾರ್ಯರ, ಕರವೀರ ಪೀಠ ಇವರಿಗೂ ಮೈಸೂರ ವಿಶ್ವವಿದ್ಯಾಲಯದ ಆಗಿನ ರಜಿಸ್ಟ್ರಾರರಾದ ಶ್ರೀ. ಸುಬ್ರಹ್ಮಣ್ಯ ಅಯ್ಯರ ಬೀ. ಏ. ಇವರಿಗೂ ಧನ್ಯವಾದಗಳನ್ನರ್ಪಿಸುವೆನು. ಆಗ ಬೆಂಗಳೂರಿನವರು ಉಪನ್ಯಾಸಗಳನ್ನು ಒಳ್ಳೆ ಗುಣಗ್ರಹಣಪೂರ್ವಕ ಕೇಳಿದರೆಂದು ನನ್ನ ಭಾವನೆ. ಈ ಉಪನ್ಯಾಸಗಳನ್ನು ಇಂಗ್ಲೀಷ ಹಾಗು ಎಲ್ಲ ಪ್ರಾಂತಿಕ ಭಾಷೆಗಳಲ್ಲಿ ಪ್ರಸಿದ್ಧಿಸಿ ಈ ಶ್ರೇಷ್ಠ ಜ್ಞಾನದ ಸಾರ್ವತ್ರಿಕ ಪ್ರಸಾರವಾಗುವಂತೆ ಮಾಡಬೇಕೆಂದು ಶ್ರೀಮನ್ಮಹಾರಾಜ ಗಾಯಕವಾಡರವರು ನನಗೆ ಸೂಚಿಸಿದರು. ಹೀಗೆ ಪಾಶ್ಚಾತ್ಯ ಹಾಗೂ ಭಾರತೀಯ ತತ್ವಜ್ಞಾನದ ಜಿಜ್ಞಾಸುಗಳಿಗೆ ಈ ರೀತಿಯಾಗಿ ಬರೆದ ಉಪನಿಷತ್ತಿನ ತತ್ವಜ್ಞಾನವು ಬಹಳೇ ವಿಚಾರಪ್ರೇರಕವಾಗುವದೆಂದು ನನಗೆ ಹೊಳೆದು ಬಹಳ ವರ್ಷಗಳಾಗಿ ಹೋಗಿದ್ದರೂ ಅನೇಕ ಕಾರಣಗಳ ಮೂಲಕ ಮತ್ತು ಇನ್ನೂ ಬೇರೆ ಕೆಲಸಗಳ ಮೂಲಕ ಈ ಗ್ರಂಥವು ಹೊರಬೀಳಲಿಕ್ಕೆ ಇಷ್ಟೊಂದು ತಡವಾಯಿತು.

೨. **ತತ್ತ್ವಶಾಸ್ತ್ರ ಹಾಗೂ ವ್ಯುತ್ಪತ್ತಿಶಾಸ್ತ್ರಗಳ ಮೇಳವು**—೧೯೧೫ ಕ್ಕಿಂತ ಮೊದಲೇ ಉಪನಿಷತ್ತುಗಳ ಅಭ್ಯಾಸವನ್ನು ನಾನು ಆರಂಭಿಸಿದ್ದರೂ

ಉಪನಿಷತ್–ತತ್ತ್ವಜ್ಞಾನವನ್ನು ಆಧುನಿಕ ವಿಚಾರಸರಣಿಯಲ್ಲಿ ಬರೆಯಬೇಕೆಂಬ ಕಲ್ಪನೆಯು ನನಗೆ ೧೯೧೫ ರಲ್ಲಿಯೇ ಹೊಳೆಯಿತು. ಫೆಬ್ರುವರಿ ೧೯೧೫ ರಲ್ಲಿ ಸರ್ ರಾಮಕೃಷ್ಣ ಭಾಂಡಾರಕರ ಇವರ ಒಂದು ಭಾಷಣದಿಂದ ನನಗೆ ಈ ಗ್ರಂಥವನ್ನು ಬರೆಯುವ ಸ್ಫೂರ್ತಿದೊರೆಯಿತು. ಉಪನಿಷತ್ತುಗಳಲ್ಲಿ ಯಾವುದಾದರೂ ಒಂದೇ ತತ್ತ್ವದರ್ಶನವು ಪ್ರತಿಪಾದಿತವಾಗಿಲ್ಲ. ಆದರೆ ಅಟ್ಟಗಟ್ಟದ ಹಿಮಗಿರಿಯ ಸಾಲುಗಳಂತೆ ಒಂದರಮೇಲೊಂದು ಎಷ್ಟೋ ದರ್ಶನಸೋಪಾನಗಳು ಅವುಗಳಲ್ಲಿ ವಿವೇಚಿಸಲ್ಪಟ್ಟಿರುವವೆಂದೂ ನಮ್ಮ ಸಮಕಾಲೀನ ಪಾಶ್ಚಾತ್ಯ ತತ್ತ್ವಜ್ಞಾನಿಗಳು ಪೂರ್ಣವಾಗಿ ವಿಚಾರಿಸಲು ಯೋಗ್ಯವಾದ ಕೇವಲ ಸತ್ಯದ ಸಾಕ್ಷಾತ್ ದರ್ಶನದಲ್ಲಿ ಅವೆಲ್ಲವುಗಳ ಪರಿಣತಿಯಾಗಿರುವದೆಂದೂ ತೀವ್ರವೆ ನನಗೆ ಕಂಡುಬಂದಿತು. ಪಾಶ್ಚಾತ್ಯ ಪದ್ಧತಿಯಿಂದ ವಿಚಾರಮಾಡುವ ಈಗಿನ ಸುಶಿಕ್ಷಿತ ಜನರಿಗೆ ಉಪನಿಷತ್ತಿನ ತತ್ತ್ವಜ್ಞಾನವು ತಿಳಿಯಬೇಕೆಂಬ ಉದ್ದೇಶದಿಂದ ನಾನು ಆ ಪದ್ಧತಿಗನುಸರಿಸಿಯೆ ಈ ಗ್ರಂಥವನ್ನು ಬರೆಯುವ ಸಾಹಸವನ್ನು ಮಾಡಿದೆನು. ಈ ಪುಸ್ತಕದ ಅನುಕ್ರಮಣಿಕೆ ನೋಡಿದರೆ ಸಾಕು, ಪಾಶ್ಚಾತ್ಯ ತತ್ತ್ವಜ್ಞಾನದ ವಿವೇಚನಾ ಪದ್ಧತಿಯನ್ನೆ ನಾನು ಅನುಸರಿಸಿರುವೆನೆಂದು ಒಮ್ಮೆಲೆ ಕಾಣುವದು. ನನಗೆ ಇನ್ನೊಂದು ಅಡಚಣಿಯು. ಪಾಶ್ಚಾತ್ಯಪದ್ಧತಿಯೆಂಬ ಹೊದಿಕೆಯಿಂದ ಉಪನಿಷತ್–ವಿಚಾರಗಳನ್ನು ಹೊಚ್ಚಿದರೂ ಉಪನಿಷತ್ತಿನ ತತ್ತ್ವಗಳಿಗೆ ಹಾನಿಬಾರದಂತೆ ಎಚ್ಚರಪಡುವ ಭಾರವು ನನ್ನ ಮೇಲಿತ್ತು. ಆದುದರಿಂದ ತತ್ತ್ವಜ್ಞಾನದ ಕಡೆಗೆ ಲಕ್ಷಗೊಟ್ಟಷ್ಟೇ ವ್ಯುತ್ಪತ್ತಿಶಾಸ್ತ್ರದ ಕಡೆಗಾದರೂ ನಾನು ಲಕ್ಷಗೊಡಬೇಕಾಯ್ತು. ಮೂಲಗ್ರಂಥಗಳನ್ನೇ ಓದಿ ಗ್ರೀಕ ತತ್ತ್ವಜ್ಞಾನವನ್ನು ತಿಳಿದುಕೊಳ್ಳುವ ಡಾ. ಬರ್ನೆಟ್ ಇವರ ರೀತಿಯು ಗ್ರೀಕ ತತ್ತ್ವಜ್ಞಾನದ ಅಭ್ಯಾಸಪದ್ಧತಿಯಲ್ಲಿ ದೊಡ್ಡ ಕ್ರಾಂತಿಯನ್ನುಂಟುಮಾಡಿತು. ಅದೇ ಪದ್ಧತಿಯನ್ನು ಇಲ್ಲಿಯಾದರೂ ಉಪಯೋಗಿಸುವದು ಅವಶ್ಯವೆಂದು ನಾನು ಭಾವಿಸಿದೆನು. ಆದುದರಿಂದ ಉಪನಿಷತ್ತುಗಳೊಳಗಿನ ಪ್ರಮಾಣಮಂತ್ರಗಳನ್ನು ಒತ್ತಟ್ಟಿಗೆ ಕಲೆಹಾಕಿ ಬೇರೆ ಬೇರೆ ವಿಚಾರಗಳನ್ವಯ ಅವುಗಳನ್ನು ನಾನು ವರ್ಗೀಕರಿಸಿದೆನು, ತತ್ತ್ವಾನುಕ್ರಮವಾಗಿ ಸಾಲುಗೊಳಿಸಿದೆನು. ವ್ಯುತ್ಪತ್ತಿಶಾಸ್ತ್ರಕ್ಕನುಸರಿಸಿ ತಾತ್ವಿಕ ಅರ್ಥವು ಅಳಿಯದಂತೆ ಅವುಗಳ ಅರ್ಥ ಮಾಡಿದೆನು. ಈ ಪ್ರಕಾರ ವ್ಯುತ್ಪತ್ತಿ ಹಾಗೂ ತತ್ತ್ವಶಾಸ್ತ್ರಗಳ ಈ ಬೆಸಿಕೆಗೆ ಅನುಸರಿಸಿ ಉಪನಿಷತ್ತುಗಳ ಅರ್ಥವನ್ನು ಮಾಡುವುದು ದುರ್ಘಟವೇ ಸರಿ. ಇನ್ನು ಈ ಕಾರ್ಯದಲ್ಲಿ ನನಗೆ ಯಶಸ್ಸು ಎಷ್ಟರಮಟ್ಟಿಗೆ ದೊರೆತಿರುವದೆಂಬುದನ್ನು ವಾಚಕರೇ ನೋಡಿಕೊಳ್ಳಬೇಕು.

**೩. ಭಾರತೀಯ ತತ್ವಜ್ಞಾನದಲ್ಲಿ ಉಪನಿಷತ್ತುಗಳ ಸ್ಥಾನವು--** ಭಾರತೀಯ ತತ್ವವಿಚಾರದ ಇತಿಹಾಸದಲ್ಲಿ ಉಪನಿಷತ್ತುಗಳ ಯೋಗ್ಯತೆಯು ಅದ್ವಿತೀಯವಾದದ್ದು. ಎಲ್ಲ ಭಾರತೀಯ ತತ್ವದರ್ಶನಗಳು ಬೀಜರೂಪದಿಂದ ಉಪನಿಷತ್ತುಗಳಲ್ಲಿ ಅಡಕವಾಗಿವೆಯೆಂಬುದನ್ನು ಈ ಗ್ರಂಥದ ನಾಲ್ಕನೆಯ ಪ್ರಕರಣದಲ್ಲಿ ಸ್ಪಷ್ಟವಾಗಿ ವಿವೇಚಿಸಿದ್ದೇನೆ. ಉಪನಿಷತ್ತಿನ ಬಗ್ಗೆ ಬರೆದ ಗ್ರಂಥಗಳಲ್ಲಿ ಈ ತರದ ವಿವೇಚನೆಯನ್ನು ಇದುವರೆಗೆ ಯಾರೂ ಮಾಡಿರಲಿಲ್ಲ. ಕೆಲವೊಂದು ದರ್ಶನಗಳು ಉಪನಿಷತ್ತುಗಳಿಗೆ ಎಷ್ಟು ಋಣಿಯಾಗಿರುವವೆಂಬುದನ್ನು ಒಬ್ಬ ಗಾರ್ಬೆ ಎಂಬವನು ಅಥವಾ ಪ್ರಾಸಂಗಿಕವಾಗಿ ಓಲ್ಡೆನಬರ್ಗನಂಥವನು ಅಂಶತಃ ತೋರಿಸಿರಬಹುದು. ಆದರೆ ಉಪನಿಷತ್ತುಗಳ ಹಾಗೂ ಮಿಕ್ಕ ತತ್ವದರ್ಶನಗಳ ಪರಸ್ಪರ ಸಂಬಂಧವನ್ನು ಪೂರ್ಣವಾಗಿ ವಿವೇಚಿಸುವ ಕಾರ್ಯವು ಹೊಸದೇ ಸರಿ. ಬುದ್ಧತತ್ವಜ್ಞಾನದ ಜನ್ಮವಾಗಲಿಕ್ಕೆ ಉಪನಿಷತ್ತುಗಳು ಹೇಗೆ ಕಾರಣವಾದವೆಂಬುದನ್ನು ಓಲ್ಡೆನಬರ್ಗನು ತನ್ನ 'ಬುದ್ಧ' ( Buddha ) ಹಾಗೂ ಬೇರೆ ಜರ್ಮನ್ ಗ್ರಂಥಗಳಲ್ಲಿ ( Die Lehre and Upanishaden and die Anfange des Buddhismus ) ವಿಶದವಾಗಿ ತೋರಿಸಲೆತ್ನಿಸಿದ್ದು ಪ್ರಶಂಸನೀಯವು. 'Sankhya Philosophie' ಎಂಬ ತನ್ನ ಪುಸ್ತಕದಲ್ಲಿ ಗಾರ್ಬೆಯು ಸಾಂಖ್ಯದರ್ಶನದ ಉಗಮವನ್ನು ಹುಡುಕಲೆತ್ನಿಸಿರುವನು. ಪ್ರಾಚೀನ ಉಪನಿಷತ್ತುಗಳಲ್ಲಿ ಆ ದರ್ಶನದ ಗಂಧವು ಸಹ ಇಲ್ಲವೆಂದೂ ಬ್ರಹದಾರಣ್ಯಕ, ಛಾಂದೋಗ್ಯ ಇವು ರಚಿಸಲ್ಪಟ್ಟಮೇಲೆ ಹಾಗೂ ಕಠ, ಶ್ವೇತಾಶ್ವತರ, ಮೈತ್ರಿ, ಪ್ರಶ್ನ ಈ ಉಪನಿಷತ್ತುಗಳಿಗೂ ಪೂರ್ವದಲ್ಲಿ ಸಾಂಖ್ಯ ವಿಚಾರಗಳ ಜನ್ಮವಾಯಿತೆಂದೂ ಅವನು ಪ್ರದಿಪಾದಿಸಿರುವನು. ಛಾಂದೋಗ್ಯದ ಅ ೭, ಖಂಡ ೨೫ ರಲ್ಲಿಯ ಅಹಂಕಾರವೆಂಬುದು ಸಾಂಖ್ಯರ 'ಅಹಂಕಾರ' ವಲ್ಲ, ಆದರೆ ಅನುಭಾವಿಗಳ 'ಅಹಂ' ತತ್ವವು ಎಂದು ಗಾರ್ಬೆ ಅಂದದ್ದು ಸ್ವಲ್ಪ ನಿಜವು. ಪ್ರಾಚೀನ ಉಪನಿಷತ್ತುಗಳಲ್ಲಿ ಸಂಭೂತಿ, ಲಿಂಗ ಇವುಗಳ ಬಗ್ಗೆ ಇದ್ದ ವಿವೇಚನವು ಸಾಂಖ್ಯವಿಚಾರಗಳನ್ನು ಸಂಬಂಧಿಸಿಲ್ಲವೆಂದು ಅವನು ಹೇಳುವದಾದರೂ ವಿಹಿತವೇ. ಆದರೆ ಪ್ರಾಚೀನ ಉಪನಿಷತ್ತುಗಳಲ್ಲಿ ಸಾಂಖ್ಯ ವಿಚಾರದ ಛಾಯೆ ಸಹ ಇಲ್ಲವೆಂಬ ಅವನ ವಿಧಾನವನ್ನು ನಾವು ಒಪ್ಪಲಾರೆವು. ಛಾಂದೋಗ್ಯದಲ್ಲಿಯ ತ್ರಿವರ್ಣಗಳ ಕಲ್ಪನೆಯು ಸಾಂಖ್ಯದರ್ಶನದಲ್ಲಿಯ ತ್ರಿಗುಣಾತ್ಮಕ ಪ್ರಕೃತಿಯ ಜನಕವಾಗಿರಲಿಕ್ಕೆ ಬೇಕೆಂಬುದನ್ನು ನಾವು ನಾಲ್ಕನೆ ಪ್ರಕರಣದಲ್ಲಿ ತೋರಿಸಿರುವೆವು. ಇನ್ನು ಛಾಂದೋಗ್ಯವು ಒಳ್ಳೆ ಪ್ರಾಚೀನ ಉಪನಿಷತ್ತೆಂದು ಎಲ್ಲರೂ ಒಪ್ಪುತ್ತಿರುವರು. ಆದುದರಿಂದ ಪ್ರಾಚೀನ ಉಪನಿಷತ್ತುಗಳಲ್ಲಿ ಸಾಂಖ್ಯವಿಚಾರಗಳ ಹೆಸರೇ

ಇಲ್ಲವೆಂದು ಹೇಳುವುದು ಮನದಟ್ಟಾಗಲಾರದು. ಇನ್ನು ವೇದಾಂತದ ವಿಷಯಕ್ಕೆ ಬರೆಯುವಾಗ ದ್ವೈತ, ಅದ್ವೈತ, ವಿಶಿಷ್ಟಾದ್ವೈತವೆಂಬ ವೇದಾಂತ ದರ್ಶನಗಳು ಯಾವ ಅಂಶಗಳಲ್ಲಿ ಉಪನಿಷತ್ತುಗಳಿಂದಲೆ ಉಗಮ ಹೊಂದಿವೆ ಎಂಬುದನ್ನು ನಾವು ವ್ಯವಸ್ಥಿತ ವಾಗಿ ತೋರಿಸಲೆತ್ನಿಸಿದ್ದೇವೆ. ಬ್ರಹ್ಮಸೂತ್ರಗಳೆ ನಮ್ಮ ತತ್ವಜ್ಞಾನದ ತಳಹದಿ ಎಂದು ಶಂಕರಾಚಾರ್ಯ ರಾಮಾನುಜಾಚಾರ್ಯ ಮಧ್ವಾಚಾರ್ಯರು ತಿಳಿದಿದ್ದರೂ ಬ್ರಹ್ಮಸೂ ತ್ರಗಳು ಉಪನಿಷತ್ತುಗಳ ಸೂತ್ರರೂಪವಾದ ಸಾರಾಂಶವಿದ್ದರೂ ಈ ಮೂರು ತತ್ವ ಜ್ಞಾನಗಳ ಬಗ್ಗೆ ನಾವು ಹೆಚ್ಚಿಗೆ ಏಕೆ ಬರೆಯಲಿಲ್ಲವೆಂದು ಹಲವರು ಆಶ್ಚರ್ಯಪಡಬ ಹುದು. ಹಾಗೆ ಮಾಡದಿರಲಿಕ್ಕೆ ಎರಡು ಕಾರಣಗಳಿರುವವು. ಉಪನಿಷತ್ತು ಅಥವಾ ಬ್ರಹ್ಮ ಸೂತ್ರ ಇವುಗಳ ಮೇಲಿನ ಭಾಷ್ಯಕಾರರ ಸಾಂಪ್ರದಾಯಿಕ ಭಾಷ್ಯಗಳಿಂದ ಮನಸೋಲದೆ ಮೂಲ ಉಪನಿಷತ್–ಮಂತ್ರಗಳ ಆಧಾರದಿಂದಲೆ ತತ್ವವಿವೇಚನೆ ಮಾಡಬೇಕೆಂದು ನಾವು ಹೊರಟಿರುವೆವು. ಇನ್ನೊಂದು ಕಾರಣವೇನಂದರೆ, ದ್ವೈತಾದ್ವೈತ ವಿಷಯದ ಚರ್ಚೆಯು ವೇದಾಂತ ತತ್ವಜ್ಞಾನದ ಪ್ರತ್ಯೇಕ ಪುಸ್ತಕದಲ್ಲಿ ಆಗುವದೇ ಉಚಿತ ವೆಂದು ನಮ್ಮ ಅಭಿಪ್ರಾಯವು. ತಾರ್ಕಿಕ ವೇದಾಂತತತ್ವಜ್ಞಾನ ಹಾಗೂ ಉಪನಿಷತ್ತು ಇವು ಗಳ ಸಂಬಂಧವು ಸ್ವಲ್ಪ ಮಟ್ಟಿಗೆ 'ಸ್ಕೂಲಮೆನ್' ಹಾಗೂ ಅರಿಸ್ಟಾಟಲ' ಇವರ ಸಂಬಂ ಧದಂತೆಯೆ ಇದೆ. ಸ್ಕೂಲಮೆನ್ನರ ತರ್ಕಕೋಟಿಗಳ ಬಗ್ಗೆ ಬೇಕನ್ ಇವನು 'ಈ ತರ್ಕವಾದವು ಜೇಡಹುಳದ ಜಾಳಿಗೆಯ ರಚನೆಯಂತೆ ಆಶ್ಚರ್ಯಜನಕವಾಗಿದ್ದರೂ ಹುರುಳಿಲ್ಲದುದಾಗಿದೆ.' ಎಂದು ಹೇಳಿರುವನು. ಕೆಲ ಭಾಷ್ಯಕಾರರ ತರ್ಕವಾದದ ಬಗ್ಗೆ ಹೀಗೆಯೆ ಹೇಳಬಹುದು. ಈ ಟೀಕೆಯು ಸ್ವಲ್ಪ ಕಠೋರವೆನಿಸುತ್ತಿದ್ದರೂ ಅದು ವೇದಾಂತಿಕ ಟೀಕೆ ಮತ್ತು ಉಪನಿಷತ್ತು ಇವುಗಳ ವಿವೇಚನಾಪದ್ಧತಿಯೊಳಗಿನ ಭೇದವನ್ನು ಚನ್ನಾಗಿ ವ್ಯಕ್ತಮಾಡುತ್ತಿದೆ. ಇವೆರಡರಲ್ಲಿ, ಒಂದು ಸ್ಫುರಣಾತ್ಮಕವು (intuitional) ಮತ್ತೊಂದು ತರ್ಕಾತ್ಮಕವು (intellectual). ತರ್ಕಾತ್ಮಕ ಪದ್ಧತಿಯನ್ನು ಹೀಯಾಳಿಸಬೇಕೆಂದೂ ನಮ್ಮ ವಿಚಾರವಿಲ್ಲ. ಸ್ಫುರಣಾತ್ಮಕ ಪದ್ಧ ತಿಯು ತರ್ಕಪದ್ಧತಿಗೆ ವಿರೋಧಕವೆಂದೂ ನಾವು ಹೇಳುವದಿಲ್ಲ. ಆದರೆ ಸ್ಫುರಣಾ ತ್ಮಕ ಪದ್ಧತಿಯು ತರ್ಕಾತ್ಮಕ ಪದ್ಧತಿಯನ್ನು ಒಳಗೊಂಡಿರುವಂತಹದೆಂದು ನಮ್ಮ ಅಭಿಪ್ರಾಯವು. ನಾವು ಇಲ್ಲಿ ಪಾರಮಾರ್ಥಿಕ ಸ್ಫುರಣದ ಬಗ್ಗೆ ಮಾತಾಡುತ್ತಿರುವೆವು ಹೊರ್ತು ಲೌಕಿಕ ಸ್ಫುರಣದ ಬಗ್ಗೆ ಅಲ್ಲ. ಆದುದರಿಂದ 'ಪರಮ ತತ್ವವನ್ನು ಸಾಕ್ಷಾತ್ಕರಿಸಲಿಕ್ಕೆ ಬುದ್ಧಿಯು ಅಸಮರ್ಥವಿರುವದು' ಎಂದು ಉಪನಿಷತ್ತುಗಳ ಅಭಿ ಪ್ರಾಯವು ಎಂದು ಒಲ್ಡೆನಬರ್ಗನು ಅನ್ನುವದನ್ನು ನಾವು ಒಪ್ಪಿದರೂ 'ಉಪ

ನಿಷತ್ಕಾರರ ದಿವ್ಯಜ್ಞಾನಶಕ್ತಿಯು ನಿರ್ಭಯತೆಯಿಂದ ಎಲ್ಲ ಇಂದ್ರಿಯಾನುಭವವನ್ನು ಬದಿಗೆ ಸರಿಸಿ ಪ್ರತ್ಯಕ್ಷವನ್ನು ತಿರಸ್ಕರಿಸುವದು, ಹಾಗೂ ವಿರೋಧಗಳನ್ನು ಸಹ ಒಡೆದು ಹೇಳುವ ಭರಕ್ಕೆ ಬೀಳದು, ' ಎಂಬ ಅವನ ಮಾತನ್ನು ನಾವು ಒಪ್ಪಲಾರೆವು. ಬುದ್ಧಿ ಹಾಗೂ ದಿವ್ಯಜ್ಞಾನಶಕ್ತಿ ಇವುಗಳ ಸಂಬಂಧವೇನೆಂಬುದು ದೊಡ್ಡ ತಾತ್ವಿಕ ಪ್ರಶ್ನೆಯೆ ಇರುವದು. ಆದರೆ ಆತ್ಯಂತಿಕ ಸತ್ಯದ ಅನ್ವೇಷಣದಲ್ಲಿ ಅವುಗಳ ಉಪಯೋಗವೆಷ್ಟು ಎಂಬುದನ್ನು ತುಲನಾತ್ಮಕ ದೃಷ್ಟಿಯಿಂದ ವಿಚಾರಿಸುವದು ಈ ಗ್ರಂಥದ ವಿಷಯವಲ್ಲವಾದುದರಿಂದ ಅದನ್ನು ಇಲ್ಲಿಗೆ ಬಿಡುತ್ತೇವೆ.

**೪. ಕೆಲವು ಪಾಶ್ಚಾತ್ಯ ಪಂಡಿತರ ಮತಪರೀಕ್ಷಣೆ:**—ಉಪನಿಷತ್ತಿನ ಬಗ್ಗೆ ಪಾಶ್ಚಾತ್ಯಪಂಡಿತರು ಬರೆದ ಗ್ರಂಥಗಳೇನೂ ತುಸು ಇಲ್ಲ. ಅವರು ವೈದಿಕ ವಾಙ್ಮಯದ ಬಗ್ಗೆ ಎಷ್ಟು ಹಾಗೂ ಯಾವ ವಿದ್ವತ್ತೆಯಿಂದ ಬರೆದಿರುವರೋ ಅಷ್ಟು ಉಪನಿಷತ್ತಿನ ಬಗ್ಗೆ ಅವರು ಬರೆದಿರದಿದ್ದರೂ ಈಗ ಬರೆದುದು ಸಾಕಷ್ಟು ಹೇರಳವಾಗಿದೆ. ವೆಬರ, ರೋರ, ಮ್ಯಾಕ್ಸಮುಲರ, ಬಥಲಿಂಗ, ವ್ಹಿಟನೇ, ಡಾಯಸೆನ್, ಓಲ್ಡೆನಬರ್ಗ, ಅಲ್ಟ್ಯಾರ್ಮಾರ, ಹರ್ಟೆಲ್, ಮತ್ತು ಹಿಲೆಬ್ರಾಂಟ ಮುಂತಾದವರು ಉಪನಿಷತ್ತುಗಳ ಬಗ್ಗೆ ಬರೆದ ಗ್ರಂಥಗಳ ಸಂಕ್ಷೇಪ ವಿವರಣೆಯು ಈ ಗ್ರಂಥದ ಕೊನೆಗೆ ಕೊಡಲ್ಪಟ್ಟಿದೆ. ಡಾಯಸೆನ್ ಇವರ ಉಪನಿಷತ್ತಿನ ಮೇಲಿನ ಗ್ರಂಥವು ಅವರ ವಿದ್ವತ್ತೆ, ಉದ್ಯೋಗ, ಸೂಕ್ಷ್ಮದೃಷ್ಟಿ (insight) ಇವುಗಳ ದ್ಯೋತಕವಿದೆ. ಓಲ್ಡೆನಬರ್ಗ ಮತ್ತು ಅಲ್ಟ್ಯಾರ್ಮಾರ ಇವರ ಗ್ರಂಥಗಳಾದರೂ ಹಾಗೆಯೆ ಇವೆ. ಉಪನಿಷತ್ತಿನ ಬಗ್ಗೆ ಮೊದಲು ಮೊದಲು ಬರೆದ ಪಂಡಿತರ ವಿಚಾರಗಳೇನಿರುವವೆಂಬುದು ಎಲ್ಲರಿಗೂ ಪರಿಚಿತವಿರುವದರಿಂದ ಇತ್ತೀಚೆಗಿನ ಬರಹಗಳಲ್ಲಿ ಕೆಲವನ್ನೆ ಇಲ್ಲಿ ಪರೀಕ್ಷಿಸುವ ವಿಚಾರವಿದೆ. ಕೇನೋಪನಿಷತ್ತಿನ ಪ್ರಸ್ತಾವನೆ ಬರೆಯುವಾಗ 'Der weisheit der Upanishaden' ಎಂಬ ಪುಸ್ತಕದಲ್ಲಿ ಹರ್ಟೆಲ್ಲನು ಈ ಉಪನಿಷತ್ತಿನಲ್ಲಿಯ ಬ್ರಹ್ಮನೆಂದರೆ, 'ಎಲ್ಲ ಜೀವಾತ್ಮಗಳು ಕೊನೆಗೆ ಯಾವ ವಿಶ್ವಾತ್ಮನಲ್ಲಿ ಲಯಹೊಂದುವವೊ ಆ ವಿಶ್ವಾತ್ಮನಲ್ಲ,' ಎಂದು ಬರೆದಿರುವನು. ಆದರೆ ವರ್ಡ್ಸವರ್ಥ ಕವಿಯು ವರ್ಣಿಸಿದಂತೆ 'ಅಸ್ತವಾಗುವ ಸೂರ್ಯರಶ್ಮಿಗಳಲ್ಲಿ, ಈ ಮಹಾಸಾಗರದಲ್ಲಿ, ಈ ವಾಯುಸಾಗರದಲ್ಲಿ, ಈ ನೀಲನಭದಲ್ಲಿ, ಮನುಷ್ಯನ ಮನಸಿನಲ್ಲಿ ಬ್ರಹ್ಮನಿರುವನು' ಎಂಬ ಅವನ ಸರ್ವವ್ಯಾಪಕತ್ವವೆ ಇಲ್ಲಿ ಪ್ರಸ್ತುತವಿರುವದರಿಂದ ಉಪನಿಷತ್ತು ಅದನ್ನಷ್ಟೆ ವರ್ಣಿಸಿದೆ ಎಂಬುದನ್ನು ಹರ್ಟೆಲ್ಲನು ಮರೆತಿರುವನು. 'ತಸ್ಯೈಷ ಆದೇಶೋ ಯದೇತದ್ ವಿದ್ಯುತೋ ವ್ಯದ್ಯುತದಾ ಇತೀತಿ ನ್ಯಮೀಮಿಷದಾ ಇತ್ಯಧಿದೈವತಂ ಅಥಾಧ್ಯಾತ್ಮಂ ಯದೇತತ್ ಗಚ್ಛತೀವ ಚ ಮನೋ ಅನೇನ ಚೈತದ್ ಉಪಸ್ಮರತ್ಯಭೀಕ್ಷ್ಣಂ

ಸಂಕಲ್ಪಃ ' ಎಂದು ಧ್ಯಾನಿಸಹೇಳಿದ ಉಪನಿಷತ್ತಿನ ಇತ್ಯರ್ಥವು ಅಷ್ಟೇ ಇರುವದು. ಬ್ರಹ್ಮ ಮತ್ತು ಅಗ್ನಿ ಎಂಬಿವು ಒಂದೇ ಎಂಬ ಹರ್ಟೆಲ್ಲನ ಮತಕ್ಕೆ ನಾವು ತಕ್ಕಷ್ಟು ಮಾನಕೊಡ ಬಲ್ಲೆವು. ಆದರೆ ಪ್ರಸ್ತುತವಲ್ಲದ ವಿಷಯವನ್ನು ವಿವೇಚಿಸಲಿಲ್ಲವೆಂದು ಉಪನಿಷತ್ಕಾರ ರನ್ನು ಹರ್ಟೆಲ್ಲನಂತೆ ನಾವೇಕೆ ದೂಷಿಸಬೇಕು ? ಬ್ರಹ್ಮವು ಒಂದು ಸರ್ವವ್ಯಾಪಕಶಕ್ತಿ ಎಂಬ ತತ್ವದ ಆಧ್ಯಾತ್ಮಿಕ ವರ್ಣನೆಯು ಪ್ರಸ್ತುತವಿರುವ ಸಮಯದಲ್ಲಿ, ಅವನು ಸರ್ವ ಜೀವಗಳ ಪರಂಧಾಮವಾದ ವಿಶ್ವಾತ್ಮನಾಗಿ ವರ್ಣಿಸಲ್ಪಟ್ಟಿಲ್ಲವೆಂದು ದೂಷಿಸುವದು ಮಿಥ್ಯಾರೋಪವೆಂಬ ದೋಷಕ್ಕೆ ಪಾತ್ರವಾಗುವದು. ಇನ್ನೊಂದೇನಂದರೆ, ' ಆತ್ಮಸಾಕ್ಷಾ ತ್ಕಾರಕ್ಕೆ ಗುರುವಿನ ಅವಶ್ಯಕತೆಯಿಲ್ಲ, ಕೇವಲ ಅಂತಃಪ್ರಕಾಶದಿಂದ ಸಾಕ್ಷಾತ್ಕಾರವಾಗು ವದು, ಎಂದು ಕೇನೋಪನಿಷತ್ತಿನ ಮತವು, ಉಮೆಯು ಇಂದ್ರನಿಗೆ ಸಾಕ್ಷಾತ್ಕಾರ ವಿಷಯ ದಲ್ಲಿ ಏನೂ ಸಹಾಯಮಾಡಲಿಲ್ಲ, ' ಎಂಬ ವಿಧಾನಗಳನ್ನು ಮಾಡುವಾಗ ಕತ್ತಲೆಯಲ್ಲಿ ದಾರಿಗೇಡಾದ ಪ್ರವಾಸಿಕನಿಗೆ ದಾರಿತೋರಿಸುವ ದೀಪದಂತೆ ಆಧ್ಯಾತ್ಮಿಕ ಸಾಧನೆಯಲ್ಲಿ ಗುರುವು ಮಾರ್ಗದರ್ಶಕನಿರುವನೆಂಬದನ್ನೂ ಕೇನೋಪನಿಷತ್ತಿನಲ್ಲಿಯ ಉಮೆಯು ಅದೇ ಕಾರ್ಯವನ್ನು ಮಾಡಿರುವಳೆಂಬದನ್ನೂ ಹರ್ಟೆಲ್ಲನು ಮರೆತಂತೆ ತೋರುವದು. ಈ ಬಗೆಯ ಮತಾಂಧ ( dogmatic ) ದುರಾಗ್ರಹೀ ವಿಚಾರಗಳು ಉಪನಿಷತ್ತಿನ ಏಕಾಂಗೀನ ಅಭ್ಯಾಸದಿಂದ ಉಂಟಾಗುತ್ತವಷ್ಟೇ. ಇದೇ ತರದ ಆರೋಪವೊಂದನ್ನು ಆಲ್ಟ್ರಾಮಾರನು ಋಷಿಗಳ ಮೇಲೆ ಹೊರಿಸಿದ್ದಾನೆ. ' ಜೀವಾತ್ಮನೂ ಪರಮಾತ್ಮನೂ ಒಂದೇ, ಎಲ್ಲ ಜೀವಾತ್ಮಗಳೂ ಒಂದೇ ಎಂಬ ಪ್ರಮೇಯದ ಮೇಲಿಂದ, ನೀನು ನಿನ್ನ ನೆರೆಯವನನ್ನು ನಿನ್ನಷ್ಟೇ ಪ್ರೀತಿಸು ಎಂಬ ಬಾಯಬಲ್ಲಿನಲ್ಲಿರುವ ಅನುಮಾನವನ್ನು ಉಪನಿಷತ್ಕಾರರು ಸಾಧಿಸಿಲ್ಲ, ' ಎಂಬ ದೋಷವನ್ನು ಅಲ್ಟ್ರಾಮಾರನು L' Histoire des Idees theosophiques dans l' inde ಎಂಬ ಗ್ರಂಥದಲ್ಲಿ ಋಷಿಗಳಮೇಲೆ ಆರೋಪಿಸಿ ದ್ದಾನೆ. ಇದಾದರೂ ಆ ತರದ ದುರಾಗ್ರಹದ ಉದಾಹರಣೆಯೆ. ಬಾಯಬಲ್ಲಿನಲ್ಲಿರುವ ಮೇಲಿನ ವಾಕ್ಯವು ಉಪನಿಷತ್ತಿನಲ್ಲಿಲ್ಲವೆಂಬುವವನು ಒಳ್ಳೆ ಧೀರನಿರಲಿಕ್ಕೆ ಬೇಕು ! ' ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ' ( ಈಶ, ಮಂ ೭ ) ಈ ಮಂತ್ರದ ಅರ್ಥವಾದರೂ ಏನು ? ಸಾಕ್ಷಾತ್ಕಾರಿಯು ಎಲ್ಲರಲ್ಲಿಯೂ ಆತ್ಮನನ್ನೆ ನೋಡ ಬೇಕೆಂದುದಲ್ಲವೆ ? ಕ್ಯಾಂಟನ ತತ್ವಜ್ಞಾನಕ್ಕಿಂತಲೂ ಉಪನಿಷತತ್ವಜ್ಞಾನವು ಪ್ಲೋಟಿ ನಸ್, ಸುಫೀಸಾಧುಗಳು, ಎಕಹಾರ್ಟಾದಿ ಕ್ರಿಸ್ತ ಅನುಭಾವಿಗಳು ಇವರ ತತ್ವಜ್ಞಾನವನ್ನೆ ಹೆಚ್ಚು ಹೋಲುವದೆಂದು, ಓಲ್ಡೆನಬರ್ಗನು ' Die lehre der Upanishaden' ಎಂಬ ಗ್ರಂಥದಲ್ಲಿ ಹೇಳಿದ್ದಾನೆ, ಹಾಗೂ ಸ್ವಲ್ಪ ಆಧ್ಯತೆಯಿಂದ ( Der eine der

Weg der Mystik, der andre der Kants ) ತರ್ಕಜ್ಞಾನದ ಮಾರ್ಗ ಬೇರೆ ಅನುಭಾವಿಗಳ ಮಾರ್ಗ ಬೇರೆ, ಎಂದು ಋಷಿಗಳ ತತ್ವಜ್ಞಾನವನ್ನು ಧಿಃಕರಿಸಿದ್ದಾನೆ. ಅದನ್ನು ಓದುವಾಗ ಅರಿಸ್ಟಾಟಲ್ಲನು ಒಂದು ಬೇರೆ ಸಂದರ್ಭದಲ್ಲಿ ಅಂದಂತೆ, ' ಕ್ಯಾಂಟನು ನಮ್ಮ ಸ್ನೇಹಿತನಾಗಿರಲಿ, ಆದರೆ ಸತ್ಯವೇ ನಮ್ಮ ದೈವತವಿರಲಿ, ' ಎಂದು ಅನ್ನುವ ಪ್ರಸಂಗವು ಬರುವದು ! Formbegriff ರೂಪತ್ವ ಇದು ಕ್ಯಾಂಟನ ತತ್ವಜ್ಞಾನದ ತಿರುಳು, Formlosigkeit ನಿರೂಪತ್ವ ಇದು ಉಪನಿಷತ್ತುಗಳ ತತ್ವಜ್ಞಾನದ ತಿರುಳು, ಎಂದು ಹೇಳಿ ಕ್ಯಾಂಟದರ್ಶನವನ್ನು ಹೊಗಳುವಾಗ ಕ್ಯಾಂಟನು ಶುದ್ಧ ತರ್ಕವಿಮರ್ಶೆಯ ( Pure reason ) ಬಗ್ಗೆ ಬರೆದ ಪುಸ್ತಕವು ' ವ್ಯವಹಾರ ವಿಮರ್ಶೆ ' ಯ ( Practical reason ) ಬಗ್ಗೆ ಬರೆದ ಮೀಮಾಂಸೆಯ ಪೂರ್ವಭಾಗವಿತ್ತೆಂಬುದೂ ಆ ಎರಡನೆ ಗ್ರಂಥವು ಮೊದಲನೆಯದಕ್ಕೆ ಪೋಷಕವಾದುದೆಂಬದೂ ಓಲ್ಡೆನಬರ್ಗನಿಗೆ ಕಣ್ಮರೆಯಾಗಿದೆ. ಯಾಕಂದರೆ ಶುದ್ಧತರ್ಕದ ಆಧಾರದಮೇಲೆ ಜೀವ, ಜಗತ್, ಈಶ್ವರ ಇವುಗಳ ಆತ್ಯಂತಿಕ ಸತ್ಯದಬಗ್ಗೆ ಯಾವ ತತ್ವಜ್ಞಾನವನ್ನೂ ರಚಿಸುವದು ಶಕ್ಯವಿಲ್ಲ. ಬ್ರಹ್ಮಜ್ಞಾನದ ವಿಷಯದಲ್ಲಿ ತರ್ಕದ ಅಪ್ರತಿಷ್ಠಾನವನ್ನು ಎಲ್ಲ ಋಷಿಮುನಿಗಳು ಸಾರುತ್ತ ಬಂದಿರುವರಷ್ಟೇ. ಹಟದಿಂದ ಅಂಥ ತತ್ವಜ್ಞಾನವನ್ನು ರಚಿಸಿದರೆ ಅದು ಕೇವಲ ವಿಚಾರಗಳ ಪರಸ್ಪರ ಹೋಲಿಕೆಗಳ ಗೊಂದಲದಿಂದ ನಮ್ಮ ಕಾರ್ಯಪ್ರವೃತ್ತಿಯನ್ನು ಕುಂಠಿಸುವುದು; ವಿಚಾರಗಳ ಪರಸ್ಪರ ವಿರೋಧಗಳಿಂದ ಮನಸ್ಸನ್ನು ವಿಚಾರಸಾಗರದಲ್ಲಿ ಮುಳುಗಿಸುವುದು; ಹಾಗೂ ಅಸಾಧ್ಯವಾದ ಧ್ಯೇಯಗಳನ್ನು ಎದುರಿಗೆ ನಿಲ್ಲಿಸುವದು. ಶುದ್ಧತರ್ಕದ ಆಧಾರವನ್ನವಲಂಬಿಸಿ ಅಜ್ಞಾನದಿಂದ ಮೆರೆಯುವ ಅಜ್ಞೇಯವಾದಕ್ಕಿಂತಲೂ ಆಗಸ್ಟಾಯಿನನ ' ಅರಿತ ಅಜ್ಞಾನಿ ' ( Cognoscendo Ignorari ), ಯಾಜ್ಞವಲ್ಕ್ಯನ ' ನೇತಿ ನೇತಿ ', ಏಕಹಾರ್ಟನ ' ಇದೂ ಅಲ್ಲದ ಅದೂ ಅಲ್ಲದ ಅನಿರ್ದೇಶ್ಯ ' ( Weder dies noch das ) ಈ ವಾಕ್ಯಗಳು ಹೆಚ್ಚಿನ ಆತ್ಮಿಕ ನಮ್ರತೆಯ ಮೂಲಕ ಸತ್ಯಸಾಕ್ಷಾತ್ಕಾರದ ನಿಜವಾದ ದ್ಯೋತಕವಾದವುಗಳೆಂದು ಹೇಳಬಹುದು.

**೫. ಉಪನಿಷತ್ತುಗಳೂ ಈಗಿನ ತತ್ವಜ್ಞಾನವೂ:—** ಉಪನಿಷತ್ತತ್ವಜ್ಞಾನ ಹಾಗೂ ನಮ್ಮ ಸಮಕಾಲೀನ ತತ್ವಜ್ಞಾನ (contemporary thought) ಇವುಗಳ ನಡುವೆ ಎಷ್ಟೋ ಹೋಲಿಕೆಗಳಿರುವವೆಂದು ಕಂಡುಬರುವದು. ಪ್ಲೇಟೋ ಹಾಗೂ ಪಾರ್ಮೆನಾಯಿಡಿಸ್ ಇವರ ತತ್ವಜ್ಞಾನದಕೂಡ ಉಪನಿಷತ್ತತ್ವಜ್ಞಾನವನ್ನು ಹೋಲಿಸಿ ನೋಡುವ ಕಾಲವೊಂದು ಆಗಿಹೋಯ್ತು, ಕ್ಯಾಂಟ ಮತ್ತು ಶೋಪೇನಹೌಯೇರ ಇವರ ವಿಚಾರಗಳಕೂಡ ಅದನ್ನು ಸರಿಗಟ್ಟುವದೂ ಆಯ್ತು. ಆದರೆ ೨೦ನೆಯ ಶತಮಾನದಲ್ಲಿರು

* ೪೨೨೦

ವರು ನಾವು ನಮಗೆ ಸಮಕಾಲೀನವಾದ ತತ್ವಜ್ಞಾನದ ಬಲವುಗಳಕೂಡ ಅವನು ಸರಿಹಚ್ಚಿ ಮತ್ತೆ ಒರೆಹಚ್ಚಿ ನೋಡದಿರುವದು ತಪ್ಪಾಗುವದು. ಈಗಿನ ಬೇರೆ ಬೇರೆ ತತ್ವಜ್ಞಾನಿಗಳಲ್ಲಿ ಮತಭೇದಗಳನ್ನು ಹುಟ್ಟಿಸಲಿಕ್ಕೆ ಕಾರಣವಾದ ಶುದ್ಧಾದ್ವೈತವಾದ ( absolute monism ), ಸಗುಣ ನಿರ್ಗುಣವಾದ ( personalistic idealism ), ಅನೇಕತ್ವವಾದ ( pluralism ), ಆತ್ಮೈಕಾಕಿತ್ವವಾದ ( solipsism ), ಆತ್ಮಸಾಕ್ಷಾತ್ಕಾರವಾದ (self-realisation), ಬುದ್ಧಿ (intellect, ಶುದ್ಧಜ್ಞಾನಶಕ್ತಿ ( intuition ) ಇವುಗಳ ಸಂಬಂಧ, ಮುಂತಾದವುಗಳಬಗ್ಗೆ ಅನೇಕ ವಿಧಾನಗಳು ಉಪನಿಷತ್ತುಗಳಲ್ಲಿಯೂ ಇವೆ. ತತ್ವಜ್ಞಾನದ ಬರಿಯ ತುಲನಾತ್ಮಕ ಅಭ್ಯಾಸವು ಕಂತಿಶರಣನ್ಮುಗಳಂತೆ ಬಂಜೆಯಾಗಿರದೆ ಏನಾದರೊಂದು ಫಲವನ್ನು ಕೊಡುವಂತಿದ್ದರೆ ಆ ವಿಷಯುವನ್ನುಕುರಿತು ಬೇರೊಂದು ಗ್ರಂಥವನ್ನೆ ಬರೆಯಬಹುದಾಗಿತ್ತು. ತುಲನಾತ್ಮಕ ತತ್ವಜ್ಞಾನಕ್ಕಿಂತಲೂ ಹುರುಳಿನ ಹೊಸ ತತ್ವಜ್ಞಾನವನ್ನು ಹುಡುಕುವದು ನಮಗೆ ಇಷ್ಟವು. ದಿನದಿನಕ್ಕೆ ವಿಚಾರವಿನಿಮಯವು ಹೆಚ್ಚಿದಂತೆ, ವಿಚಾರಗಳನ್ನು ಪರಸ್ಪರರಿಗೆ ತಿಳಿಸುವ ಸಾಧನಗಳು ಸುಲಭಸಾಧ್ಯನಾದಂತೆ, ಇಡೀ ಜಗತ್ತಿನಲ್ಲಿಯಜನರು ವಿಚಾರ ಸಾಮ್ರಾಜ್ಯದಲ್ಲಿ ಒಬ್ಬರಿಗೊಬ್ಬರು ಸಮೀಪವಾಗಿ ಒಂದಾಗುವ ಈ ಸಮಯದಲ್ಲಿ ಭಾರತೀಯ ತತ್ವದರ್ಶನಗಳಕಡೆಗೆ ವಿಶೇಷತಃ ಉಪನಿಷತ್ತತ್ವಜ್ಞಾನದ ಕಡೆಗೆ ಪಾಶ್ಚಾತ್ಯ ತತ್ವಜ್ಞರು ದುರ್ಲಕ್ಷ್ಯಮಾಡುವದು ಶಕ್ಯವಿಲ್ಲ. ಬ್ರ್ಯಾಡಲೀ ಮತ್ತು ಬೋಸಾಂಕೆ, ವಾರ್ಡ ಮತ್ತು ರಾಯಿಸ್, ಪ್ರಿಂಗಲ ಪ್ಯಾಟಿಸನ್ ಮತ್ತು ಮ್ಯಾಕ್‌ಟ್ಯಾಗರ್ಟ ಇವರ ನಡುವೆ ಯಾವ ಪ್ರಶ್ನೆಗಳಬಗ್ಗೆ ಮತಭೇದವಿರುವದೋ ಆ ಪ್ರಶ್ನೆಗಳೆ ಉಪನಿಷತ್ಕಾಲದ ಋಷಿಗಳಲ್ಲಿ ಮತಭೇದಗಳನ್ನುಂಟು ಮಾಡಿದ್ದವು. ಈಗಾದರೂ ಜೀವಾತ್ಮ ಪರಮಾತ್ಮರ ಸಂಬಂಧ, ಅಮರತ್ವದ ಕಲ್ಪನೆ, ದೃಶ್ಯಸೃಷ್ಟಿ, ಮನುಷ್ಯನ ಆಚರಣೆಯ ವಿಧಿ ಮುಂತಾದವುಗಳನ್ನು ಕುರಿತು ಮತವಿರೋಧಗಳಿದ್ದೇ ಇರುವವು. ಹೆಚ್ಚು ಶಾರೀರಿಕವಾಗಿ (physiological ) ತೋರುವ ಬರ್ಗಸನ್ನನ ಪ್ರಾಣಸ್ಫುರಣ ತತ್ವವು ( elan vital ) ಛಾಂದೋಗ್ಯದ ( ಅ ೬, ಖಂ ೧ ) ಆರುಣಿಯ ತತ್ವಜ್ಞಾನದಲ್ಲಿ ಮನೋಮಯ ಹಾಗೂ ಆತ್ಮಿಕಸ್ವರೂಪವನ್ನು ಹೊಂದಿದ ಪ್ರಾಣಶಕ್ತಿಯು ( organic force ) ರೂಪದಿಂದ ಗೋಚರವಾಗುವದು. ವಿಕಾಸವಾದಕ್ಕನುಸರಿಸಿ ಈ ದಿಕ್ಕಾಲಗಳ ( space and time ) ಆಧಾರದಿಂದ ಪ್ರಾಣ, ಮನ, ದೇವ ಇವುಗಳ ಗುಣಾತ್ಮಕ (qualitative) ವಿಕಾಸವಾಯ್ತೆಂಬುದು ಅಲೆಕ್ಸಾಂಡರ ಮತ್ತು ಲಾಯಿಡ ಮಾರ್ಗನ್ ಇವರ ತತ್ವಜ್ಞಾನವು. ಇದೇ ವಿಚಾರವು ತಿರುವುಮುರುವಾಗಿ ದೇವತೆಯೆ ಮೂಲತತ್ವ, ಅದರಿಂದ ಮನ, ಪ್ರಾಣ, ದಿಕ್ಕಾಲಗಳ

ಉತ್ಪತ್ತಿ ಎಂದು ಉಪನಿಷತ್ತುಗಳಲ್ಲಿ ಉಲ್ಲೇಖವಿರುವದು. ಉಪನಿಷತ್ಕಾರರು ಮಾಡಿದ ಸ್ವಸಂವೇದದ–ಸ್ವಯಂಪ್ರಜ್ಞೆಯ ( self-consciousness ) ಪ್ರಥಃಕರಣವು ಸವ್ಯದ ಯಾವದೇ ಶ್ರೇಷ್ಠ ತತ್ವಜ್ಞಾನ ವಿಚಾರಸರಣಿಯನ್ನು ಧಿಃಕರಿಸಿ ಶ್ರೇಷ್ಠತೆಯಿಂದ ಮೆರೆಯಬಹುದು. ಇದರ ಮೇಲಿಂದ ನೋಡಲಾಗಿ ಉಪನಿಷತ್ತುಗಳೆಂದರೆ ಏನೋ ಒಂದು ಕಾಡುಕಾಲದಲ್ಲಿ ಅಧೋಗತಿಗಿಳಿದ, ಕಾಡುಸ್ಥಿತಿಯಲ್ಲಿದ್ದ ಸಮಾಜದವರು ಬರೆದ ಗ್ರಂಥಗಳೆಂದು ಒರ್ವ ಯುರೋಪೀಯ ಲೇಖಕನು ಬೊಗಳಿದ್ದು ಎಷ್ಟು ಅಸಮಂಜಸವು, ತಿಳಿಗೇಡಿತನದ್ದು ಎಂಬುದು ಸ್ಪಷ್ಟವಾಗುವದು. ಉಪನಿಷತ್ತತ್ವಜ್ಞಾನವೆಂದರೆ ಒಂದೇಒಂದು ತತ್ವಜ್ಞಾನದರಾಶಿ, ಅದರಲ್ಲಿ ವಿವಿಧತೆಯಿಲ್ಲ ( differentiation ) ಎಂದು ತಿಳಿದು ಅದರ ವಿರುದ್ಧ ಎತ್ತಿದ ಆಕ್ಷೇಪಗಳನ್ನೆಲ್ಲ ಈ ನಮ್ಮ ವಿವೇಚನೆಯು ಒಮ್ಮೆಲೆ ಅಲ್ಲಗಳೆದು ಬಿಡುವದು. ಭಾರತೀಯ ತತ್ವಜ್ಞಾನವೆಂದರೆಲ್ಲ ಸರ್ವವ್ಯಾಪಕವಾದ, ಸರ್ವೇಶ್ವರವಾದ ( pantheism ), ಕಟು ಅದ್ವೈತವಾದ, ದೈವವಾದ (determinism), ಕರ್ಮವಾದ ( karmism ), ವಿಧಿನಿಷೇಧಾತೀತವಾದ (a-moralism), ನಿರಾಶಾವಾದ ( pessimism ), ಇರುವವೆಂದು ಮೇಲಿಂದಮೇಲೆ ಆಕ್ಷೇಪಣೆಗಳೆತ್ತಲ್ಪಡುವದಿಲ್ಲವೇ? ಆದರೆ ಈ ತರದ ಆಕ್ಷೇಪಣೆಗಳಿಗೆ ಉತ್ತರಕೊಡುತ್ತ ಕೂಡ್ರುವ ಸ್ಥಳವು ಇದಲ್ಲ. ತತ್ವಜ್ಞಾನದ ಎಲ್ಲ ಅಂಗೋಪಾಂಗಗಳ ಬಗ್ಗೆ ಶಕ್ಯವಿದ್ದ ಅನೇಕ ವಿವಿಧ ವಿಚಾರಗಳು ಉಪನಿಷತ್ತುಗಳಲ್ಲಿ ಸಮೃದ್ಧವಾಗಿ ಚರ್ಚಿಸಲ್ಪಟ್ಟಿರುವವೆಂಬದನ್ನು ಈ ಟೀಕಾಕಾರರ ಮುಂದೆ ಇಟ್ಟರೆ ಈ ಗ್ರಂಥದ ಕೆಲಸವಾಯಿತು ಎಂದು ನಮ್ಮ ಭಾವನೆ. ಉಪನಿಷತ್ತುಗಳು ಬರಿಯ ಜೊಳ್ಳು ನೀತಿಯನ್ನುಪದೇಶಿಸುತ್ತಿವೆ ಅಥವಾ ಅವುಗಳಲ್ಲಿ ಪರಸ್ಪರವಿರೋಧವಾದವು ( anti-nomianism ) ಹೇಳಿವೆ ಎಂದು ಅನ್ನುವದು ತೀರತಪ್ಪು. ಯಾಕಂದರೆ ಉಪನಿಷತ್ತುಗಳ ಮುಖ್ಯಭಾಗದ ಬಗ್ಗೆ ಈ ಆಕ್ಷೇಪಣೆಯು ಎಂದೂ ತಡೆಯಲಾರದು. ಆ ಗ್ರಂಥಗಳಲ್ಲಿ ಎಲ್ಲಿಯೋ ಒಂದೆಡೆಗೆ ನಿರಾಶವಾದದ ಝಳುಕು ಇದ್ದಾಕ್ಷಣಕ್ಕೆ ಎಲ್ಲ ಉಪನಿಷತ್ತುಗಳು ಅದನ್ನೇ ಪ್ರತಿಪಾದಿಸುವವೆನ್ನಲಾಗದು. ಕವಿ ರವೀಂದ್ರನಾಥ ಟಾಗೋರ ಇವರು ಪಶ್ಚಿಮದೇಶಗಳಿಂದ ಆನಂದದ ಸಂದೇಶವನ್ನು ತಂದು ಇಲ್ಲಿ ಬೀರುವವರೆಗೆ ಹಿಂದುಸ್ಥಾನದಲ್ಲಿ ಕೇವಲ ನಿರಾಶಾವಾದದ ಛಾಯೆ ಮುಸುಕಿತ್ತು ಎಂದು ಈ ದೇಶದ ಬಗ್ಗೆ ಬರೆಯುವ ಯುರೋಪೀಯರು ಅನ್ನುವ ರೂಢಿ. ಇದು ಕೇವಲ ಅಜ್ಞಾನ ಹಾಗೂ ಆತ್ಮಪ್ರೌಢಿಯ ದ್ಯೋತಕವು. ಉಪನಿಷತ್ತುಗಳಲ್ಲಿ ಉಪದಿಷ್ಟವಾದ ಸ್ವಾನಂದಸಾಗರದಲ್ಲಿ ಏಳುವ ತೆರೆಗಳ ಉಕ್ಕೇ ಟಾಗೋರರ ತತ್ವಜ್ಞಾನರೂಪದಿಂದ ಈಗ ಹಿಂದುಸ್ಥಾನವನ್ನು ಮಿಕ್ಕಿ ಹೊರಸೂಸಿ ಹೊರದೇಶಗಳಿಗೆ ಹರಿಯುತ್ತಿರುವದು. ಈ ಗ್ರಂಥವು ಏನಾದರೊಂದು

ಉಪದೇಶಮಾಡುತ್ತಿದ್ದರೆ, ನಿತ್ಯಾನಂದ ಸಾಮ್ರಾಜ್ಯದಲ್ಲಿ ಸಮ್ರಾಟನಂತೆ ಮೆರೆಯುವ ಸಾಕ್ಷಾತ್ಕಾರಿಯು, ಸ್ವಾನಂದಸರೋವರದಲ್ಲಿ ಸತತ ವಿಹಾರಮಾಡುವ ಪರಮಹಂಸನ ಚಾರಿತ್ರ್ಯವನ್ನೆ ಉಪದೇಶಿಸುತ್ತಿರುವನು. ಲಾರ್ಡ ರೋನಾಲ್ಡಶೇ ಧೊರೆಗಳು ಉಪನಿಷತ್ತುಗಳಲ್ಲಿಯ ಯಾವದೋ ಒಂದು ವಾಕ್ಯವನ್ನು ಆಧಾರಿಸಿ ತಮ್ಮ ಒಂದು ಪುಸ್ತಕದಲ್ಲಿ ( India a bird's-eye view, p. 313 ) ಹಿಂದುಸ್ತಾನದ ಶಾರೀರಿಕ ಮತ್ತು ಬೌದ್ಧಿಕ ಜೀವನವೆಲ್ಲ ನಿರಾಶಾವಾದದಿಂದ ದೂಷಿತವಾಗಿದೆ ಎಂದೂ ಭಾರತೀಯ ತತ್ವಜ್ಞರು ಆನಂದಮಯ ಜೀವನದ ಪ್ರತ್ಯಕ್ಷ ( positive ) ವರ್ಣನೆಯನ್ನು ಎಲ್ಲಿಯೂ ಮಾಡಿಲ್ಲವೆಂದೂ ಆಕ್ಷೇಪಿಸಿದ್ದಾರೆ. ಆದರೆ ಈ ಗ್ರಂಥದಲ್ಲಿ ನಾವು ಕೊಟ್ಟ ಉಪನಿಷತ್ಸಾರವನ್ನು ನೋಡಿ ಅವರು ತಮ್ಮ ಈ ಮೇಲಿನ ವಿಧಾನವನ್ನು ತಿದ್ದಬಹುದೇನು, ಎಂದು ನಾವು ಬಳ್ಳಿ ಆದರದಿಂದ ಅವರನ್ನು ಕೇಳುತ್ತೇವೆ ಇನ್ನು ಉಪನಿಷತ್ತುಗಳಲ್ಲಿ ಆನಂದದ ವರ್ಣನೆಯು ಇದ್ದರೂ ಕೂಡ ಭಾರತೀಯರ ಆನಂದವು ಬೇರೆ, ಕ್ರಿಶ್ಚನ್ನರ ಆನಂದವು ಬೇರೆ, ಒಬ್ಬರದು ಪ್ರತ್ಯಕ್ಷ ( positive ) ಇನ್ನೊಬ್ಬರದು ನಿಷೇಧಾತ್ಮಕ ( negative ) ಎಂದು ಉರ್ಕುಹಾರ್ಟ ( Urquhart ) ಎಂಬವರು ತಮ್ಮ ( Upanishads and life pp. 69, 70 ) ಪುಸ್ತಕದಲ್ಲಿ ಹೇಳಿದ್ದಾರೆ. ಆದರೆ ನಾವು ಅನ್ನುವದೇನಂದರೆ, ಆನಂದವು ನಿಷೇಧಾತ್ಮಕವಿರುವದೆಂದು ಹೇಳುವದೇ ಮೊದಲು ಅಸಂಬದ್ಧವು. ನಿಷೇಧಾತ್ಮಕ ಆನಂದವೆಂಬ ಪದವು ಪರಸ್ಪರ ವಿರೋಧಗಳಿಂದ ಕೂಡಿದ್ದು, ಅದು ವದತೋವ್ಯಾಘಾತವೇ ಸೈ. ಇದಲ್ಲದೆ ಪರಮಾತ್ಮನು ಎಲ್ಲೆಲ್ಲಿಯೂ ಎಲ್ಲ ಮನುಷ್ಯರಲ್ಲಿಯೂ ಒಂದೇ ಭಾವನೆ, ಒಂದೇ ಬುದ್ಧಿ, ಒಂದೇ ಇಚ್ಛಾಶಕ್ತಿಯನ್ನು ನಿರ್ಮಾಣಮಾಡಿರುವದರಿಂದ ಹಿಂದುಸ್ತಾನದಲ್ಲಿರುವ ಜನರ ಆನಂದವು ಬೇರೆ, ಯುರೋಪದವರ ಆನಂದವು ಬೇರೆ ಆಗಬಲ್ಲದೇ ? ಒಂದೇತರದ ಆನಂದದ ಪರಿಣತಿಯಾದರೂ ಬೇರೆಯಾಗಬಲ್ಲದೇ ? ಓಲ್ಡೆನಬರ್ಗನು ಮಾತ್ರ ಈ ಮೇಲಿನ ಮತವನ್ನು ಖಂಡಿಸಿ ಪ್ರಾಂಜಲ ಮನಸ್ಸಿನಿಂದ ' ಬ್ರಹ್ಮನಿಂದ ತುಂಬಿಕೊಂಡ ' ' ಈಶಾವಾಸ್ಯವಾದ ' ಈ ವಿಶ್ವದಲ್ಲಿ ನಿರಾಶಾವಾದಕ್ಕೆ ಅವಕಾಶವೇ ಇಲ್ಲವೆಂದು ಪ್ರತಿಪಾದಿಸಿರುವನು. ಇನ್ನು ಇಷ್ಟು ಹೇಳಿದಮೇಲೆ ಉಪನಿಷತ್ತುಗಳಲ್ಲಿ ದುಃಖವನ್ನು ಹುಡುಕುವವರು ದುಃಖವನ್ನು ಪಡೆಯಲಿ, ಆನಂದವನ್ನು ಹುಡುಕುವವರು ಆನಂದವನ್ನು ಪಡೆಯಲಿ ; ಅವರವರ ಬಯಕೆಗಳಂತೆ ಅವರವರ ಫಲಾಂಶವು ಎಂಬುದು ನಿಶ್ಚಿತಸಿದ್ಧಾಂತವು.

೬. **ಈ ಗ್ರಂಥದ ಮೂರು ಉದ್ದೇಶಗಳು:—** ಈವರೆಗೆ ಮಾಡಿದ ಚರ್ಚೆಯುಮೇಲಿಂದ ವಾಚಕರಿಗೆ ಈ ಪುಸ್ತಕದ ಎರಡು ಉದ್ದೇಶಗಳಂತೂ ಸ್ಪಷ್ಟವಾಗಿರ

ಬಹುದು. ಭಾರತೀಯ ತತ್ವಜ್ಞಾನವನ್ನು ಒಂದು ಹೊಸಪದ್ಧತಿಯಿಂದ ಹೇಗೆ ವಿವೇಚಿಸ ಬಹುದೆಂಬದನ್ನು ಪ್ರಾಚ್ಯವಿದ್ಯೆಗಳ ಅಭ್ಯಾಸಿಗಳಿಗೆ ( orientalists ) ತೋರಿಸು ವದು ಮೊದಲನೆಯದು ಹಾಗೂ ಪಾಶ್ಚಾತ್ಯ ತತ್ವಜ್ಞರ ವಿಚಾರಕ್ಕಾಗಿ ಅವರ ಮುಂದೆ ಕೆಲವು ಹೊಸ ಸಾಹಿತ್ಯವನ್ನಿಡುವದು ಎರಡನೆಯದು. ಆದರೆ ಈ ಪುಸ್ತಕವನ್ನು ಬರೆಯುವ ಉದ್ದೇಶಗಳು ಇವೆರಡೇ ಅಲ್ಲ. ಅಧ್ಯಾತ್ಮವನ್ನು ಪ್ರತಿಪಾದಿಸುವದೆ ನಮ್ಮ ಮುಖ್ಯ ಹೇತುವು. ಮಿಕ್ಕ ಉದ್ದೇಶಗಳು ಗೌಣವಾದವುಗಳು. ಪೌರ್ವಾತ್ಯ ಹಾಗೂ ಪಾಶ್ಚಾತ್ಯ ಪಂಡಿತರು ಉಪನಿಷತ್ತುಗಳಲ್ಲಿಯ ಆಧ್ಯಾತ್ಮಿಕ ತೇಜಸ್ಸನ್ನು ನೋಡಿ ಆಗಾಗ್ಗೆ ವಿಸ್ಮಯ ಪಟ್ಟಿರುವರು. ಉಪನಿಷತ್ತುಗಳೆ ಹಿಂದುಸ್ತಾನದ ಉಚ್ಚಧರ್ಮದ ತಳಹದಿ ಎಂದು ಡಾ. ಗೋಲ್ಡಸ್ಟಕರ ( Gold-stucker ) ಇವರು ಬರೆದಿರುವರು. ಉಪನಿಷತ್ತು ಗಳನ್ನು ಓದಿದಕೂಡಲೆ ರಮೇಶಚಂದ್ರ ದತ್ತ ಇವರ ಅಂತಃಕರಣದಲ್ಲಿ ಒಂದು ಹೊಸ ದಿವ್ಯಭಾವನೆಯು ಜನ್ಮವಾದಂತಾಯ್ತು, ಅವರ ಕಣ್ಣುಮುಂದೆ ಹೊಸ ಬೆಳಕು ಬೆಳಗಿತು. ಅಕಸ್ಮಾತ್ತಾಗಿ ಗಾಳಿಯಿಂದ ಹಾರಿಹೋಗುತ್ತಿರುವ ಈಶೋಪನಿಷತ್ತಿನ ಒಂದು ಪುಟವನ್ನು ಓದುವದರಿಂದ ರಾಮಮೋಹನರಾಯರ ಜೀವನಕ್ರಮದಲ್ಲಿ ಆಧ್ಯಾತ್ಮಿಕ ಕ್ರಾಂತಿಯಾಯ್ತು. ಉಪನಿಷತ್ತು ಧರ್ಮಗ್ರಂಥವೆ ಹೊರ್ತು ಕೇವಲ ತತ್ವಜ್ಞಾನದ ಗ್ರಂಥವಲ್ಲವೆಂದು ಪ್ರ್ಯಾಟ್ ( Pratt ) ಇವರ ಖಂಡಿತವಾದ ಮತವು. ಧರ್ಮಸುಧಾರಣೆಯ ಪ್ರತಿ ಯೊಂದು ಪ್ರಯತ್ನವು ಹಿಂದುಸ್ತಾನದಲ್ಲಿ ಉಪನಿಷತ್ತುಗಳ ಅಭ್ಯಾಸದಿಂದಲೆ ಮೊದಲು ಮಾಡಿತೆಂಬದನ್ನು ಗೆಡೆನ್ ( Geden ) ಇವನು ಒಪ್ಪುತ್ತಾನೆ. ಉಪನಿಷತ್ತುಗಳು ವಿಶ್ವಧರ್ಮದ ಗ್ರಂಥವೆಂದು ಮೀಡ ( Mead ) ಇವನು ಹೇಳಿದ್ದಾನೆ. ಇದರಮೇಲಿಂದ ಪೂರ್ವ ಪಶ್ಚಿಮ ದೇಶಗಳಲ್ಲಿಯ ವಿದ್ವಾಂಸರು ಆಧ್ಯಾತ್ಮಿಕದೃಷ್ಟಿಯಿಂದ ಉಪನಿಷತ್ತುಗಳಿಗೆ ಯಾವ ಶ್ರೇಷ್ಠಸ್ಥಾನವನ್ನು ಕೊಡುತ್ತಾರೆಂಬದು ಗೊತ್ತಾಗುತ್ತದೆ. ಭಗವದ್ಗೀತೆಯೊಂದನ್ನು ಬಿಟ್ಟರೆ ಭಾರತೀಯ ತತ್ವಗ್ರಂಥಗಳಲ್ಲಿ ಉಪನಿಷತ್ತುಗಳಷ್ಟು ಉತ್ಕಟ ಧಾರ್ಮಿಕ ಗ್ರಂಥ ಗಳು ಇನ್ನಾವೂ ಇಲ್ಲವೆಂದು ಹೇಳುವದು ಅತಿಶಯೋಕ್ತಿಯಾಗಲಿಕ್ಕಿಲ್ಲ. ಈ ಬಗೆಯಿಂದ ಹೇಳಲ್ಪಟ್ಟ ಈ ಧರ್ಮವನ್ನು ಆಧುನಿಕ ವಿಚಾರಗಳಿಗನುಸರಿಸಿ ಯುಕ್ತಿವಾದದಿಂದ ( intellectually ) ಸಮರ್ಥಿಸುವದು ಅಭಿನವಭಾರತದ ಆದ್ಯಕರ್ತವ್ಯವಿದೆ. ಹೋದ ಅರ್ಧಶತಮಾನದಲ್ಲಿ ಪಾಶ್ಚಾತ್ಯರ ವಿಚಾರವಿಕಾಸದ ಇತಿಹಾಸವನ್ನು ನೋಡಿ ದವರು ಆ ವಿಕಾಸವು, ಅದರ ಬೆಳವಣಿಗೆ ಮುಂತಾದವುಗಳು ಗಿಫರ್ಡ ಉಪನ್ಯಾಸಗಳಿಗೆ ( Gifford Lectures ) ಎಷ್ಟು ಋಣಿಯಾಗಿರುವವೆಂಬದನ್ನು ಬಲ್ಲರು. ಹಿಂದು ಸ್ತಾನದಲ್ಲಿ ಅದೇತರದ ವಿಚಾರ ವಿಕಾಸವಾಗುವಂತೆ ಕಲಕತ್ತಾ ವಿಶ್ವವಿದ್ಯಾಲಯದವರು

ಉಪನ್ಯಾಸಗಳ ವ್ಯವಸ್ಥೆಮಾಡಿದ್ದು ಶುಭಲಕ್ಷಣವು. ಜಗತ್ತಿನಲ್ಲಿಯ ಧಾರ್ಮಿಕ ತತ್ವಜ್ಞಾನದ ಇತಿಹಾಸದಲ್ಲಿ ಉಪನಿಷತ್ತುಗಳು ಒಳ್ಳೆ ಮಹತ್ವದ ಸ್ಥಾನವನ್ನು ಪಡೆಯಲುಯೋಗ್ಯವಾಗಿರುವವು. ನಮಗೆ ಸಮಕಾಲೀನವಾದ ವಿಚಾರವಿಕಾಸಕ್ಕೆ ಉಪನಿಷತ್ತುಗಳು ಎಷ್ಟರಮಟ್ಟಿಗೆ ಸಹಾಯಭೂತವಾಗುವವೆಂಬದನ್ನು ಇಷ್ಟು ತ್ವರೆಯಿಂದ ಈಗೆಯೆ ಹೇಳಲಾಗದು. ಆತ್ಮಸಾಕ್ಷಾತ್ಕಾರವನ್ನು ಹೇಗೆ ಪಡೆಯಬೇಕೆಂಬುದನ್ನು ಹೇಳುವದೆ ಉಪನಿಷತ್ತುಗಳ ಉದ್ದೇಶವೆಂದು ಈ ಗ್ರಂಥದಲ್ಲಿ ಪ್ರತಿಪಾದನೆಯಿರುವದು. ಅನುಭಾವವಾದವೆಂದರೇನು ( mysticism ) ಎಂಬಬಗ್ಗೆ ತಾತ್ವಿಕ ವಿವೇಚನೆಮಾಡುತ್ತ ಕೂಡುವ ವಿಚಾರವು ನಮ್ಮದಿಲ್ಲ ; ಸಾಕ್ಷಾತ್ಕಾರಿಯ ಸತ್ಯದಕಲ್ಪನೆ ಹಾಗೂ ಉಪಯೋಗವಾದಿ ( pragmatist ), ಜಗತ್-ಸತ್ಯತ್ವವಾದಿ (realist), ವಿಜ್ಞಾನವಾದಿ (idealist), ಇವರ ಸತ್ಯದ ಕಲ್ಪನೆ, ಇವುಗಳಿಗೆ ಎಷ್ಟು ಹೋಲಿಕೆ ಎಂಬದನ್ನು ನೋಡುವ ವಿಚಾರವೂ ನಮ್ಮದಿಲ್ಲ. ಜೀವನದಲ್ಲಿ ದಿವ್ಯಭಾವವನ್ನು ಬೆರಿಸಿ ಜೀವನವನ್ನು ಹೆಚ್ಚು ದೇವಪೂರ್ಣ ಹಾಗೂ ಯೋಗ್ಯಮಾಡುವದರ ಮೇಲೆಯೆ ಯಾವದೊಂದು ತತ್ವಜ್ಞಾನದ ಸತ್ಯ ಹಾಗೂ ಸಾಮರ್ಥ್ಯಗಳ ಯೋಗ್ಯತೆಯು ಅವಲಂಬಿಸಿರುವದು. ಜೀವಾತ್ಮನಿಗೆ ಪರಮಾತ್ಮನ ಸಾಕ್ಷಾತ್ಕಾರವಾಗುವದೆ ಉಪನಿಷತ್ತತ್ವಜ್ಞಾನದ ಪರಿಣತಿಯು ಎಂದೂ ಸಾಮಾಜಿಕ ಹಾಗೂ ರಾಜಕೀಯ ವಿಷಯಗಳಿಗೆ ಇದರ ಸಂಬಂಧವಿಲ್ಲವೆಂದೂ ಈ ಗ್ರಂಥದ ಕೊನೆಯ ಪ್ರಕರಣವನ್ನು ಓದಿದವರು ಭಾವಿಸಬಹುದು. ಆದರೆ ಆಧ್ಯಾತ್ಮಿಕ ತತ್ವಜ್ಞಾನವನ್ನು ವ್ಯವಹಾರದಲ್ಲಿ ಹೇಗೆ ಆಚರಿಸಬೇಕು ಎಂಬದನ್ನು ಹಾಗೂ ಮಾನವೀ ವ್ಯವಹಾರದಲ್ಲಿ ಪರಮಾತ್ಮಸಂಕಲ್ಪವು ಕೈಗೂಡುವಂತೆ ನಿಷ್ಕಾಮ ಕರ್ಮಯೋಗಿಗಳಾಗಿ ಹೇಗೆ ನಡೆಯಬೇಕು ಎಂಬದನ್ನು ಉಪದೇಶಿಸುವ ಭಗವದ್ಗೀತೆಯ ಅವತಾರವು ಇನ್ನೂ ಆಗುವದಿತ್ತು. ಇದನ್ನು ಉಪನಿಷತ್ತುಗಳ ಓದುಗರು ಮರೆಯಕೂಡದು. ಭಗವದ್ಗೀತೆಯು ಉಪದೇಶಿಸಿದ ಆಧ್ಯಾತ್ಮಿಕ ಕರ್ಮಯೋಗದ ಅಡಿಗಲ್ಲು ಉಪನಿಷತ್ತುಗಳಲ್ಲಿಯೆ ಇರುವದೆಂಬದನ್ನು ಯಾರೂ ಅಲ್ಲಗಳೆಯಲಾರರು. ಎರಡೂ ಗ್ರಂಥಗಳಲ್ಲಿ ಸಾಕ್ಷಾತ್ಕಾರವೆ ಮುಖ್ಯೋದ್ದೇಶವೆಂಬುದು ಸ್ಪಷ್ಟವಿದೆ. ಸಾಕ್ಷಾತ್ಕಾರವಾದವನ್ನು ತಾತ್ವಿಕರೀತಿಯಿಂದ ಹೇಗೆ ಪ್ರತಿಪಾದಿಸಬೇಕೆಂಬುವೆ ಈಗ ತತ್ವಜ್ಞರಿಗೆ ಎದುರಾದ ಪ್ರಶ್ನೆಯು. ವಿವೇಕಪೂರ್ಣ (rational) ಸಾಕ್ಷಾತ್ಕಾರವಾದವೆಂಬ ಪದವು ತೋರಲಿಕ್ಕೆ ಪರಸ್ಪರ ವಿರೋಧಿಯಾಗಿ ಕಂಡರೂ ಅದು ಇನ್ನು ಸಾಮಾನ್ಯವಾದ ಯಾವುದೊಂದು ನಾಣ್ನುಡಿಯಷ್ಟು ಜನರಿಗೆ ಪರಿಚಿತವಾಗಲಿಕ್ಕೆ ಬೇಕು. ಈ ಧ್ಯೇಯಸಾಧನೆಗೆ ಈ ಗ್ರಂಥದಿಂದ ಕೊಂಚು ಸಹಾಯವಾದರೂ ಗ್ರಂಥಕರ್ತನು ತಾನು ಕೃತಾರ್ಥನೆಂದು ತಿಳಿಯುವನು.

**೮. ಅಧ್ಯಾತ್ಮಭವನ ಹಾಗೂ ಅದರ ಗುರಿ—** ಇದು ನಿಂಬಾಳದ ಅಧ್ಯಾತ್ಮವಿದ್ಯಾಪೀಠದವರು ಪ್ರಸಿದ್ಧಮಾಡಿದ ಮೊದಲನೆಯ ಪುಸ್ತಕದ ಕನ್ನಡ ಅನುವಾದವು. ಪರಮಾತ್ಮತತ್ವದ ತಾತ್ವಿಕ ಅನ್ವೇಷಣ ಮಾಡುವವರ ಸಲುವಾಗಿ ಈ ಸಂಸ್ಥೆಯು ಇತ್ತೀಚೆ ಹಿಂದುಸ್ಥಾನದಲ್ಲಿ ಸ್ಥಾಪಿಸಲ್ಪಟ್ಟಿರುವದು. ಜಗತ್ತಿನಲ್ಲಿ ಉಪಲಬ್ಧವಿರುವ ಎಲ್ಲ ಧರ್ಮ ಹಾಗೂ ತತ್ವಜ್ಞಾನಗಳನ್ನು ಪರಿಶೋಧಿಸಿ ಗ್ರಂಥಗಳನ್ನು ಬರೆದು ಪ್ರಸಿದ್ಧ ಮಾಡಿ ಈ ಗುರಿಯನ್ನು ಸಾಧಿಸಬೇಕಾಗಿದೆ. ಈ ಸಂಸ್ಥೆಯ ಪರವಾಗಿ ಅಲ್ಲಲ್ಲಿ ಶಿಕ್ಷಣದ ಕೇಂದ್ರಸ್ಥಾನಗಳಲ್ಲಿ ಉಪನ್ಯಾಸಗಳಾದರೂ ಆಗುವವು. ಅದರಿಂದಲೂ ಸಂಸ್ಥೆಯ ಕೆಲಸಕ್ಕೆ ಸಹಾಯವಾಗುವದು. ಪುಣೆ, ಮುಂಬಯಿ, ಮತ್ತು ನಾಗಪೂರ ಇವು ಸದ್ಯಕ್ಕೆ ಸಂಸ್ಥೆಯ ಕೇಂದ್ರಗಳಿರುವವು. ಇದು ಅಖಿಲ ಭಾರತೀಯ ಸಂಸ್ಥೆ ಇರಬೇಕೆಂಬುದಾಗಿ ಎಲ್ಲ ವಿಶ್ವವಿದ್ಯಾಲಯಗಳ ಪ್ರತಿನಿಧಿಗಳೂ ಇದರ ಕಾರ್ಯಕಾರೀಮಂಡಲದಲ್ಲಿ ಸೇರಿಸಲ್ಪಟ್ಟಿದ್ದಾರೆ. ಸಂಸ್ಥೆಯ ಕಾರ್ಯದಲ್ಲಿ ವಿಶೇಷ ಆಸ್ಥೆಯುಳ್ಳವರ ಸಲುವಾಗಿ ವಿಜಾಪೂರ ಜಿಲ್ಹೆಯಲ್ಲಿ ನಿಂಬಾಳ ಎಂಬ ರೇಲ್ವೆ ಸ್ಟೇಶನದ ಹತ್ತರವೆ ಒಂದು ಆಶ್ರಮವು ಕಟ್ಟಲ್ಪಟ್ಟಿದೆ. ಬೌದ್ಧಿಕ ಹಾಗೂ ಆತ್ಮಿಕ ಉನ್ನತಿಗಾಗಿ ಅದನ್ನು ಉಪಯೋಗಿಸಬಹುದು. ಬೇಕನ್ನನ ಧ್ಯೇಯವಾಕ್ಯವನ್ನೆ ( maxim ) ಇಲ್ಲಿ ಉಪಯೋಗಿಸಿ ಹೇಳಬೇಕೆಂದರೆ, ಜಾತಿ ವಂಶ ಪಂಥ ರಾಷ್ಟ್ರ ಇವುಗಳ ಭೇದವಿಲ್ಲದೆ ಅಖಿಲ ತಾತ್ವಿಕ ಮತ್ತು ಧಾರ್ಮಿಕ ಜ್ಞಾನಸಂಪಾದನೆಯೆ ಈ ಸಂಸ್ಥೆಯ ಕಾರ್ಯಕ್ಷೇತ್ರವು. ಸಂಸ್ಥೆಯ ಸೂಚಿಪತ್ರದ ಪ್ರಸ್ತಾವನೆಯಲ್ಲಿಯ ಈ ಕೆಳಗಿನ ವಾಕ್ಯಗಳ ಮೇಲಿಂದ ಯಾವ ದಿವ್ಯದರ್ಶನದಿಂದ ಈ ಸಂಸ್ಥೆಯು ಸ್ಫೂರ್ತಿಗೊಂಡಿರುವದೆಂಬದು ವ್ಯಕ್ತವಾಗುವದು. ‘ ರಾಯನಿರಲಿ, ರೈತನಿರಲಿ; ನಿಜವಾದ ಧಾರ್ಮಿಕ ಒಲವಿದ್ದ ಪ್ರತಿಯೊಬ್ಬನು ಅಧ್ರುವಗಳಲ್ಲಿ ಧ್ರುವವನ್ನು ( ಅಸ್ಥಿರಗಳಲ್ಲಿ ಸ್ಥಿರವನ್ನು ) ವಿಶೇಷಗಳಲ್ಲಿ ಸಾಮಾನ್ಯವನ್ನು, ಗೊತ್ತುಹಿಡಿಯುವದಕ್ಕಾಗಿ ಹವಣಿಸುವನು. ಉದಾಹರಣಾರ್ಥವಾಗಿ ತತ್ವಜ್ಞಾನಿಗಳಲ್ಲ ಶಂಕರಾಚಾರ್ಯ ಮತ್ತು ಪ್ಲೇಟೋ, ಅರಸರಲ್ಲಿ ಅಶೋಕ ಮತ್ತು ಅಕಬರ, ಇವರು ವಿಶ್ವಧರ್ಮದರ್ಶನಕ್ಕಾಗಿ ಹೇಗೆ ಹೆಣಗಿದರೆಂಬದು ಸ್ಪಷ್ಟವದೆ. ವಿಶೇಷಗಳಲ್ಲಿ ಸಾಮಾನ್ಯದರ್ಶನ ಇದೇ ಪ್ಲೇಟೋನಲ್ಲಿಯ ಮುಖ್ಯ ಶ್ರೇಷ್ಠಗುಣವು. ಯಾವದನ್ನರಿಯುವದರಿಂದ ಎಲ್ಲವನ್ನೂ ಅರಿತಂತಾಗುವದೊ ಅದನ್ನರಿತುಕೊಳ್ಳುವದಕ್ಕಾಗಿಯೆ ಶಂಕರಾಚಾರ್ಯರು ತಮ್ಮ ಜೀವನಸರ್ವಸ್ವವನ್ನು ಅರ್ಪಿಸಿದರು. ಪರರ ಧರ್ಮಗಳನ್ನು ಹಳಿಯಬೇಡಿ, ಹಾಗೆ ಮಾಡುವದೆಂದರೆ ನಮ್ಮ ಧರ್ಮವನ್ನೆ ನಾವು ಕೆಡಿಸಿದಂತೆ, ಎಂದು ಅಶೋಕ ಮಹಾರಾಜನು ತನ್ನ ಒಂದು ಶಿಲಾಶಾಸನದಲ್ಲಿ ಬರೆಯಿಸಿ ‘ ಸಮವಾಯ ’ ಗುಣವನ್ನುಪದೇಶಿಸಿರುವನು. ಸರ್ವಧ

ರ್ಮದ ಪರಿಷತ್ತೊಂದನ್ನು ಕರೆದು ಯಾವುದರಿಂದ ಅಂತರಂಗದ ಕದವು ತೆರೆಯುವದೊ ಆ ತತ್ವದರ್ಶನಕ್ಕಾಗಿ ಅಕಬರನು ಹಂಬಲಿಸಿದನು. ಪ್ಲೇಟೋ, 'ಶಂಕರಾಚಾರ್ಯ, ಅಶೋಕ, ಅಕಬರ ಇವರ ಕಾಲಕ್ಕೂ ಈಗಿನ ಕಾಲಕ್ಕೂ ಮಹದಂತರವಿದೆ. ಕಾಲಗತಿಗನುಸರಿಸಿ ಹೆಚ್ಚಾಗಿ ಜ್ಞಾನದ ಪ್ರಗತಿಯಾಗಿದೆ. ಅನೇಕ ಶಾಸ್ತ್ರೀಯ ಶೋಧಗಳಿಂದ ಮನುಷ್ಯನ ಸೊತ್ತು ಸುಸಮೃದ್ಧವಾಗಿದೆ. ಹಳೇದೆಲ್ಲ ಅಳಿದು ಹೊಸದು ಹುಟ್ಟಿ ಬೆಳೆಯುತ್ತಲಿದೆ. ಹೀಗಿದ್ದರೂ ಮಾನವೀ ಧ್ಯೇಯ ಹಾಗೂ ಅದನ್ನು ಸಾಧಿಸುವ ಮಾರ್ಗಗಳು ಅಚ್ಚಳಿಯದೆ ಮೊದಲಿನವೆ ಇವೆ. ಈಗ್ಯೂ ಪರಮಾತ್ಮಜ್ಞಾನವೆ ಎಲ್ಲಕ್ಕೂ ಶ್ರೇಷ್ಠಸಾಧ್ಯವಾಗಿದೆ ಹಾಗೂ ಆಧ್ಯಾತ್ಮಿಕ ಜೀವನದ ತಾತ್ವಿಕ ಸಮರ್ಥನವು ಮೊದಲಿನಂತೆ ಈಗಲೂ ಅವಶ್ಯವಿದೆ. ಈ ಸಂಸ್ಥೆಯ ಹೆಚ್ಚಿನ ಸಂಗತಿಗಳನ್ನರಿಯಲಿಚ್ಛಿಸುವವರು, ಡಾಯರೆಕ್ಟರ,ಅಕ್ಯಾಡೆಮಿ ಆಫ್ ಫಿಲಾಸಫೀ ಆ್ಯಂಡ ರಿಲಿಜನ್,ಪುಣೆ ಅಥವಾ ನಿಂಬಾಳ ಇವರಿಂದ ತಿಳಕೊಳ್ಳಬಹುದು.

**೯. ಈ ಗ್ರಂಥದಲ್ಲಿಯ ವಿವೇಚನಪದ್ಧತಿ:**— ಇನ್ನು ಈ ಗ್ರಂಥದ ವಿವೇಚನಪದ್ಧತಿಯಬಗ್ಗೆ ಎರಡು ನುಡಿಗಳನ್ನು ಬರೆದು ಈ ಪ್ರಸ್ತಾವನೆಯನ್ನು ಮುಗಿಸುವೆನು. ಉಪನಿಷತ್ತುಗಳನ್ನು ಎರಡು ಬಗೆಯಿಂದ ಅಭ್ಯಸಿಸಬಹುದು. ಅವುಗಳಲ್ಲಿ ಒಂದೊಂದನ್ನು ಪ್ರತ್ಯೇಕವಾಗಿ ಓದಿ ಅವುಗಳಲ್ಲಿಯ ವಿಚಾರಗಳನ್ನು ಪೃಥಃಕರಿಸಬಹುದು. ಅಥವಾ ಅವೆಲ್ಲವುಗಳ ಆಶಯವೇನೆಂಬುದನ್ನು ಸಮನ್ವಯದಿಂದ ಅರಿತುಕೊಳ್ಳಬಹುದು. ಈ ಗ್ರಂಥವು ಸಮನ್ವಯದಿಂದ ಸಂಕ್ಷೇಪವಾಗಿ ಮುಖ್ಯ ಉಪನಿಷತ್ತುಗಳ ವಿಚಾರಗಳನ್ನು ವಿಮರ್ಶಿಸುತ್ತದೆ. ಉಪನಿಷತ್ತುಗಳಲ್ಲಿ ನಿರ್ದಿಷ್ಟವಾದ ಪ್ರತಿಯೊಂದು ವಿಚಾರವನ್ನು ಸಂಪೂರ್ಣ ವಿಮರ್ಶಿಸಿ ಆ ಮಥನದಿಂದ ಹೊರಟ 'ಉಪನಿಷತ್-ರಹಸ್ಯ' ವೆಂಬ ನವನೀತವನ್ನು ಓದುಗರಿಗೆ ಅರ್ಪಿಸುವದೆ ಈ ಗ್ರಂಥದ ಉದ್ದೇಶವಿದೆ. ಉಪನಿಷತ್ತಿನಲ್ಲಿಯ ಸಿದ್ಧಾಂತಗಳನ್ನು ವಿಂಗಡಿಸಿ ವಿಶ್ವೋತ್ಪತ್ತಿ, ಮಾನಸಶಾಸ್ತ್ರ, ಅಧ್ಯಾತ್ಮ, ನೀತಿಶಾಸ್ತ್ರ, ತತ್ವಜ್ಞಾನ, ಸಾಕ್ಷಾತ್ಕಾರವಾದ ಮುಂತಾದ ಭಾಗಗಳನ್ನಾಗಿ ಮಾಡಿ ಅವುಗಳನ್ನು ತರ್ಕಾನುಕ್ರಮದಿಂದ ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ. ಸ್ವಂತ ವಿಚಾರಗಳನ್ನು ಸೇರಿಸದೆ ಉಪನಿಷತ್ತತ್ವಜ್ಞಾನವನ್ನು ಜನರೆದುರಿಗಿಡುವದು ಮಹತ್ವದ್ದೆಂಬುದನ್ನು ನಾನು ಬಲ್ಲೆನು. ಆದುದರಿಂದ ನನ್ನ ವಿಚಾರಗಳನ್ನು ಇದರಲ್ಲಿ ಸೇರಿಸಲಿಕ್ಕೆ ನಾನು ಯತ್ನಿಸಿಲ್ಲ. ಈ ಗ್ರಂಥವು ಅಧ್ಯಾತ್ಮಶಾಸ್ತ್ರದ ಪ್ರಸ್ತಾವನೆಯೇ ಇದೆ. ಪರಮಾತ್ಮನ ಅನುಗ್ರಹವಿದ್ದರೆ ನನ್ನ ಆಧ್ಯಾತ್ಮಿಕ ವಿಚಾರಗಳನ್ನೆಲ್ಲ 'ಪರಮಾತ್ಮಯೋಗ' ವೆಂಬ ಗ್ರಂಥದಲ್ಲಿ ಬೇಗನೆ ಪ್ರಕಟ ಮಾಡುವ ವಿಚಾರವಿದೆಯೆಂದು ಹೇಳಿ ಈ ಪ್ರಸ್ತಾವನೆಯನ್ನು ಮುಗಿಸುವೆನು.

**ರಾ. ದ. ರಾನಡೆ.**

# ವಿಷಯಾನುಕ್ರಮಣಿಕೆ

—— 0 ——

## ಭಾಗ ೧

## ಮುನ್ನುಡಿಗಳು ಪ್ರಸ್ತಾವನೆ ಅನುಕ್ರಮಣಿಕೆ

ಮತ್ತು

## ಉಪನಿಷತ್‌-ರಹಸ್ಯವು



## ಪ್ರಕರಣ ೧

## ಉಪನಿಷತ್ತುಗಳ ಪಾರ್ಶ್ವಭೂಮಿ

## ಪ್ರಕರಣ ೨

## ವಿಶ್ವೋತ್ಪತ್ತಿಶಾಸ್ತ್ರದ ವಿಕಾಸವು

[ ಪುಟ ೫೪-೭೭ ]



## ಪ್ರಕರಣ ೩

## ಮಾನಸಶಾಸ್ತ್ರದ ವಿವಿಧಾಂಗಗಳ ವಿಚಾರವು

[ ಪುಟ ೭೮-೧೨೫ ]



### ೧. ಅನುಭವಜನ್ಯ ಮಾನಸಶಾಸ್ತ್ರವು

## ೨. ಅಸಾಧಾರಣ ಮಾನಸಶಾಸ್ತ್ರವು

೯ ಛಾಂದೋಗ್ಯದಲ್ಲಿಯ ಮರಣ ವಿಷಯಕ ಪ್ರಮೇಯವು. ೧೦ ಕಠೋಪನಿಷತ್ತಿನಲ್ಲಿಯ ಮರಣವಿಚಾರವು. ೧೧ ನಿದ್ರೆಯ ಪ್ರಮೇಯವೂ ದಣಿವಿನ ಹಾಗೂ ಪುರೀತತ್ತಿನ ಸಿದ್ಧಾಂತಗಳೂ. ೧೨ ನಿದ್ರೆಯ ಸಂಬಂಧದಿಂದ ಪ್ರಾಣ ಮತ್ತು ಬ್ರಹ್ಮನ ಪ್ರಮೇಯವು. ೧೩ ಕನಸಿನ ಪ್ರಶ್ನೆಯು. ೧೪ ಆತ್ಮನ ಲೋಕಾಂತರ ಸ್ಥಿತಿಯ ಸಂಶೋಧನವು. ೧೫ ವಿಚಾರಸಾಮರ್ಥ್ಯವು.

## ೩. ಬುದ್ಧಿಗಮ್ಯ ಮಾನಸಶಾಸ್ತ್ರವು

೧೬ ಆತ್ಮನಿಲ್ಲದ ಮಾನಸಶಾಸ್ತ್ರವಿರಲಾರದು. ೧೭ ಆತ್ಮನ ನಿವಾಸಸ್ಥಾನವು. ೧೮ ಹೃದಯ ಮತ್ತು ಮಿದುಳು ಇವು ಆತ್ಮನ ಸ್ಥಾನಗಳು. ೧೯ ದೇಹದೇಹಿಗಳ ಸಂಬಂಧವು. ೨೦ ಆತ್ಮನ ವ್ಯಾಪ್ತಿಯ ವಿಚಾರವು. ೨೧ ಅಣೋರಣೀಯಾನ್ಮಹತೋ ಮಹೀಯಾನಾತ್ಮಾ. ೨೨ ಆತ್ಮನ ಅವಸ್ಥೆಗಳ ಪ್ರಥಃಕರಣವು. ೨೩ ಪಿಂಡವು ಮತ್ತು ಬ್ರಹ್ಮಾಂಡವು. ೨೪ ಆತ್ಮನ ಕೋಶಗಳು. ೨೫ ಆತ್ಮನ ತಿಳುವಳಿಕೆಗಳ ಸತ್ಯಾಸತ್ಯತೆ. ೨೬ ಕೋಶಗಳೂ ಮೂಲವಸ್ತುವೂ. ೨೭ ಪುನರ್ಜನ್ಮವಾದವು ಆರ್ಯರ ಕಲ್ಪನೆಯು. ೨೮ ಋಗ್ವೇದದ ದಶಮಮಂಡಲದಲ್ಲಿರುವ ಪುನರ್ಜನ್ಮ ವಿಚಾರವು. ೨೯ ಋಗ್ವೇದದ ಮೊದಲನೆಯ ಮಂಡಲದೊಳಗಿನ ಪುನರ್ಜನ್ಮವಿಚಾರವು. ೩೦ ಪುನರ್ಜನ್ಮದ ಕಲ್ಪನೆಯೂ ಆರ್ಯ ಜನಾಂಗದ ಮನೋವಿಕಾಸವೂ. ೩೧ ಕಠೋಪನಿಷತ್ತಿನಲ್ಲಿಯ ಪುನರ್ಜನ್ಮವಿಚಾರವು. ೩೨ ಬೃಹದಾರಣ್ಯಕದೊಳಗಿನ ಪುನರ್ಜನ್ಮವಿಚಾರವು. ೩೩ ಪಾಪಿಯ ಗತಿ. ೩೪ ಬೃಹದಾರಣ್ಯಕದೊಳಗಿನ ಜೀವನ ಮರಣಾನಂತರ ಸ್ಥಿತಿಯ ವಿಚಾರವು. ೩೫ ಛಾಂದೋಗ್ಯದೊಳಗಿನ ದೇವಯಾನವೂ ಪಿತೃಯಾನವೂ. ೩೬ ಔರ್ಧ್ವದೇಹಿಕ ವಿಚಾರದಲ್ಲಿರುವ ನೈತಿಕ ಮೂಲತತ್ವವು. ೩೭ ಇದರ ಬಗ್ಗೆ ಉಪನಿಷತ್ಕಾರರ ಮತ್ತು ಪ್ಲೇಟೋ ಇವರ ವಿಚಾರಗಳ ತುಲನೆ. ೩೮ ದೇವಯಾನದ ವಿಷಯಕ್ಕಿರುವ ಮತವೈಚಿತ್ರ್ಯಗಳು. ೩೯ ಅಮೃತತ್ವದ ಕಲ್ಪನೆಯು.

## ಪ್ರಕರಣ ೪

## ಇತಿ (ಚಿನ ದರ್ಶನಗಳ ಬೀಜಗಳು

[ ಪುಟ ೧೨೬-೧೬೭ ]



## ಪ್ರಕರಣ ೫

## ಉಪನಿಷತ್ತುಗಳೂ ಪರಾತ್ಪರ ಸತ್ಯವೂ

[ ಪುಟ ೧೬೮-೧೯೩ ]



### ೧. ಆಧಿಭೌತಿಕ ವಿಚಾರಪದ್ಧತಿಯು

ತ್ವದ ಬಗ್ಗೆ ಆಧಿಭೌತಿಕ ಪ್ರತಿಪಾದನವು. ೬ ಬ್ರಹ್ಮನು ಪರಂಜ್ಯೋತಿಯು. ೭ ಪರ ಬ್ರಹ್ಮವು ಈ ವಿಶ್ವದ ಸೂಕ್ಷ್ಮ ಸಾರವು. ೮ ಶಾರೀರಿಕ ಮತ್ತು ಆಧಿದೈವಿಕ ವಿಚಾರ ಪದ್ಧತಿಯು.

### ೨. ಆಧಿದೈವಿಕ ವಿಚಾರಪದ್ಧತಿಯು

೯ ಅನೇಕೇಶ್ವರವಾದದಿಂದ ಏಕೇಶ್ವರವಾದದ ಕಡೆಗೆ. ೧೦ ಸಗುಣಪರಮಾತ್ಮನ ಕಲ್ಪನೆ ಮತ್ತು ಜೀವಶಿವರ ಐಕ್ಯ. ೧೧ ಪರಮಾತ್ಮನು ಸರ್ವವ್ಯಾಪಕನು, ಅತೀಂದ್ರಿಯನು.

### ೩. ಆಧ್ಯಾತ್ಮಿಕ ವಿಚಾರಪದ್ಧತಿಯು

೧೨ ಶರೀರ ಮನಸ್ಸುಗಳ ಪೃಥಃಕರಣದಿಂದ ಆತ್ಮನ ಅರಿವು. ೧೩ ಚೈತನ್ಯದ ಅವಸ್ಥೆಗಳಾದ ಜಾಗೃತ್, ಸ್ವಪ್ನ, ಸುಷುಪ್ತಿ, ಮತ್ತು ತುರೀಯ. ೧೪ ಪರಾತ್ಪರ ಸತ್ವವೇ ಆತ್ಮವೆಂಬುದು.

### ೪. ಆತ್ಮಜ್ಞಾನದ ಮಹತ್ವವು

೧೫ ಜ್ಞಾನಸ್ವರೂಪ, ಅಧ್ಯಾತ್ಮ, ಅನುಭಾವ ಇವುಗಳ ದೃಷ್ಟಿಯಿಂದ ಆತ್ಮಜ್ಞಾನದ ಮಹತ್ವವು. ೧೬ ಆತ್ಮಜ್ಞಾನದ ಸ್ವರೂಪವೇನು. ೧೭ ಆತ್ಮಜ್ಞಾನದ ಆಧ್ಯಾತ್ಮಿಕ ಮಹತ್ವವು. ೧೮ ಆಧ್ಯಾತ್ಮಿಕ ಅನುಭವದ ನಿಚ್ಚಣಿಕೆಯು.

## ಪ್ರಕರಣ ೬

## ಔಪನಿಷದಿಕ ನೀತಿಶಾಸ್ತ್ರವು

### [ ಪುಟ ೧೯೪–೨೨೦ ]

೧ ಅಧ್ಯಾತ್ಮ, ನೀತಿ, ಹಾಗೂ ಅನುಭೂತಿ. ೨ ಹಿಂದಿನ ಪ್ರಕರಣವು ಮುಂದರಿದುದು.

### ೧. ನೈತಿಕವಿಧಿಗಳ ತತ್ವವಿವೇಚನೆ

೩ ಲೋಕಾನುವರ್ತನವು. ೪ ಈಶ್ವರಾನುವರ್ತನವು. ೫ ಆತ್ಮಾನುವರ್ತನವು.

### ೨. ನೈತಿಕ ಆದರ್ಶವಿಚಾರವು

೬ ವಿಷಯಸುಖವಿರೋಧವು. ೭ ನಿರಾಶಾವಾದವು. ೮ ವೈರಾಗ್ಯವಾದ, ಸತ್ಯಾಗ್ರಹ, ಹಾಗೂ ಶಾಂತಿ. ೯ ಆಧ್ಯಾತ್ಮಿಕ ಕರ್ಮಯೋಗ. ೧೦ ಲೌಕಿಕ ಕರ್ಮ

### ೩. ವ್ಯಾವಹಾರಿಕ ನೀತಿ



## ಪ್ರಕರಣ ೭

## ಆತ್ಮಸಾಕ್ಷಾತ್ಕಾರದ ಮುಂಗುರುತುಗಳು

[ ಪುಟ ೨೨೧-೨೪೧ ]



---

## ಭಾಗ ೨

### ಆಧಾರಮಂತ್ರಗಳು ಇತ್ಯಾದಿ



---

## ಈ ಗ್ರಂಥದಲ್ಲಿ ಉಪಯೋಗಿಸಿದ ಲಘುಪದಗಳ ಸೂಚಿ

### [ಉಪನಿಷತ್ತುಗಳ ಹೆಸರುಗಳು]

| ಲಘುಪದ | ಪೂರ್ಣಪದ |
|---|---|
| ಈ. | ಈಶಾವಾಸ್ಯೋಪನಿಷತ್ತು |
| ಕೇ ಅಥವಾ ಕೇನ. | ಕೇನೋಪನಿಷತ್ತು |
| ಕ. | ಕಠೋಪನಿಷತ್ತು |

| | |
|---|---|
| ಪ್ರ. | ಪ್ರಶ್ನೋಪನಿಷತ್ತು |
| ಮು ಅಥವಾ ಮುಂ. | ಮುಂಡಕೋಪನಿಷತ್ತು |
| ಮಾ ಅಥವಾ ಮಾಂ. | ಮಾಂಡೂಕ್ಯೋಪನಿಷತ್ತು |
| ಐ. | ಐತರೇಯೋಪನಿಷತ್ತು |
| ತೈ. | ತೈತ್ತಿರೀಯೋಪನಿಷತ್ತು |
| ಛಾ ಅಥವಾ ಛಾಂ. | ಛಾಂದೋಗ್ಯೋಪನಿಷತ್ತು |
| ಬೃ. | ಬೃಹದಾರಣ್ಯಕೋಪನಿಷತ್ತು |
| ಶ್ವೇ. | ಶ್ವೇತಾಶ್ವತರೋಪನಿಷತ್ತು |
| ಕೌ. | ಕೌಷೀತಕಿ ಉಪನಿಷತ್ತು |
| ಮೈ. | ಮೈತ್ರ್ಯುಪನಿಷತ್ತು |
| ಮುಕ್ತಿಕ. | ಮುಕ್ತಿಕೋಪನಿಷತ್ತು |

[ ಉಪನಿಷತ್ತುಗಳಲ್ಲಿಯ ಭಾಗಗಳ ಹೆಸರುಗಳು

| | |
|---|---|
| ಖ ಅಥವಾ ಖಂ. | ಖಂಡ |
| ಅ. | ಅಧ್ಯಾಯ |
| ಬ್ರಾ. | ಬ್ರಾಹ್ಮಣ |
| ವ. | ವಲ್ಲಿ |
| ಅನು. | ಅನುವಾಕ |
| ಮಂ. | ಮಂತ್ರ |
| ಪ್ರ. | ಪ್ರಪಾಠಕ |



# ಉಪನಿಷತ್-ರಹಸ್ಯವು

## ಪ್ರಕರಣ ೧.

### ಉಪನಿಷತ್ತುಗಳ ಪಾರ್ಶ್ವಭೂಮಿಯು.

**೧. ಉಪನಿಷತ್ತುಗಳ ಅಭ್ಯಾಸದ ಮಹತ್ವವು:**—ಆರ್ಯರ ಬುದ್ಧಿ ವಿಕಾಸದ ಇತಿಹಾಸವನ್ನು ಚನ್ನಾಗಿ ಪರೀಕ್ಷಿಸಿ ನೋಡಿದರೆ, ಯಾವ ಯಾವ ಪ್ರಸಂಗ ಗಳಲ್ಲಿ ಉಪನಿಷತ್ತುಗಳ ಅಭ್ಯಾಸವು ಜನರಲ್ಲಿ ಪ್ರವೃತ್ತವಾಗಿರುವದೋ ಆಯಾ ಪ್ರಸಂಗಗ ಳಲ್ಲಿ ಒಂದಿಲ್ಲೊಂದು ದೊಡ್ಡ ಧಾರ್ಮಿಕ ಚಳವಳಿಯು ಎದ್ದೇ ತೀರಿರುವದೆಂದು ಕಂಡು ಬರು ವದು. ೨೪೦೦ ವರ್ಷಗಳಾಚೆಗೆ ಭಗವದ್ಗೀತೆಯ ಕರ್ತೃವಾದ ಶ್ರೀಕೃಷ್ಣನು ತನ್ನ ದಿವ್ಯ ಅಮರ ಗ್ರಂಥದಲ್ಲಿ ಉಪನಿಷತ್ತಿನಲ್ಲಿಯ ತತ್ವಜ್ಞಾನವನ್ನು ಎಲ್ಲಕ್ಕೂ ಮೊದಲು ಸಮನ್ವಯಿ ಸಲು ಪ್ರಯತ್ನಿಸಿದ ಉದ್ದೇಶವಾದರೂ ಏನು ? ಧಾರ್ಮಿಕ ವಿಚಾರಗಳಲ್ಲಿ ಒಂದು ಹೊಸ ಚೈತನ್ಯವನ್ನುಂಟುಮಾಡಿ, ನಿಜವಾದ ಅನುಭಾವಧರ್ಮದ ತಳಗಲ್ಲನ್ನು ಕೂಡಿಸಿದ್ದು, ಆ ಧರ್ಮವು ಮುಂದೆ ಯುಗಯುಗಾಂತರಗಳಲ್ಲಿ ಆಧ್ಯಾತ್ಮಿಕ ಚಟುವಟಿಕೆಗಳಿಗೆ ಮಾರ್ಗದರ್ಶ ಕವಾಗಿ ಕಂಗೊಳಿಸಬೇಕೆಂಬ ಭಾವನೆಯಿಂದಲೇ ಅಲ್ಲವೇ ? ಆ ಮೇಲೆ ಎರಡನೆಯ ಸಲ

೧೨೦೦ ವರ್ಷಗಳ ತರುವಾಯ ಉಪನಿಷತ್ಕಾರರು ಕಲೆಹಾಕಿಟ್ಟ ಜ್ಞಾನಭಾಂಡಾರದ ಸಹಾಯದಿಂದ ವೇದಾಂತತತ್ವಜ್ಞಾನದ ಭವ್ಯವಾದ ಕಟ್ಟಡವನ್ನು ಕಟ್ಟಿದ ಆಚಾರ್ಯರು ತಮ್ಮತಮ್ಮ ಮತದಂತೆ ಬೇರೆ ಬೇರೆ ತತ್ವಜ್ಞಾನಪದ್ಧತಿಗಳನ್ನು ನಿರ್ಮಿಸಿದಾಗ ಹಿಂದುಸ್ಥಾನದಲ್ಲಿ ಪುನಃ ಹೊಸ ಧರ್ಮಜಾಗೃತಿಯು ಹೊರಹೊಮ್ಮಿತು. ಈ ಎರಡನೇ ಸಲದ ಜಾಗೃತಿಯು ಅಷ್ಟೊಂದು ಅನುಭಾವಪ್ರಧಾನವಾಗಿರದೆ ಬುದ್ಧಿಪ್ರಧಾನವಾಗಿತ್ತು. ಆ ಮೇಲೆ ಮತ್ತೆ ೧೨೦೦ ವರ್ಷಗಳು ಈಗ ಸಂದು ಹೋಗಿರುವುವು. ಇದು ೨೦ನೆಯ ಶತಮಾನವು. ಭೌತಿಕ ಶಾಸ್ತ್ರಗಳ ಅಪಾರವಾದ ಬೆಳೆವಣಿಗೆ, ಜಗತ್ತಿನಲ್ಲಿಯ ಅನೇಕ ಧರ್ಮಗಳ ಮತ್ತು ತತ್ವಜ್ಞಾನಗಳ ಸರ್ವಾಂಗೀಣವಾದ ಅಭ್ಯಾಸ ಇವೆರಡರ ಆಧಾರದಿಂದ ನಿಂತ ಪಾಶ್ಚಾತ್ಯ ಸಭ್ಯತೆ–ಸಂಸ್ಕೃತಿಗಳೊಡನೆ ಪ್ರಾಚೀನ ಉಪನಿಷತ್ಕಾರರು ಅನುಭವಿಸಿದ ಆಧ್ಯಾತ್ಮಿಕ ಜ್ಞಾನದ ಹಕ್ಕುದಾರರಾದ ನಮ್ಮ ಸಂಬಂಧವು ಬಂದಿರುವದು. ಆದುದರಿಂದ ನಮಗೆ ಒಂದು ಕಠಿನ ಸಮಸ್ಯೆಯು ಎದುರಾಗಿದೆ. ಅದೇನಂದರೆ, ಉಪನಿಷತ್ಕಾಲದಲ್ಲಿ ಹೇಳಿದ ಆತ್ಮಾನುಭವದ ಸನಾತನ ಸತ್ಯದ ತಳಹದಿಯ ಮೇಲೆ ನಾವು ಈಗ ರಚಿಸುವ ತತ್ವಜ್ಞಾನವು ಅನುಭಾವ ಬುದ್ಧಿಗಳಿಗೆರಡಕ್ಕೂ ಸಮ್ಮತವಾಗಿ ಭೌತಿಕಜ್ಞಾನ ಮತ್ತು ಧರ್ಮಜ್ಞಾನಗಳನ್ನು ಏಕತಾಲದಿಂದ ಸಮನ್ವಯಿಸುವಂತಹದಿರಬೇಕು. ನಾವು ಹೀಗೆ ಮಾಡಿದೆವೆಂದರೆ ಭೌತಿಕ ಶಾಸ್ತ್ರಗಳು ನಮ್ಮ ತತ್ವಜ್ಞಾನಕ್ಕೆ ಯಾವ ಹಾನಿಯನ್ನೂ ಉಂಟುಮಾಡದೆ ಅದನ್ನು ಹೆಚ್ಚು ಗಟ್ಟಿಮಾಡುವವು ಮತ್ತು ಶಾಸ್ತ್ರೀಯ ಶೋಧಗಳೂ ತತ್ವವಿಚಾರಗಳೂ ಪರಮಾತ್ಮನ ಅಗಾಧ ಮಹಿಮೆಯನ್ನು ಬೆಳೆಸಲಿಕ್ಕೂ ನಿಸರ್ಗಶಕ್ತಿಗಳ ಮೂಲವಾದರೂ ಅವನಲ್ಲಿಯೇ ಇರುವದೆಂಬುದನ್ನು ತೋರಿಸಲಿಕ್ಕೂ ಸಾಧನರೂಪವಾಗುವವು. ಮನುಷ್ಯನ ಎಲ್ಲ ಶಾಸ್ತ್ರೀಯ ತಾತ್ವಿಕ ಧಾರ್ಮಿಕ ಜಿಜ್ಞಾಸೆಗಳನ್ನು ಸಂಪೂರ್ಣವಾಗಿ ತೃಪ್ತಿಬಡಿಸುವಂಥ ಸತ್ಯದ ಸಿದ್ಧಾಂತವನ್ನು ಪ್ರಸ್ಥಾಪಿಸುವ ಸಾಮರ್ಥ್ಯವು ಉಪನಿಷತ್ತುಗಳಲ್ಲಿದೆ ಎಂದು ಪ್ರಸ್ತುತ ಗ್ರಂಥಕರ್ತನ ದೃಢವಾದ ನಂಬಿಗೆ. ಯಾಕಂದರೆ ಯಾವ ಭೌತಿಕ ಶಾಸ್ತ್ರಗಳಿಂದಲೂ ಮುಕ್ಕಾಗದಂಥ, ತತ್ವಜ್ಞಾನವು ತನ್ನ ಎಲ್ಲ ಪ್ರಯತ್ನಗಳ ಅಂತಿಮಧ್ಯೇಯವೆಂದು ಹೇಳುವಂಥ, ಒಮ್ಮತವಾಗಲಾರದೇ ವ್ಯರ್ಥವಾಗಿ ಪರಸ್ಪರರಲ್ಲಿ ಬಡಿದಾಡುತ್ತಿರುವ ಧರ್ಮದ ನಾನಾರೂಪಗಳಿಗೆ ಮೂಲವಾಗಿರುವಂಥ, ಪ್ರಥಮ, ಪ್ರತ್ಯಕ್ಷ, ಆಂತರಿಕ, ಅನುಭಾವದ ಸಹಾಯದಿಂದ ಸಿದ್ಧವಾದ ಸತ್ಯವನ್ನೇ ಉಪನಿಷತ್ತುಗಳು ಸಾರುತ್ತಿರುವವು.

**೨. ಋಗ್ವೇದವೂ ಉಪನಿಷತ್ತುಗಳೂ :—** ಈ ಉಪನಿಷತ್ತುಗಳೆಂಬ ಅನುಭಾವಮಂತ್ರಗಳು, ಮತ್ತು ಅವುಗಳಿಗಿಂತ ೧೦೦೦ ವರ್ಷದಷ್ಟಾದರೂ ಪೂರ್ವದಲ್ಲಿ ರಚಿಸಲ್ಪಟ್ಟ ಆರ್ಯರ ಆದ್ಯ ಕವನಗಳಾದ ಋಗ್ವೇದವು, ಇವುಗಳ ಸಂಬಂಧವನ್ನು ಸ್ವಲ್ಪ

ನೋಡುವದು ಬಹಳೇ ಮನೋವೇಧಕವಾಗಬಹುದು. ಇಲ್ಲಿ ಲಕ್ಷ್ಯದಲ್ಲಿಡತಕ್ಕ ಮೊದಲನೆಯ ಮಾತೆಂದರೆ, ಋಗ್ವೇದವೆಂಬುದು ನಿಸರ್ಗಶಕ್ತಿಗಳಿಗೆ ದೇವತಾರೂಪಗಳನ್ನು ಕಲ್ಪಿಸಿ ಸ್ತುತಿಸಿದ ಋಷಿಗಳ ಸೂಕ್ತಿಸಂಗ್ರಹವು. ಆದುದರಿಂದ ಮನುಷ್ಯನ ಮನದಲ್ಲಿ ಬೆಳೆಯುವ ಧರ್ಮಜಾಗೃತಿಯ ಮೊದಲನೆಯ ಮರದ ಪೋಳಿಕೆ ಅದು. ಬಾಹ್ಯವಸ್ತುವನ್ನು ಲಕ್ಷಿಸುವದೇ ಅವರ ಮುಖ್ಯ ಲಕ್ಷಣವು. ಉಪನಿಷತ್ತುಗಳು ಅಂತರ್ವಸ್ತುವನ್ನು ಎಂದರೆ ಆತ್ಮನನ್ನು ಲಕ್ಷಿಸುವ ಧರ್ಮಗ್ರಂಥಗಳು. ದೇವದೇವತೆಗಳನ್ನು ಹೊಗಳಿದ ಹಾಡುಗಳು ಇವುಗಳಲ್ಲಿಲ್ಲ; ಅದಕ್ಕೆ ಪ್ರತಿಯಾಗಿ, ಸೃಷ್ಟಿಶಕ್ತಿಗಳಿಗೆ ಮೂಲಭೂತವಾಗಿರುವ ಆದಿತತ್ವವನ್ನು ಶಾಸ್ತ್ರೀಯ ಪದ್ಧತಿಯಿಂದ ಹುಡುಕುವದೇ ಉಪನಿಷತ್ತುಗಳ ಧ್ಯೇಯವಾಗಿದೆ. ಇವುಗಳಲ್ಲಿ ದೇವಪ್ರಾರ್ಥನೆಗಳೂ ಇಲ್ಲ ಅಥವಾ ದೇವತಾರೂಪವಾದ ದೈವೀ ಶಕ್ತಿಗಳ ಭೀಕರವಾದ ಕೋಪಕ್ಕೆ ಋಷಿಗಳು ಹೆದರಿದಂಥ ಸಂದರ್ಭಗಳೂ ಇಲ್ಲ. ಇನ್ನೊಂದು ಬಗೆಯಿಂದ ಹೇಳುವುದಾದರೆ, ನಾವು ವೈದಿಕ ಕಾಲದಿಂದ ಉಪನಿಷತ್ಕಾಲದ ಕಡೆಗೆ ಸಾಗಿದಂತೆ ಹೆಜ್ಜೆಜ್ಜೆಗೆ ಮನುಷ್ಯನ ಮನಸ್ಸು ದೇವಕಲ್ಪನೆಯಿಂದ ಆತ್ಮಕಲ್ಪನೆಯ ಕಡೆಗೆ ಹೊರಟಿದೆ ಎಂದು ಸ್ಪಷ್ಟವಾಗಿ ತೋರುತ್ತಿದೆ. ಜೀವಾತ್ಮನು ವಿಶ್ವಾತ್ಮನಾದನೆಂದರೆ ಅಥವಾ ಅವನಿಗೆ ಅಪರೋಕ್ಷಜ್ಞಾನವಾಯಿತೆಂದರೆ ಯಾರು ಯಾರಿಗೆಂತು ಅಂಜುವದು ? ಯಾರು ಯಾರಿಗೆಂತು ಆಹುತಿ ಕೊಡುವದು ? ಯಾರಿಗೋಸ್ಕರ ಏತಕ್ಕೆಂದು ದೇವರನ್ನು ಪ್ರಾರ್ಥಿಸುವದು ? ಒಟ್ಟಾರೆ ವೇದಕಾಲದ ಕಡೆಗೆ ನೋಡಿ ತರುವಾಯ ಉಪನಿಷತ್ತುಗಳ ಕಡೆಗೆ ನೋಡಿದರೆ ನಮ್ಮ ವೈದಿಕ ಋಷಿಗಳ ಮನಸ್ಸು ಪ್ರಾರ್ಥನೆಯಿಂದ ತತ್ವವಿಚಾರದ ಕಡೆಗೂ ಸೂಕ್ತಿಗಳಿಂದ ಅಂತರ್ಜ್ಞಾನದ ಕಡೆಗೂ ಏಕದೇವತಾಪ್ರಧಾನ ಅನೇಕ ದೇವತಾವಾದದಿಂದ ಅನುಭವಸಿದ್ಧ ಏಕದೇವವಾದದ ಕಡೆಗೂ ವಿಕಾಸ ಹೊಂದುತ್ತಿರುವದು ಕಂಡು ಬರುವದು. ಎರಡನೆಯ ವಿಷಯವೇನಂದರೆ ಕೆಲವು ಋಗ್ವೇದ ಸೂಕ್ತಗಳಲ್ಲಿ ಸಹ ವಿಶ್ವೋತ್ಪತ್ತಿವಿಚಾರಗಳ ವಿಕಾಸವು ನಮಗೆ ಕಂಡುಬರುವದು. ಅದನ್ನು ನಾವು ಕಣ್ಮರೆ ಮಾಡಲಿಕ್ಕಾಗದು. ಋಗ್ವೇದದಲ್ಲಿಯ ೧೦ನೆಯ ಮಂಡಲದ ೮೧ನೆಯ ಸೂಕ್ತವನ್ನು ನೋಡುವ. ಸ್ವರ್ಲೋಕ ಭೂಲೋಕಗಳನ್ನು ಶಾಶ್ವತ ಸ್ಥೈರ್ಯವುಳ್ಳವುಗಳಾಗಿ ನಿರ್ಮಿಸಿದುದು ಯಾವ ಪದಾರ್ಥದಿಂದ, ಸೃಷ್ಟಿಕರ್ತನು ಯಾವುದರ ಮೇಲೆ ನಿಂತು ಈ ಲೋಕಗಳನ್ನು ಎತ್ತಿ ಹಿಡಿದನು ಎಂಬ ಪ್ರಶ್ನೆಗಳನ್ನು ಆ ಸೂಕ್ತದಲ್ಲಿ ಋಷಿಯು ಕೇಳಿರುವನು. ೧೦ನೆಯ ಮಂಡಲದ ೫ನೆಯ ಮತ್ತು ೭೨ನೆಯ ಸೂಕ್ತಗಳಲ್ಲಿ ಸತ್ ಅಸತ್ ಇವುಗಳ ಕಲ್ಪನೆಯು ಮೊಟ್ಟಮೊದಲು ಸೂಚಿಸಲ್ಪಟ್ಟಿರುವುದು. ೧೦ನೆಯ ಮಂಡಲದ ೧೨೯ನೆಯ ಸೂಕ್ತದಲ್ಲಿಯಂತೂ ಅಜ್ಞೇಯವಾದವನ್ನೇ ಪ್ರತಿಪಾದಿಸಿ ಮೂಲಪದಾರ್ಥವು ಸತ್ ಅಸತ್ ಇವುಗಳಿಗೂ ಶ್ರೇಷ್ಠವಿರುವುದೆಂದೂ

ಸೃಷ್ಟಿಕರ್ತನಾದರೂ ಸ್ವಸಂಪತ್ತಿನಿಂದ ಚಲಿಸುವನೋ ಇಲ್ಲವೋ ಎಂಬ ಸಂಶಯುವಿರುವು ದೆಂದೂ ಋಷಿಗಳು ಹೇಳಿದ್ದಾರೆ. ಇವೆಲ್ಲವುಗಳ ಮೇಲಿಂದ ನೋಡಲಾಗಿ ಬ್ರಾಹ್ಮಣಕಾಲ ದಲ್ಲಿ ಬೆಳೆದು ಉಪನಿಷತ್ಕಾಲದ ಪ್ರಾರಂಭಕ್ಕೆ ಬಲಿತ ತತ್ತ್ವವಿಚಾರದ ಸ್ಫೂರ್ತಿಯು ಋಗ್ವೇ ದಕಾಲದಲ್ಲಿಯೇ ಹುಟ್ಟಿತ್ತೆನ್ನಲಿಕ್ಕೆ ಯಾವ ಪ್ರತ್ಯವಾಯುವೂ ಇಲ್ಲ. ಮೂರನೆಯ ಮಾತೆಂ ದರೆ, ಮಾನಸಶಾಸ್ತ್ರದೃಷ್ಟಿಯಿಂದ ನೋಡಲಾಗಿ ಋಗ್ವೇದವು ಕಲ್ಪನಾಶಕ್ತಿಪ್ರಧಾನವೂ ಭಾವನಾಶಕ್ತಿಪ್ರಧಾನವೂ ಆಗಿದೆ. ಆದರೆ ಉಪನಿಷತ್ತುಗಳು ಬುದ್ಧಿಪ್ರಧಾನವೂ ತರ್ಕಪ್ರ ಧಾನವೂ ಆದವುಗಳು. ಭಾಷೆ ಭಾವನೆಗಳ ದೃಷ್ಟಿಯಿಂದ ಬಾಯಬಲ್ಲಿನ ಭಕ್ತಿಗೀತಗಳಿಗೆ ಹೋಲುವ ಸೂಕ್ತಗಳು-ವಿಶೇಷತಃ ವರುಣಸೂಕ್ತಗಳು-ಋಗ್ವೇದದಲ್ಲಿವೆ. ಉಪನಿಷತ್ತು ಗಳಲ್ಲಿ ಅವು ವಿರಲ. ಆದರೆ ಸತ್ಯವನ್ನು ಸುವ್ಯವಸ್ಥಿತವಾಗಿ ಶೋಧಿಸುವ ಶಾಂತವಾದ ಜ್ಞಾನಚರ್ಚೆಯು ಉಪನಿಷತ್ತುಗಳಲ್ಲಿದೆ ಎಂದು ಹೇಳಬಹುದು. ಈ ಮೇರೆಗೆ ತನ್ನ ಕಲ್ಪನೆ ಯಿಂದ ಸೃಷ್ಟಿಸಿದ ದೇವತೆಯನ್ನು ಕುರಿತು ಅತ್ಯಂತ ನಮ್ರತೆಯಿಂದ ತನ್ನನ್ನು ಕ್ಷಮಿಸಲು ಬೇಡಿಕೊಳ್ಳುವ ಭಕ್ತನಂತೆ ನುಡಿದ ಅನೇಕ ಸೂಕ್ತಗಳು ಋಗ್ವೇದದಲ್ಲಿ ಕಂಡುಬಂದರೆ, ಉಪನಿಷತ್ತುಗಳಲ್ಲಿ ಈ ಕೆಳಗಿನ ಪ್ರೌಢೋಕ್ತಿಗಳು ಕಂಡುಬರುತ್ತಿವೆ: "ಇಂಥ ದೇವತೆಗಳಿಂದ ಯಾವ ಅನುಗ್ರಹವನ್ನೂ ಯಾಚಿಸಬೇಡ. ನೀನು ಪೂಜಿಸುತ್ತಿರುವದು ನಿಜವಾದ ದೇವತೆ ಯಲ್ಲ, 'ನೇದಂ ಯದಿದಂ ಉಪಾಸತೇ' (ಕೇನ). ಈ ವಿಶ್ವದ ಸ್ಥಿತಿಯನ್ನು ಸ್ಥಿರವಾಗಿಡು ವವನು ವಿಶ್ವದ ಹೊರಗಿಲ್ಲ. ಸ್ವಾಭಾವಿಕ ಮತ್ತು ನೈತಿಕ ವ್ಯವಸ್ಥೆಯ ಉಗಮವು ನಿನ್ನ ಹೊರಗಿಲ್ಲ. ಅಂತರ್ಬಾಹ್ಯಗಳ ಸಮನ್ವಯವಾದ ಆತ್ಮನಲ್ಲಿಯೇ ಎಲ್ಲವುಗಳ ಉಗಮವು. ತೂಕವು ತಪ್ಪದಂತೆ ಸೃಷ್ಟಿಯನ್ನು ಅವನೇ ಧರಿಸುವನು. ಈ ಸ್ವೈರ ಪ್ರಪಂಚಪ್ರವಾಹ ವನ್ನು ಮೀರಿ ತಪ್ಪದಂತೆ ಒಡ್ಡು ಹಾಕಿ ಅಡ್ಡಗಟ್ಟಿ ನಿಯಮಿಸುವವನು ಅವನೇ."

೩. **ಉಪನಿಷತ್ತುಗಳೂ ಅಥರ್ವವೇದವೂ**:—ಋಗ್ವೇದ ಕಾಲದಿಂದ ನಾವು ಅಥರ್ವವೇದದ ಕಾಲಕ್ಕೆ ಬಂದೆವೆಂದರೆ ಸೂಕ್ತಸೃಷ್ಟಿಯಿಂದ ಮೋಡಿ-ಮಂತ್ರಗಳ ಸೃಷ್ಟಿಗೆ ಬರುವೆವು. ಇಂದ್ರ, ವರುಣ, ಅಗ್ನಿ ಸೂರ್ಯಾದಿ ದೇವತೆಗಳು ಕಣ್ಮರೆಯಾಗಿ ಭೂತ, ಪಿಶಾಚ, ಮೋಡಿಕಾರ-ಮೋಡಿಕಾರ್ತಿ, ರೋಗ, ಮೃತ್ಯು ಮುಂತಾದವುಗಳು ಬಂದು ಮುಂದೆ ನಿಲ್ಲುವವು. ಅಥರ್ವವೇದವೆಂದರೆ ಅದೊಂದು ನಮ್ಮ ಪ್ರಾಚೀನರ ಜಾರಣ ಮಾರಣ ವಿದ್ಯೆಯ ಹೊತ್ತಿಗೆಯು. ಹೀಗಿದ್ದರೂ ಕೆಲವೆಡೆಗೆ ಈ ವಿಧ್ವಂಸಕ ಮಂತ್ರಗಳ ಬದಲು ಹಲವು ಮಂಗಲವಾದ ಯಂತ್ರತಂತ್ರಗಳಾದರೂ ಇರುವವೆಂಬುದು ಸಮಾಧಾನದ ಸಂಗತಿಯು. ಆದರೂ ಒಟ್ಟಿನ ಮೇಲೆ ಅಥರ್ವವೇದದಲ್ಲಿ ಭಕ್ತಿಜ್ಞಾನಗಳ ಸೆಲೆಗಳನ್ನೆಲ್ಲ ಒಣಗಿಸಿ ಜಾರಣ ಮಾರಣ ಮೋಡಿ-ಮಂತ್ರಗಳ ಬೆಂಗಾಡಿನಲ್ಲಿ ನಮ್ಮನ್ನು ಒಯ್ದು ಬಿಡುವ

ಭಯಂಕರ ಆಸುರೀ ವ್ಯಾಪಾರವೇ ಇರುವುದೆಂದು ಹೇಳಬಹುದು. ಅಥರ್ವವೇದಕ್ಕೂ ಉಪ ನಿಷತ್ತುಗಳಿಗೂ ಭೂಮ್ಯಾಕಾಶದಷ್ಟು ಭೇದವು. ಒಂದು ಪೂರ್ವವಿದ್ದರೆ ಮತ್ತೊಂದು ಪಶ್ಚಿಮವು. ಇನ್ನು ಕೆಲವೆಡೆಗೆ, ಅಂದರೆ ಕಾಲಸೂಕ್ತದ ೧೯-೫೩,೫೪ ಮಂತ್ರಗಳಲ್ಲಿ ಒಂದು ಬಗೆಯ ತತ್ತ್ವವಿಚಾರಗಳಿವೆ. ಉಪನಿಷತ್ತುಗಳಲ್ಲಿಯಾದರೂ ಅಥರ್ವವೇದದ ಮಂತ್ರತಂತ್ರದ ವಾಸನೆ ಸಹ ಇಲ್ಲವೆಂದು ಹೇಳಲಾಗದು. ಇನ್ನು ಸಾಮಾನ್ಯವಾಗಿ ಅಥರ್ವ ವೇದದಿಂದ ಉಪನಿಷತ್ತುಗಳ ಕಾಲಕ್ಕೆ ಬರುವದೆಂದರೆ ಮಂತ್ರತಂತ್ರ ಸೃಷ್ಟಿಯಿಂದ ತತ್ತ್ವ ವಿಚಾರದ ಸೃಷ್ಟಿಗೆ ಬಂದಂತೆಯೇ ಸೈ. ಉಪನಿಷತ್ತುಗಳ ಶುದ್ಧ ವಿಚಾರಗಳಿಗೆ ಕಲಂಕಗ ಳೋಪಾದಿಯಲ್ಲಿರುವ ಕೆಲವು ದೋಷಗಳು ಬೃಹದಾರಣ್ಯಕ ಮತ್ತು ಕೌಷೀತಕಿ ಉಪನಿಷ ತ್ತುಗಳಲ್ಲಿ ಕಂಡು ಬರುವವೆಂಬದನ್ನು ಇಲ್ಲಿ ಹೇಳಲಿಕ್ಕೆ ನಾವು ಮರೆಯಕೂಡದು. ಆ ದೋಷಗಳು ತತ್ತ್ವಸಾಮ್ರಾಜ್ಯವಿದ್ದ ಉಪನಿಷತ್ತುಗಳ ಕಾಲದಲ್ಲಿ ಸಹ ನೀತಿಗೆಟ್ಟ ನಡಾ ವಳಿಗಳ ಪರಿಣಾಮಗಳನ್ನು ತೋರ್ಪಡಿಸುತ್ತವೆ. ಬೃಹದಾರಣ್ಯಕದ ೬ನೆಯ ಅಧ್ಯಾಯದ ೪ನೆಯ ಬ್ರಾಹ್ಮಣದಲ್ಲಿ ಹೆಂಗಸಿನ ಮನಸ್ಸು ಒಲಿಸುವ, ಹೆಂಡತಿಯ ಮಿಂಡನನ್ನು ನಾಶಪಡಿ ಸುವ, ಮಕ್ಕಳಾಗುವಂತೆ ಮಾಡುವ, ಉಪಾಯಗಳ ಬಗ್ಗೆ ಚರ್ಚೆ ಇದೆ. ಕೌಷೀತಕಿಯ ೨ನೆಯ ಅಧ್ಯಾಯದಲ್ಲಿ ದ್ರವ್ಯನಿಧಿಯನ್ನು ಒಮ್ಮೆಲೆ ದೊರಕಿಸುವ, ಯಾವುದೇ ಸ್ತ್ರೀ ಪುರು ಷರ ಮನಸ್ಸು ಎಳಕೊಳ್ಳುವ, ತನ್ನ ಜೀವಮಾನದಲ್ಲಿ ಮಕ್ಕಳು ಮರಣಹೊಂದದಂತೆ ಮಾ ಡುವ, ಯಂತ್ರಮಂತ್ರಗಳಿಂದ ಸುತ್ತಲಿನ ಶತ್ರುಗಳು ಸಾಯುವಂತೆ 'ದೈವಪರಿಮರ' ವೆಂಬ ಸಾಧನಮಾಡುವ ಯೋಜನೆಗಳು ಹೇಳಲ್ಪಟ್ಟಿವೆ. ಆದರೆ ಇವು, ತತ್ತ್ವಜ್ಞಾನಕ್ಕೂ ಆತ್ಮಾನುಭ ವಕ್ಕೂ ಪೂರ್ಣ ಮನಸೋತು ಜನರು ಅವುಗಳಲ್ಲಿಯೇ ಮಗ್ನವಾದ ಕಾಲದಲ್ಲಿಯ ಕೆಲ ವೊಂದು ದೋಷಗಳು. ಇವು ಉಪನಿಷದ್ವಿಚಾರಗಳಿಗೆ ಯಾವ ಕುಂದನ್ನೂ ಉಂಟುಮಾಡದೇ ಮಹಾಕವಿ ಕಾಲಿದಾಸನು ಹೇಳಿದಂತೆ ಚಂದ್ರನ ಕಲೆಗಳು ಚಂದ್ರನಿಗೆ ಹೆಚ್ಚಿನ ಶೋಭೆ ಯನ್ನೇ ಉಂಟುಮಾಡುವಂತೆ ಇವು ಉಪನಿಷತ್ತುಗಳಿಗೆ ಅಲಂಕಾರ ರೂಪವಾಗಿರುವವು.

**೪. ಉಪನಿಷತ್ತುಗಳೂ ಬ್ರಾಹ್ಮಣ ಗ್ರಂಥಗಳೂ:**— ಇನ್ನು ಬ್ರಾಹ್ಮ ಣಗಳು ರಚಿಸಲ್ಪಟ್ಟ ಕಾಲಕ್ಕೆ ನಾವು ಬಂದರೆ ಯಜ್ಞ ವಿಧಿವಿಧಾನಗಳ ಕಾಲಕ್ಕೆ ಬಂದಂತಾ ಗುವದು. ಅಥರ್ವವೇದದಲ್ಲಿಯ ಮುಖ್ಯ ವಿಷಯವು ಮಂತ್ರತಂತ್ರಗಳೇ ಇರುವಂತೆ ಯಜ್ಞವೇ ಬ್ರಾಹ್ಮಣ ಗ್ರಂಥಗಳ ಪಲ್ಲವಿಯಾಗಿದೆ. ಋಗ್ವೇದ ಸೂಕ್ತಗಳಲ್ಲಿ ಕಂಡು ಬರುವ ಆ ನಿರ್ಮಲ ಭಾವವು ಬ್ರಾಹ್ಮಣ ಕಾಲದಲ್ಲಿ ಅದೆಂತು ಮಲಿನವಾಯಿತೆಂಬುದು ತಿಳಿಯದ ಮಾತು. ಬ್ರಾಹ್ಮಣಗ್ರಂಥಗಳು, ಅರ್ಥವಿಹೀನ ವಿಧಿವಿಧಾನಗಳ ಮೊಟ್ಟೆಯನ್ನು ಶುದ್ಧ ವೇದಸೂಕ್ತಗಳಮೇಲೆ ಹೇರಿ, ಯಜಮಾನನ ಗೌರವವಿಹೀನ ಜೀವನಕ್ರಮವನ್ನು ಎತ್ತಿ ಹಿಡಿ

ಯಲಿಕ್ಕೆ ವೇದ ಮಂತ್ರಗಳ ಉಪಯೋಗವನ್ನು ಮಾಡಿರುವವು. ಯಜಮಾನನ ಜೀವನ ಕ್ರಮಕ್ಕೆ ಮಂತ್ರಗಳು ಪ್ರತ್ಯಕ್ಷ ಉಪಯುಕ್ತವಿರುವವೆಂದು ತೋರಿಸುವ ಭರದಲ್ಲಿ ಬ್ರಾಹ್ಮಣಗ್ರಂಥಗಳು ದಂತಕಥೆ, ವೇದ ವ್ಯಾಖ್ಯಾನ, ವ್ಯುತ್ಪತ್ತಿಶಾಸ್ತ್ರ, ತತ್ವಶಾಸ್ತ್ರಗಳಲ್ಲಿಯ ಕಲ್ಪನೆ ಮುಂತಾದವುಗಳನ್ನು ಕಲೆಸಿ ಬಿಡುವುದನ್ನು ನೋಡಿದರೆ ಚಮತ್ಕಾರವೆನಿಸುವುದು. ನಾನಾಬಗೆಯ ಯಜ್ಞವಿಧಿಗಳನ್ನು ಕಲ್ಪಿಸಲಿಕ್ಕೆ ಇಷ್ಟೊಂದು ಬುದ್ಧಿಸಾಮರ್ಥ್ಯವನ್ನು ವೆಚ್ಚ ಮಾಡಿರುವದನ್ನು ನೋಡಿದರೆ ಬ್ರಾಹ್ಮಣಕಾಲದ ಜನರ ಬಗ್ಗೆ ಕನಿಕರವುಂಟಾಗುವುದು. ಇದನ್ನು ನೆನಿಸಿಕೊಂಡರೆ ಮಧ್ಯಯುಗದಲ್ಲಿ ಕ್ರಿಸ್ತೀ ಸಿದ್ಧಾಂತದ ಅರ್ಥಮಾಡುವ ಅನೇಕ ಶುಷ್ಕಪದ್ಧತಿಗಳ ತೊಡಕೂ ಗೊಂದಲವೂ ಕಣ್ಣುಮುಂದೆ ಕಟ್ಟುತ್ತದೆ. ಇನ್ನು ಇತ್ತ ಉಪನಿಷತ್ತುಗಳನ್ನು ನೋಡಿದರೆ ಅತ್ತಿತ್ತ ಕಾಣುವ ಕೆಲ ಅಪವಾದಗಳನ್ನು ಬಿಟ್ಟುಕೊಟ್ಟರೆ, ಎಲ್ಲ ಉಪನಿಷತ್ತುಗಳು ಯಜ್ಞವಿಧಿಯ ಪೂರ್ಣ ನಿಷೇಧವನ್ನೇ ಮಾಡುತ್ತಿರುವವು. ನಿರಸವೂ ರುಕ್ಷವೂ ಆದ ವಿಧಿಶಾಸ್ತ್ರವನ್ನು ಪ್ರತಿಪಾದಿಸುವ ಬ್ರಾಹ್ಮಣವಾಙ್ಮಯದ ಪ್ರತಿಕ್ರಿಯಾರೂಪವಾಗಿರುವ, ತತ್ವವಿಚಾರವೇ ಪ್ರಧಾನವಾದ ಉಪನಿಷತ್ತುಗಳಲ್ಲಿ ಯಜ್ಞವಿಧಿಯ ಮಹತ್ವವನ್ನೂ ಸಂದಿಗ್ಧವಾಗಿ ಹೇಳುವ ಕೆಲ ಮಂತ್ರಗಳು ಮಾತ್ರ ಮುಂಡಕೋಪನಿಷತ್ತಿನಲ್ಲಿ ಬಂದಿವೆ. ಮುಂಡಕದಲ್ಲಿ ಒಂದೆಡೆಗೆ (ಮುಂ ೧, ಖಂ ೨, ಮಂ ೧) 'ನಮ್ಮ ಪ್ರಾಚೀನರು ಹೇಳಿಕೊಟ್ಟಿರುವ, ಯಜ್ಞಯಾಗಾದಿ ವಿಧಿಗಳನ್ನು ಆಚರಿಸುವುದೊಂದೇ ಮುಕ್ತಿಮಾರ್ಗವು' ಎಂದು ಹೇಳಿದ್ದರೂ ಇನ್ನೊಂದೆಡೆಯಲ್ಲಿ (ಮುಂ ೧, ಖಂ ೨, ಮಂ ೭-೧೧) 'ಯಜ್ಞಯಾಗಾದಿಗಳು ಸಂಸಾರಸಾಗರದಲ್ಲಿ ತೇಲಾಡುತ್ತಿರುವ ಅಸ್ಥಿರ ಡೋಣಿಗಳಂತಿರುವದರಿಂದ ಅವು ಮನುಷ್ಯನನ್ನು ಬೇಕಾದಾಗ ಸಮುದ್ರದ ತಳಕ್ಕೆ ಒಯ್ಯಬಹುದು. ಯಜ್ಞಯಾಗಗಳೇ ಮನುಷ್ಯನ ಹೆಚ್ಚಿನ ಪುರುಷಾರ್ಥವೆಂದು ತಿಳಿಯುವವರು ಮುಪ್ಪು ಸಾವುಗಳ ಚಕ್ರದಲ್ಲಿ ಸಿಕ್ಕು ಒದ್ದಾಡುವರು. ಸ್ವಯಂಮನ್ಯ ಪಂಡಿತರಾದ ಇಂಥ ಜನರು ಅಜ್ಞಾನಾಂಧಃಕಾರದಲ್ಲಿ ಬಳಲುತ್ತ ಕುರುಡರನ್ನು ಕುರುಡರು ಹಿಂಬಾಲಿಸುವಂತೆ ಹುಟ್ಟು ಸಾವುಗಳ ಚಕ್ರದಲ್ಲಿ ಸುತ್ತಾಡುವರು. ಅಜ್ಞಾನದಲ್ಲಿ ಮುಳುಗಿದ್ದರೂ ತಾವು ಕೃತಕೃತ್ಯರೆಂದು ಅವರು ತಿಳಿಯುವರು. ಆಶಾಬದ್ಧರಾದ ಅವರು ಕೆಲದಿನ ಸ್ವರ್ಗಭೋಗಗಳನ್ನು ಪಡೆದು ಪುಣ್ಯಕ್ಷಯವಾದ ಕೂಡಲೇ ಮತ್ತೆ ಮೃತ್ಯುಲೋಕಕ್ಕೆ ಬರುವರು. ಯಜ್ಞವೊಂದೇ ಜನ್ಮಸಾರ್ಥಕ್ಯದ ಸಾಧನವೆಂದು ಬಗೆಯುವ ಇವರಿಗೆ ಇನ್ನೊಂದು ಸಾಧನವಿರಬಹುದೆಂಬ ಕಲ್ಪನೆಯು ಸಹ ಬರುವುದಿಲ್ಲ. ತಮ್ಮ ಪುಣ್ಯಫಲವನ್ನುಂಡು ಸ್ವರ್ಗದಿಂದ ಈ ಲೋಕಕ್ಕೆ ಅಥವಾ ಹೀನತರವಾದ ಲೋಕಕ್ಕೆ ಅವರು ಇಳಿಯುವರು. ಕಾಡಿನಲ್ಲಿ ಭಿಕ್ಷಾವೃತ್ತಿಯಿಂದಿದ್ದು ಶ್ರದ್ಧೆ, ತಪಸ್ಸುಗಳನ್ನು ಬೆಳೆಸಿ ಮನೋನಿಗ್ರಹಪೂರ್ವಕವಾಗಿ

ಜ್ಞಾನಸಾಧನವನ್ನು ಮಾಡುವವರೇ ಸೂರ್ಯದ್ವಾರದಿಂದ (ಅಂದರೆ ತೇಜೋಮಯವಾದ ಜ್ಞಾನಮಾರ್ಗದಿಂದ) ಅಮರ ಆತ್ಮನನ್ನು ಪಡೆಯುವರು ' ಎಂದು ಹೇಳಿರುವದು. ಇದು ಬ್ರಾಹ್ಮಣಗಳಲ್ಲಿಯ ಕರ್ಮಮಾರ್ಗಕ್ಕೆ ವಿರುದ್ಧವಾಗಿರುವುದರಿಂದ ಎಲ್ಲ ಜ್ಞಾನಮಾರ್ಗೀಯ ಉಪನಿಷತ್ತುಗಳು ಯಜ್ಞಯಾಗಾದಿಗಳ ಬಗ್ಗೆ ಮುಂಡಕದಲ್ಲಿರುವ ಈ ಬಗೆಯ (ಮುಂ ೧, ಖಂ ೨, ಮಂ ೧) ಸಂದಿಗ್ಧ ಮತವನ್ನು ವ್ಯಕ್ತಮಾಡದೆ ಸ್ಪಷ್ಟವಾಗಿ ಕರ್ಮಕಾಂಡವನ್ನು ಹೀಯಾಳಿಸುತ್ತಿವೆ. ಮಾನವೀ ಜೀವನದ ತಾತ್ವಿಕ ಗುರಿಯನ್ನು ಗೊತ್ತುಹಚ್ಚುವದೇ ಉಪನಿಷತ್ತುಗಳ ಮುಖ್ಯಧೋರಣವು. ಪ್ರಾಚೀನತಮವಾದ ಛಾಂದೋಗ್ಯೋಪನಿಷತ್ತಿನ ಕಾಲದಲ್ಲಿ ಸಹ 'ಅಂತರ್ಯಜ್ಞ'ದ ಮಹತ್ವವನ್ನು ಋಷಿಗಳು ಸ್ಪಷ್ಟವಾಗಿ ಕಂಡುಹಿಡಿದಿದ್ದರು. (ಛಾಂ, ಅ ೫, ಖಂ ೧೯–೨೪) ' ನಮ್ಮೊಳಗಣ ಪ್ರಾಣಕ್ಕೆ ಆಹುತಿಗಳನ್ನು ಕೊಡುವದೇ ನಿಜವಾದ ಯಜ್ಞವು. ಈ ಯಜ್ಞವನ್ನು ತಿಳಿಯದಿರುವವನು ವಿಧಿಯುಕ್ತಯಜ್ಞವನ್ನು ಮಾಡಿದರೂ ಕೂಡ ಅವನು ಬರೀ ಬೂದಿಯಲ್ಲಿ ಹೋಮಿಸಿದಂತೆ ವ್ಯರ್ಥವೇ. ಆದರೆ ಈ ಯಜ್ಞದ ತಿರುಳು ತಿಳಿದವನ ಪಾಪಗಳು ಬೆಂಕಿ ಇಟ್ಟ ಉಣ್ಣೆಯಂತೆ ಬೂದಿಯಾಗುವವು. ಈ ಬಗೆಯ ಯಜ್ಞವನ್ನರಿತವನು ಚಾಂಡಾಲನಿಗೆ ದಾನಕೊಟ್ಟರೂ ಅವನು ವೈಶ್ವಾನರನಿಗೆ ಆಹುತಿಕೊಟ್ಟಂತೆಯೇ ಸೈ.' ಆರಣ್ಯಕ ಕಾಲದಲ್ಲಿಯ ಮನೋಮಯ ಯಜ್ಞಮಾಡುವ ರೂಢಿಯನ್ನು ಅನ್ವಯಿಸಿ ಕೌಷೀತಕಿ ಉಪನಿಷತ್ತು ಸ್ಪಷ್ಟವಾಗಿ (ಕೌ, ಅ ೨, ಮಂ ೫) ಹೇಳುವದೇನಂದರೆ, 'ಸತತವಾಗಿ ಒಳಗೆ ಅಗ್ನಿಹೋತ್ರವು ನಡೆದಿರುವದೆಂಬದನ್ನು ತಿಳಿದುಕೊಂಡು ಪ್ರಾಚೀನ ಋಷಿಗಳು ಈ ಬಾಹ್ಯ ಯಜ್ಞವಿಧಿಯನ್ನಾಚರಿಸುತ್ತಿರಲಿಲ್ಲ.' ಈ ಬಗೆಯಾಗಿ ಬ್ರಾಹ್ಮಣಕಾಲದಲ್ಲಿಯ ಯಜ್ಞಕಲ್ಪನೆಯು ಉಪನಿಷತ್ಕಾಲದಲ್ಲಿ ಪೂರ್ಣವಾಗಿ ಬದಲಾಗಿ ಅಧ್ಯಾತ್ಮಜ್ಞಾನಸಾಧಕವಾದ ಮನೋಮಯ ಯಜ್ಞದ ಹೊಸ ಸ್ವರೂಪವು ಅದಕ್ಕೆ ಪ್ರಾಪ್ತವಾಯಿತು. ಒಟ್ಟಿನ ಮೇಲೆ ಬ್ರಾಹ್ಮಣಕಾಲದ ಕರ್ಮಕಾಂಡದ ಬದಲು ಜ್ಞಾನಕಾಂಡವನ್ನು ಪ್ರಸ್ಥಾಪಿಸಲು ಉಜ್ಜುಗಿಸಿದ ಉಪನಿಷತ್ಕಾಲದಲ್ಲಿ ಕರ್ಮಕಾಂಡದ ಪೊಳ್ಳುತನವನ್ನು ಎಲ್ಲರೂ ಮನಗಂಡಿದ್ದರೆಂದರೆ ಅದು ತಪ್ಪಾಗಲಿಕ್ಕಿಲ್ಲ.

೫. **ಶ್ರುತಿಗಳೆಂದರೇನು?:—** ಅನಾದಿಕಾಲದಿಂದ ವೇದ, ಬ್ರಾಹ್ಮಣ, ಉಪನಿಷದಾದಿಗಳೆಲ್ಲ 'ಶ್ರುತಿ' ಗಳೆಂದೆನಿಸಲ್ಪಡುತ್ತಿವೆ. ಇನ್ನು ನಿಜವಾಗಿ 'ಶ್ರುತಿ' ಗಳೆಂದರೇನು ಎಂಬುದನ್ನು ನೋಡುವ. ತಮ್ಮ ತಮ್ಮ ಧರ್ಮಪಂಥಗಳಿಗೆ ಅಡಿಗಲ್ಲಾಗಿರುವ ಗ್ರಂಥಗಳೆಲ್ಲ ಭಗವಂತನಿಂದಲೇ ಪ್ರಕಟಿಸಲ್ಪಟ್ಟಿರುವವೆಂದು ಆಯಾ ಮತದವರು ತಿಳಿಯುವ ವಾಡಿಕೆಯುಂಟು. ಗುಡುಗುಮಿಂಚುಗಳ ಮೊಳಗಿನಲ್ಲಿ ತಮ್ಮ ಧರ್ಮ ಗ್ರಂಥಗಳ ಪ್ರೇರಣೆಯನ್ನು ದೇವರು ತಮಗೆ ಮಾಡಿದನೆಂದು ಕೆಲವು ಧರ್ಮದವರು, ಆಂತರಿಕ ಸೂಚಕಧ್ವನಿ

ರೂಪದಿಂದ ಅವು ತನಗೆ ದೇವರಿಂದ ಪ್ರಾಪ್ತವಾದವೆಂದು ಅನ್ಯರು ಭಾವಿಸುವರು. ಈ ಪ್ರಕಾರ ವೇದೋಪನಿಷತ್ತುಗಳಂತೆ 'ಬಾಯಿಬಲ್' ಮತ್ತು 'ಕುರಾಣ' ಗ್ರಂಥಗಳು ದೇವದತ್ತ ವಾದವುಗಳೆಂದು ತಿಳುವಳಿಕೆಯಿದೆ. 'ಶ್ರುತಿ' ಅಂದರೆ ಹೊರಗಿನಿಂದ ಯಾರೊಬ್ಬರು ಕೊಟ್ಟ ಸಂದೇಶವಲ್ಲ, ಆದರೆ ಅದು ದೇವೋನ್ಮಾದದ ಸ್ಫೂರ್ತಿಮೂಲಕ ಒಳಗಿನಿಂದ ಹೊರ ಹೊಮ್ಮಿದ ದೈವೀ ವಾಣಿಯೆಂದು ಈ ಲೇಖಕನ ಮತವು. ಆದುದರಿಂದಲೇ, ಮಾತಾಡು ವವನು ತಾನಲ್ಲ, ತನ್ನ ಮುಖಾಂತರ ದೇವರೇ ಮಾತಾಡುವನೆಂದು **ಸೆಂಟ ಪಾಲನು** ಹೇಳುತ್ತಿದ್ದನು. ಇದೇ ಕಾರಣದಿಂದಲೇ, ನೀವು ಏನು ಮಾತಾಡಬೇಕೆಂಬುದನ್ನು ಮುಂಗಡ ವಿಚಾರಿಸುತ್ತ ಕೂಡದೆ ಸರಲವಾಗಿ ಶುದ್ಧ ವಾಣಿಯಿಂದ ನುಡಿಯಿರಿ, ಅಂದರೆ ದೇವರೇ ನಿಮ್ಮ ಮುಖಾಂತರ ಮಾತಾಡುವನು, ಎಂದು **ಕ್ರಿಸ್ತನು** ತನ್ನ ಶಿಷ್ಯರಿಗೆ ಉಪದೇಶಿಸುತ್ತಿ ದ್ದನು. **ಪ್ಲೇಟೋ** ಆದರೂ ತನ್ನ 'ಆಯೋನ' ಗ್ರಂಥದಲ್ಲಿ, ದೇವೋನ್ಮಾದವೇ ಪದ್ಯ ಪ್ರಬಂಧಗಳ ರಚನೆಯ ಆದಿಕಾರಣವು, ಎಂದು ಹೇಳಿರುವನು. ಅವನು ಅಂದದ್ದು—'ಶ್ರೇಷ್ಠ ಕವಿಗಳು ಯಾವದೇ ಕಾವ್ಯಕಲೆಯ ಅಭ್ಯಾಸಮಾಡಿ ಶ್ರೇಷ್ಠತೆಯನ್ನು ಹೊಂದುವದಿಲ್ಲ. ಆದರೆ ಸ್ಫೂರ್ತಿಯುಕ್ತರಾದಾಗ ಯಾವದೋ ಒಂದು ನವಚೈತನ್ಯದಿಂದ ಪ್ರೇರಿತರಾದಂ ತಾಗಿ ಸುಂದರ ಸುಕವನಗಳನ್ನು ಹಾಡುವರು. ಈ ಪ್ರಕಾರವಾಗಿ ನಮ್ಮನ್ನಾಶ್ಚರ್ಯಗೊ ಳಿಸುವಂಥ ಹಾಡುಗಳನ್ನು ಕಟ್ಟುವಾಗ ಅವರಿಗೆ ಒಂದು ಬಗೆಯ ದೈವಿಕವಾದ ಹುಚ್ಚು ಹಿಡಿದಿರುತ್ತಿದೆ. ಪ್ರತಿಯೊಬ್ಬ ಕವಿಯನ್ನು ಅಥವಾ ಕವನಕಾರನನ್ನು ಯಾವ ಮಟ್ಟಿಗೆ ಕಾವ್ಯ ದೇವಿಯು ಅನುಗ್ರಹಿಸುವಳೋ ಆ ಮಟ್ಟಿಗೆ ಅವನ ಕವನವು ಸುಂದರವಾಗುವುದು. ಈ ರೀತಿ ಇಂಥ ಅತಿಶ್ರೇಷ್ಠ ಕಾವ್ಯಗಳು ಮನುಷ್ಯನ ಬಾಯಿಯಿಂದ ಬಂದಾಕ್ಷಣಕ್ಕೆ ಅವು ಮನುಷ್ಯಕೃತವಲ್ಲ, ಆದರೆ ದೇವಕೃತವೇ ಸೈ.' ಉತ್ತಮೋತ್ತಮವಾದ ಕಾವ್ಯವೂ ಯಥಾರ್ಥವಾದ ತತ್ವಜ್ಞಾನವೂ ಯಾವಪ್ರಕಾರವಾಗಿ ಅವತರಿಸುವವೆಂಬದನ್ನು ಪ್ಲೇಟೋ ನು ಇಲ್ಲಿ ಚನ್ನಾಗಿ ವರ್ಣಿಸಿರುವನು. ವೈದಿಕ ಋಷಿಗಳು ತಮ್ಮ ಸೂಕ್ತಗಳನ್ನು, ಉಪನಿಷ ತ್ಕಾರರು ತಮ್ಮ ಬುದ್ಧಿವಾದಗಳನ್ನು, ಹೀಗೆಯೇ ರಚಿಸಿದರೆನ್ನಬಹುದು. ವೇದೋಪನಿಷ ತ್ತುಗಳು ಪೌರುಷೇಯವೋ ಅಪೌರುಷೇಯವೋ ಎಂದು ನೈಯ್ಯಾಯಿಕ ಮೀಮಾಂಸಕ ರಂತೆ ವಾದಿಸುತ್ತ ಕೂಡುವುದು ವ್ಯರ್ಥವು. ಇವು 'ಪೌರುಷೇಯ' ಅಂದರೆ ದೇವಕೃತ ವೆಂದು ನೈಯ್ಯಾಯಿಕರು ಪ್ರತಿಪಾದಿಸುವರು. ಧ್ವನಿಯ ಅನಾದಿತ್ವವನ್ನು ನಂಬುವ ಮೀಮಾಂಸಕರು, ಇವು 'ಅಪೌರುಷೇಯ' ಅಂದರೆ ದೇವಕೃತವೂ ಅಲ್ಲ ಮನುಷ್ಯಕೃ ತವೂ ಅಲ್ಲ, ಆದರೆ ಧ್ವನಿರೂಪದಿಂದ ಅವು ಅನಾದಿಯಾಗಿರುವವೆಂದು ಹೇಳುವರು. ಈ ಎರ ಡೂ ಪಕ್ಷಗಳಿಗೂ ಭಿನ್ನವಾಗಿ ವೇದಾಂತಿಗಳು ಪ್ರತಿಪಾದಿಸುವದೇನಂದರೆ—ಪುರುಷಪ್ರಯತ್ನ

ವಿಲ್ಲದೇ ವೇದೋಪನಿಷತ್ತುಗಳು ಪ್ರಕಟವಾದುದರಿಂದ ಅವು ಅಪೌರುಷೇಯ, ಅಂದರೆ ದೈವೀ ಪ್ರೇರಣೆಯಿಂದ ಹುಟ್ಟಿದವುಗಳು. ಶ್ರುತಿಗೆ ನಾವು ಮೊದಲು ಯಾವ ಅರ್ಥವನ್ನು ಕೊಟ್ಟಿರುವೆವ್ರೋ ಅದಕ್ಕೂ ವೇದಾಂತಿಗಳ ಈ ಕಲ್ಪನೆಗೂ ಒಳ್ಳೇ ಹೋಲಿಕೆ ಇದೆ. ಈ ದೃಷ್ಟಿಯಿಂದ ನೋಡಿದರೆ ಎರಡನೆಯ ಧರ್ಮಗಳ ಮೂಲ ಗ್ರಂಥಗಳಂತೆಯೇ ವೇದೋಪ ನಿಷತ್ತುಗಳನ್ನಾದರೂ ದ್ರಷ್ಟೃಗಳು ದೈವೀ ಸ್ಫೂರ್ತಿಯಿಂದ ತಲ್ಲೀನರಾದಾಗ ರಚಿಸಿರುವ ರೆಂದು ಹೇಳುವದೇ ಸರಿಯು.

**೬. 'ಶ್ರುತಿ'ಗೆ ಉಪನಿಷತ್ಕಾರರು ಕೊಟ್ಟ ಅರ್ಥವು**—ನಾವು ಶ್ರುತಿಗೆ ಹೇಳಿದ ಅರ್ಥದ ಬಗ್ಗೆ ಉಪನಿಷತ್ತುಗಳೇ ಏನನ್ನುವವು ಇದನ್ನು ನೋಡುವ. ಬೃಹ ದಾರಣ್ಯಕದಲ್ಲಿ (ಬೃ, ಅ ೨, ಬ್ರಾ ೪, ಮಂ ೧೦.) 'ಋಕ್ ಯಜುಸ್ಸಾಮ ಅಥರ್ವವೇದ ಗಳು ಆ ಮಹಾ ಮೂಲಪುರುಷನ ನಿಃಶ್ವಸಿತಗಳು. ಅದೇ ಪ್ರಕಾರವಾಗಿ ಇತಿಹಾಸ ಪುರಾಣ ಉಪನಿಷದಾದಿಗಳು, ಕಾವ್ಯಗಳು, ಸೂತ್ರ ವ್ಯಾಖ್ಯಾನಗಳಾದರೂ ಅವನ ನಿಃಶ್ವ ಸಿತಗಳೇ' ಎಂದು ಉಲ್ಲೇಖವಿರುವದು. ಒಂದೆಡೆಗೆ ವೇದೋಪನಿಷತ್ತುಗಳು ಇನ್ನೊಂದೆ ಡೆಗೆ ಇತಿಹಾಸಪುರಾಣಗಳು ಇವು ಎರಡೂ ಪರಮಾತ್ಮನ ನಿಃಶ್ವಸಿತಗಳೆಂದು ಇಲ್ಲಿ ಹೇಳಿದ್ದು ಬಹಳೇ ಮಹತ್ವದ್ದಿದೆ. ಯಾಕಂದರೆ ವೇದೋಪನಿಷತ್ತುಗಳಿಗೆ 'ಶ್ರುತಿ' ಎಂಬ ಅಭಿ ಧಾನವು ಮೊದಲಿನಿಂದ ಕೊಡಲ್ಪಟ್ಟಿದ್ದರೂ ಇತಿಹಾಸಪುರಾಣಗಳಿಗೆ ಆ ಹೆಸರು ಎಂದಿಗೂ ಕೊಡಲ್ಪಟ್ಟಿಲ್ಲ. ಹೀಗಿದ್ದರೂ ಇವೆರಡೂ 'ದೇವನಿಃಶ್ವಸಿತ'ವೆಂದು ಹೇಳುವದರಲ್ಲಿ ಉಪನಿಷ ತ್ಕಾರರ ಧೋರಣವೇನು ಇದನ್ನು ವಿಮರ್ಶಿಸಿದರೆ, ವೇದೋಪನಿಷತ್ತುಗಳೇ ಆಗಲಿ ಇತಿಹಾಸ ಪುರಾಣಗಳೇ ಆಗಲಿ, ಇಂಥ ಎಲ್ಲ ಶ್ರೇಷ್ಠ ಗ್ರಂಥಗಳು ಮನುಷ್ಯನ ಮನೋಭೂಮಿಯಲ್ಲಿ ದೈವೀ ಸ್ಫೂರ್ತಿಯ ಸಂಚಾರವಾದಾಗ ರಚಿಸಲ್ಪಡುವವೆಂಬುದು ಗೋಚರವಾಗುವುದು. ಈ ಗ್ರಂಥಗಳನ್ನು ಬರೆದವರು ಅವುಗಳ ಕರ್ತೃಗಳಲ್ಲ. ಆದರೆ ಅವರ ಅಂತರ್ಯಾಮದಲ್ಲಿ ರುವ ದೇವನೇ ಅವುಗಳ ನಿಜವಾದ ಕರ್ತೃವು. 'ಶ್ರುತಿ' ಯೆಂದರೆ ದೈವೀ ಸ್ಫೂರ್ತಿಯ ಪ್ರಕಟನೆ, ಎಂದೇ ಉಪನಿಷತ್ತುಗಳು ಹೇಳುವವು. ಯಾವ ಋಷಿಗಳ ಹೆಸರಿನಿಂದ ಆಯಾ ಮಂತ್ರಗಳಿರುವವೋ ಅವರು ಈ ಸ್ಫೂರ್ತಿಯ ಕೈಯಲ್ಲಿ ನಿಮಿತ್ತಮಾತ್ರರಾಗಿ ದ್ದರು. ಪರಮಾತ್ಮನ ಸೃಷ್ಟಿಲೀಲೆಯಲ್ಲಿ ಋಷಿಗಳು ಕೇವಲ ನಿಮಿತ್ತಮಾತ್ರರಾಗಿರುವರೆಂದು ಹೇಳುವ ಉಪನಿಷತ್ತುಗಳು ಮೂಲಬ್ರಾಂಶನ ನಿಮಿತ್ತವಾದದಂಥ ಹೊಸಬಗೆಯ ನಿಮಿತ್ತವಾ ದವನ್ನೆ (occasionalism) ಪ್ರತಿಪಾದಿಸುವವು. ತನ್ನ ತಪಃಪ್ರಭಾವದಿಂದಲೂ ದೇವಪ್ರಸಾದದಿಂದಲೂ ಶ್ವೇತಾಶ್ವತರೋಪನಿಷತ್ತು ತನಗೆ ಪ್ರಾಪ್ತವಾಯಿತೆಂದು ಅದೇ ಹೆಸರಿನ ಮುನಿಯು (ಶ್ವೇ, ಅ ೬, ಮಂ ೨೧.) ಹೇಳುವನು. ತ್ರಿಶಂಕುವು

(ತೈ, ವಲ್ಲಿ ೧, ಅನುವಾಕ ೧೦.)'ವೇದಾನುವಚನ'ವೆಂದು ಹೇಳುವದರ ಅರ್ಥವಾದರೂ ಸಾಕ್ಷಾತ್ಕಾರವಾದ ಮೇಲೆ ಹೇಳಿದ ವಚನವು, ಅಥವಾ ಸಾಕ್ಷಾತ್ಕಾರಕ್ಕನುಸರಿಸಿ ನುಡಿದ ವಚನವೆಂದೇ ಇರುವದು. ನಾವು 'ಶ್ರುತಿ'ಗೆ ಹೇಳಿದ ಅರ್ಥವನ್ನೇ ಈ ಮೇಲಿನ ಉದಾಹರಣೆಗಳು ಬೆಂಬಲಿಸುತ್ತಿವೆ. ಶ್ರುತಿಗಳನ್ನು ಮಾನವರು ಪ್ರತ್ಯಕ್ಷ ರಚಿಸದಿದ್ದರೂ ಅವುಗಳನ್ನು ಪರಂಪರೆಯಿಂದ ಪ್ರಚಾರಗೊಳಿಸಿದರೆಂಬ ಬಗ್ಗೆ ಇನ್ನೊಂದು ಬಗೆಯ ಉಲ್ಲೇಖವು ಈಶ ಮತ್ತು ಕೇನ ಉಪನಿಷತ್ತುಗಳಲ್ಲಿ (ಈಶ, ಮಂತ್ರ ೧೦. ಕೇನ ಖಂ ೧, ಮಂ ೩.) 'ಇದನ್ನು ನಾವು ಪ್ರಾಚೀನ ಧೀರರಿಂದ ಕೇಳಿದೆವು,' ಎಂಬ ಮುಂತಾದ ವಾಕ್ಯಗಳಲ್ಲಿ ಬಂದಿರುವದು. ಛಾಂದೋಗ್ಯದಲ್ಲಿ ( ಛಾಂ, ಅ ೬, ಖಂ ೪, ಮಂ ೫. ) ' ಬೇರೆ ಬಗೆಯಿಂದ ಕೇಳಲು ಶಕ್ಯವಿಲ್ಲದ, ಬೇರೆ ಬಗೆಯಿಂದ ವಿಚಾರಿಸಲಸಾಧ್ಯವಾದ, ಬೇರೆ ಬಗೆಯಿಂದ ಅರಿಯಲಶಕ್ಯವಾದ ಆತ್ಮಜ್ಞಾನವು ಈ ಗುರುಗಳ ದೇಹಪಾತದ ತರುವಾಯ ತಮಗೆ ದೊರೆಯದು, ಎಂಬ ಭಯದಿಂದ ಋಷಿಗಳು ಅವರಡಿಯಲ್ಲಿ ಕಲಿಯುತ್ತಿದ್ದರು' ಎಂದು ಉಲ್ಲೇಖವಿರುವದು. ಬೃಹದಾರಣ್ಯಕದಲ್ಲಿ ಒಂದು ವಿಲಕ್ಷಣ ರೀತಿಯಿಂದ ' ಶ್ರುತಿ ' ಗಳ ಉತ್ಪತ್ತಿಯನ್ನು ಹೇಳಿರುವರು. (ಬೃ, ಅ ೧, ಬ್ರಾ ೨, ಮಂ ೪–೫.) ಮೃತ್ಯುವು ತಾನೇ ವಾಣಿಯೆಂಬ ಸ್ತ್ರೀಯನ್ನು ಹುಟ್ಟಿಸಿ ಆಕೆಯೊನ್ನೊಡಗೂಡಿ ಋಕ್ ಸಾಮ ಯಜುರ್ವೇದಗಳನ್ನೂ ಅವುಗಳ ಜೊತೆಗೆ ದನಕರು ಮನುಷ್ಯ ಮುಂತಾದವರನ್ನೂ ಹುಟ್ಟಿಸಿದನೆಂದು ಈ ಉಪನಿಷತ್ತಿನಲ್ಲಿ ಹೇಳಿದೆ. ತಾತ್ವಿಕ ದೃಷ್ಟಿಯಿಂದ ನೋಡಿದರೆ ಇದೇನೋ ತೀರ ಒಂದು ಒಗಟಿನಂತೆ ವಿಲಕ್ಷಣವಾಗಿ ಕಾಣುವದು. ಆದರೆ ಇದೊಂದು ಕೆಲವು ಉಪನಿಷತ್ತುಗಳಲ್ಲಿ ವಿಶೇಷತಃ ಬ್ರಾಹ್ಮಣ ಗ್ರಂಥಗಳಲ್ಲಿ ರೂಢವಾಗಿದ್ದ ದಂತಕಥೆಯ ಅವಶೇಷರೂಪವಾದ ಮಾದರಿಯ ಕಥೆಯಿರುವದೆಂದು ಹೇಳಬಹುದು. ಒಟ್ಟಾರೆ ನೋಡಲಾಗಿ 'ಶ್ರುತಿ' ಗಳೆಂದರೆ ಮನುಷ್ಯನ ಮನೋಭೂಮಿಕೆಯಲ್ಲಿ ಅವತರಿಸಿದ ದೈವೀ ಸ್ಫೂರ್ತಿಯ ಶಬ್ದಮಯವಾದ ವ್ಯಕ್ತಸ್ವರೂಪವೆಂದೇ ಉಪನಿಷತ್ತುಗಳು ಭಾವಿಸುವವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

೭. **ಉಪನಿಷತ್ತುಗಳ ಕಾಲಾನುಕ್ರಮವು**––ಉಪನಿಷತ್ತುಗಳು 'ಶ್ರುತಿ' ಎಂಬುದಕ್ಕೆ ಏನು ಅರ್ಥವನ್ನು ಹೇಳುವವೆಂಬುದರ ವಿವೇಚನವಾಯಿತು. ಇನ್ನು ಉಪನಿಷತ್ತುಗಳ ಕಾಲಾನುಕ್ರಮವನ್ನು ಗೊತ್ತುಪಡಿಸಲಿಕ್ಕೆ ಯತ್ನಿಸುವ. ಮೊದಲು ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಹೊಸವು ಮತ್ತು ಹಳೆಯವು ಎಂಬ ಎರಡು ಗುಂಪುಗಳನ್ನು ಮಾಡಲಿಕ್ಕೆ ಬೇಕು. ಹಳೆಯ ಗುಂಪಿನಲ್ಲಿ ಇನ್ನು ಮುಂದೆ ಹೇಳುವ ಹದಿಮೂರು ಉಪನಿಷತ್ತುಗಳು ಸೇರುವವು. ವಾಙ್ಮಯವಿಮರ್ಶೆಯ ಒರೆಗಲ್ಲಿನ ಒರೆಗಿಳಿದು ನಿಜವಾಗಿ ಉಪನಿಷತ್ತುಗಳೆಂದು ಸಿದ್ಧವಾದ ಮಿಕ್ಕ ಉಪನಿಷತ್ತುಗಳನ್ನು ಎರಡನೆಯ ಗುಂಪಿಗೆ ಸೇರಿಸಬೇಕಾಗುವದು.

ಡಾ. ಶ್ರೀಧರ ಇವರು ಹೊಸದಾಗಿ ಗೊತ್ತು ಹಚ್ಚಿದ ಬಾಷ್ಕಲ, ಛಾಗಲೇಯ, ಆರ್ಷೇಯ, ಮತ್ತು ಶೌನಕ ಇವೇ ಮುಂತಾದವುಗಳ ಬಗ್ಗೆ ಇಲ್ಲಿ ವಿಚಾರಮಾಡುವದು ಅವಶ್ಯವಿಲ್ಲ. ಯಾಕಂದರೆ ಅವು ಇನ್ನೂ ನಿಜವಾಗಿ ಉಪನಿಷತ್ತುಗಳೆಂದೆಣಿಸಲ್ಪಟ್ಟಿಲ್ಲ. ಮಹಾನಾರಾಯಣೋಪನಿಷತ್ತಾದರೂ ಇತ್ತೀಚೆಗಿನದೆಂದು ಈಗ ಸಿದ್ಧವಾಗಿರುವುದರಿಂದ ಅದನ್ನಾದರೂ ಈ ಹಳೆಯ ಹದಿಮೂರರಲ್ಲಿ ಸೇರಿಸುವ ಅವಶ್ಯಕತೆಯಿಲ್ಲ. ಈಗ ಪ್ರಸ್ತುತವಿರುವ ಹದಿಮೂರು ಉಪನಿಷತ್ತುಗಳ ಕ್ರಮವನ್ನು ಮುಕ್ತಿಕೋಪನಿಷತ್ತಿನಲ್ಲಿ ಹೇಳಿದಂತೆ ಹಚ್ಚುವದಾದರೆ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಕೌಷೀತಕಿ, ಮತ್ತು ಮೈತ್ರಿ ಹೀಗೆ ಕ್ರಮವನ್ನು ಏರ್ಪಡಿಸಬೇಕಾಗುತ್ತಿದೆ. ಇನ್ನು ಇದು ಕಾಲಾನುಕ್ರಮವೆನಿಸುವದಿಲ್ಲ. ಆದರೆ ಅರ್ವಾಚೀನ ವಿಮರ್ಶಾಶಾಸ್ತ್ರ, ಇತಿಹಾಸ ಮತ್ತು ವ್ಯುತ್ಪತ್ತಿಶಾಸ್ತ್ರಗಳ ದೃಷ್ಟಿಯಿಂದ ನೋಡಿದರೆ ಉಪನಿಷತ್ತುಗಳನ್ನು ಕಾಲಾನುಕ್ರಮದಿಂದ ಹಚ್ಚುವದು ಅತ್ಯವಶ್ಯವು. ಇನ್ನೊಂದೆಡೆಯಲ್ಲಿ ಈ ವಿಷಯವನ್ನು ಸಂಪೂರ್ಣವಾಗಿ ಚರ್ಚಿಸಿರುವದರಿಂದ ಅದನ್ನೇ ಮತ್ತೆ ಇಲ್ಲಿ ಚರ್ಚಿಸುವದೆಂದರೆ ಪುನರುಕ್ತಿ ದೋಷವಾಗುವದು. ಆದುದರಿಂದ ನಾವು ಮಾಡಿದ ಸಿದ್ಧಾಂತಗಳನ್ನಷ್ಟೇ ಇಲ್ಲಿ ಕೊಡುತ್ತೇವೆ. ಕ್ರಿ. ಶ. ಪೂರ್ವದ ೧೨೦೦ ವರ್ಷಗಳಿಂದ ಕ್ರಿ. ಶ. ೬೦೦ ವರ್ಷಗಳವರೆಗಿನ ಕಾಲವು ಉಪನಿಷತ್ತುಗಳ ಕಾಲವೆಂದು ನಾವು ಇಟ್ಟುಕೊಂಡರೆ ಉಪನಿಷತ್ ವಾಙ್ಮಯವನ್ನು ಅಷ್ಟುಕಾಲದೊಳಗೆ ಕ್ರಮಪಡಿಸಬೇಕಾಗುತ್ತಿದೆ. ಉಪನಿಷತ್ತುಗಳ ಕಾಲನಿರ್ಣಯವನ್ನು ಮಾಡಲಿಕ್ಕೆ ಅನೇಕ ನಿಯಮಗಳು ಹೇಳಲ್ಪಟ್ಟಿವೆ. (೧) ಭಾಷೆ, ಶೈಲಿ, ಶಬ್ದ, ವಿಭಕ್ತಿಪ್ರತ್ಯಯ ಮತ್ತು ವ್ಯಾಕರಣದ ಅನ್ಯ ವೈಶಿಷ್ಟ್ಯಗಳು ಇವು ಕಾಲ ನಿರ್ಣಯಕ್ಕೆ ಒಳ್ಳೇ ಸಾಧನಗಳಾಗಿವೆ. ಆದರೆ ಇವು ಅಸಂದಿಗ್ಧವಾದ ಒರೆಗಲ್ಲುಗಳಾಗವು. ಯಾಕಂದರೆ ಒಂದು ಹಳೆಯ ಉಪನಿಷತ್ತು ಉತ್ತಮವೂ ಸ್ಪಷ್ಟವೂ ಆದ ಶೈಲಿಯಲ್ಲಿ ಬರೆಯಲ್ಪಟ್ಟಿರಬಹುದು, ಇನ್ನೊಂದು ಅದಕ್ಕೂ ಅರ್ವಾಚೀನ ಉಪನಿಷತ್ತು ಹಳೆಯ ಶೈಲಿಯಲ್ಲಿ ರಚಿಸಲ್ಪಟ್ಟಿರಬಹುದು. (೨) ಗದ್ಯ ಪದ್ಯಗಳ ಹೆಚ್ಚುಕಡಿಮೆ ಉಪಯೋಗವನ್ನು ನೋಡಿ ನಿಶ್ಚಿತವಾದ ಕಾಲನಿರ್ಣಯವನ್ನು ಮಾಡುವದೂ ಕಠಿನ. ಡಾಯಸನ್ ಮುಂತಾದ ವಿಮರ್ಶಕರು ಅತ್ಯಂತ ಪ್ರಾಚೀನ ಉಪನಿಷತ್ತುಗಳು ಗದ್ಯದಲ್ಲಿ ರಚಿಸಲ್ಪಟ್ಟಿರುವವೆಂದೂ ಆ ಮೇಲಿನವು ಪದ್ಯದಲ್ಲಿ ರಚಿಸಲ್ಪಟ್ಟವೆಂದೂ ಮಿಕ್ಕವುಗಳು ಮತ್ತೆ ಪುನಃ ಗದ್ಯಾತ್ಮಕವಾಗಿ ಬರೆಯಲ್ಪಟ್ಟವೆಂದೂ ತಿಳಿದುಕೊಂಡಿರುವರು. ಆದರೆ ಈ ಪೊಳ್ಳು ತಿಳುವಳಿಕೆಯು ಇತ್ತೀಚೆಗಿನ ವಿಮರ್ಶೆಯ ಹೊಡೆತವನ್ನು ತಡೆಯಲಾರದಾಗಿದೆ. (೩) ಉಪನಿಷತ್ತುಗಳಲ್ಲಿ ಯಾವುದೇ ವಿಷಯದ ವಿವರಗಳ ಸೂಕ್ಷ್ಮ ವಿವೇಚನವಿರುವುದೊಂದು ಕಾಲನಿರ್ಣಯಮಾಡಲಿಕ್ಕೆ ಸಹಾಯ

ಕವಾದ ಘಟಕವೆಂದು ಹೇಳಬಹುದು. ಆದರೆ ಅದಾದರೂ ಸ್ಪಷ್ಟವಾದ ಅಂತಿಮ ಪ್ರಮಾಣವಲ್ಲ. ಇಂದ್ರಿಯಗಳ ನಡುವೆ ನಡೆದ ಯುದ್ಧದ ಕಥೆಯ ವಿವರವು ಎಷ್ಟು ಹೆಚ್ಚು ಮತ್ತು ಸ್ಪಷ್ಟವೋ ಅಷ್ಟು ಆ ಉಪನಿಷತ್ತು ಅರ್ವಾಚೀನವೆಂದು ಒಂದು ಬಗೆಯಿಂದ ಹೇಳಿದರೆ ಅದು ಪೂರಾ ತಪ್ಪಲ್ಲ. ಈ ಕಥೆಯು ಛಾಂದೋಗ್ಯ, ಬೃಹದಾರಣ್ಯಕ, ಐತರೇಯ, ಕೌಷೀತಕಿ, ಮತ್ತು ಪ್ರಶ್ನೋಪನಿಷತ್ತುಗಳಲ್ಲಿ ಬಂದಿರುವದು. ಈ ಕಥೆಯ ವಿವರವು ಹೆಚ್ಚು ಕಡಿಮೆಯಾದಂತೆ ಆಯಾ ಉಪನಿಷತ್ತು ಅರ್ವಾಚೀನ ಪ್ರಾಚೀನವೆಂದೆನ್ನುವದು ಯೋಗ್ಯವೇ ಆಗುವದು. (೪) ವಿಶಿಷ್ಟ ಕಲ್ಪನೆಗಳ ಕ್ರಮದಿಂದಾದ ವಿಕಾಸವಾದರೂ ಒಂದು ಒರೆಯಾಗಿರುವುದು. ಇದು ಕಠಿನವಿದ್ದರೂ ಉಪಯುಕ್ತವಿದೆ. ಜೀವಾತ್ಮ ಪರಮಾತ್ಮರ ಸಂಬಂಧದ ಕಲ್ಪನೆಯನ್ನು ತೆಗೆದುಕೊಂಡರೆ ಇದು ಕಠ, ಮುಂಡಕ, ಶ್ವೇತಾಶ್ವತರಗಳಲ್ಲಿರುವದು. ಅವುಗಳಲ್ಲಿಯ ಈ ಕಲ್ಪನೆಯ ವಿಕಾಸವನ್ನು ನೋಡಿದರೆ ಆ ಉಪನಿಷತ್ತುಗಳು ಒಂದರ ಹಿಂದಿನಿಂದ ಒಂದು ರಚಿಸಲ್ಪಟ್ಟಿರಬೇಕೆಂದು ಹೇಳಬಹುದು. ಯಾಕಂದರೆ ಕಠದಲ್ಲಿ ಜೀವಾತ್ಮ ಪರಮಾತ್ಮರು ಸಮಸ್ಥಿತಿಯಲ್ಲಿದ್ದು ಕರ್ಮಫಲಗಳನ್ನುಪಭೋಗಿಸುವರೆಂದು, ಮುಂಡಕದಲ್ಲಿ ಒಬ್ಬನು ಕರ್ಮಫಲವನ್ನು ಭೋಗಿಸುವನು ಇನ್ನೊಬ್ಬನು ಸಾಕ್ಷಿಯಾಗಿ ನೋಡುತ್ತಿರುವನೆಂದು, ಮುಂಡಕದ ಮುಂದೆ ಹೋಗಿ ಶ್ವೇತಾಶ್ವತರದಲ್ಲಿ ಕೆಂಪು, ಬಿಳಿ, ಕರಿ ಎಂಬ ಮೂಬಣ್ಣಗಳಿಂದ ಕೂಡಿದ ತ್ರಿಗುಣಾತ್ಮಕ ಪ್ರಕೃತಿಯನ್ನು ಜೀವಾತ್ಮನು ಭೋಗಿಸುವನು ಪರಮಾತ್ಮನು ಹಾಗೆಯೇ ಸ್ವತಂತ್ರನಿರುವನೆಂದು, ವರ್ಣನೆಯಿರುವದು. (೫) ಐದನೆಯ ಪರೀಕ್ಷೆಯೆಂದರೆ ನಾಲ್ಕನೆಯ ಒರೆಯ ಒಂದು ವಿಶೇಷ ರೂಪವೇ. ಆದರೆ ಅದಕ್ಕೆ ಪ್ರೊಫೆಸರ ಕೀಥ ಮುಂತಾದ ಆಧುನಿಕ ಲೇಖಕರು ವಿಶೇಷಮಹತ್ವವನ್ನು ಕೊಟ್ಟುದರಿಂದ ಅದನ್ನು ಪ್ರತ್ಯೇಕವಾಗಿಹೇಳಬೇಕಾಗಿದೆ. ಅದಾವುದೆಂದರೆ ಉಪನಿಷತ್ತಿನಲ್ಲಿ ಪುನರ್ಜನ್ಮದ ಕಲ್ಪನೆಯ ವಿಕಾಸವು. ಪ್ಲೇಟೋನ 'ಕಲ್ಪನಾ ಸಿದ್ಧಾಂತ'ದ ವಿಕಾಸವನ್ನು ವಿಚಾರಿಸಿ ಅವನ ಸಂವಾದಗಳ ಕಾಲಾನುಕ್ರಮವನ್ನು ನಿಶ್ಚಯಿಸುವ ಪ್ರಯತ್ನವು ಮಾಡಲ್ಪಡುತ್ತಿರುವಂತೆ ಜನ್ಮಾಂತರಕಲ್ಪನೆಯ ವಿಕಾಸವನ್ನು ವಿಚಾರಿಸಿ ಉಪನಿಷತ್ತುಗಳ ಕಾಲಾನುಕ್ರಮವನ್ನು ನಿರ್ಣಯಿಸುವ ಯತ್ನವು ನಡೆದಿದೆ. ಆದರೆ ಜನ್ಮಾಂತರಕಲ್ಪನೆಯು ಇಲ್ಲದಿರುವ ಉಪನಿಷತ್ತು ಎಲ್ಲಕ್ಕೂ ಪ್ರಾಚೀನವೆಂದು ತಿಳಿಯಲಿಕ್ಕಾಗದು. ಯಾಕಂದರೆ ಆ ವಿಷಯವು ಅಲ್ಲಿ ಪ್ರಸ್ತುತವಿರಲಿಕ್ಕಿಲ್ಲ ಅಥವಾ ಅದರ ಬಗ್ಗೆ ಅಲ್ಲಿ ಯಾವದೇ ವಿಧಾನಮಾಡುವದು ಅವಶ್ಯವಿರಲಿಕ್ಕಿಲ್ಲ. ಜನ್ಮಾಂತರಕಲ್ಪನೆಯು ಉಲ್ಲೇಖಿಸಲ್ಪಡದಿರುವುದರಿಂದ ಐತರೇಯ ಆರಣ್ಯಕದ ಹಳೆಯ ಭಾಗವು ಬಹಳೇ ಪ್ರಾಚೀನವಾದದ್ದೆಂದು ಪ್ರೊ. ಕೀಥರು ಪ್ರತಿಪಾದಿಸಿರುವರು ಮತ್ತು ಅದಕ್ಕೆ ಎಷ್ಟೋ ಜನರು ಗೋಣು ಹಾಕಿರುವರು. ಹೀಗನ್ನುವವರು

ಒಂದು ಬಗೆಯಿಂದ ಯುಕ್ತಿಚಕ್ರದಲ್ಲಿ ಸುತ್ತುತ್ತಿರುವರೆಂದು ಹೇಳಬಹುದು. ಯಾಕಂದರೆ ಜನ್ಮಾಂತರಕಲ್ಪನೆಯು ಅದರಲ್ಲಿ ಬಂದಿಲ್ಲವೆಂದು ಮೊದಲು ಆರಣ್ಯಕದಲ್ಲಿಯ ಕೆಲಭಾಗವನ್ನು ಬೇರ್ಪಡಿಸಿ ಅದಕ್ಕೆ ಹಳೆಯದೆನ್ನುವವರು, ಆ ಮೇಲೆ ಜನ್ಮಾಂತರಕಲ್ಪನೆಯು ಆ ಉಪನಿಷತ್ತಿನಲ್ಲಿ ಬಂದಿಲ್ಲವಾದುದರಿಂದ ಆ ಕಲ್ಪನೆಯು ಅರ್ವಾಚೀನವೆಂದು ವಾದಿಸುವರು ! ಐತರೇಯ ಆರಣ್ಯಕದಲ್ಲಿ ಹಳೆಯ ಹೊಸ ಭಾಗಗಳನ್ನು ವಿಂಗಡಿಸುವದು ಶಕ್ಯವಿದೆಯೆಂದು ನಂಬಿದರೂ ಹಳೆಯ ಭಾಗದಲ್ಲಿ ಜನ್ಮಾಂತರಕಲ್ಪನೆಯಿಲ್ಲದಿರುವದರಿಂದ ಅದನ್ನು ಕಾಲದೃಷ್ಟಿಯಿಂದ ಬೇರ್ಪಡಿಸುವದು ಸಯುಕ್ತಿಕವಾಗಲಾರದು. ಇದೇ ಸಂದರ್ಭದಲ್ಲಿ ಐತರೇಯ ಆರಣ್ಯಕದ ಎರಡನೆಯ ಭಾಗದ ಐದನೆಯ ಖಂಡದಲ್ಲಿ ಮನುಷ್ಯನು ಸತ್ತಮೇಲೆ ಹುಟ್ಟುವ ಬಗ್ಗೆ–ಇದಕ್ಕೆ ಉಪನಿಷತ್ಕಾರರು ತೃತೀಯ ಜನ್ಮವೆಂದಂದಿರುವರು–ಸ್ಪಷ್ಟವಾದ ಉಲ್ಲೇಖವಿರುವದೆಂಬ ದನ್ನು ಮರೆಯಕೂಡದು. (೬) ಆರನೆಯ ಒರೆಯೆಂದರೆ ಅನ್ಯೋನ್ಯ ಅವತರಣಗಳು. ಇದು ಮಾತ್ರ ನಿರ್ಣಯಾತ್ಮಕವಾದ ಒರೆಗಲ್ಲೆಂದು ತೋರುವದು. ತೈತ್ತಿರೀಯೋಪನಿಷತ್ತು ಬೃಹದಾರಣ್ಯಕಕ್ಕೂ ಅರ್ವಾಚೀನವಾದದ್ದೆಂದು ನಿಃಸಂದೇಹವಾಗಿ ಹೇಳಬಹುದು. ಯಾಕಂದರೆ 'ಪಾಂಕ್ತ' ಅಂದರೆ 'ಪಂಚಾತ್ಮಕ' ಅಸ್ತಿತ್ವದ ಬಗ್ಗೆ ಬೃಹದಾರಣ್ಯಕದಲ್ಲಿ ಯಾವ ಮಂತ್ರಗಳಿವೆಯೋ ಅವೇ ತೈತ್ತಿರೀಯದಲ್ಲಿ ( ತೈ, ವಲ್ಲಿ ೧, ಅನುವಾಕ ೭. ) ಉದಾಹರಿಸಲ್ಪಟ್ಟಿವೆ. ಆದರೆ ಈ ಒರೆಯು ಎಲ್ಲ ಉಪನಿಷತ್ತುಗಳಿಗೆ ಹತ್ತುವದಿಲ್ಲ. ಯಾಕಂದರೆ ಇಂಥ ಅವತರಣಗಳು ತೀರ ಸ್ವಲ್ಪ. ಇನ್ನು ಪ್ರತಿ ಉಪನಿಷತ್ತಿನಲ್ಲಿ ಕಂಡುಬರುವ ಸೂಕ್ಷ್ಮ ರಚನಾಭೇದಗಳನ್ನೂ ಅವುಗಳ ಭಾಗವಿಭಾಗಗಳನ್ನೂ ಲಕ್ಷಿಸುತ್ತ ಕುಳಿತರೆ ಅವೆಲ್ಲವುಗಳ ಕಾಲಾನುಕ್ರಮವನ್ನು ಗೊತ್ತುಪಡಿಸುವುದು ಕಠಿನವೇ ಸೈ. ಒಟ್ಟಿನ ಮೇಲೆ ನೋಡಲಾಗಿ ಪ್ರಸ್ತುತವಾದ ಹದಿಮೂರು ಉಪನಿಷತ್ತುಗಳಲ್ಲಿ ಈ ಕೆಳಗಿನ ಐದು ಗುಂಪುಗಳನ್ನು ಮಾಡಬಹುದು.

(೧) ಬೃಹದಾರಣ್ಯಕ, ಛಾಂದೋಗ್ಯ.

(೨) ಈಶ, ಕೇನ.

(೩) ಐತರೇಯ, ತೈತ್ತಿರೀಯ, ಕೌಷೀತಕಿ.

(೪) ಕಠ, ಮುಂಡಕ, ಶ್ವೇತಾಶ್ವತರ.

(೫) ಪ್ರಶ್ನ, ಮೈತ್ರಿ, ಮಾಂಡೂಕ್ಯ.

ಇವುಗಳಲ್ಲಿ ಬೃಹದಾರಣ್ಯಕವನ್ನೂ ಛಾಂದೋಗ್ಯವನ್ನೂ ನಾವು ಅಭ್ಯಸಿಸಿದರೆ ಅವು ಎಲ್ಲಕ್ಕೂ ಹಳೆಯವೆಂದು ನಮಗೆ ಹೊಳೆಯದಿರದು. ಅವುಗಳಲ್ಲಿ ಅನೇಕ ಭಾಗ ಉಪಭಾಗಗಳಿದ್ದರೂ ಒಟ್ಟು ನೋಡಲಾಗಿ ಅವು ಎಲ್ಲಕ್ಕೂ ಪ್ರಾಚೀನವಾದ ಗುಂಪಿಗೆ ಸೇರುವವು. ಈಶ ಕೇನಗಳು ಹೆಚ್ಚು ಆಧುನಿಕವೆಂದು ಹೇಳುವ ಪದ್ಧತಿಯುಂಟು. ಆದರೆ ಈಶೋಪನಿಷ

ತ್ತಿನ ಭಾಷೆ, ಭಾವ, ಪುರಾತನ ಶೈಲಿ ಮತ್ತು ಬೃಹದಾರಣ್ಯಕದಲ್ಲಿದ್ದಂಥ ವಿಷಯ ಇವುಗಳನ್ನು ಹೋಲಿಸಿ ನೋಡಿದರೆ, ಈಶವೂ ಅದರಂತೆಯೇ ಇದ್ದ ಕೇನೋಪನಿಷತ್ತೂ ಎರಡನೆಯ ಗುಂಪಿನಲ್ಲಿ ಸೇರಬಹುದು. ಮೂರನೆಯ ಗುಂಪಿನಲ್ಲಿಯ ಐತರೇಯವು ಹಳಿಯದು. ಆದರೆ ಅದು ಋಗ್ವೇದಾಂತರ್ಗತವಿದೆಯೆಂದು ಎಲ್ಲಕ್ಕೂ ಹಳೆಯದೆಂದು ಹೇಳಬಹುದು. ತೈತ್ತಿರೀಯವೂ ಅದೇ ಗುಂಪಿನಲ್ಲಿ ಸೇರುವದು. ಕೌಷೀತಕಿಯು ವಿಶೇಷ ಮೌಲಿಕ ಗ್ರಂಥವಲ್ಲ. ಆದರೂ ಅದು ಈ ಮೇಲಿನ ಎರಡು ಉಪನಿಷತ್ತುಗಳ ಗುಂಪಿಗೆ ಒಳಗಾಗುವದು. ನಾಲ್ಕನೆಯ ಗುಂಪು ಒಳ್ಳೇ ಸ್ಪಷ್ಟವಾಗಿರುವುದು. ಕಠದ ತರುವಾಯ ಮುಂಡಕವು, ಅದಾದ ಮೇಲೆ ಶ್ವೇತಾಶ್ವತರವು. ಶ್ವೇತಾಶ್ವತರದಲ್ಲಿ ಕೆಲವೆಡೆಗೆ ತೀರ ಹಳೆಯ ಶೈಲಿ ಮತ್ತು ಮೊದಲನೆಯ ಅಧ್ಯಾಯಕ್ಕೂ ಮಿಕ್ಕ ಅಧ್ಯಾಯಗಳಿಗೂ ಒಂದು ಬಗೆಯ ಸ್ಪಷ್ಟವಾದ ಭಿನ್ನತೆ ಇದ್ದರೂ ಇದು ಈ ಗುಂಪಿನಲ್ಲಿ ಕೊನೆಯದೆಂಬುದು ನಿರ್ವಿವಾದವು. ಪ್ರಶ್ನೋಪನಿಷತ್ತು ಒಳ್ಳೇ ಸುಬದ್ಧವಿರುವುದರಿಂದ ಎಲ್ಲಕ್ಕೂ ಆಧುನಿಕವಾದ ಐದನೆಯ ಗುಂಪಿಗೆ ಸೇರುವದು. ವಿಶಿಷ್ಟ ಶಬ್ದಸಂಗ್ರಹದಿಂದ ಕೂಡಿದ ಒಂದೆರಡು ಸ್ಪಷ್ಟವಿಭಾಗಗಳುಳ್ಳ ಮೈತ್ರ್ಯುಪನಿಷತ್ತು ಪೌರಾಣಿಕ ಮತ್ತು ಜ್ಯೋತಿಷ ವಿಷಯಕವಾದ ಉಲ್ಲೇಖವನ್ನು ಮಾಡುತ್ತಿರುವದರಿಂದ ಪೌರಾಣಿಕ ಪರಂಪರಗೆ ಅದು ಬಹಳೇ ಸಮೀಪವಾಗಿರಲಿಕ್ಕೆ ಬೇಕು. ಮೈತ್ರ್ಯುಪನಿಷತ್ತಿನ ಓಂಮಂತ್ರದ ಕಲ್ಪನೆಯನ್ನೇ ಹೆಚ್ಚು ವಿಶದವಾಗಿ ಹೇಳುವ ಮತ್ತು ವಿಚಾರಗಳನ್ನು ಸೂತ್ರರೂಪದಿಂದ ವ್ಯಕ್ತಪಡಿಸುವ ಮಾಂಡೂಕ್ಯವು ಕೊನೆಯ ಉಪನಿಷತ್ತೆಂದು ತೋರುವದು. ಇನ್ನು ಪ್ರತಿ ಉಪನಿಷತ್ತಿನ ನಿಶ್ಚಿತಕಾಲವನ್ನು ಹೇಳುವುದು ಕಠಿನ. ಆದರೆ ಮೇಲೆ ಹೇಳಿದಂತೆ ಕ್ರಿ. ಶ. ಪೂರ್ವಕ್ಕೆ ೧೨೦೦ರಿಂದ ಕ್ರಿ. ಪೂ. ೬೦೦ರ ವರೆಗಿನ ಕಾಲವು ಈ ೧೩ ಉಪನಿಷತ್ತುಗಳ ಕಾಲವೆಂದು ಹೇಳಬಹುದು.ಬುದ್ಧಧರ್ಮವೂ,ಸಾಂಖ್ಯಯೋಗದರ್ಶನಗಳೂ ಪ್ರಚಲಿತವಾಗತೊಡಗಿದ ಕಾಲದಲ್ಲಿ, ಪಾಖಂಡವಾದಿಗಳ ಮತ್ತು ಜಡವಾದಿಗಳ ಸೊಲ್ಲು ಅಡಗುವಂತೆ ಸಾಂಖ್ಯಯೋಗಗಳಲ್ಲಿಯ ಪರಮಾತ್ಮನ ಅಸ್ತಿತ್ವದ ತತ್ವಗಳನ್ನು ಸಮನ್ವಯಿಸಿ ಉಪನಿಷತ್ತುಗಳಲ್ಲಿಯ ಉತ್ತಮ ತತ್ವಜ್ಞಾನವನ್ನು ಅಧ್ಯಾತ್ಮಾನುಭವದ ಸುಂದರ ಗೀತೆಗಳ ಎರಕದಲ್ಲಿ ಹೊಯ್ದ ಭಗವದ್ಗೀತೆಯ ಅವತಾರಕಾಲದಲ್ಲಿ, ಮಿಕ್ಕ ಉಪನಿಷತ್ತುಗಳು ರಚಿಸಲ್ಪಟ್ಟವೆಂದು ಹೇಳಬಹುದು.

೮. **ಬೃಹದಾರಣ್ಯಕವು**—ಇನ್ನು ಕಾಲಕ್ರಮಾನುರೂಪವಾಗಿ ಹೊಂದಿಸಿದ ಬೇರೆಬೇರೆ ಉಪನಿಷತ್ತುಗಳೊಳಗಿನ ವಿಷಯಗಳನ್ನು ಸಂಕ್ಷೇಪದಿಂದ ವಿಮರ್ಶಿಸಿ ತತ್ವಜ್ಞಾನದ ದೃಷ್ಟಿಯಿಂದ ಮನೋವೇಧಕವಾಗಿರುವ ಮುಖ್ಯ ಮುಖ್ಯ ಸಂಗತಿಗಳನ್ನು ಇಲ್ಲಿ ಮಂಡಿಸುವದು ಅತ್ಯಗತ್ಯವಾಗಿದೆ. ಉಪನಿಷತ್ತುಗಳ ಸಂಪೂರ್ಣ ಪೃಥಃಕರಣ ಮಾಡುವದು

ಇಲ್ಲಿ ಶಕ್ಯವೂ ಇಲ್ಲ, ಇಷ್ಟವೂ ಇಲ್ಲ. ಮುಂದೆ ನಾವು ಕ್ರಮವಾಗಿ ತತ್ವಶಃ ಮಾಡುವ ಪ್ರತಿಪಾದನವು ತಿಳಿದು ಅವರ ಗುಣಗ್ರಹಣವಾಗಬೇಕಾದರೆ ಬೇರೆಬೇರೆ ಉಪನಿಷತ್ತುಗಳೊಳಗಿನ ವಿಷಯವನ್ನು ನಾವು ಇಲ್ಲಿ ಹೇಳಲೇಬೇಕು. ಮೊದಲು ಬೃಹದಾರಣ್ಯಕವನ್ನು ವಿಮರ್ಶಿಸುವ. ಇದರಲ್ಲಿರುವ ಆರು ಅಧ್ಯಾಯಗಳಲ್ಲಿ ಎರಡನೆಯ ಮೂರನೆಯ ನಾಲ್ಕನೆಯ ಅಧ್ಯಾಯಗಳು ಮಾತ್ರ ತತ್ವದೃಷ್ಟಿಯಿಂದ ಮಹತ್ವವುಳ್ಳವುಗಳು. ಮಿಕ್ಕವುಗಳಲ್ಲಿ ಕೊಂಚತತ್ವಜ್ಞಾನವಿದ್ದರೂ ಅದು ಬೇರೆ ವಿಚಾರಗಳೊಂದಿಗೆ ಬೆರೆತಿದೆ. ಮೊದಲನೆಯ ಅಧ್ಯಾಯದಲ್ಲಿ ಯಜನೀಯ ಅಶ್ವರೂಪನಾಗಿರುವ ವಿರಾಟ್‌ಪುರುಷನ ವರ್ಣನೆಯಿದೆ. ಆ ಮೇಲೆ ಎಲ್ಲ ವಸ್ತುಗಳ ಮೂಲವು ಮೃತ್ಯುವು ಎಂದು ಉಲ್ಲೇಖವು ಇರುವದು. ಮುಂದೆ ಪ್ರಾಣದ ಸರ್ವಶಕ್ತಿತ್ವದ ಬಗ್ಗೆ ಒಂದು ಕಥೆ ಇದೆ, ಕೊನೆಗೆ ಸೃಷ್ಟಿವಿಷಯಕ ಕಥೆಗಳು ಕಲೆಹಾಕಲ್ಪಟ್ಟ ಗುಂಪೊಂದಿದೆ. ಎರಡನೆಯ ಅಧ್ಯಾಯದಲ್ಲಿ ಗರ್ವಿಷ್ಠ ಬ್ರಾಹ್ಮಣನಾದ ಗಾರ್ಗ್ಯನಿಗೂ ಶಾಂತಸ್ವಭಾವದ ಕ್ಷತ್ರಿಯ ಅರಸನಾದ ಅಜಾತಶತ್ರುವಿಗೂ ಆದ ಸಂಭಾಷಣವಿರುವುದು. ತನ್ನ ಆಸ್ತಿಯನ್ನು ತನ್ನಿಬ್ಬರು ಹೆಂಡಂದಿರಿಗೆ ಹಂಚಿಕೊಡುತ್ತಿರುವ ಯಾಜ್ಞವಲ್ಕ್ಯಮಹಾಮುನಿಯು ನಮಗೆ ಮೊದಲು ಈ ಅಧ್ಯಾಯದಲ್ಲಿಯೇ ದೃಗ್ಗೋಚರನಾಗುವನು. ದಧ್ಯಚ್ ಆಥರ್ವಣನೆಂಬ ಋಷಿಯಾದರೂ ಈ ಅಧ್ಯಾಯದಲ್ಲಿಯೆ ಮೊದಲು ಕಾಣಬರುವನು. ಮೂರನೆಯ ನಾಲ್ಕನೆಯ ಅಧ್ಯಾಯಗಳಲ್ಲಿ ಇದೇ ಯಾಜ್ಞವಲ್ಕ್ಯನು ಮುಖ್ಯನಾಯಕನಾಗಿ ಎರಡನೆಯ ಅಧ್ಯಾಯದಲ್ಲಿ ತನ್ನ ಹೆಂಡತಿಯಾದ ಮೈತ್ರೇಯಿಯ ಕೂಡ ಸಂಭಾಷಣ ಮಾಡುತ್ತಿರುವದನ್ನೂ ಮೂರನೆಯದರಲ್ಲಿ ಜನಕರಾಯನ ಓಲಗದ ಅನೇಕ ತತ್ವಜ್ಞರೊಡನೆ ಮಾತಾಡುವದನ್ನೂ ಮತ್ತು ನಾಲ್ಕನೆಯದರಲ್ಲಿ ಸ್ವತಃಜನಕರಾಯನ ಕೂಡ ವಾದಿಸುತ್ತಿರುವದನ್ನೂ ಓದುವೆವು. ಯಾಜ್ಞವಲ್ಕ್ಯನ ತತ್ವಜ್ಞಾನದ ಬಗ್ಗೆ ನಾವು ಮುಂದೆ ಬರೆಯುವೆವು. ಆದರೆ ಸ್ವತಃ ಅವನ ಸ್ವಭಾವವನ್ನು ಕುರಿತು ಇಲ್ಲಿ ಒಂದೆರಡು ಸಂಗತಿಗಳನ್ನು ಹೇಳುವದು ಅವಶ್ಯವು. ಜನಕನ ಸಭೆಯಲ್ಲಿದ್ದ ಶಾಕಲ್ಯನೊಡನೆ ವಾದಿಸುವಾಗ ಅವನನ್ನು ಯಾಜ್ಞವಲ್ಕ್ಯನು ಯಾವ ವಿಧಿಗೆ ಈಡುಮಾಡಿದನೋ ಅದನ್ನು ನೋಡಿದರೆ ಅವನೋರ್ವ ಅತ್ಯಂತ ಶಿಷ್ಟನವನೆಂದು ಹೇಳಬಹುದು. ಆದರೆ ಅವನಲ್ಲಿಯೂ ಮಾನವೀಯ ಮೃದುಭಾವನೆಗಳು, ವಿಶೇಷತಃ ತನ್ನ ಹೆಂಡತಿಯನ್ನು ಕುರಿತು, ಇದ್ದವೆಂಬುದನ್ನು ನಾವು ಅಲ್ಲಗಳೆಯಲಾರೆವು. ಇಬ್ಬರನ್ನು ಮದುವೆಯಾಗಿದ್ದರೂ ಈ ಮುನಿಯು ಮೈತ್ರೇಯಿಯ ಕೂಡ ಕೇವಲ ಆಧ್ಯಾತ್ಮಿಕ ಸಂಬಂಧವನ್ನೂ, ಕಾತ್ಯಾಯನಿಯ ಬಹಿರ್ಮುಖ ಸ್ವಭಾವವನ್ನು ತಿಳಿದು ಆಕೆಯ ಕೂಡ ಸಂಸಾರಿಕ ಸಂಬಂಧವನ್ನೂ ಇಟ್ಟಿದ್ದನು. ಒಂದರಹಿಂದೊಂದು ಪ್ರಶ್ನೆಯನ್ನು ಕೇಳಿ ಗಾರ್ಗಿಯು ಅವನನು ಪೀಡಿಸುತ್ತಿರುವಾಗ ಅವನು ಆತ್ಮನ ಸರ್ವವ್ಯಾಪಕತ್ವದ ತತ್ವವನ್ನು ಹೇಳುವದನ್ನೂ ಆಕೆ

ಯ ತತ್ವಜ್ಞಾನವಿಷಯಕವಾದ ಹಮ್ಮನ್ನು ಎಣೆಯಿಲ್ಲದೇ ಹಿಂಗಿಸುವದನ್ನೂ ನೋಡಿ ಅವನಲ್ಲಿ ಪ್ರತಿವಾದಿಗಳ ಬಗ್ಗೆ ಯೋಗ್ಯವಾದ ಆದರವಿದ್ದಿಲ್ಲವೆನ್ನಬಹುದೇ? ಇಲ್ಲ. ಯಾಕಂದರೆ ಜರತ್ಕಾರವನು ಕೆಲವು ಅತ್ಯಂತ ಗೂಢವಾದ ಪ್ರಶ್ನೆಗಳನ್ನು ಕೇಳಿದ ಕೂಡಲೆ ಅವನ ಕೈಹಿಡಿದು ಸಭೆಯಿಂದ ಕರೆದೊಯ್ದು ಅವನೊಡನೆ ಕರ್ಮದ ಬಗ್ಗೆ ಆದರದಿಂದ ಮಾತಾಡಲಾರಂಭಿಸಿದನು. ಅವನು ತನ್ನ ಪ್ರತಿವಾದಿಗಳಿಗೆ ತತ್ಕಾಲಕ್ಕೆ ತಕ್ಕಷ್ಟು ಪ್ರತ್ಯುತ್ತರಗಳನ್ನು ಕೊಟ್ಟು ಬಿಡುವಷ್ಟು ಸುಜ್ಞನೂ ಇದ್ದನು. ಯಾಕಂದರೆ ಆಶ್ವಲನ ಯಜ್ಞವಿಷಯಕ ಪ್ರಶ್ನೆಗಳಿಗೆ ಆ ತರದ ಉತ್ತರಗಳನ್ನೇ ಕೊಟ್ಟು ಅವನನ್ನು ಸಮಾಧಾನಗೊಳಿಸಿದನು. ಗ್ರೀಸ ದೇಶದಲ್ಲಿಯ 'ಸೋಫಿಸ್ಟ' ದಾರ್ಶನಿಕರಂತೆ, ಜನರು ಕೊಟ್ಟ ಕಾಣಿಕೆಗಳನ್ನು ತತ್ವವಿದ್ಯೆಯನ್ನುಪದೇಶಿಸುವವರು ಸ್ವೀಕರಿಸಬಹುದು ಎಂದು ಯಾಜ್ಞವಾಲ್ಕ್ಯರ ಮತವಿತ್ತು. ಸಾಕ್ರೆಟೀಸನಂತೆ, ಆಧ್ಯಾತ್ಮಿಕ ಗುರುಗಳು ಯಾವ ಕಾಣಿಕೆಗಳ ಕಲ್ಮಷವನ್ನೂ ತಮಗೆ ತಗಲಗೊಡಬಾರದೆಂಬ ಭಾವನೆಯು ಅವನಲ್ಲಿಲ್ಲದಿದ್ದರೂ ಉಪನಿಷತ್ಕಾಲದ ತತ್ವಜ್ಞರಲ್ಲಿ ಅವನ ತರಗತಿಯು ಅತ್ಯಂತ ಶ್ರೇಷ್ಠವಿದ್ದು ತನ್ನ ಉಚ್ಚ ತಾತ್ವಿಕ ಧ್ಯೇಯವಾದದಿಂದಲೂ ಶುದ್ಧ ಆಧ್ಯಾತ್ಮಿಕ ವ್ಯವಹಾರದಿಂದಲೂ ಅವನು ಆಧುನಿಕ ತತ್ವಜ್ಞರಿಗೆ ಸಹ ಆದರ್ಶಭೂತನಾಗಿರುವನು. ತಾತ್ವಿಕ ಮತ್ತು ಆಧ್ಯಾತ್ಮಿಕ ಜ್ಞಾನಲಾಲಸೆಯ ಮೂರ್ತಿಯಾದ ಜನಕರಾಯನು ಯಾಜ್ಞವಲ್ಕ್ಯನ ಪಾದಕ್ಕೆರಗಿ ತನ್ನ ರಾಜ್ಯಸರ್ವಸ್ವವನ್ನರ್ಪಿಸಲು ಋಷಿಯು ರಾಜ್ಯದಿಂದ ತನಗೇನು ಎಂದು ಅದನ್ನು ಸ್ವೀಕರಿಸಲಿಲ್ಲ. ಇದೇ ಜನಕರಾಯನು ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಪ್ರಮುಖನಿರುವನು. ಮೂರನೆಯದರಲ್ಲಿ ಇವನು ತನ್ನ ಓಲಗದಲ್ಲಿ ನಡೆದಿರುವ ಜ್ಞಾನಚರ್ಚೆಯ ಶ್ರೋತೃವಾಗಿದ್ದರೂ ನಾಲ್ಕನೆಯದರಲ್ಲಿ ಸ್ವತಃ ಪ್ರಶ್ನೆ ಮಾಡಿ ಯಾಜ್ಞವಲ್ಕ್ಯನಿಂದ ಕಲಿಯಲುದ್ಯುಕ್ತನಾರುವನು. ಐದನೆಯ ಅಧ್ಯಾಯದಲ್ಲಿ ಕೂಡ ಈ ಅರಸನು ಕಂಡುಬರುವನು. ಆ ಅಧ್ಯಾಯದಲ್ಲಿ ನೀತಿ, ವಿಶ್ವ, ವಿಶ್ವೋತ್ಪತ್ತಿ, ಈ ಸಂಗತಿಗಳ ಚರ್ಚೆಯಿರುವದು. ಕೊನೆಯದಾದ ಆರನೆಯ ಅಧ್ಯಾಯದಲ್ಲಿ, ಪಂಚೇಂದ್ರಿಯಗಳ ಬಗ್ಗೆ ಪ್ರಸಿದ್ಧವಾದ ರೂಪಕವಿದೆ. 'ಪಂಚಾಗ್ನಿ' ತತ್ವದ ಪ್ರತಿಪಾದಕನಾದ ಪ್ರವಾಹಣ ಜೈವಲಿಯಾದರೂ ಇದೇ ಅಧ್ಯಾಯದಲ್ಲಿ ಬರುವನು. ಈ ಅಧ್ಯಾಯದಲ್ಲಿ ಕೆಲವು ಮೂಢ ಧರ್ಮಾಚಾರಗಳೂ ಉಪನಿಷತ್ಪರಂಪರೆಯೂ ಕೊಡಲ್ಪಟ್ಟಿವೆ. ಆ ಪರಂಪರೆಗೆ ತಕ್ಕ ಮಹತ್ವವನ್ನು ಕೊಡಬಹುದಲ್ಲದೆ ಹೆಚ್ಚು ಕೊಡಲಾಗದು.

೯. **ಛಾಂದೋಗ್ಯವು**—ಬೃಹದಾರಣ್ಯಕದಂತೆ ಛಾಂದೋಗ್ಯವಾದರೂ ಮೊದಲನೆಯ ಗುಂಪಿಗೆ ಸೇರುವುದು. ವೇದಾಂತಸೂತ್ರಕಾರರು ಛಾಂದೋಗ್ಯದಿಂದೆತ್ತಿ ಅನೇಕ

ಆಧಾರಗಳನ್ನು ಉದ್ಧರಿಸಿದ್ದರೂ ಅದು ವಾಙ್ಮಯ ದೃಷ್ಟಿಯಿಂದಾಗಲಿ ತತ್ವಜ್ಞಾನ ದೃಷ್ಟಿ ಯಿಂದಾಗಲಿ ಬೃಹದಾರಣ್ಯಕದ ಮೇಲ್ಮೆಯನ್ನು ಸರಿಗಟ್ಟಲಾರದು. ಆರು ಏಳು ಎಂಟು ಈ ಅಧ್ಯಾಯಗಳಷ್ಟೇ ತತ್ವಜ್ಞಾನದೃಷ್ಟಿಯಿಂದ ಮಹತ್ವವುಳ್ಳವುಗಳು. ಮಿಕ್ಕವುಗಳಲ್ಲಿ ಆ ಯೋಗ್ಯತೆಯಿಲ್ಲ. ಮೊದಲನೆಯ ಎರಡನೆಯ ಅಧ್ಯಾಯಗಳಲ್ಲಿ ಬ್ರಾಹ್ಮಣ ಕರ್ಮಕಾಂಡದ ಪುನರುಕ್ತಿಯೇ ತುಂಬಿದೆ. ಆ ಕರ್ಮಕಾಂಡದ ತತ್ವ ಮತ್ತು ಆಚಾರಗಳ ಹೆಚ್ಚಿನ ವರ್ಚಸ್ಸನ್ನು ಉಪನಿಷತ್ತಿನಲ್ಲಿ ಎಲ್ಲಿಯಾದರೂ ನೋಡಬೇಕಾಗಿದ್ದರೆ ಅದನ್ನು ಈ ಎರಡು ಅಧ್ಯಾಯಗ ಳಲ್ಲಿಯೇ ವಿಶೇಷವಾಗಿ ನೋಡಬಹುದು. ಅಲ್ಲೊಂದು ಇಲ್ಲೊಂದು ವಿಶ್ವವಿಷಯಕ ಕೋಟಿ ಕ್ರಮ ಅಥವಾ ತತ್ವಚರ್ಚೆ ಇದ್ದರೂ ಒಟ್ಟಾರೆ ಓಂ ಇದರ ಮಹತ್ವ, ಅದರ ಅರ್ಥ, ಅದರ ಉಗಮ ಮತ್ತು ಕಾರ್ಯ, ಸಾಮಗಳ ಹೆಸರುಗಳು ಮುಂತಾದವುಗಳೇ ಈ ಎರಡು ಅಧ್ಯಾ ಯಗಳನ್ನು ವ್ಯಾಪಿಸಿವೆ. ಮೊದಲನೆಯ ಅಧ್ಯಾಯದ ಕೊನೆಗೆ ಮಾತ್ರ ವಿಷಯಸುಖಗಳನ್ನೇ ಧ್ಯೇಯವಾಗಿಟ್ಟುಕೊಂಡು ಮಂತ್ರಾನುಷ್ಠಾನ ಮಾಡುವವರ ಬಗ್ಗೆ ಒಂದು ಒಳ್ಳೇ ಉಪರೋ ಧಿಕವಾದ ರೂಪಕವಿದೆ. ಬಕದಾಲ್ಭ್ಯನು (ಗ್ಲಾವಮೈತ್ರೇಯನೆಂದೂ ಅವನನ್ನುಕರೆಯುವರು) ಒಮ್ಮೆ ವೇದಪಠನಕ್ಕಾಗಿ ನಿರ್ಜನ ಪ್ರದೇಶಕ್ಕೆ ಹೋದನು. ಒಂದು ಬಿಳಿಯ ನಾಯಿಯು ಮುಂದೆ ಬಂದು ನಿಂತಿತು. ಅದರ ಸುತ್ತಲೂ ಹಸಿದು ಹಂಬಲಿಸುವ ನಾಯಿಗಳ ಒಂದು ತಂಡವು ಕೂಡಿ, ಆ ಬಿಳಿಯ ನಾಯಿಯು ಕೆಲವು ವಿಶಿಷ್ಟವಾದ ಮಂತ್ರಗಳ ಪಠನದಿಂದ ತಮಗೆ ಅನ್ನವನ್ನು ದೊರಕಿಸಿಕೊಡಬೇಕೆಂಬ ಉದ್ದೇಶದಿಂದ, ಆ ಮಂತ್ರಗಳನ್ನು ಪಠಿಸು, ಎಂದು ಅದಕ್ಕೆ ಆ ತಂಡವು ಹೇಳತೊಡಗಿತು. ನಾಳೆ ಬೆಳಿಗ್ಗೆ ಬನ್ನಿ ಎಂದು ಆ ಬಿಳಿಯ ನಾಯಿಯು ಅವು ಗಳಿಗೆ ಹೇಳಿತು. ಮಾರನೆಯ ದಿನ ಆ ಶ್ವಾನಗಳು ಯಾವಬಗೆಯಿಂದ ಮಂತ್ರಗಳನ್ನುಚ್ಚರಿಸು ವವೆಂಬದನ್ನು ನೋಡುವ ಕುತೂಹಲದಿಂದ ಬಕದಾಲ್ಭ್ಯನು ಆ ನಾಯಿಗಳ ಕೂಟವನ್ನು ಪ್ರತೀಕ್ಷಿಸತೊಡಗಿದನು. ಮೊದಲು ಗೊತ್ತಾದಂತೆ ಎಲ್ಲ ನಾಯಿಗಳು ಕೂಡಿದುವು; ಯಜ್ಞ ಕಾಲದಲ್ಲಿ ಒಬ್ಬನ ಒಲ್ಲಿಯನ್ನು ಇನ್ನೊಬ್ಬನು ಹಿಡಿದು ಮೆರೆವಣಿಗೆ ಹೊರಡಿಸುವ ಪುರೋ ಹಿತರ ತಂಡಿನಂತೆ, ಆ ನಾಯಿಗಳು ಒಂದರ ಬಾಲವನ್ನು ಇನ್ನೊಂದು ಹಿಡಿದು ಸುತ್ತಾಡಿ ದುವು. ಆಮೇಲೆ ಅವು ಕುಳಿತು, " ಹಿಂ, ಓಂ ನಾವು ಉಣ್ಣುವಾ, ಓಂ ನಾವು ಕುಡಿಯು ವಾ, ಓಂ ದೇವತೆಗಳು ನಮಗೆ ಅನ್ನವನ್ನು ಕೊಡಲಿ. ಅನ್ನದಾತನಾದ ದೇವನೇ, ನಮಗೆ ಅನ್ನವನ್ನು ಕೊಡು. ನಮಗೆ ಅನ್ನವನ್ನು ಕೊಡುವಂಥವನಾಗು ಓಂ, " ಎಂದು ಕೂಗಿ ಟ್ಟುವು, ಹೀಗೆ ಆ ರೂಪಕವಿರುವುದು. ಬರಿಯ ಐಹಿಕ ಸುಖೋಪಭೋಗಗಳ ಆಶೆ ಯಿಂದ ಮಂತ್ರೋಚ್ಚಾರ ಮಾಡುವ ಕ್ಷುದ್ರ ಜನರನ್ನು ಹೀಯಾಳಿಸುವ ಉದ್ದೇಶದಿಂದಲೇ ಈ ಕಥೆಯು ಬರೆಯಲ್ಪಟ್ಟಿರುವದೆಂಬದು ಸ್ಪಷ್ಟವಿದೆ. ' ಬಾಹ್ಯ ವಿಧಿವಿಧಾನಗಳ ಆಡಂಬರ

ವೆಲ್ಲ ಪೊಳ್ಳು, ಸೋಗು ಇರುವುದು, ಯಾವುದೇ ಶ್ರೇಷ್ಠವಾದ ಇಂದ್ರಿಯ ಸುಖೋಪಭೋಗವು ಆಧ್ಯಾತ್ಮಿಕ ಸುಖಕ್ಕಿಂತ ಹೀನತರವೇ ಇರುವುದು ಎಂಬುದನ್ನು ತೋರಿಸುವುದಕ್ಕಾಗಿಯೇ ಈ ನಾಯಿಗಳ ಮಂತ್ರವು, ಈ "ಶೌವ ಉದ್ಗೀಥ"ವು ಇಲ್ಲಿ ಹೇಳಲ್ಪಟ್ಟಿರುವದೆಂಬುದು ಒಡೆದು ಕಾಣುವಂತಿದೆ. ಇನ್ನು ಮೂರನೆಯ ಅಧ್ಯಾಯದಲ್ಲಿ ಸೂರ್ಯನು ಆಕಾಶದಲ್ಲಿ ತೂಗಾಡುವ ಪ್ರಚಂಡವಾದ ಜೇನಹುಟ್ಟು ಎಂದು ವರ್ಣನೆಯಿರುವುದು. ಅದರಲ್ಲಿಯೇ ಶಾಂಡಿಲ್ಯ ಋಷಿಯು ಹೇಳಿದ ಗಾಯತ್ರಿಯ ಬ್ರಹ್ಮರೂಪ ವರ್ಣನೆಯೂ ದೇವಕೀಪುತ್ರ ಕೃಷ್ಣನಿಗೆ ಆಂಗಿರಸನು ಮಾಡಿದ ಉಪದೇಶವೂ ಒಂದು ಮಹಾ ಅಂಡದೊಳಗಿಂದ ಸೂರ್ಯನ ಉತ್ಪತ್ತಿಯಾಯಿತೆಂಬ ಸೂರ್ಯೋಪಾಸನೆಗೆ ಸಂಬಂಧಿಸಿದ ಕಥೆಯೂ ಇರುವವು. ನಾಲ್ಕನೆಯ ಅಧ್ಯಾಯದಲ್ಲಿ ರೈಕ್ವನ ತತ್ವಜ್ಞಾನವು, ಸತ್ಯಕಾಮಜಾಬಾಲ ಮತ್ತು ಅವನ ತಾಯಿ ಇವರ ಕಥೆ, ತನ್ನ ಗುರುವಾದ ಸತ್ಯಕಾಮಜಾಬಾಲನಿಂದ ತತ್ವಜ್ಞಾನವನ್ನು ಪಡೆದ ಉಪಕೋಸಲನ ಸಂಗತಿ, ಇವೆಲ್ಲ ನಿವೇದಿತವಾಗಿರುವವು. ವಸ್ತುಗಳ ಅಂತಿಮಾವಸ್ಥೆಯನ್ನು ಕುರಿತು ಬೃಹದಾರಣ್ಯಕದಲ್ಲಿಯ ತತ್ವಜ್ಞಾನವನ್ನು ಹೋಲುವ ಜೈವಲಿಯ ತತ್ವಜ್ಞಾನವು ಐದನೆಯ ಅಧ್ಯಾಯದಲ್ಲಿರುವುದು. ಅದರಲ್ಲಿಯೇ ತನ್ನೆಡೆಗೆ ಕಲಿಯಬಂದ ಆರು ತತ್ವಜ್ಞರ ವಿಶ್ವವಿಷಯಕ ತತ್ವಜ್ಞಾನದ ಸುಂದರ ಸಮನ್ವಯವನ್ನು ಅಶ್ವಪತಿ ಕೈಕೇಯಿಯು ಮಾಡಿರುವನು. ಆರನೆಯ ಅಧ್ಯಾಯವು ಛಾಂದೋಗ್ಯದಲ್ಲಿ ಎಲ್ಲಕ್ಕೂ ಶ್ರೇಷ್ಠವಾದುದು. ಜೀವವೆಂದರೆ ಬ್ರಹ್ಮ ಎಂಬ ತತ್ವವನ್ನು ಪ್ರತಿಪಾದಿಸುವ ಅಥವಾ ಜೀವಾತ್ಮ ಪರಮಾತ್ಮರ ಸಂಪೂರ್ಣ ಐಕ್ಯವನ್ನು ನಿವೇದಿಸುವ ಆರುಣಿಯ 'ಆತ್ಮೈಕ್ಯ' ಅಥವಾ ಅದ್ವೈತ ತತ್ವಜ್ಞಾನವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಯಾಜ್ಞವಲ್ಕ್ಯನು ಬೃಹದಾರಣ್ಯಕದಲ್ಲಿಯ ಪ್ರಮುಖಪಾತ್ರನಾಗಿರುವಂತೆ ಛಾಂದೋಗ್ಯದಲ್ಲಿ ಆರುಣಿಯೇ ಮುಖ್ಯಪಾತ್ರನಾಗಿ ಕಂಗೊಳಿಸುವನು; ಆದರೆ ಆರುಣಿಯು ಅತ್ಯಂತ ಪ್ರಾಚೀನ ಮತ್ತು ಕೀರ್ತಿವಂತನಾದ ಋಷಿಯೆಂದೂ ಯಾಜ್ಞವಲ್ಕ್ಯನು ಅವನ ಶಿಷ್ಯನೆಂದೂ ಶತಪಥಬ್ರಾಹ್ಮಣದಲ್ಲಿ ಉಲ್ಲೇಖವಿರುವದು. ಆರನೆಯ ಅಧ್ಯಾಯದಲ್ಲಿ ಆರುಣಿಯು ಹೇಳಿದ ತತ್ವಗಳನ್ನು ನೋಡಿದರೆ ನಿಜವಾಗಿ ಅವನು ಅಷ್ಟು ಯೋಗ್ಯತೆಯುವನೆಂದು ಮನವರಿಕೆಯಾಗುವದು. ಇದೆಲ್ಲ ಸರಿಯೇ. ಆದರೆ ಆರುಣಿಯು ಒಳ್ಳೇ ಘನವಾದ ತತ್ವಜ್ಞಾನಿಯೆಂದು ಒಮ್ಮೆ ಪ್ರಸಿದ್ಧವಾದ ಮೇಲೆ ಮಿಕ್ಕ ಉಪನಿಷತ್ತುಗಳು ತಮ್ಮತಮ್ಮ ತತ್ವಗಳ ಪ್ರತಿಪಾದನ ಮಾಡುವಾಗ ಅವನ ಹೆಸರನ್ನು ಬೇಕಾದ ಹಾಗೆ ಹಿಂದೆ ಮುಂದೆ ನೋಡದೇ ಉಪಯೋಗಿಸಿವೆ. ಕೌಷೀತಕಿ ಉಪನಿಷತ್ತು ಅರ್ವಾಚೀನವಾದುದೆಂದು ಎಲ್ಲರೂ ಒಡಂಬಡುವರು. ಅದರಲ್ಲಿ ಆರುಣಿಯ ಭೂಮಿಕೆಯು ತೀರ ಗೌಣ ಮತ್ತು ಮಹತ್ವಹೀನವಿರುವದು. ಓರ್ವ ಮಹಾಪುರುಷನ ಹೆಸರಿನ

ಉಪಯೋಗವನ್ನು ಏನೋ ಒಂದು ಕ್ಷುದ್ರ ಕಾರ್ಯಕ್ಕಾಗಿ ಮಾಡಿಕೊಳ್ಳುವ ಬುದ್ಧಿಯು ಕವಿಗಳಿಗೆ ಆಗುವದೆಂದರೆ ಇದೊಂದು ದುರ್ದೈವವೇ ಸರಿ. ಛಾಂದೋಗ್ಯದಲ್ಲಿ ಆರುಣಿಯು ಅದ್ವಿತೀಯನಾಗಿ ಕಂಗೊಳಿಸುವನು. ಆದರೆ ಅದಕ್ಕೂ ಅರ್ವಾಚೀನ ಉಪನಿಷತ್ತುಗಳು ಅವನನ್ನು ಬಹಳೇ ಸಾಮಾನ್ಯ ಸಂದರ್ಭಗಳಲ್ಲಿ ಉಲ್ಲೇಖಿಸಿರುವವು. ಏಳನೆಯ ಅಧ್ಯಾಯ ದಲ್ಲಿ ನಾರದ-ಸನತ್ಕುಮಾರರ ಸಂಭಾಷಣವಿರುವದು. ಅದರ ಬಗ್ಗೆ ಮುಂದೆ ಬರೆಯಬೇ ಕಾಗಿದೆ. ಕೊನೆಗೆ ಎಂಟನೆಯ ಅಧ್ಯಾಯದಲ್ಲಿ ಆತ್ಮಸಾಕ್ಷಾತ್ಕಾರಕ್ಕಾಗಿ ಸಾಧಕನು ಮಾಡತಕ್ಕ ಸಾಧನೆಯ ಕೆಲ ಸೂಚನೆಗಳೂ ಇಂದ್ರವಿರೋಚನರ ಸುಂದರವಾದ ಕಥೆಯೂ ಕೊಡಲ್ಪಟ್ಟಿವೆ.

**೧೦. ಈಶ ಮತ್ತು ಕೇನ ಉಪನಿಷತ್ತುಗಳು**— ಎರಡನೆಯ ಗುಂಪಿಗೆ ಸೇರಿದ ಈಶ ಮತ್ತು ಕೇನ ಉಪನಿಷತ್ತುಗಳು ಸ್ಕ್ಯಾಂಡಿನೇವಿಯಾದ 'ಹೇಮಿಸಕ್ರಿಂಗಲಾ' ಎಂಬ ಇತಿಹಾಸಗಳಂತೆ ತಮ್ಮ ಮಂತ್ರಗಳ ಆದಿಶಬ್ದಗಳ ಹೆಸರನ್ನೇ ತಳೆದಿರುವವು. ಈಶೋಪನಿಷತ್ತು ತೀರ ಚಿಕ್ಕದು. ಆದರೆ ಅದರಲ್ಲಿ ಅತ್ಯಂತ ಸೂಕ್ಷ್ಮ ಜ್ಞಾನದ ಗುರುತು ಗಳು ತುಂಬಿವೆ. ಹದಿನೆಂಟೇ ಮಂತ್ರಗಳಲ್ಲಿ ಆತ್ಮಸ್ವರೂಪ, ಮೋಹಶೋಕಗಳನ್ನು ಲೆಕ್ಕಿಸದೆ ಶಾಂತವೃತ್ತಿಯಿಂದ ಸ್ಥಿತಪ್ರಜ್ಞನಾಗಿರುವ ಋಷಿ, ಕರ್ಮಯೋಗದ ಬೀಜ ಮಂತ್ರ, ಜ್ಞಾನಕರ್ಮಗಳ ಸಮನ್ವಯ ಮುಂತಾದ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಪರಸ್ಪರ ವಿರೋಧಿಯಾಗಿ ಕಾಣಿಸುವ ಜ್ಞಾನಕರ್ಮಗಳ ಶ್ರೇಷ್ಠ ಸಮನ್ವಯವನ್ನು ಸುಯು ಕ್ತಿಯಿಂದ ಮಾಡಲೆತ್ನಿಸುವದು ಈ ಉಪನಿಷತ್ತಿನ ತಿರುಳು ಮತ್ತು ಮಹತ್ವದ ಮೂಲಮಂ ತ್ರವು. ಪರಸ್ಪರ ವಿರೋಧಿಯಾದವುಗಳಲ್ಲಿ ಈ ಬಗೆಯ ಸಯುಕ್ತಿಕ ಸಮನ್ವಯ ವನ್ನು ಮಾಡುವ ಮಹತ್ವದ ಪದ್ಧತಿಯ ಬಗ್ಗೆ ಭಾರತೀಯ ತತ್ವಜ್ಞಾನವು ಈಶೋಪನಿ ಷತ್ತಿಗೆ ಶಾಶ್ವತವಾಗಿ ಋಣಿಯಾಗಿರುವುದು.

ಕೇನೋಪನಿಷತ್ತಿನಲ್ಲಿ ನಾಲ್ಕು ಖಂಡಗಳು ; ಎರಡು ಗದ್ಯಮಯ ಎರಡು ಪದ್ಯಮ ಯ. ಆತ್ಮನ ಅಸ್ತಿತ್ವವನ್ನು ಬಾಹ್ಯಪ್ರಮಾಣಗಳಿಂದ ಸಿದ್ಧಮಾಡುವ ಖಂಡಗಳೆರಡು, ಅಂತಃಪ್ರಮಾಣಗಳಿಂದ ಸಿದ್ಧಮಾಡುವ ಖಂಡಗಳು ಎರಡು. ಮೊದಲನೆಯದು ಆಧಿ ದೈವಿಕ ಪ್ರಮಾಣ, ಎರಡನೆಯದು ಆಧ್ಯಾತ್ಮಿಕ ಪ್ರಮಾಣ. ಈ ಉಪನಿಷತ್ತಿನಲ್ಲಿಯ ಪದ್ಯ ಭಾಗವು ಆಧ್ಯಾತ್ಮಿಕ ಕೋಟಿಕ್ರಮವನ್ನುಪಯೋಗಿಸಿ ಆತ್ಮನು ಇಂದ್ರಿಯಗಳಾಚೆಗಿದ್ದು ಅವುಗಳ ಪ್ರೇರಕನಿರುವನೆಂದು ಪ್ರತಿಪಾದಿಸುವುದು, ಪ್ರತೀಕ ಪೂಜೆಯನ್ನು ಅಲ್ಲಗಳೆದು ಆತ್ಮನೇ ಎಲ್ಲಕ್ಕೂ ಆತ್ಯಂತಿಕ ಸತ್ಯವೆಂದು ಸಾರುವುದು, ಕೊನೆಗೆ ಸತ್ಯವನ್ನು ತಿಳಿದಿರುವೆ ವೆನ್ನುವವರಿಗೆ ಅದು ತಿಳಿದಿಲ್ಲವೆಂತಲೂ ತಿಳಿದಿಲ್ಲವೆನ್ನುವವರಿಗೆ ತಿಳಿದಿರುವುದೆಂತಲೂ ವಿರೋ

ಧಾಭಾಸಾತ್ಮಕವಾಗಿ ಹೇಳುವದು. ಗದ್ಯಭಾಗದಲ್ಲಿ ಇಂದ್ರ ಮತ್ತು ಉಮಾದೇವಿಯ ಸುಂದರವಾದ ಕಥೆಯೂ ನಿಸರ್ಗಕ್ರಿಯೆಗಳಿಗೆ ಪ್ರೇರಕವಾದ ಒಂದು ಅಪ್ರಮೇಯ ಶಕ್ತಿ ಇರುವದೆಂಬ ಪ್ರತಿಪಾದನವೂ ಇರುವದು. ಈ ಭಾಗವು ನಮಗೆ ನಮ್ರತೆಯನ್ನು ಕಲಿಸುವುದು. ಯಾಕಂದರೆ ನಮ್ರರಾಗದೇ ನಾವು ಈ ಅಗಾಧ ಶಕ್ತಿಯನ್ನು ಎದುರುಗೊಳ್ಳಲಾರೆವು. ತಪಸ್ಸು, ದಮ, ಕರ್ಮ, ಇವೇ ಈ ಶಕ್ತಿಯ ಆಧಾರಗಳು, ವೇದಗಳೇ ಅಂಗಗಳು, ಸತ್ಯವೇ ಆಶ್ರಯವು ಎಂದು ಹೇಳಿ ಈ ಉಪನಿಷತ್ತು ಈ ಗೂಢವಿದ್ಯೆಯನ್ನು ನೀತಿಯ ತಳಗಲ್ಲಿನಮೇಲೆ ನಿಲ್ಲಿಸುತ್ತಿದೆ. ಬಾಹ್ಯವಿಶ್ವದಲ್ಲಿಯೂ ಅಂತಃಕರಣದಲ್ಲಿಯೂ ಈ ಒಂದೇ ಸತ್ಯವನ್ನು ನಾವು ಸಾಕ್ಷಾತ್ಕರಿಸಬೇಕು, ಆ ಹೊಳಗುವ ಮೇಘಗಳ ಮಿಂಚಿನಲ್ಲಿ ಈ ಮನಸ್ಸಿನ ಅಲೆದಾಟದಲ್ಲಿ ನಾವು ಆ ಶಕ್ತಿಯನ್ನೇ ನೋಡಬೇಕೆಂದು ಈ ಉಪನಿಷತ್ತಿನ ಉಪದೇಶವಿರುವುದು.

**೧೧. ಐತರೇಯ, ತೈತ್ತಿರೀಯ, ಮತ್ತು ಕೌಷೀತಕಿ —** ಐತರೇಯೋಪನಿಷತ್ತು ಇದು ಐತರೇಯ ಆರಣ್ಯಕದ ಒಂದು ಭಾಗವು. ಆ ಆರಣ್ಯಕದ ೨ನೆಯ ಅಧ್ಯಾಯದ ನಾಲ್ಕನೆಯ ಖಂಡದಿಂದ ಅಧ್ಯಾಯದ ಕೊನೆಯವರೆಗಿನ ಭಾಗವೇ ಐತರೇಯ ಉಪನಿಷತ್ತು. ಈ ಉಪನಿಷತ್ತಿನಲ್ಲಿ ಒಳ್ಳೇ ಮಹತ್ವದ ಮೂರು ಭಾಗಗಳು ಇವೆ. ಆದಿ ಆತ್ಮನು ವಿರಾಟನ ಮೂಲಕ ಮಾಡಿದ ವಿಶ್ವೋತ್ಪತ್ತಿಯ ವರ್ಣನೆಯು ಮೊದಲನೆಯ ಅಧ್ಯಾಯದಲ್ಲಿ ಬಂದಿದೆ. ಎರಡನೆಯ ಅಧ್ಯಾಯದಲ್ಲಿ ವಾಮದೇವನ ‘ ಮೂರು ಜನ್ಮ ’ ಗಳ ತತ್ವಜ್ಞಾನವು ವಿವರಿಸಲ್ಪಟ್ಟಿದೆ. ಯಾವನ ವಚನಗಳು ಈ ಉಪನಿಷತ್ತಿನಲ್ಲಿ ಆದರಪೂರ್ವಕವಾಗಿ ಉದ್ಧರಿಸಲ್ಪಟ್ಟಿರುವವೋ ಅಮೃತತ್ವವನ್ನು ಪಡೆಯಲಿಚ್ಛಿಸುವವರು ಯಾವನನ್ನು ಆದರ್ಶಭೂತನನ್ನಾಗಿಟ್ಟುಕೊಳ್ಳಬೇಕೆಂದು ಉಲ್ಲೇಖವಿರುವದೋ ಋಗ್ವೇದದಲ್ಲಿ (ಮಂಡಲ ೪, ಸೂಕ್ತ ೨೭, ಮಂ ೧) ಯಾವನ ಹೆಸರು ಬಂದಿದೆಯೋ ಆ ವಾಮದೇವನೆಂಬ ವೈದಿಕ ಋಷಿಯ ತತ್ವಜ್ಞಾನವೇ ಇದು ಇರಬಹುದು. ವಾಮದೇವನ ತತ್ವಜ್ಞಾನವನ್ನು ನಾವು ಮುಂದೆ ಚರ್ಚಿಸುವೆವು. ಆದರೆ ಇಲ್ಲಿ ಜನ್ಮಾಂತರದ ಕಲ್ಪನೆಯು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ ಎಂಬದನ್ನು ನಾವು ನೆನಪಿನಲ್ಲಿಡಬೇಕು. ಕೊನೆಯದಾದ ಮೂರನೆಯ ಅಧ್ಯಾಯದಲ್ಲಿ ಸಕಲ ಮನೋವ್ಯಾಪಾರಗಳೂ ಅಖಿಲ ವಿಶ್ವವ್ಯಾಪಾರಗಳೂ ಪ್ರಜ್ಞಾನತತ್ವದ ಬಾಹ್ಯ ಆವಿರ್ಭಾವಗಳೆಂದು ಋಷಿಗಳು ಅಧ್ಯಾತ್ಮವಾದದ ಮೂಲ ಮಂತ್ರವನ್ನು ಧಾರಾಳವಾಗಿ ಹೇಳಿರುವರು.

ತೈತ್ತಿರೀಯದಲ್ಲಿ ಮೂರು ವಲ್ಲಿಗಳಿರುವವು. ಮೊದಲನೆಯದರಲ್ಲಿ ಸ್ತನದಂತೆಜೋತಾಡುವ ಒಂದು ಪಿಂಡವು ಮಿದುಳಿನಕೆಳಗೆ ಇರುವುದೆಂದೂ ಅದು ಅಮೃತಪುರುಷನಸ್ಥಾನ

ವೆಂದೂ ವರ್ಣನೆಯಿರುವುದು. ಇದೇ ವಲ್ಲಿಯಲ್ಲಿ ಎರಡು ಕಡೆಗೆ ಉತ್ತಮವಾದ ಪ್ರಸಿದ್ಧ ನೀತಿಯ ವಚನಗಳೂ ತ್ರಿಶಂಕುವಿನ ವೇದಾನುವಚನಗಳೂ ಇರುವವು. ಎರಡನೆಯವರಲ್ಲಿ ಅನೇಕ ಸಂಕೀರ್ಣ ವಿಷಯಗಳೂ ಪಂಚಕೋಶಗಳ ವಿವರಣೆಯೂ ಆನಂದಮೀಮಾಂಸೆಯೂ ಬಂದಿರುವವು. ಪಂಚಕೋಶಗಳ ತತ್ವವೇ ಮೂರನೆಯವರಲ್ಲಿ ಹೆಚ್ಚು ವಿಶದವಾಗಿ ವರ್ಣಿಸಲ್ಪಟ್ಟಿರುವುದು; ಮತ್ತು ಕೊನೆಗೆ ಆ ಕೋಶಗಳು ಒಂದಕ್ಕಿಂತ ಒಂದು ಹೆಚ್ಚಿನ ಆಧ್ಯಾತ್ಮಿಕ ಮೆಟ್ಟಲುಗಳೆಂಬ, ಜ್ಞಾತಾ ಮತ್ತು ಜ್ಞೇಯ ಇವೆರಡೂ ಐಕ್ಯಹೊಂದುವವೆಂಬ ಗೂಢ ಅನುಭಾವದ ಸುಂದರ ವರ್ಣನೆಯು ಇದೆ.

ಕೌಷೀತಕಿ ಉಪನಿಷತ್ತು ನಾಲ್ಕು ಭಾಗಗಳಾಗಿ ವಿಭಾಗಿಸಲ್ಪಟ್ಟಿದೆ. ಛಾಂದೋಗ್ಯ ಬೃಹದಾರಣ್ಯಕಗಳಲ್ಲಿಯ ದೇವಯಾನ ಪಿತೃಯಾನಗಳ ಹೆಚ್ಚು ಸ್ಪಷ್ಟವಾದ ವರ್ಣನೆ, ಬೃಹದಾರಣ್ಯಕದಲ್ಲಿಯ ಬಾಲಾಕಿ ಮತ್ತು ಅಜಾತಶತ್ರು ಇವರ ನಡುವಿನ ಸಂಭಾಷಣ ಇವೇ ಮೊದಲನೆಯ ಅಧ್ಯಾಯದ ವಿಷಯಗಳು. ಎರಡನೆಯ ಮೂರನೆಯ ಅಧ್ಯಾಯಗಳಲ್ಲಿಯೇ ಸ್ವಲ್ಪ ವೈಶಿಷ್ಟ್ಯವಿದೆ ಎಂದೆನ್ನಬಹುದು. ಎರಡನೆಯ ಅಧ್ಯಾಯದಲ್ಲಿ ಸರ್ವಜಿತ್ ಅಂದರೆ ಎಲ್ಲರನ್ನು ಗೆದೆಯುವ ಕೌಷೀತಕಿ, ಪೈಂಗ್ಯ, ಪ್ರತರ್ದನ ಮತ್ತು ಶುಷ್ಕಭೃಂಗಾರ ಈ ನಾಲ್ಕು ತತ್ತ್ವಜ್ಞರ ಒಂದಕ್ಕೊಂದು ಸಂಬಂಧವಿಲ್ಲದ ಮತ್ತು ಪ್ರತ್ಯೇಕವಾಗಿರುವ ತತ್ವಗಳು ಹೇಳಲ್ಪಟ್ಟಿವೆ. ಇದಲ್ಲದೆ ಅಂಧವಿಶ್ವಾಸದ ಮೂಲಕ ಆ ಕಾಲದಲ್ಲಿ ಪ್ರಚಲಿತವಿದ್ದ ಕೆಲವು ಅಧಾರ್ಮಿಕವಾದ ರೀತಿ-ನಡಾವಳಿಗಳು ಈ ಉಪನಿಷತ್ತಿನಲ್ಲಿ ವಿವರಿಸಲ್ಪಟ್ಟಿವೆ. ಮೂರನೆಯ ಅಧ್ಯಾಯದಲ್ಲಿ ಪ್ರತರ್ದನನು ಇಂದ್ರನಿಂದ ತತ್ವಜ್ಞಾನವನ್ನು ಕಲಿತುಕೊಂಡನೆಂದು ವರ್ಣನೆಯಿದೆ. ಇನ್ನು 'ಇಂದ್ರ'ವೆಂಬ ಹೆಸರು ಪೌರಾಣಿಕವು ; ವೈದಿಕ ಕಾಲದಿಂದಲೂ ಪ್ರಸಿದ್ಧವಿರುವದು. ಆದುದರಿಂದ ಇಂದ್ರನು ಉಪದೇಶಿಸಿದನೆಂಥ ಉಲ್ಲೇಖವಿದ್ದರೂ ಈ ತತ್ತ್ವಜ್ಞಾನವು ಪ್ರತರ್ದನನದೇ ಎಂದು ಹೇಳಬಹುದು. ಆದರೂ ಇಲ್ಲಿ ಹೇಳಿರುವಂತೆಯೇ ನಾವು ಆ ಕಥೆಯ ವಿಚಾರಮಾಡಲಿಕ್ಕೆ ಬೇಕು ಮತ್ತು ಇಲ್ಲಿ ಉಲ್ಲೇಖಿಸಿದ ಇಂದ್ರನ ವೀರಕೃತ್ಯಗಳನ್ನು ಲಕ್ಷಿಸಲಿಕ್ಕೆ ಬೇಕು. ಇಂದ್ರನು ಪ್ರತರ್ದನನಿಗೆ ಹೇಳುವದೇನಂದರೆ, “ನನ್ನನ್ನರಿಯುವುದೇ ಮನುಷ್ಯನಿಗೆ ಎಲ್ಲಕ್ಕೂ ಹೆಚ್ಚು ಹಿತಕರವು. ಮೂರು ತಲೆಗಳುಳ್ಳ ತ್ವಾಷ್ಟ್ರಿಯನ್ನು ಕೊಂದವನು ನಾನೇ. ಅವಾಙ್ಮುಖರನ್ನು ತೋಳಗಳಮುಂದೆ ಚಲ್ಲಿದವನು ನಾನೇ. ಅನೇಕ ಒಪ್ಪಂದಗಳನ್ನು ಮುರಿದು ಪ್ರಲ್ಹಾದನ ಮಕ್ಕಳನ್ನು ಸ್ವರ್ಗದಲ್ಲಿ, ಪೌಲೋಮರನ್ನು ಅಂತರಿಕ್ಷದಲ್ಲಿ, ಕಾಲಕಾಶ್ಯರನ್ನು ಭೂಲೋಕದಲ್ಲಿ ಕೊಂದವನು ನಾನೇ. ಇಷ್ಟೆಲ್ಲ ಮಾಡಿದರೂ ನನ್ನ ಕೂದಲ ಎಳೆಗೂ ಕೊಂಕಿಲ್ಲ. ನಾನು ಇಂಥ ಶಕ್ತಿಯುಳ್ಳವನಿರುವೆನೆಂದೂ ಈ ವೀರ ಕರ್ಮಗಳನ್ನು ಮಾಡಿದೆನೆಂದೂ ಯಾರು ಅರಿಯುವರೋ ಅವರಿಗೆ ಯಾವ ಕರ್ಮದ ಬಾಧೆ

ಯೂ ಆಗುವದಿಲ್ಲ. ಮಾತೃವಧ, ಪಿತೃವಧ, ಕಳವು, ಭ್ರೂಣಹತ್ಯೆ ಮುಂತಾದವುಗಳು ಸಹ ಅವನನ್ನು ಲೇಪಿಸಲಾರವು. ಅವನ ಮೋರೆಯ ಮೇಲಿನ ಕಳೆಯು ಎಂದಿಗೂ ಕಡಿಮೆಯಾಗಲಾರದು." ಇಂದ್ರಪ್ರತರ್ದನರ ಸಂಭಾಷಣವು ನಡೆದಿರುವಾಗಲೇ ಪ್ರಾಣವು ಮೊದಲು ಜೀವನದ ಆಧಾರವೆಂದು, ಆಮೇಲೆ ಅದು ಪ್ರಜ್ಞಾತತ್ವವೆಂದು, ಕೊನೆಗೆ ಅದೇ ಆತ್ಯಂತಿಕ ಸತ್ಯವೆಂದು ಪ್ರತಿಪಾದನವಿರುವದು. ಅದೇ ಆತ್ಮವು, ಅದೇ ಎಲ್ಲ ಒಳಿತು ಕೆಡಕುಗಳ ಮೂಲಕಾರಣವು, ಮಾನವರು ಈ ಆತ್ಮನ ಕೈಯಲ್ಲಿ ಕೇವಲ ನಿಮಿತ್ತಮಾತ್ರರು ಎಂದು ಮುಂದೆ ಸ್ಪಷ್ಟ ಉಲ್ಲೇಖವಿರುವುದು.

**೧೨. ಕಠ, ಮುಂಡಕ ಮತ್ತು ಶ್ವೇತಾಶ್ವತರ** —— ಇದು ನಾವು ಮಾಡಿದ ನಾಲ್ಕನೆಯ ಗುಂಪು. ಉಳಿದ ಯಾವ ಮೂರು ಉಪನಿಷತ್ತುಗಳೂ ಈ ಮೂರರಷ್ಟು ಪರಸ್ಪರ ಸಂಬಂಧವುಳ್ಳವುಗಳಿಲ್ಲ. ಅತ್ಯಂತ ಶ್ರೇಷ್ಠವಾದ ಸತ್ಯವನ್ನು ಕವಿಯು ಕಣ್ಣಿನಿಂದ ಕಂಡು ಎಲ್ಲರಿಗೂ ಕಾಣುವಂತೆ ಅದನ್ನು ವರ್ಣಿಸುವದೇ ಇವೆಲ್ಲವುಗಳ ಮುಖ್ಯವಾದ ಗುರಿಯು. ಆದುದರಿಂದಲೇ ಮುಂದೆ ರಚಿಸಲ್ಪಟ್ಟ ಭಗವದ್ಗೀತೆ ಮುಂತಾದ ತತ್ವಜ್ಞಾನ ಪ್ರಚುರವಾದ ಕಾವ್ಯಗಳು ಈ ಮೂರು ಉಪನಿಷತ್ತುಗಳನ್ನೇ ತಮ್ಮ ಭಾಂಡಾರವನ್ನಾಗಿಟ್ಟುಕೊಂಡವು. ಇನ್ನು ಈ ಮೂರು ಉಪನಿಷತ್ತುಗಳಲ್ಲಿ ಕಠವು ಅಧ್ಯಾತ್ಮಪ್ರಧಾನವೂ ಮುಂಡಕವು ಭಾವನಾಪ್ರಧಾನವೂ, ಶ್ವೇತಾಶ್ವತರವು ತತ್ವಜ್ಞಾನ ಮತ್ತು ಅನುಭಾವ ಇವುಗಳ ಬೆರಿಕೆಯಿಂದೊಡಗೂಡಿದ್ದೂ ಇರುವದು. ಸಾಂಖ್ಯ ಮತ್ತು ವೇದಾಂತ ಎಂಬ ಎರಡು ತತ್ವಪದ್ಧತಿಗಳು ಪ್ರತ್ಯೇಕವಾಗಿ ಪ್ರಚಲಿತವಾಗುವದಕ್ಕೂ ಪೂರ್ವದಲ್ಲಿಯೇ ಈ ಮೂರು ಉಪನಿಷತ್ತುಗಳು ಬರೆಯಲ್ಪಟ್ಟಿರಬೇಕೆಂದು ತೋರುವದು. ಕಠದ ಸ್ವಾಭಾವಿಕವಾದ ಕೊನೆಯು ಮೊದಲನೆಯ ಅಧ್ಯಾಯದ ಅಂತ್ಯದಲ್ಲಿಯೇ ಇರುವುದೆಂದು ಅಲ್ಲಿ ಇರುವ ಶಬ್ದಗಳ ಪುನರುಕ್ತಿ ಮತ್ತು ಫಲಶ್ರುತಿ ಇವುಗಳ ಮೇಲಿಂದ ಊಹಿಸಬಹುದು. ಮೂಲ ಉಪನಿಷತ್ತಿಗೆ ಎರಡನೆಯ ಅಧ್ಯಾಯವು ಆಮೇಲೆ ಜೋಡಿಸಲ್ಪಟ್ಟಿರಬೇಕು. ಎರಡನೆಯ ಅಧ್ಯಾಯದ ಕೊನೆಯ ಶ್ಲೋಕ ಮತ್ತು ಅಲ್ಲಿರುವ ಪುನರುಕ್ತಿ ಇವುಗಳನ್ನು ನೋಡಿದರೆ ಮೊದಲನೆಯ ಅಧ್ಯಾಯದಲ್ಲಿಯ ನಚಿಕೇತನ ಕಥೆಗೆ ಇದು ಪೂರಕವೆಂದು ಕಂಡುಬರುವದು. ಆದರೆ ಮೊದಲನೆಯ ಅಧ್ಯಾಯದ ೨೦ನೆಯ ಮಂತ್ರದಲ್ಲಿಯ ನಚಿಕೇತನ ಪ್ರಶ್ನೆಗೆ ಯಮರಾಜನು ೨ನೆಯ ಅಧ್ಯಾಯದ ೫ನೆಯ ಮತ್ತು ೬ನೆಯ ಮಂತ್ರಗಳಿಂದ ಉತ್ತರಕೊಡುತ್ತಿರುವನೆಂದು ಸ್ಪಷ್ಟವಾಗಿ ತೋರುತ್ತಿರುವದರಿಂದ ಈ ಎರಡರ ನಡುವಿನ ಭಾಗವೆಲ್ಲ ಕಾಲಾಂತರದ ಮೇಲೆ ರಚಿಸಿ ಅಲ್ಲಿ ಸೇರಿಸಲ್ಪಟ್ಟಿದೆಯೆಂದು ಊಹಿಸಲಿಕ್ಕೆ ಆಸ್ಪದವಿದೆ. ಮುಂಡಕ ಮತ್ತು ಶ್ವೇತಾಶ್ವತರದಂತೆಯೇ ಕಠೋಪನಿಷತ್ತಿನ ಅವತರಣಗಳಾದರೂ

ಈ ಪುಸ್ತಕದಲ್ಲಿ ಅನೇಕ ಬರುವದರಿಂದ ಇಲ್ಲಿ ಸವಿಸ್ತಾರವಾಗಿ ಆ ಉಪನಿಷತ್ತಿನ ವಿಷಯವನ್ನು ಚರ್ಚಿಸುವದು ಅವಶ್ಯವಿಲ್ಲ. ಕಠವಲ್ಲಿ ಒಳ್ಳೇ ಎದ್ದುಕಾಣಿಸುವ ಎರಡು ವಿಷಯಗಳೆಂದರೆ, ದೇಹವನ್ನು ರಥಕ್ಕೆ ಹೋಲಿಸಿದ ರೂಪಕವು ಒಂದು, ಮರಣ ಮತ್ತು ಕನಸು ಇವುಗಳ ಸಹಾಯದಿಂದ ಸತ್ತತ್ವವನ್ನರಿತುಕೊಳ್ಳುವ ಪ್ರಯತ್ನಮಾಡಿದ್ದು ಎರಡನೆಯದು. ಆತ್ಮನ ಅಮರತ್ವದ ಉಚ್ಚಕಲ್ಪನೆಗಳಿಂದಲೂ ಆತ್ಮಸಾಕ್ಷಾತ್ಕಾರಕ್ಕೆ ಸಾಧನೀಭೂತವಾದ ಸ್ಪಷ್ಟ ಸೂಚನೆಗಳಿಂದಲೂ ಕಠೋಪನಿಷತ್ತು ತುಂಬಿ ಹೊರಸೂಸುತ್ತಿದೆ. ಬೇರೆ ಬೇರೆ ಲೋಕಗಳಲ್ಲಿ ಆತ್ಮಸಾಕ್ಷಾತ್ಕಾರವು ಬಗೆಬಗೆಯಾಗಿ ಆಗುವದನ್ನು ಒಂದೆಡೆಗೆ ಈ ಉಪನಿಷತ್ತು ಮುಂದಿನಂತೆ ಹೇಳುವುದು. 'ಕನ್ನಡಿಯಲ್ಲಿ ನೋಡಿದರೆ ನಮ್ಮ ಎಡಬಲಗಳು ನಮಗೆ ತಿರುವುವುರುವು ಕಾಣುವಂತೆ ಈ ದೇಹವಲ್ಲಿರುವವರೆಗೆ ನಮಗೆ ನಮ್ಮ ಆತ್ಮವು ತಿರುವುಮುರುವಾಗಿಯೇ ಕಾಣುವದು. ಪಿತೃಲೋಕದಲ್ಲಿ ಅದು ಕನಸಿನಲ್ಲಿಯ ವಸ್ತುಗಳಂತೆ ಸ್ಪಷ್ಟವಾಗಿ ಕಂಡರೂ ಅದು ಕೇವಲ ಕಲ್ಪನಾರೂಪವಿರುವದು. ತಿಳಿಕೊಳದ ಬುಡದಲ್ಲಿರುವ ಬೆಣಚುಗಲ್ಲಿನಂತೆ ಗಂಧರ್ವಲೋಕದಲ್ಲಿ ನಿಜವಾದ ಆತ್ಮವು ಸ್ಪಷ್ಟವಾಗಿ ಕಂಡರೂ ಅದು ಕಿರಣವಕ್ರೀಕರಣದ ಮೂಲಕ ಸ್ಥಲಾಂತರದಲ್ಲಿ ಕಾಣುವದು. ಬ್ರಹ್ಮಲೋಕದಲ್ಲಿ ಮಾತ್ರ ಬೆಳಕುನೆಳಲುಗಳಂತೆ ಆತ್ಮಾನಾತ್ಮಗಳು ಪ್ರತ್ಯೇಕವಾಗಿ ಒಡೆದು ಕಾಣುವವು.' ಉಪನಿಷತ್ತಿನ ತತ್ವವಿಚಾರಗಳಲ್ಲಿ ಈ ಕಲ್ಪನೆಯನ್ನು ಸೇರಿಸಿದ ಶ್ರೇಯಸ್ಸು ಕಠೋಪನಿಷತ್ತಿಗೇ ಇರುವದು.

ಮುಂಡಕವು ಅನ್ವರ್ಥಕವಾಗಿ 'ಮುಂಡರಿಗೆ' ಅಂದರೆ ತಲೆಬೋಳಿಸಿಕೊಂಡ ಸನ್ಯಾಸಿಗಳಿಗೆ ಮಾಡಿದ ಉಪದೇಶವು. ಇದು ವಿಷಯದೃಷ್ಟಿಯಿಂದ 'ಸಂನ್ಯಾಸೋಪನಿಷತ್ತು' ಗಳ ಗುಂಪಿಗೆ ಸೇರತಕ್ಕದ್ದು. ಎಲ್ಲ ಉತ್ತಮೋತ್ತಮ ವಿಚಾರಗಳನ್ನು ಒಂದೆಡೆಗೆ ಸೇರಿಸಬೇಕೆಂಬ ಹಂಬಲವು ಈ ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಕಂಡುಬರುವುದು. ಯಜ್ಞಯಾಗಾದಿಗಳನ್ನು ಕುರಿತು ಈ ಉಪನಿಷತ್ತು ಸ್ವಲ್ಪ ಸಂಧಿಗ್ಧವಾದ ಅಭಿಪ್ರಾಯವನ್ನೇ ಹೇಳುವದು. ಇದರಲ್ಲಿಯ ವಿಶ್ವೋತ್ಪತ್ತಿಯ ವಿಚಾರಗಳು ಸಾಂಖ್ಯ ಮತ್ತು ವೇದಾಂತದರ್ಶನಗಳ ತತ್ವಗಳಿಂದ ತುಂಬಿ ತುಳುಕುತ್ತಿವೆ. ಇದರಲ್ಲಿಯ ಅಧ್ಯಾತ್ಮಕ್ಕೆ ವೈದಿಕವಿಚಾರಗಳೇ ಮೂಲಾಧಾರವಿದ್ದು ಯಜ್ಞವಿಧಿಗಳ ಛಾಯೆಯು ಅವುಗಳ ಮೇಲೆ ಕೊಂಚಬಿದ್ದಿದೆ. ಆದರೆ ನಮ್ಮಲ್ಲಿ ಪ್ರಸುಪ್ತವಿರುವ ಅಧ್ಯಾತ್ಮದ ಹಸಿವನ್ನು ಜಾಗೃತಗೊಳಿಸಲಿಕ್ಕೆ ಇದರಂಥ ಇನ್ನೊಂದು ಉಪನಿಷತ್ತೇ ಇಲ್ಲ.

ಶ್ವೇತಾಶ್ವತರೋಪನಿಷತ್ತು ಶೈವಮತಪೋಷಕವಿದ್ದಂತೆ ತೋರುತ್ತಿದೆ. ಈ ಉಪನಿಷತ್ತಿನ ಸ್ವಾಭಾವಿಕ ಕೊನೆಯಾದರೂ ಮೊದಲನೆಯ ಅಧ್ಯಾಯದ ಅಂತ್ಯಕ್ಕೆಯೇ ಇದ್ದಂತೆ ಕಾಣುತ್ತಿದೆ. ಅಧ್ಯಾಯದ ಕೊನೆಗಿರುವ ಪುನರುಕ್ತಿಯೇ ಇದಕ್ಕೆ ಸಾಕ್ಷಿ. ಮುಂದಿನ

ಅಧ್ಯಾಯುಗಳಿಲ್ಲ ಆ ಮೇಲೆ ಜೋಡಿಸಲ್ಪಟ್ಟಿರಬಹುದು. ಮೊದಲನೆಯ ಅಧ್ಯಾಯದಲ್ಲಿ ಎಲ್ಲ ತತ್ವಜ್ಞಾನವನ್ನು ಮತ್ತು ಆ ಕಾಲದ ಅಧ್ಯಾತ್ಮ ಕಲ್ಪನೆಗಳನ್ನು ಸಹ ಉಪನಿಷತ್ಕಾರರು ಕೆಲಮಟ್ಟಿಗೆ ಟೀಕಿಸಿ ಆಮೇಲೆ ‘ ಭೋಕ್ತಾ, ಭೋಗ್ಯ ಮತ್ತು ಪ್ರೇರಿತಾ ಎಂದು ಮೂರು ವಿಧವಿದ್ದು ಏಕರೂಪವಾಗಿರುವ ಪರಶಿವನ’ ಪ್ರತಿಪಾದನೆಯನ್ನು ಮಾಡಿರುವರು. ೨ನೆಯ ಅಧ್ಯಾಯದಲ್ಲಿ ಪ್ರಸಿದ್ಧವಾದ ಯೋಗಸಾಧನದ ವರ್ಣನೆಯಿರುವದು. ಮೂರು ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಶೈವ ಮತ್ತು ಸಾಂಖ್ಯ ತತ್ವಗಳ ಚರ್ಚೆ ಇರುವದು. ಐದನೆಯ ಅಧ್ಯಾಯದ ೨ನೆಯ ಮಂತ್ರದಲ್ಲಿರುವ ‘ ಕಪಿಲ ’ ಶಬ್ದದ ಅರ್ಥವು ವಾದಗ್ರಸ್ತವಿರುವದು. ಆರನೆಯ ಅಧ್ಯಾಯವು ಮಾತ್ರ ಸಾಂಪ್ರದಾಯವಿರಹಿತವಿದ್ದು ಒಂದೇ ಪರಮಾತ್ಮನ ಆಸ್ತಿಕ್ಯವನ್ನು ಪ್ರತಿಪಾದಿಸಿ ಗುರುಭಕ್ತಿಯು ದೇವಭಕ್ತಿಯಷ್ಟೇ ಮಹತ್ವದ್ದೆಂದು ಹೇಳಿರುವದು. ಇದರ ಜೋಡಿಯ ಇತರ ಉಪನಿಷತ್ತುಗಳಂತೆಯೆ ಇದಾದರೂ ಸಾಂಖ್ಯ ಮತ್ತು ವೇದಾಂತ ತತ್ವಜ್ಞಾನಗಳು ಇನ್ನೂ ಒಂದರಲ್ಲೊಂದು ಬೆರೆತಿರುವಾಗಲೇ ಬರೆಯಲ್ಪಟ್ಟಿರುವುದು. ಸಾಂಖ್ಯರು ಇನ್ನೂ ಪರಮಾತ್ಮನ ಕರ್ತೃತ್ವವನ್ನು ನಿರಾಕರಿಸಿರಲಿಲ್ಲವೆಂಬದು ೬ನೆಯ ಅಧ್ಯಾಯದ ೧೦ನೆಯ ಮಂತ್ರದ ಮೇಲಿಂದ ಗೊತ್ತಾಗುವದು. ಸಾಂಖ್ಯರ ಪ್ರಕೃತಿಯು ತನ್ನ ರೂಪವನ್ನು ಪಲ್ಲಟಿಸಿ ವೇದಾಂತದಲ್ಲಿ ‘ಮಾಯಾ’ ರೂಪದಿಂದ ಇನ್ನೂ ಅವತರಿಸಿರಲಿಲ್ಲವೆಂದು ತೋರುತ್ತದೆ. ೪ನೆಯ ಅಧ್ಯಾಯದ ೫ನೆಯ ಮಂತ್ರದಲ್ಲಿ ಹೇಳಿದ ತ್ರಿಗುಣಗಳು ಸಾಂಖ್ಯ ಮತ್ತು ವೇದಾಂತ ಈ ಎರಡೂ ತತ್ವಜ್ಞಾನಗಳಿಗೆ ಇನ್ನೂ ಸಾಮಾನ್ಯವಾಗಿದ್ದುವು. ಅವುಗಳ ಮೂಲ ಉತ್ಪತ್ತಿಯನ್ನು ನಾವು ಛಾಂದೋಗ್ಯದ ೬ನೆಯ ಅಧ್ಯಾಯದ ೪ನೆಯ ಖಂಡದಲ್ಲಿ ಓದಬಹುದು. ಇಂದ್ರಿಯಗಳದ್ವಾರಾ ಆಗುವ ವಸ್ತುಜ್ಞಾನವು ಬಾಹ್ಯವಸ್ತುಗಳ ಮೂಲಕ ಆಗದೆ ಕೇವಲ ಆತ್ಮಗತವಿರುವದೆಂಬ ತತ್ವವೇ ಸಾಂಖ್ಯ ಮತ್ತು ವೇದಾಂತ ದರ್ಶನಗಳು ಬೇರೆಬೇರೆಯಾಗಲಿಕ್ಕೆ ಮುಖ್ಯಕಾರಣವು. ಆ ತತ್ವವನ್ನು ಸಾಂಖ್ಯರು ಇನ್ನೂ ಅಷ್ಟೊಂದು ದೃಢವಾಗಿ ಪ್ರತಿಪಾದಿಸಿದ್ದಿಲ್ಲ. ಸೃಷ್ಟಿವಿಕಾಸದ ತತ್ವವು ೫ನೆಯ ಅಧ್ಯಾಯದ ೫ನೆಯ ಮಂತ್ರದಲ್ಲಿ ಹೇಳಲ್ಪಟ್ಟಿದ್ದರೂ ಇನ್ನೂ ಆ ತತ್ವದ ಪೂರ್ಣ ಪ್ರತಿಪಾದನವು ಆಗಿದ್ದಿಲ್ಲ. ಸಾಂಖ್ಯರ ಮಾನಸಶಾಸ್ತ್ರ ಮತ್ತು ಅಧ್ಯಾತ್ಮ ಇವು ಇನ್ನೂ ಪರಿಣತ ಸ್ಥಿತಿಯನ್ನು ಹೊಂದಿರಲಿಲ್ಲ ಮತ್ತು ಅವು ವೇದಾಂತ ತತ್ವಗಳಿಂದ ಒಡೆದು ಬೇರೆಯಾಗಿರಲಿಲ್ಲ. ಈ ಎಲ್ಲ ಕಾರಣಗಳ ಮೂಲಕವೇ ಸಾಂಖ್ಯ ಮತ್ತು ವೇದಾಂತ ದರ್ಶನಗಳು ಮುಂದೆ ಹೇಗೆ ಬೇರೆಬೇರೆಯಾದವು ಇದನ್ನು ಅಭ್ಯಸಿಸುವದಿದ್ದರೆ ಈ ಎರಡು ದರ್ಶನಗಳಲ್ಲಿ ಹೇಳಿದ ವಿಶ್ವೋತ್ಪತ್ತಿ, ಮಾನಸಶಾಸ್ತ್ರ ಮತ್ತು ಅಧ್ಯಾತ್ಮ ಇವು ಯಾವುದರಲ್ಲಿ ಒಂದಕ್ಕೊಂದು ಜೆಸೆದಂತೆ ಅಡಕವಾಗಿರುವವೋ ಆ ಶ್ವೇತಾಶ್ವತರವನ್ನು ನೋಡುವದು ಬಹಳೇ ಮಹತ್ವದ್ದಿರುವದು.

**೧೩. ಪ್ರಶ್ನ, ಮೈತ್ರಿ ಮತ್ತು ಮಾಂಡೂಕ್ಯ—** ಉಪನಿಷದ್ವಾಙ್ಮಯದ ಇತಿಹಾಸದಲ್ಲಿ ಪ್ರಶ್ನೋಪನಿಷತ್ತು ಬಹಳೇ ಇತ್ತೀಚೆಗಿನದೆಂಬದು ಸ್ಪಷ್ಟವಿದೆ. ಇಷ್ಟು ಪೂರ್ವಾಲೋಚನೆಯಿಂದ ಸುಬದ್ಧವಾಗಿ ಬರೆದ ಉಪನಿಷತ್ತು ಇನ್ನೊಂದಿಲ್ಲವೆಂದರೂ ಸಲ್ಲುವದು. ಈ ಉಪನಿಷತ್ತಿನಲ್ಲಿ ಆರುಜನ ಬ್ರಹ್ಮಪರರಾದ ಋಷಿಗಳು ಜ್ಞಾನಾರ್ಥವಾಗಿ ಪಿಪ್ಪಲಾದ ಮುನಿಯ ಕಡೆಗೆ ಹೋಗುವರು. ಅವರಲ್ಲಿ ಕೊನೆಯವನು ಮೊದಲನೆಯ ಪ್ರಶ್ನೆಯನ್ನು ಕೇಳುವನು. ಮುಂದಿನ ಪ್ರಶ್ನೆಗಳ ಕ್ರಮವಾದರೂ ಪಿಪ್ಪಲಾದನ ಬಾಯಿಂದ ಬರುವ ಎಲ್ಲ ಉತ್ತರಗಳ ಸಾರವನ್ನು ತೆಗೆದರೆ ಅದೊಂದು ಸಂಪೂರ್ಣ ತತ್ವದರ್ಶನವೇ ಆಗುವಂತೆ ಇರುವದು. ಆ ದರ್ಶನದ ವಿಚಾರವನ್ನು ಮುಂದೆ ಮಾಡುವ. ಈ ಉಪನಿಷತ್ತಿನ ಸ್ವರೂಪ, ಶೈಲಿ, ವಿವೇಚನಪದ್ಧತಿ, ಮುಂತಾದವುಗಳೆಲ್ಲ ಅರ್ವಾಚೀನವೆಂದು ಇಲ್ಲಿ ಹೇಳಿದರೆ ಸಾಕು.

ಮೈತ್ರ್ಯುಪನಿಷತ್ತಿನಲ್ಲಿಯ ಶಬ್ದಸಂಗ್ರಹ, ಸಂದರ್ಭ ಮುಂತಾದವುಗಳು ವಿಶಿಷ್ಟತರ ಹದ್ದಾಗಿರುವದರಿಂದ ಅದು ಉಪನಿಷತ್ತುಗಳಲ್ಲಿ ಬಹಳ ಮಹತ್ವವುಳ್ಳದ್ದು. ಇದರಲ್ಲಿಯ ಅಧ್ಯಾಯಗಳನ್ನು ವಿಂಗಡಿಸಿ ಮೊದಲನೆಯ ನಾಲ್ಕರದೊಂದು ಭಾಗ, ಮುಂದಿನ ಮೂರರದೊಂದು ಭಾಗ ಹೀಗೆ ವಿಭಾಗಿಸಬಹುದು. ಮೊದಲನೆಯ ನಾಲ್ಕು ಅಧ್ಯಾಯಗಳೇ ಹೆಚ್ಚು ಪ್ರಾಚೀನವಿರುವದರಿಂದ ಅವೇ ನಮಗೆ ಪ್ರಸ್ತುತಕಾರ್ಯದಲ್ಲಿ ಉಪಯುಕ್ತವೆಂದು ಹೇಳಬಹುದು. ಕೊನೆಯ ಮೂರು ಅಧ್ಯಾಯಗಳಲ್ಲಿ ಶನಿ, ರಾಹು, ಕೇತು ( ಪ್ರ ೪, ಮಂ ೬. ) ನಾಸ್ತಿಕವಾದಿಯಾದ ಬೃಹಸ್ಪತಿ ( ಪ್ರ ೭, ಮಂ ೯. ) ಅಷ್ಟಾಂಗ ಯೋಗದಂತೆಯೇ ಇರುವ ಷಡಂಗಯೋಗ ( ಪ್ರ ೬, ಮಂ ೧೮. ) ಈ ಮುಂತಾದವುಗಳ ಉಲ್ಲೇಖವಿರುವದು. ಉಪನಿಷತ್ತುಗಳಲ್ಲಿಯ ಪ್ರಾಚೀನ ತತ್ವಜ್ಞಾನವನ್ನಷ್ಟೇ ತನ್ನ ವಿಷಯವಾಗಿಟ್ಟುಕೊಂಡ ಈ ಉಪನಿಷತ್-ರಹಸ್ಯದಲ್ಲಿ ನಾವು ಆ ಮೊದಲನೆಯ ನಾಲ್ಕು ಅಧ್ಯಾಯಗಳನ್ನು ನೋಡಿದರೆ ಸಾಕು. ವಾಡಿಕೆಯಾಗಿ ಉಪನಿಷತ್ತುಗಳಲ್ಲಿ ಎಲ್ಲಿಯೂ ಕಾಣದೆ ಇರುವ, ಸಂಸಾರವು ದುಃಖಮಯವು ಎಂಬ ನಿರಾಶಾವಾದವು ಸಾಂಖ್ಯ ಮತ್ತು ಬೌದ್ಧ ದರ್ಶನಗಳ ವರ್ಚಸ್ಸಿಗೆ ಒಳಗಾದ ಬೃಹದ್ರಥರಾಜನಿಂದ ಇಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಈ ಅರಸನು ಜ್ಞಾನಾರ್ಥವಾಗಿ ಶಾಕ್ಯಾಯನ ಮುನಿಯ ಕಡೆಗೆ ಹೋದನು. ಈ ಉಪನಿಷತ್ತಿನಲ್ಲಿಯ ತತ್ವಜ್ಞಾನವನ್ನು ಪ್ರಚುರಗೊಳಿಸಿದ ಮೈತ್ರೀ ಋಷಿಯು ಹೇಳಿದ್ದನ್ನೇ ನಾನು ನಿನಗೆ ಹೇಳುವೆನೆಂದು ಶಾಕ್ಯಾಯನನು ಅವನಿಗೆ ಉಪದೇಶಮಾಡಿದನು. ಈ ದೇಹದಲ್ಲಿ ಸ್ವಯಂ ಪ್ರಕಾಶಿಯಾದ ಕೂಟಸ್ಥ ಆತ್ಮನು ಮತ್ತು ಪುಣ್ಯಾಪಾಪಗಳಿಗೆ ಈಡಾದ, ಪುನರ್ಜನ್ಮಕ್ಕೆ ಒಳಗಾದ ಭೂತಾತ್ಮನು ಹೀಗೆ ಎರಡು ವಸ್ತುಗಳಿರುವವೆಂದು ಋಷಿಯು ಮೊದಲು ಹೇಳಿ

ದನು. ಈ ಉಪನಿಷತ್ತಿನಲ್ಲಿ ಬಂದಿರುವ ತಾಮಸ ಮತ್ತು ರಾಜಸಗುಣಗಳ ವರ್ಣನೆಯು ಭಗವದ್ಗೀತೆಯಲ್ಲಿರುವ ಪ್ರತಿಪಾದನೆಯ ಪೂರ್ವರೂಪವೋ ಏನೋ ತಿಳಿಯದು. ಆದರೆ ತಾಮಸಗುಣಗಳಲ್ಲಿ ಮೋಹ, ಭಯ, ವಿಸ್ಮೃತಿ, ನಿದ್ರೆ, ಆಲಸ್ಯ, ನೋವು, ಮುಪ್ಪು, ದುಃಖ, ಹಸಿವೆ, ನೀರಡಿಕೆ, ಲೋಭ, ಕ್ರೋಧ, ನಾಸ್ತಿಕಭಾವ, ಅಜ್ಞಾನ, ಮತ್ಸರ, ಕ್ರೌರ್ಯ, ಪ್ರಮಾದ, ನಿರ್ಲಜ್ಜತೆ, ದುಷ್ಟತನ, ಗರ್ವ, ಮತ್ತು ಚಾಂಚಲ್ಯ ಈ ಮುಂತಾದವುಗಳು ವಿವರಿಸಲ್ಪಟ್ಟಿವೆ. ರಾಜಸಗುಣಗಳಲ್ಲಿ ಕಾಮ, ವಾತ್ಸಲ್ಯ, ಆಸಕ್ತಿ, ಆಶೆ, ಅಪಕೃತಿ, ಪ್ರೇಮ, ಕಾಂಕ್ಷೆ, ಚಟುವಟಿಕೆ, ಸ್ಪರ್ಧೆ, ಅಶಾಂತಿ, ಚಾಪಲ್ಯ, ಅಸ್ಥೈರ್ಯ, ಲಾಲಸೆ, ಪಕ್ಷಪಾತ, ರಾಗ, ದ್ವೇಷ ಈ ಮುಂತಾದವುಗಳ ಹೆಸರುಗಳು ಇರುವವು ( ಪ್ರ ೩, ಮಂ ೫. ). ಕೂಟಸ್ಥ ಆತ್ಮನ ಮತ್ತು ಭೂತಾತ್ಮನ ವರ್ಣನೆಗಳು ಈ ಉಪನಿಷತ್ತಿನಲ್ಲಿ ಬಹಳೇ ಮನೋವೇಧಕವಿರುವವು. ೨ನೆಯ ಪ್ರಪಾಠಕದಲ್ಲಿ ( ಪ್ರ ೨, ಮಂ ೬. ) ಕುಂಬಾರನು ಕುಲಾಲ ಚಕ್ರದ ಪ್ರೇರಕನಿರುವಂತೆ ಕೂಟಸ ಆತ್ಮನೇ ದೇಹದ ಪ್ರೇರಕನು, ಜ್ಞಾನೇಂದ್ರಿಯಗಳೇ ಕಡಿವಾಣ, ಕರ್ಮೇಂದ್ರಿಯಗಳೇ ಕುದುರೆಗಳು, ದೇಹವೇ ರಥವು, ಮನಸೇ ರಥಿಕನು, ಸ್ವಭಾವವೇ ಚಬಕವು ಎಂದು ವರ್ಣನೆಯಿದೆ. ಆದರೆ ನಾಲ್ಕನೆಯ ಪ್ರಪಾಠಕದಲ್ಲಿ (ಪ್ರ ೪, ಮಂ ೨.) ಭೂತಾತ್ಮನು ಪುಣ್ಯಪಾಪಗಳೆಂಬ ಸಂಕೋಲೆಗಳಿಂದ ಬದ್ಧನು, ಸೆರೆಮನೆ ಸೇರಿದವನಂತೆ ಕಟ್ಟಲ್ಪಟ್ಟವನು, ಯಮನ ಕೈಗೆ ಸಿಕ್ಕವನಂತೆ ಭಯಭೀತನು, ಮದ್ಯದಿಂದ ಉನ್ಮತ್ತನಾದವನಂತೆ ಇಂದ್ರಿಯ ಸುಖಗಳಿಂದ ಮೋಸಹೋದವನು, ಭೂತಬಾಧೆಯಾದವನಂತೆ ಹರಿಹಾಯುವವನು, ಸರ್ಪಕಚ್ಚಿದವನಂತೆ ದುಃಖದಿಂದ ವಿಹ್ವಲನು, ಕಗ್ಗತ್ತಲೆಯಿಂದ ಮುಸುಕಿದವನಂತೆ ಆಸಕ್ತಿಯಿಂದ ಮುಗ್ಧನು, ಇಂದ್ರಜಾಲದಿಂದ ಠಕ್ಕಿಸಿಕೊಂಡವನಂತೆ ಮಾಯೆಯಿಂದ ಮೋಹಿತನು, ಕನಸಿನಂತೆ ಅಸತ್ಯನು, ಬಾಳೆಯ ದಿಂಡಿನಂತೆ ಅಸಾರನು, ಬಹುರೂಪಿಯಂತೆ ವೇಷವನ್ನು ಕಾಲಕಾಲಕ್ಕೆ ಬದಲುಮಾಡುವವನು, ಬಣ್ಣಹಚ್ಚಿದ ಗೋಡೆಯಂತಿರುವ ಸುಳ್ಳುಸುಖಗಳಲ್ಲಿ ನಿಮಗ್ನನು, ಎಂದು ವರ್ಣನೆಯಿರುವದು. ಮುಂದೆ ಆರನೆಯ ಪ್ರಪಾಠಕದ ೧೪-೧೬ ಮಂತ್ರಗಳಲ್ಲಿ ಸೂರ್ಯಸರ್ವೋತ್ತಮತ್ವವೂ ಕೆಲವು ಜ್ಯೋತಿಷ ವಿಷಯಕ ಕಲ್ಪನೆಗಳೂ ಇರುವವು. ಏಳನೆಯ ಅಧ್ಯಾಯದ ೮ ನೆಯ ಮಂತ್ರದಲ್ಲಿ 'ಅವಾಕ್' ಇದೇ ಶ್ರೇಷ್ಠವೆಂದು ಪ್ರತಿಪಾದನೆಯಿದ್ದು ವಾಕ್—ಅವಾಕ್‌ಗಳ ತತ್ವವೂ ಯಾವಾಗಲೂ ಉಲ್ಲಾಸಿ ಇರುವವರ, ಭಿಕ್ಷುಕರ, ಕೈಗಾರಿಕೆಯಿಂದುಪಜೀವಿಸುವವರ, ಅಪಾತ್ರರಿಗಾಗಿ ಯಜ್ಞಮಾಡುವವರ, ವೇದಾಧ್ಯಯನ ಮಾಡುವ ಶೂದ್ರರ, ಜಟಾಧಾರಿ ಡಂಭಕರ, ನರ್ತಕರ, ಸ್ವಾರ್ಥೀ ಊಳಿಗರ, ಜಿದ್ದುಕಟ್ಟಿ ಹೋರಾಡುವವರ, ಯಾಚಕರ, ನಟರ, ರಾಜಕಾರ್ಯದಿಂದ ತಳ್ಳಲ್ಪಟ್ಟವರ, ಭೂತಪಿಶಾಚಿಗಳನ್ನು ಬಿಡಿಸುವೆನೆಂದು ಡಂಭಮಾಡುವವರ,

ಕೆಂಪುತೊಡಿಗೆ ಬಾವುಲಿ ತಲೆಬುರುಡೆ ಮುಂತಾದವುಗಳನ್ನು ಧರಿಸುವವರ ಮತ್ತು ವೇದದಲ್ಲಿರುವ ನಮ್ಮ ಶ್ರದ್ಧೆಯನ್ನು ಕುತರ್ಕಗಳಿಂದ ಅಳಿಸಲಿಚ್ಛಿಸುವವರ ಸಂಗತಿಯನ್ನು ಎಂದಿಗೂ ಮಾಡಬಾರದೆಂಬ ಉಪದೇಶವೂ ಹೇಳಲ್ಪಟ್ಟಿದೆ. ಆರನೆಯ ಪ್ರಪಾಠಕದ ೧೪–೨೧ ಮಂತ್ರಗಳಲ್ಲಿ ನಾಲಿಗೆಯತುದಿಯನ್ನು ಅಂಗಳಕ್ಕೆ ಹಚ್ಚುವದು, ಪ್ರಾಣವಾಯುವನ್ನು ಸುಷುಮ್ನಾ ನಾಡಿಯೊಳಗಿಂದ ಹಾಯಿಸುವದು, ಮುಂತಾದ ಹಠಯೋಗದ ಕೆಲವು ಕೃತಿಗಳು ವರ್ಣಿಸಲ್ಪಟ್ಟಿವೆ. ಕೊನೆಗೆ ಆರನೆಯ ಪ್ರಪಾಠಕದ ೨೨ನೆಯ ಮಂತ್ರದಲ್ಲಿ ಧ್ಯಾನಮಗ್ನರಾದಾಗ ಯೋಗಿಗಳಿಗೆ ಕೇಳಿಸುವ ನದಿಪ್ರವಾಹ, ಘಂಟೆ, ಕಂಚಿನಪಾತ್ರೆ, ಘಾಲಿ, ಕಪ್ಪೆಯ ಚೀರು, ಮಳೆ, ಮತ್ತು ಕೊನೆಗೆ ನಿರ್ಜನವಾದ ಏಕಾಂತದಲ್ಲಿ ಕೇಳಬರುವ ಅವರ್ಣನೀಯವಾದ ಒಂದು ಧ್ವನಿ, ಹೀಗೆ ಏಳು ನಾದಗಳು ಹೇಳಲ್ಪಟ್ಟಿವೆ.

ಮಹಾಪ್ರಸಿದ್ಧವಾದ ಈ ಹದಿಮೂರು ಉಪನಿಷತ್ತುಗಳಲ್ಲಿ ಮಾಂಡೂಕ್ಯವು ಕೊನೆಯದೆಂದು ಹೇಳಬಹುದು. ಇದರಲ್ಲಿ ವೇದಾಂತ ತತ್ವಜ್ಞಾನದ ಅಡಿಗಲ್ಲುಗಳು ಸ್ಪಷ್ಟವಾಗಿ ಕಾಣುತ್ತಿವೆ. ಓಂ ಎಂಬ ಮಂತ್ರವನ್ನು ಮೂರು ಮಾತ್ರೆಗಳಾಗಿ ವಿಭಾಗಿಸಿ ' ಅಮಾತ್ರ ' ವೆಂಬ ನಾಲ್ಕನೆಯದೊಂದು ಮಾತ್ರೆಯನ್ನು ಅವುಗಳಿಗೆ ಜೋಡಿಸಿ ಈ ನಾಲ್ಕು ಮಾತ್ರೆಗಳಿಗೆ ತುಲ್ಯವಾಗಿರುವ ನಾಲ್ಕು ಚಿತ್‌ಸ್ಥಿತಿಗಳಿರುವವೆಂದೂ ಆಯಾ ಚಿತ್‌ಸ್ಥಿತಿಗಳಲ್ಲಿರುವ ಆತ್ಮನು ಆಯಾ ವಿಶಿಷ್ಟ ಸ್ಥಿತಿಯ ಅಹಂಕಾರಿಯಾಗಿದ್ದು ವಿಶಿಷ್ಟ ವ್ಯಾಪಾರಗಳನ್ನು ಮಾಡುವನೆಂದೂ ಈ ಉಪನಿಷತ್ತಿನಲ್ಲಿ ವರ್ಣನೆಯಿದೆ. ಜಾಗ್ರತ್, ಸ್ವಪ್ನ, ಸುಷುಪ್ತಿ, ಮತ್ತು ಅನಿರ್ವಚನೀಯವಾದ ತುರೀಯ ಎಂಬ ನಾಲ್ಕು ಚಿದವಸ್ಥೆಗಳನ್ನು ವರ್ಣಿಸಿರುವದೇ ಈ ಉಪನಿಷತ್ತಿನ ವಿಶೇಷವು. ಪರಮಾತ್ಮನ ಕೆಲವೊಂದು ಅಂಗಗಳು ಈ ಚಿದವಸ್ಥೆಗಳಿಗೆ ಅನುರೂಪವಿರುವವೆಂದೂ ಆ ಅವಸ್ಥೆಗಳಲ್ಲಿ ಕೊನೆಯದೊಂದೇ ಸತ್ಯ ಮತ್ತು ಸನಾತನವಾದುದೆಂದೂ ಇಲ್ಲಿ ಪ್ರತಿಪಾದನೆಯಿರುವದು. ಆದರೆ ತತ್ವಜ್ಞಾನದಲ್ಲಿ ಪ್ರತಿಪಾದಿಸಲ್ಪಟ್ಟ ಕೇವಲಾತ್ಮನು ಈ ಬಗೆಯ ದೇವರ ಕಲ್ಪನೆಗಳಿಗಿಂತಲೂ ಆಚೆಗಿರುವನು.

**೧೪. ಉಪನಿಷತ್ತುಗಳಲ್ಲಿಯ ವಿವೇಚನ ಪದ್ಧತಿಗಳು**— ಇದುವರೆಗೆ ಉಪನಿಷತ್ತುಗಳಲ್ಲಿ ಚರ್ಚಿಸಿದ ವಿಷಯಗಳನ್ನು ನೋಡುವದಾಯಿತು. ಇನ್ನು ಅವುಗಳಲ್ಲಿ ಉಪಯೋಗಿಸಲ್ಪಟ್ಟ ವಿವೇಚನಪದ್ಧತಿಯನ್ನು ಕುರಿತು ವಿಚಾರಿಸುವ. ಎಲ್ಲವುಗಳಲ್ಲಿ ಒಂದೇ ಪದ್ಧತಿಯು ಅನುಸರಿಸಲ್ಪಟ್ಟಿಲ್ಲ. ಬೇರೆಬೇರೆ ಸಂದರ್ಭಗಳಲ್ಲಿ ಋಷಿಗಳು ಬೇರೆ ಬೇರೆ ಪದ್ಧತಿಗಳಿಂದ ತತ್ವವಿವೇಚನೆಯನ್ನು ಮಾಡಿರುವರು.

(೧) ಈ ಗ್ರಂಥಗಳಲ್ಲಿ ಅನೇಕ ಸಾರೆ 'ಮುಂಡಿಗೆ'ಗಳ ಪದ್ಧತಿಯು ಕಂಡುಬರುವುದು. ಶಾಂಡಿಲ್ಯನು ' ತಜ್ಜಲಾನ್ ' ಎಂಬ ಒಂದೇ ಸಂಕ್ಷೇಪಶಬ್ದದಿಂದ ಪರಮಾತ್ಮನೇ ಸಕಲ

ಜಗದುತ್ಪತ್ತಿಸ್ಥಿತಿಲಯಗಳ ಕಾರಣನೆಂದು ಹೇಳಿಬಿಟ್ಟಿರುವನು. ವಿದ್ಯೆ ಅವಿದ್ಯೆ, ಸಂಭೂತಿ ಅಸಂಭೂತಿಗಳನ್ನು ಕುರಿತು ಹೇಳಿದ ಮೂರು ಮೂರು ಪದ್ಯಗಳಲ್ಲಿ ಗರ್ಭಿತವಿರುವ ವಿರೋಧಾಭಾಸಯುಕ್ತವಾದ ಒಗಟುಗಳನ್ನು ಬಿಡಿಸುವದರಿಂದಲೇ ಸತ್ಯಸಾಕ್ಷಾತ್ಕಾರವಾಗುವದೆಂದು ಈಶಾವಾಸ್ಯದ ಋಷಿಯು ಹೇಳಿರುವನು. ಶ್ವೇತಾಶ್ವತರದ ಮೊದಲನೆಯ ಅಧ್ಯಾಯದ ನಾಲ್ಕನೆಯ ಮಂತ್ರವು ಈ ಪದ್ಧತಿಯ ಉತ್ತಮ ಉದಾಹರಣೆಯು. ಅಲ್ಲಿ ಸತ್ಯವೆಂದರೆ ಒಂದು ಚಕ್ರವನ್ನೆಲ್ಲ ಸುತ್ತಿಕೊಂಡ ಪರಿಘವು, ತ್ರಿಗುಣಗಳು ಅದರ ಹಳಿಗಳು, ೧೬ ಕಲೆಗಳು ಅದರ ಕೊನೆಗಳು, ಸಾಂಖ್ಯದಲ್ಲಿ ಹೇಳಿದ ೫೦ ಭಾವಗಳೇ ಅದರ ಅರಿಗಳು, ದಶೇಂದ್ರಿಯಗಳೂ ಅವುಗಳ ವಿಷಯಗಳೂ ಅದರ ಅಡ್ಡ ಹಲ್ಲುಗಳು, ಅಷ್ಟಧಾತುಗಳು, ಅಷ್ಟದೇವತೆಗಳು, ಅಷ್ಟಧಾಪ್ರಕೃತಿ ಮುಂತಾದ ೬ ಅಷ್ಟಕಗಳೇ ಅದರ ಅಷ್ಟಕಗಳು, ಒಂದೇ ವಿರಾಟರೂಪವೇ ಕಟ್ಟಿದ ಹಗ್ಗವು, ಪುಣ್ಯ ಪಾಪ ಮತ್ತು ಅವುಗಳಾಚೆಗಿನ ಮಾರ್ಗವು, ಅಥವಾ ನೀತಿ ಅನೀತಿ ಮತ್ತು ಅತೀತವೆಂಬವು ಅದರ ಮಾರ್ಗಗಳು, ಪುಣ್ಯಪಾಪಕರ್ಮಗಳಿಂದ ಮೋಹಿಸಿ ಅದು ಆತ್ಮಜ್ಞಾನವನ್ನು ಮಸಳಿಸಿ ಬಿಡುವಂತಹದು, ಎಂಬ ಮುಂತಾದ ಮುಂಡಿಗೆ ಇರುವದು. ಮುಂದೆ ಅದೇ ಅಧ್ಯಾಯದ ಐದನೆಯ ಮಂತ್ರದಲ್ಲಿ ನಿಸರ್ಗದ ವರ್ಣನೆಯು ಇನ್ನೊಂದು ಬಗೆಯಿಂದ ಮಾಡಲ್ಪಟ್ಟದೆ. ಅದೊಂದು ದೊಡ್ಡ ಸಾಗರವು, ಪಂಚೇಂದ್ರಿಯಗಳೇ ಅದಕ್ಕೆ ಬಂದು ಕೂಡುವ ನದಿಗಳು, ಅದನ್ನು ಕ್ರೂರ ಮತ್ತು ಕೊಂಕು ಮಾಡುವ ಪಂಚಭೂತಗಳೇ ಅದರ ಝರಿಗಳು, ಪಂಚಪ್ರಾಣಗಳೇ ಅದರ ಮೇಲೆ ನಲಿದಾಡುವ ತೆರೆಗಳು, ಅಂತಃಕರಣ ಪಂಚಕವೇ ಅದರ ಕಾರಂಜಿಯು, ಮನುಷ್ಯನನ್ನು ತೊಡಗಿಸುವ ಪಂಚವಿಷಯಗಳೇ ತಿರುಗಣಿಮಡುವುಗಳು. ಹುಟ್ಟು, ಇರುವಿಕೆ, ಬದಲಾಗುವಿಕೆ, ಅಧೋಗತಿ ಮತ್ತು ನಾಶ ಇವುಗಳಿಂದ ಆಗುವ ದುಃಖಗಳೇ ಐದು ಸೆಳವುಗಳು, ಸಾಂಖ್ಯರು ಹೇಳುವ ೫೦ ಭಾವಗಳಾಗಿ ಇದು ಒಡೆದು ಹರಿಯುವದು, ಹುಟ್ಟು, ಚಿಕ್ಕತನ, ತಾರುಣ್ಯ, ಮುಪ್ಪು ಮತ್ತು ಸಾವು ಈ ಐದು ಕಾಲಗಳಲ್ಲಿ ಇದಕ್ಕೆ ಉಕ್ಕುಬರುವದು, ಎಂದು ವರ್ಣನೆಯಿರುವದು. ತತ್ವಜ್ಞಾನದಲ್ಲಿ ಪ್ರಸಂಗವಶಾತ್ ಈ ಬಗೆಯ ಚಮತ್ಕಾರದ ಒಗಟುಗಳು ಇಲ್ಲದೆ ಹೋದರೆ ಅದು ಶುಷ್ಕವೂ ರಸಹೀನವೂ ಆಗುವದು. ಈ ಬಗೆಯ ಮುಂಡಿಗೆಗಳನ್ನು ಪ್ಲೇಟೋನು ಸಹ ಬರೆದಿರುವನು.

(೨) ಸೂತ್ರಗಳ ಮುಖಾಂತರವಾಗಿ ತತ್ವಗಳನ್ನು ಪ್ರತಿಪಾದಿಸುವದು ಎರಡನೆಯ ಪದ್ಧತಿ ಎಂದೆನ್ನಬಹುದು. ಮಾಂಡೂಕ್ಯದಲ್ಲಿ ಈ ಪದ್ಧತಿಯ ವಿವೇಚನೆಯಿರುವದು. ಮುಂದೆ ಬೇರೆಬೇರೆ ದರ್ಶನಗಳಾದರೂ ಈ ಪದ್ಧತಿಯಿಂದಲೇ ಪ್ರತಿಪಾದಿಸಲ್ಪಟ್ಟವು. ಅರ್ಥಗರ್ಭಿತವಾದ ಚಿಕ್ಕ ವಾಕ್ಯಗಳಲ್ಲಿ ಎಲ್ಲ ವಿಚಾರಗಳನ್ನು ತುಂಬುವದೇ ಈ

ಪದ್ಧತಿಯು ವಿಶೇಷವು. ಮುಂದೆ ಟೀಕಾಕಾರರು ಆ ಸೂತ್ರಗಳ ಅರ್ಥಕ್ಕಾಗಿ ಬೇಕಾದಷ್ಟು ತಲೆ ಕೆರಕೊಳ್ಳಬೇಕು. ಬೇರೆಬೇರೆ ಟೀಕಾಕಾರರು ವೇದಾಂತಸೂತ್ರಗಳಿಗೆ ಬೇರೆಬೇರೆ ಅರ್ಥಹಚ್ಚಿದ್ದಾದರೂ ಇದೇ ಕಾರಣದಿಂದಲೇ. ಮಾಂಡೂಕ್ಯದೊಳಗಣ ಒಂದು ವಾಕ್ಯವನ್ನು ಇಲ್ಲಿ ಉದಹರಿಸುವ. "ಇದ್ದದ್ದೆಲ್ಲ ಓಂ ಎಂಬ ಅಕ್ಷರವು. ಭೂತ ವರ್ತಮಾನ ಭವಿಷತ್‌ಕಾಲಗಳ ಸಂಗತಿಗಳೂ ಕಾಲಾತೀತವಾದ ಎಲ್ಲವುಗಳೂ ಅದರಲ್ಲಿ ಒಳಗೊಂಡಿವೆ. ನಿಜವಾಗಿ ಇವೆಲ್ಲವೂ ಬ್ರಹ್ಮವು. ಆತ್ಮವು ಬ್ರಹ್ಮವು. ಆತ್ಮನು ನಾಲ್ಕು ಪಾದಗಳುಳ್ಳವನು ಅಂದರೆ ನಾಲ್ಕು ಅವಸ್ಥೆಗಳುಳ್ಳವನು. ಜಾಗೃತ ಸ್ಥಿತಿಯಲ್ಲಿ ವೈಶ್ವಾನರನೆಂಬ ಹೆಸರು ತಾಳಿ ಸ್ಥೂಲಪದಾರ್ಥಗಳ ಉಪಭೋಗಮಾಡುವದು ಆತ್ಮನ ಮೊದಲನೆಯ ಅವಸ್ಥೆಯು. ಸ್ವಪ್ನಸ್ಥಿತಿಯಲ್ಲಿ ತೈಜಸನೆನಿಸಿಕೊಂಡು ಸೂಕ್ಷ್ಮಪದಾರ್ಥಗಳನ್ನುಣ್ಣುವದು ಆತ್ಮನ ಎರಡನೆಯ ಅವಸ್ಥೆಯು. ಸುಷುಪ್ತಿಯಲ್ಲಿ ಪ್ರಾಜ್ಞನೆಂಬ ನಾಮಧೇಯವನ್ನು ಪಡೆದು ಆನಂದವನ್ನನುಭವಿಸುವದು ಆತ್ಮನ ಮೂರನೆಯ ಅವಸ್ಥೆಯು. ತುರೀಯಾವಸ್ಥೆಯಲ್ಲಿ ಏಕಾಕಿಯೂ ಶಾಂತನೂ ಶಿವನೂ ಅದ್ವೈತನೂ ಆಗಿರುವದು ಆತ್ಮನ ನಾಲ್ಕನೆಯ ಅವಸ್ಥೆಯು." ಇದನ್ನು ನೋಡಿದರೆ ಈಗ ಪ್ರಚಲಿತವಿರುವ ಬೇರೆಬೇರೆ ವೇದಾಂತದ ಸಿದ್ಧಾಂತಗಳೆಲ್ಲ ಈ ಒಂದೇ ಸೂತ್ರವಾಕ್ಯದ ಟೀಕೆಗಳಿರುವವೆಂದರೂ ಸಲ್ಲುವದು.

(೩) ಶಬ್ದಗಳ ವ್ಯುತ್ಪತ್ತಿಯು ಮೂಲಕ ತತ್ವಪ್ರತಿಪಾದನೆ ಮಾಡುವದು ಮೂರನೆಯ ಪದ್ಧತಿಯು. ಬ್ರಾಹ್ಮಣರು ಬ್ರಾಹ್ಮಣ ಗ್ರಂಥಗಳಲ್ಲಿ ಈ ಪದ್ಧತಿಯನ್ನುಪಯೋಗಿಸುತ್ತಿದ್ದರು. ಉಪನಿಷತ್ಕಾರರು ಆ ವರ್ಚಸ್ಸಿಗೆ ಒಳಗಾಗಿ ಕೆಲವೆಡೆಗೆ ಈ ಪದ್ಧತಿಯನ್ನವಲಂಬಿಸಿರುವರು. ಛಾಂದೋಗ್ಯದಲ್ಲಿ (ಛಾಂ, ಅ ೬, ಖಂ ೮, ಮಂ ೧–೩.) 'ಸ್ವಪಿತಿ' (ಮಲಗುವನು) ಇದರ ವ್ಯುತ್ಪತ್ತಿಯನ್ನು 'ಸತಾ ಸಂಪನ್ನೋ ಭವತಿ' ಅಥವಾ 'ಸ್ವಮಪೀತೋ ಭವತಿ' ಹೀಗೆ ಹಚ್ಚಿ ಅದರ ಅರ್ಥವನ್ನು 'ತನ್ನಕೂಡ ತಾನೇ ಐಕ್ಯಹೊಂದುವನು,' ಎಂದು ಮಾಡಿರುವರು. 'ಅಶಿಶಿಷತಿ' (ತಿನ್ನುವನು) ಇದರ ವ್ಯುತ್ಪತ್ತಿಯನ್ನು 'ಅಪ ಏವ ತದಶಿತಮ್ ನಯತೇ' ಅಂದರೆ, ತಿಂದುದನ್ನು ನೀರು ಒಯ್ಯುವದು, ಹೀಗೆ ಹಚ್ಚಿರುವರು. 'ಪಿಪಾಸತಿ' (ನೀರಡಿಸುವನು) ಇದರ ವ್ಯುತ್ಪತ್ತಿಯನ್ನು 'ತೇಜ ಏವ ತತ್ಪೀತಮ್ ನಯುತೇ' ಅಂದರೆ ತೇಜವು ಕುಡಿದುದನ್ನು ಒಣಗಿಸುವದು, ಹೀಗೆ ಮಾಡಿರುವರು. ಬೃಹಾದಾರಣ್ಯಕದಲ್ಲಿ (ಬೃ, ಅ ೨, ಖಂ ೫, ಮಂ ೧೮.) 'ಪುರುಷ' ಇದರ ಅರ್ಥವನ್ನು 'ಪುರಿ ಶಯು' ಅಂದರೆ ಹೃದಯದಲ್ಲಿ ವಾಸಿಸುವವನು, ಎಂದು ಮಾಡಿರುವರು. ಮಾಂಡೂಕ್ಯದಂಥ ಇತ್ತೀಚೆಗಿನ ಉಪನಿಷತ್ತಿನಲ್ಲಿ ಕೂಡ (ಮಂತ್ರ ೯–೧೧) ಓಂಕಾರದ ಮೊದಲನೆಯ ಅಕ್ಷರವಾದ 'ಅ' ಅಂದರೆ ಪ್ರಾಪ್ತಿ, ಹೀಗೆ ಅರ್ಥ ಹಚ್ಚಿರುವರು. ಯಾಕಂದರೆ 'ಅ'

ಇದು ಆದಿಯನ್ನು ಸೂಚಿಸುವದು. 'ಉ' ಅಂದರೆ ಉತ್ಕರ್ಷ, ಯಾಕಂದರೆ ಅದರಿಂದ ಉಭಯತ್ವವು ಸೂಚಿತವಾಗುತ್ತಿದೆ. 'ಮ್' ಅಂದರೆ ಮಿತಿ ( ಅಳತೆ ), ಅಥವಾ ಅಪೀತಿ ( ನಾಶ ) ಎಂದು ಅರ್ಥವನ್ನು ಮಾಡಿರುವರು. ಆದರೆ ಇಂಥ ಗೊಂದಲಗೊಳಿಸುವ ಪದ್ಧತಿಯು ಉಪನಿಷತ್ತಿನಲ್ಲಿ ಕೇವಲ ಕೆಲವೆಡೆಗೆ ಮತ್ತು ಪ್ರಾಸಂಗಿಕವಾಗಿ ಮಾತ್ರ ಬರುವದೆಂಬದು ಸಮಾಧಾನದ ಸಂಗತಿಯು.

(೪) ಕಥಾನಕ ಪದ್ಧತಿಯು ಉಪನಿಷತ್ತುಗಳಲ್ಲಿ ಉಪಯೋಗಿಸಲ್ಪಟ್ಟ ನಾಲ್ಕನೆಯ ರೀತಿಯು. ಬೇರೆ ಬೇರೆ ನಾಲ್ಕು ಸಂದರ್ಭಗಳಲ್ಲಿ ಈ ಪದ್ಧತಿಯು ಉಪಯೋಗಿಸಲ್ಪಟ್ಟಿದೆ. ಮೊದಲನೆಯ ಸಂದರ್ಭವೆಂದರೆ, ಯಾವುದೊಂದು ನೀತಿಪಾಠವನ್ನು ಕಲಿಸುವಗೋಸುಗ. ಹೇಗಂದರೆ, ನಮ್ರತೆಯನ್ನು ಕಲಿಸುವದಕ್ಕಾಗಿ ಅಥವಾ ನಮ್ರನಿಲ್ಲದವನು ಬ್ರಹ್ಮನನ್ನು ತಿಳಿಯನು ಎಂಬುದನ್ನುಪದೇಶಿಸುವದಕ್ಕಾಗಿ ಕೇನೋಪನಿಷತ್ತಿನಲ್ಲಿ ಇಂದ್ರ ಮತ್ತು ಉಮೆಯ ಕಥೆಯು ಕೊಡಲ್ಪಟ್ಟಿದೆ. ಎರಡನೆಯ ಸಂದರ್ಭವೆಂದರೆ, ಕಾರಣಮೀಮಾಂಸೆ ಮಾಡುವಾಗ. ಅಸತ್‌ದಿಂದ ಸತ್, ಅದರಿಂದ ಮೂಲಬ್ರಹ್ಮಾಂಡ, ಅದರಿಂದ ಈ ವಿಶ್ವ ಹೀಗೆ ಉತ್ಪನ್ನವಾದವೆಂಬುದನ್ನುತೋರಿಸುವದಕ್ಕಾಗಿ ಬ್ರಹ್ಮಾಂಡದೊಳಗಿಂದ ಸೂರ್ಯನು ಹೊರಟನು ಎಂಬ ಕಥೆಯು ಹೇಳಲ್ಪಟ್ಟಿದೆ. ಮೂರನೆಯ ಸಂದರ್ಭವೆಂದರೆ, ಅತೀಂದ್ರಿಯ ವಿಷಯಗಳನ್ನು ಮನದಟ್ಟಾಗುವಂತೆ ಕಥಾನಕಗಳಿಂದ ತಿಳಿಸುವದು ಸಾಧ್ಯವು ಎಂಬುದನ್ನು ತೋರಿಸುವದಕ್ಕಾಗಿ. ಐತರೇಯದಲ್ಲಿ ಆತ್ಮನು ಮನುಷ್ಯನ ಶಿರದಲ್ಲಿ ಹೊಕ್ಕು ವ್ಯಕ್ತಿಯಾದನು, ಜೀವಾತ್ಮರೂಪವನ್ನು ಧರಿಸಿ ತನ್ನ ಮೂಲಸ್ಥಾನವನ್ನು ನಿರೀಕ್ಷಿಸಿ ತನ್ನ ಮನವರಿಕೆ ಮಾಡಿಕೊಂಡನು, ಎಂಬ ಕಥೆ ಇರುವದು. ಕೆಲವೊಂದು ಸಂಗತಿಗಳನ್ನು ಹೀಯಾಳಿಸುವದಕ್ಕಾಗಿ ಉಪನಿಷತ್ಕಾರರು ಒಮ್ಮೊಮ್ಮೆ ಕಥೆಯ ಉಪಯೋಗವನ್ನು ಮಾಡಿರುವರು. ಶ್ವಾನಗಳ ಉದ್ಗೀಥವೆಂಬ ನಮಗೆ ಈ ಮೊದಲೆ ಪರಿಚಿತವಿದ್ದ ಕಥೆಯು ಅದೇ ಮಾದರಿಯದಿರುವದು.

(೫) ಉಪಮೆಗಳ ಮುಖಾಂತರವಾಗಿ ಹೇಳುವ ಪದ್ಧತಿಯು ಐದನೆಯದು. ಉಪನಿಷತ್ತುಗಳಲ್ಲಿ ಇದು ಅನೇಕ ಕಡೆಗೆ ಕಂಡು ಬರುವದು. ಉದಾಹರಣಾರ್ಥವಾಗಿ, ಅಖಿಲ ಸೃಷ್ಟಿಯು ಆತ್ಮನಿಂದ ಹೊರಟಿರುವದು, ಅದರ ಜ್ಞಾನವನ್ನು ಪಡಕೊಂಡರೆ ಚರಾಚರವಸ್ತುಗಳ ಜ್ಞಾನವಾಗುವದು, ಎಂದು ತಿಳಿಹೇಳುವಾಗ ಯಾಜ್ಞವಲ್ಕ್ಯನು (ಬೃ,ಅ ೪,ಬ್ರಾ೫,ಮಂ ೮-೧೦) ದುಂದುಭಿ, ಶಂಖ ಮತ್ತು ವೀಣೆ ಇವುಗಳ ಉಪಮೆಯನ್ನು ಕೊಟ್ಟಿರುವನು. ಛಾಂದೋಗ್ಯದಲ್ಲಿ ( ಛಾಂ, ಅ ೬. ) ಜೀವಾತ್ಮ ಪರಮಾತ್ಮರ ಅಭೇದವನ್ನು ತೋರಿಸುವಾಗ ಅನೇಕ ಹೂಗಳ ತನಿರಸವು ಜೇನತುಪ್ಪದಲ್ಲಿ ಒಂದಾಗಿಹೋಗುವಂತೆ, ಅನೇಕ ನದಿಗಳು ಸಮುದ್ರದಲ್ಲಿ ಸೇರಿ ಸಾಗರಾಕಾರವಾಗುವಂತೆ, ನೀರಲ್ಲಿಟ್ಟ ಉಪ್ಪು ನೀರಲ್ಲಿ ಬೆರೆತು ಹೋಗುವಂತೆ, ಎಂಬ

ಮುಂತಾದ ಸುಂದರ ಉಪಮೆಗಳು ಬಂದಿರುವವು. ರುಕ್ಷವಾದ ಕಡುತರ್ಕದಿಂದ ಪಿವೇಚಿಸಲಿಕ್ಕೆ ಬಾರದ ಕೆಲ ಮಾತುಗಳನ್ನು ಋಷಿಗಳು ಈ ಪದ್ಧತಿಯಿಂದ ಹೇಳಲೆತ್ನಿಸಿರುವರು.

(೬) ಸಂವಾದಾತ್ಮಕ ಪದ್ಧತಿಯು ಆರನೆಯದು. ನಿಜವಾದ ಸಂವಾದವೆಂದರೆ ಒಬ್ಬರು ಕೇಳುವವರು ಇನ್ನೊಬ್ಬರು ಹೇಳುವವರು ಇರಬೇಕು. ಆ ಅರ್ಥದಿಂದಲೆ ಇಲ್ಲಿ 'ಸಂವಾದಪದ್ಧತಿ' ಎಂಬ ಶಬ್ದವು ಉಪಯೋಗಿಸಲ್ಪಟ್ಟದೆ. ಒಮ್ಮೊಮ್ಮೆ ಸಂವಾದಗಳ ಪರಿಣಾಮವು ವಿಪರೀತವಾಗುತ್ತಿತ್ತೆಂಬುದು ಜನಕರಾಜನ ಓಲಗದಲ್ಲಿ ನಡೆದ ಯಜ್ಞಕಾಲದಲ್ಲಿ ಯಾಜ್ಞವಲ್ಕ್ಯನಿಗೂ ಅವನಿಗೆ ಎದುರಾದ ಶಾಕಲ್ಯನಿಗೂ ಆದ ಸಂವಾದದಿಂದ ಗೊತ್ತಾಗುವದು. ಯಾಜ್ಞವಲ್ಕ್ಯನು ಸಿಟ್ಟಾಗಿ ಶಾಕಲ್ಯನಿಗೆ ಶಾಪ ಕೊಟ್ಟುದರಿಂದ ಅಲ್ಲಿ ಅನಾಹುತವೇ ಸಂಭವಿಸಿತು. ಶ್ರೇಷ್ಠನೆಂದು ಭಾವಿಸಲ್ಪಟ್ಟ ತತ್ವಜ್ಞನಿಗೆ ಯೋಗ್ಯ ಮಾನವನ್ನು ಕೊಟ್ಟು ಎಲ್ಲರೂ ವರ್ತಿಸದಿದ್ದರೆ ಸಂವಾದವು ಕೇವಲ ವಿತಂಡವಾದದಲ್ಲಿ ಪರಿಣಮಿಸಿ ಕದಾಚಿತ್ ಮೇಲಿನಂತೆ ದುಃಖಪರ್ಯವಸಾಯಿಯೂ ಆಗಬಹುದು.

(೭) ಇದಕ್ಕೆ ಪ್ರತಿಯಾಗಿ ಎಷ್ಟೋಕಡೆಗೆ ಸಮನ್ವಯ ಪದ್ಧತಿಯು ಕಂಡುಬರುವದು. ಎರಡನೆಯವರ ಮತಗಳನ್ನು ಖಂಡಿಸುವ ವಿಚಾರಮಾಡದೆ ಅವುಗಳನ್ನು ಒಂದಕ್ಕೊಂದು ಪೂರಕವಾಗುವಂತೆ ಮಂಡಿಸುವದೆ ಈ ಪದ್ಧತಿಯ ಮುಖ್ಯಲಕ್ಷಣವು. ಛಾಂದೋಗ್ಯದಲ್ಲಿ ವಿಶ್ವೋತ್ಪತ್ತಿಯನ್ನು ಬಗೆಬಗೆಯಿಂದ ಬಣ್ಣಿಸುವ ಆರು ತತ್ವಜ್ಞರ ಮತಗಳನ್ನು ಅಶ್ವಪತಿ ಕೈಕೇಯಿಯು ಉತ್ತಮವಾಗಿ ಸಮನ್ವಯಿಸುವನು. ಪ್ರಶ್ನೋಪನಿಷತ್ತಿನಲ್ಲಿ ಪಿಪ್ಪಲಾದನು ಆರು ಋಷಿಗಳ ಮನೋವಿಷಯಕ ಮತ್ತು ಆಧ್ಯಾತ್ಮಿಕ ಪ್ರಶ್ನೆಗಳನ್ನು ಇದೇ ರೀತಿಯಿಂದ ಜೋಡಿಸುವನು. ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ಜನಕರಾಯನು ಸೂಚಿಸಿದ ಆರು ಆಧ್ಯಾತ್ಮಿಕ ಮತಗಳನ್ನು ಯಾಜ್ಞವಲ್ಕ್ಯನು ಇದೇ ಪದ್ಧತಿಯಿಂದ ಹೊಂದಿಸುವನು. ಈ ಪದ್ಧತಿಯಲ್ಲಿ ಪ್ರತಿಸ್ಪರ್ಧಿಯ ಮತದ ಪೂರ್ಣ ಸ್ವಿಕಾರವೂ ಇರುವದಿಲ್ಲ ಅಥವಾ ಅದರ ಪೂರ್ಣ ಖಂಡನವೂ ಇರುವದಿಲ್ಲ. ಆದರೆ ಶ್ರೇಷ್ಠತರವಾದ ತತ್ವದೃಷ್ಟಿಯಿಂದ ಪರಮತಗಳನ್ನೆಲ್ಲ ಸಹಾನುಭೂತಿಪೂರ್ವಕವಾಗಿ ಸಮನ್ವಯಿಸುವುದೇ ಈ ಪದ್ಧತಿಯ ಮುಖ್ಯ ಲಕ್ಷಣವು.

(೮) ಮೇಲಿನ ಎರಡು ಪದ್ಧತಿಗಳಿಂದ ಭಿನ್ನವಾದ ಆತ್ಮಗತಸಂಭಾಷಣದ ಪದ್ಧತಿಯೊಂದು ಅಲ್ಲಲ್ಲಿ ಕಂಡುಬರುವದು. ಅಧ್ಯಾತ್ಮಜ್ಞಾನವನ್ನು ಎರಡನೆಯವರಿಗೆ ಕಲಿಸುವದೆಂದರೆ ಉಪನಿಷತ್ಕಾರರಿಗೆ ಬಲು ಜೀವದ ಮೇಲೆ ಬರುವದು. ಆದರೆ ಒಮ್ಮೆ ಅವರು ಕೇಳುವವರಿಗೆ ಯೋಗ್ಯ ಉತ್ತರವನ್ನು ಕೊಡತೊಡಗಿದರೆಂದರೆ ಮೈಮರೆತು ಆ ವಿಷಯದಲ್ಲಿ ತನ್ಮಯರಾಗಿ ಆತ್ಮಗತಭಾಷಣವನ್ನು ಆರಂಭಿಸುವರು. ಜನಕನ ಓಲಗದಲ್ಲಿ ನಡೆದ

ಯಜ್ಞಕಾಲದಲ್ಲಿ ಉದ್ದಾಲಕನ ಪ್ರಶ್ನೆಗೆ ಉತ್ತರ ಕೊಟ್ಟಮೇಲೆ (ಬೃ, ಅ ೩, ಬ್ರಾ ೭.) ಪರಮಾತ್ಮನ ಸರ್ವವ್ಯಾಪಕತ್ವವನ್ನು ಕುರಿತು ಯಾಜ್ಞವಲ್ಕ್ಯನು 'ಆತ್ಮಾಂತರ್ಯಾಮ್ಯಮೃತಃ' ಎಂಬ ಪಲ್ಲವಿಯಿಂದೊಡಗೂಡಿದ ಆತ್ಮಗತಭಾಷಣದಲ್ಲಿ ತಲ್ಲೀನನಾದನು. ಬೃಹದಾರಣ್ಯಕದಲ್ಲಿ (ಬೃ, ಅ ೪, ಬ್ರಾ ೩–೪.) ಜನಕನಕೂಡ ಆದ ತನ್ನ ಸಂಭಾಷಣದಲ್ಲಿ ಯಾಜ್ಞವಲ್ಕ್ಯನು ಆತ್ಮನ ಅಕ್ಷರತ್ವವನ್ನು ಕುರಿತು ಸ್ಫೂರ್ತಿಪ್ರವಾಹವನ್ನು ಹರಿಬಿಟ್ಟನು. ನಚಿಕೇತನ ಮೂರನೆಯ ಪ್ರಶ್ನೆಗೆ ಉತ್ತರವನ್ನು ಕೊಡಬಾರದೆಂದು ಯಮದೇವರ ಮನಸ್ಸಿನಲ್ಲಿ ಎಷ್ಟೇ ಇದ್ದರೂ ಒಮ್ಮೆ ಉತ್ತರಕೊಡಲಿಕ್ಕೆ ಪ್ರಾರಂಭಿಸಿದ ಮೇಲೆ ಕಠೋಪನಿಷತ್ತಿನಲ್ಲಿಯ ಯಮನ ಆ ಭಾಷಣವು ಪ್ರಸಂಗಕ್ಕೆ ಅವಶ್ಯವಿದ್ದ ಉತ್ತರದ ಮೇರೆಯನ್ನು ಮೀರಿ ಹರಿಯುವ ಹೆದ್ದೊರೆಯಂತೆ ಮನೋವೇಧಕವಾಗಿ ಕಂಗೊಳಿಸುತ್ತಿರುವುದು. ಈ ಋಷಿಗಳ ಗುಟ್ಟೇನಂದರೆ, ಇವರ ಅಂತಃಕರಣಕ್ಕೆ ಸಹಸಾ ಸೆಲೆ ಒಡೆಯುವದಿಲ್ಲ. ಆದರೆ ಒಮ್ಮೆ ಆ ಸೆಲೆ ಒಡೆಯಿತೆಂದರೆ ಅವರ ಅಮೋಘವಾದ ವಾಗ್ಝರಿಯು ನಲ್ನುಡಿಯ ನೀರುಣಿಸಿ ಎಲ್ಲರನ್ನು ತಣಿಸುವುದು.

(೯) ಇನ್ನೊಂದು ಪದ್ಧತಿಯೆಂದರೆ ವಿಶಿಷ್ಟ ಪ್ರಸಂಗದಲ್ಲಿ ಅಷ್ಟಕ್ಕಷ್ಟೇ ಅವಶ್ಯವಿದ್ದುದನ್ನು ಹೇಳುವದು. ಬಹುಶಃ ಶಿಷ್ಯನ ಅಧಿಕಾರವನ್ನು ನೋಡಿ ಆ ಕಾಲಕ್ಕೆ ಆಯಾ ಪ್ರಸಂಗದಲ್ಲಿ ಬೇಕಾದುದನ್ನು ಮಾತ್ರ ಋಷಿಗಳು ಹೇಳುವರು. ಇಂದ್ರವಿರೋಚನರ ಪ್ರಸಿದ್ಧವಾದ ಕಥೆಯಲ್ಲಿ ಅವರ ಗುರುವಾದ ಪ್ರಜಾಪತಿಯು ತತ್ವರಹಸ್ಯವನ್ನು ಒಮ್ಮೆಲೆ ಹೇಳಿಬಿಡದೆ ಶಿಷ್ಯರು ಯೋಗ್ಯ ಅಧಿಕಾರಿಗಳಾಗುವವರೆಗೆ ತಡೆದನು. ಪ್ರಜಾಪತಿಯ ಮೊದಲನೆಯ ಉತ್ತರದಿಂದ ವಿರೋಚನನ ಸಮಾಧಾನವಾದರೂ ಇಂದ್ರನ ಜಿಜ್ಞಾಸೆಯು ಹಿಂಗಲಿಲ್ಲ. ಇಂದ್ರನು ಪುನಃಪುನಃ ಪ್ರಶ್ನೆಮಾಡಿ ಕೇಳಲು ಕೊನೆಗೆ ತನ್ನ ರಹಸ್ಯವನ್ನು ಪ್ರಜಾಪತಿಯು ಅವನಿಗೆ ಹೇಳಿದನು. ಆತ್ಮನು ಕೇವಲ ಈ ದೇಹದಂಥ ಇನ್ನೊಂದು ಸೂಕ್ಷ್ಮ ದೇಹವೂ ಅಲ್ಲ ಅಥವಾ ಸ್ವಪ್ನ ಸುಷುಪ್ತಿಸ್ಥಿತಿಗಳಲ್ಲಿಯ ಅಹಂಕಾರಿಯೂ ಅವನಲ್ಲ. ಆದರೆ ಸ್ವ–ಸ್ವರೂಪದ ಕೂಡ ಅಭೇದದಿಂದಿರುವವನೆಂದು ಕ್ರಮದಿಂದ ಪ್ರಜಾಪತಿಯು ಪ್ರಮಾಣಿಸಿ ತೋರಿಸಿರುವನು. ತನ್ನ ಶಿಷ್ಯರಿಗೆ ಅವಶ್ಯವಿದ್ದುದನ್ನಷ್ಟೇ ಹೇಳಿ ಪ್ರಜಾಪತಿಯು ಇಲ್ಲಿ ಈ ಪದ್ಧತಿಯ ಉತ್ತಮ ಉದಾಹರಣೆಯನ್ನು ಹಾಕಿಕೊಟ್ಟಿರುವನು.

(೧೦) ಪ್ರತಿ ಹಿಂದಿನ ಪ್ರಶ್ನೆಯ ಉತ್ತರವನ್ನು ಹೊಸ ಪ್ರಶ್ನರೂಪವಾಗಿ ಕೇಳುತ್ತ ಹೋಗುವದೊಂದು ಪದ್ಧತಿಯು. ಇದು ಕೊನೆಯದು. ಇದಕ್ಕೆ ಪ್ರತ್ಯಾವರ್ತನ ಪದ್ಧತಿಯೆನ್ನಬಹುದು. ಬೃಹದಾರಣ್ಯಕದಲ್ಲಿ (ಬೃ, ಅ ೪, ಬ್ರಾ ೩.) ಮನುಷ್ಯನ ಜ್ಯೋತಿಯಾವುದೆಂದು ಜನಕನು ಕೇಳಲಾಗಿ ಸೂರ್ಯನೆಂದು ಯಾಜ್ಞವಲ್ಕ್ಯನು ಹೇಳುವನು,

ಸೂರ್ಯನಿಲ್ಲದಾಗ ಯಾರು, ಎಂದು ಪುನಃ ಜನಕನು ಕೇಳಲಾಗಿ ಚಂದ್ರನೆಂದು ಯಾಜ್ಞವಲ್ಕ್ಯನು ಉತ್ತರಕೊಡುವನು. ಮತ್ತೆ ಚಂದ್ರನಿಲ್ಲದಾಗ ಯಾರು-ಅಗ್ನಿಯು, ಅವನಿಲ್ಲದಾಗ ಯಾರು, ಎಂದು ಮತ್ತೆ ಪ್ರಶ್ನೆಯು. ಹೀಗೆ ನಡೆದು ಕೊನೆಗೆ ಸ್ವಯಂಪ್ರಕಾಶ ಆತ್ಮಜ್ಯೋತಿಯೆ ಮನುಷ್ಯನ ಜ್ಯೋತಿಯೆಂದು ಋಷಿಗಳು ಉತ್ತರವನ್ನು ಕೊಟ್ಟಿರುವರು. ಬೃಹದಾರಣ್ಯಕದಲ್ಲಿ (ಬೃ, ಅ ೩, ಬ್ರಾ ೬, ಮಂ ೧.) ನೀರಿಗೆ ಯಾವ ಆಧಾರವು, ವಾಯುವು; ಅದಕ್ಕೆ ಯಾವ ಆಧಾರವು, ಆಕಾಶವು; ಅದಕ್ಕೆ ಯಾವ ಆಧಾರವು, ಸೂರ್ಯನು; ಹೀಗೆ ಬ್ರಹ್ಮನು ಕೊನೆಯ ಆಧಾರವೆಂದು ಯಾಜ್ಞವಲ್ಕ್ಯನು ಹೇಳುವವರೆಗೆ ಗಾರ್ಗಿಯು ಕೇಳಿದಳು. ಮುಂದೆ ತನ್ನ ಕುತೂಹಲವನ್ನು ಬಿಡದೆ ಬ್ರಹ್ಮನಿಗೆ ಯಾವ ಆಧಾರವೆಂಬ ಪ್ರಶ್ನೆಯನ್ನಾದರೂ ಕೇಳಿಬಿಟ್ಟಳು. ಅನಂತವಾದ ಬ್ರಹ್ಮನಿಗೆ ಯಾವ ಆಧಾರವನ್ನು ಹೇಳಬೇಕು ? ' ಇನ್ನು ಮುಂದೆ ಕೇಳಿದರೆ ನಿನ್ನ ತಲೆ ಕತ್ತರಿಸಿ ಬೀಳುವದು ' ಎಂದು ಯಾಜ್ಞವಲ್ಕ್ಯನು ಅವಾಸ್ತವ ಕುತೂಹಲದ ಈ ಪ್ರಶ್ನೆಗಳನ್ನು ನಿಲ್ಲಿಸಿಬಿಟ್ಟನು.

**೧೫. ಉಪನಿಷತ್ತುಗಳಲ್ಲಿಯ ಕಾವ್ಯ—** ತತ್ವಜ್ಞಾನವನ್ನು ವಿವರಿಸುವ ಇನ್ನೊಂದು ಬಗೆಯು ಉಪನಿಷತ್ತುಗಳಲ್ಲಿ ಉಪಲಬ್ಧವಿದೆ. ಅದಾವುದೆಂದರೆ ಕಾವ್ಯಪದ್ಧತಿಯು. ನಾವು ಇಲ್ಲಿ ಪ್ರತ್ಯೇಕವಾಗಿ ವಿವೇಚಿಸುವಷ್ಟು ಆ ಪದ್ಧತಿಯು ಮಹತ್ವದ್ದಿರುವುದು. ಆದರೆ ಕಾವ್ಯಮುಖದಿಂದ ಸೂಚಿತವಾದ ಸತ್ಯವು ಅಚ್ಚ ತಾತ್ವಿಕ ಸತ್ಯವೆಂದೆಣಿಸಲಾಗದೆಂಬ ದೋಷವು ಈ ಪದ್ಧತಿಯಲ್ಲಿ ಉಂಟು. ಸತ್ಯಸ್ವರೂಪವನ್ನು ಕುರಿತು ಗೂಢ ಪ್ರೇಮಭಾವನೆಯನ್ನು ಹುಟ್ಟಿಸಬೇಕಾದಾಗ ಅಥವಾ ಆ ಸತ್ಯದ ಸಾಕ್ಷಾತ್ಕಾರವಾದಾಗ ಈ ಪದ್ಧತಿಯು ಉಪನಿಷತ್ತುಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಇಂಥ ಸಂದರ್ಭಗಳಲ್ಲಿ ಅನುಭಾವಿಯು ಛಂದೋನಿಯಮಗಳಿಗೆ ಗಮನಕೊಡದೆ ತನ್ನ ನಿರಂಕುಶತ್ವದ ಮೂಲಕವೇ ಒಂದು ಬಗೆಯ ಆನಂದವನ್ನು ಬೀರುವಂಥ ಕ್ರಮಗೆಟ್ಟ ಛಂದಸ್ಸನ್ನು ಉಪಯೋಗಿಸುವನು. ಕಾರಿಬ್ಯಾಂಟಿಸ್-ಒಗ್ಗಯ್ಯನವರು-ಎಂಬ ದೇವಪೂಜಕರು ರಹಸ್ಯದಲ್ಲಿ ನಡೆಸುವ ತಮ್ಮ ನರ್ತನದ ಆವೇಶದಿಂದ ಪ್ರಜ್ಞೆತಪ್ಪಿ ಪರವಶರಾದಾಗ ತಾಲಬದ್ಧ ಸುಂದರವಾದ ಕಾವ್ಯವನ್ನುಸುರಿ ಸಾವಿರಾರು ಜನರನ್ನು ಕಾವ್ಯಲಹರಿಯಲ್ಲಿ ಕುಣಿದಾಡಿಸುವಂತೆ ಈ ಅನುಭಾವಿಗಳು ತಮ್ಮ ಕಾವ್ಯವನ್ನು ದೇವೋನ್ಮಾದ ಸ್ಥಿತಿಯಲ್ಲಿ ರಚಿಸುವರು. ಅದೇ ರೀತಿಯಲ್ಲಿ ಉಪನಿಷತ್ತಿನಲ್ಲಿಯ ಕಾವ್ಯವು ನಿಸರ್ಗ ಅಥವಾ ಪ್ರೇಮ ಇವುಗಳ ವರ್ಣನೆಮಾಡುವ ಅಥವಾ ವೀರತೆ ಮತ್ತು ಭಾವ ಇವುಗಳನ್ನು ಬಣ್ಣಿಸುವ ಕಾರ್ಯದಲ್ಲಿ ತೊಡಗದೆ ಅನುಭಾವ, ನೀತಿ, ಅತೀಂದ್ರಿಯಜ್ಞಾನ, ಅಧ್ಯಾತ್ಮ ಇವುಗಳನ್ನು ವರ್ಣಿಸುವದು. ಅಧ್ಯಾತ್ಮ ಅಥವಾ ಅತೀಂದ್ರಿಯಜ್ಞಾನವೇ ಉಪನಿಷತ್ತುಗಳ ಹೆಗ್ಗುರಿಯಾದುದರಿಂದ ಅವುಗಳಲ್ಲಿ ನೀತಿ ಮುಂತಾದ

ವಿಷಯಗಳಿಗೆ ಗೌಣಸ್ಥಾನವೇ ಕೊಡಲ್ಪಟ್ಟಿರುವದು. ಋಗ್ವೇದದ (ಮಂಡಲ ೭, ಸೂಕ್ತ ೮೮.) ವರುಣಸೂಕ್ತದಲ್ಲಿರುವಂಥ ಮಾನವೀ ಗೂಢಭಾವನೆಗಳ ಅಭಿವ್ಯಕ್ತಿ, ಅಥವಾ ಪಾಪದ ಒಪ್ಪಿಗೆ, ಅಥವಾ ಅನುಗ್ರಹಾರ್ಥವಾಗಿ ಪರಮಾತ್ಮನ ಪ್ರಾರ್ಥನೆ ಇವು ಉಪನಿಷತ್ತುಗಳಲ್ಲಿ ಕಂಡು ಬರಲಾರವು. ಈಶೋಪನಿಷತ್ತಿನ ಕಾವ್ಯದಲ್ಲಿ ನೀತಿ ಅನುಭಾವ ಮತ್ತು ಅಧ್ಯಾತ್ಮ ಇವುಗಳ ಬೆರಿಕೆ ಇರುವದು. ಕೇನೋಪನಿಷತ್ತಿನಲ್ಲಿ ಮಾನಸಿಕ ಮತ್ತು ಆಧ್ಯಾತ್ಮಿಕ ತತ್ವಗಳು ಕಾವ್ಯಮಯವಾಗಿ ವರ್ಣಿಸಲ್ಪಟ್ಟಿರುವವು. ಅಮೃತತತ್ವ ಮತ್ತು ಆತ್ಮಸಾಕ್ಷಾತ್ಕಾರದ ಸಾಧನ ಇವೇ ಕಠೋಪನಿಷತ್ತಿನ ಪ್ರಧಾನವಿಷಯಗಳು. ಶ್ವೇತಾಶ್ವತರದ ಆರನೆಯ ಅಧ್ಯಾಯದಲ್ಲಿ ಪರಮಾತ್ಮನ ವರ್ಣನೆಯಿದ್ದು ಅವನು ಸ್ವಯಂಭುವೆಂದು ಪ್ರತಿಪಾದನವಿರುವದು. ಮುಂಡಕೋಪನಿಷತ್ತು ಮಾತ್ರ ಎಲ್ಲ ಉಪನಿಷತ್ತುಗಳಿಗಿಂತ ಹೆಚ್ಚಿನ ಭಾವನೋದ್ರೇಕದ ಮೆಟ್ಟಿನ್ನು ಮುಟ್ಟಿದೆ. ಈ ವರ್ಣನೆಯು ಎಲ್ಲಕ್ಕೂ ಶ್ರೇಷ್ಠತರಗತಿಯದೆಂದು ಒಪ್ಪಲಿಕ್ಕಾಗದಿದ್ದರೂ ಭಾವನೆಗಳ ಈ ಬಗೆಯ ಸೊಬಗಿನ ವರ್ಣನೆಗಳನ್ನು ಸಹ ಮಿಕ್ಕ ಉಪನಿಷತ್ತುಗಳಲ್ಲಿ ನಾವು ಕಾಣೆವು. ಇನ್ನು ಉಪನಿಷತ್ತುಗಳಲ್ಲಿ ಕಾವ್ಯರಸದಿಂದ ತುಂಬಿದ ಅನೇಕ ಗದ್ಯಭಾಗಗಳೂ ಇವೆ. ಒರ್ವ ಆಧುನಿಕ ಲೇಖಕನು ಅವುಗಳಿಗೆ 'ಗದ್ಯಕಾವ್ಯಗಳ ಕಾಳ್ಗಿಚ್ಚು' ಎಂದು ಹೆಸರಿಟ್ಟಿರುವನು. ಕಾವ್ಯಕಲ್ಪನೆಗಳಿಂದ ಪರಿಪ್ಲುತವಾದ ಒಂದು ದೊಡ್ಡ ಗದ್ಯಭಾಗವನ್ನು ನೋಡಬೇಕಾದರೆ ಛಾಂದೋಗ್ಯದಲ್ಲಿಯ (ಛಾಂ, ಅ ೩, ಖಂ ೧-೧೧.) ಸೂರ್ಯನ ವರ್ಣನೆಯನ್ನು ನೋಡಬಹುದು. "ಅಂತರಿಕ್ಷವೆಂಬ ಜೇನಹುಟ್ಟು ಆಕಾಶವೆಂಬ ತೊಲೆಗೆ ಹತ್ತಿ ಜೋತುಬಿದ್ದಿದೆ. ಈ ಹುಟ್ಟಿನಲ್ಲಿ ಸಂರಕ್ಷಿಸಲ್ಪಡುತ್ತಿರುವ ಸೂರ್ಯನು ದೇವತೆಗಳ ಜೇನು. ಪೂರ್ವಪಶ್ಚಿಮ ದಕ್ಷಿಣೋತ್ತರವಾಗಿ ಮತ್ತು ಮೇಲೆಕೆಳಗೆ ಪಸರಿಸಿದ ಸೂರ್ಯಕಿರಣಗಳು ಜೇನತುಪ್ಪದ ತೊಟ್ಟಿಗಳು. ಋಗ್ವೇದ ಸೂಕ್ತಗಳೇ ಈ ಹುಟ್ಟಿನಲ್ಲಿ ಕೆಲಸಮಾಡುವ ಜೇನುನೊಣಗಳು. ಸೂರ್ಯನ ವಿವಿಧ ಬಣ್ಣಗಳೇ ದೇವತೆಗಳ ವಿವಿಧ ಅಮೃತವು. ದೇವತೆಗಳು ಆ ಅಮೃತವನ್ನು ದೃಷ್ಟಿಮಾತ್ರದಿಂದ ನೋಡಿ ತೃಪ್ತರಾಗಿ ಜೀವಿಸುವರು." ಇದನ್ನು ನೋಡಿದರೆ ಉಪನಿಷದ್ದೇವತೆಗಳ ದೇವಭಾವನೆಯ ಒಳಗುರುತು ನಮಗಾಗುವದು. ಉಪನಿಷತ್ತುಗಳಲ್ಲಿ ಯಾವದೊಂದು ಒಳ್ಳೇ ರೂಪಕದ ಉದಾಹರಣೆಯು ಬೇಕಾಗಿದ್ದರೆ ಕೌಷೀತಕಿಯಲ್ಲಿ (ಕೌ, ಅ ೧, ಮಂ ೩.) ಒಂದು ಇದೆ. ಅದರಲ್ಲಿ, ಸಂತತವಾಗಿ ಹರಿಯುವ ಕಾಲವೇ ಒಂದು ನದಿ, ಸರ್ವವ್ಯಾಪಕತ್ವವೇ ಒಂದು ಸಭಾಮಂಡಪ, ಓಜಸ್ಸೇ ಮಂಚ, ಮನಸ್ಸೇ ಒರ್ವ ಸ್ತ್ರೀ, ವೃಷ್ಟಿಯೇ ಪರಿಚಾರಿಕೆ, ಸೃಷ್ಟಿಗಳೇ ಹೂಗಳು, ಈ ಪ್ರವಾಹದೊಳಗಿಂದ ಆತ್ಮನು ಮನಸಿನ ಚಲನದ ಮೂಲಕ ಹಾಯುವನು, ಬ್ರಹ್ಮೈಕ್ಯಜ್ಞಾನದಿಂದ ಆತ್ಮನು ಸುರಕ್ಷಿತಸ್ಥಾನ

ವನ್ನು ಪಡೆಯುವನು ಹೀಗೆ ಆತ್ಮನ ವಿವಿಧ ಅನುಭವಗಳ ವರ್ಣನೆಯಿರುವದು. ನಿಸರ್ಗ ಅಥವಾ ಪ್ರೇಮ ಈ ವಿಷಯಗಳು ಉಪನಿಷತ್ತುಗಳಲ್ಲಿ ಬಾರದಿರುವದರಿಂದ ಸೌಂದರ್ಯ ವಿಷಯವು ಅವುಗಳಲ್ಲಿ ಬರುವದು ಅಶಕ್ಯವು. ಆದರೆ ನಿಸರ್ಗ, ಮನಸ್ಸು, ಅತೀಂದ್ರಿಯ ಸೃಷ್ಟಿ ಇವುಗಳಲ್ಲಿಯ ಅತ್ಯಂತ ಉದಾತ್ತವಿಷಯಗಳ ವರ್ಣನೆಗಳು ಅಲ್ಲಲ್ಲಿ ಬಂದಿರುವವು. ನಿಸರ್ಗದಲ್ಲಿಯ ಉದಾತ್ತವಿಷಯದ ವರ್ಣನೆಯ ಮಾದರಿಯನ್ನು ಬೃಹದಾರಣ್ಯಕದಲ್ಲಿ (ಬೃ, ಅ ೩, ಬ್ರಾ ೮–೯.) ನೋಡಬಹದು. "ಅಕ್ಷರ ಬ್ರಹ್ಮನ ಆಜ್ಞೆಯಿಂದ ಸೂರ್ಯ ಚಂದ್ರರು ತಮ್ಮ ಸ್ಥಾನದಲ್ಲಿ ನಿಲ್ಲುವರು, ಪೃಥಿವಿ ಆಕಾಶಗಳು, ಕ್ಷಣ, ಘಟಿಕೆ, ಹಗಲು, ಇರುಳು, ಪಕ್ಷ, ತಿಂಗಳು, ಋತುಗಳು, ವರ್ಷಗಳು ಇವೆಲ್ಲ ಆ ಬ್ರಹ್ಮನ ಆಜ್ಞೆಯಿಂದಲೇ ತಮ್ಮ ನಿಯಮಿತ ಕಾರ್ಯಗಳನ್ನು ಮಾಡುವವು. ಶ್ವೇತಪರ್ವತದಿಂದ ಕೆಲವು ನದಿಗಳು ಪೂರ್ವಕ್ಕೆ ಕೆಲವು ಪಶ್ಚಿಮಕ್ಕೆ ಹರಿಯುವದಾದರೂ ಅವನ ಇಚ್ಛೆಯಿಂದಲೇ," ಎಂಬ ವರ್ಣನೆ ನೋಡಿದರೆ ಸಾಕು. ಆತ್ಮಭೂಮಿಕೆಯಲ್ಲಿ ಈ ಬಗೆಯ ಉದಾತ್ತತ್ವವನ್ನು ನೋಡು ವದಿದ್ದರೆ ಛಾಂದೋಗ್ಯದಲ್ಲಿ (ಛಾಂ, ಅ ೮, ಖಂ ೧, ಮಂ ೧–೩.) "ಹೊರಗಣ ಪಟ್ಟಣ ದಂತೆಯೇ ಅಂತಃಕರಣದಲ್ಲಿ ಒಳಪಟ್ಟಣವಿರುವದು. ಈ ವಿಶ್ವವು ಆತ್ಮನ ಕೋಟೆ ಇದ್ದಂತೆ ಅಂತಃಕರಣವೂ ಆತ್ಮನ ಕೋಟೆಯು. ಸ್ವರ್ಗ, ಪೃಥಿವಿ, ಅಗ್ನಿ, ವಾಯು, ಸೂರ್ಯ ಚಂದ್ರರು, ವಿದ್ಯುತ್, ನಕ್ಷತ್ರಗಳೂ ಇವೆಲ್ಲವುಗಳನ್ನೊಳಕೊಂಡ ಅನಂತ ಆಕಾಶವೂ ಹೊರಗೆ ಇರುವಂತೆ ಅಂತಃಕರಣವೆಂಬ ಚಿಕ್ಕ ಕೋಟೆಯಲ್ಲಿಯೂ ವಿದ್ಯಮಾನವಿರುವವು," ಎಂದು ಹೇಳಿರುವುದನ್ನು ಓದಬೇಕು. ಇನ್ನು ಅತೀಂದ್ರಿಯ ಭೂಮಿಕೆಯಲ್ಲಿ ಉದಾತ್ತವರ್ಣನೆಯು ಬೇಕಾಗಿದ್ದರೆ, ಛಾಂದೋಗ್ಯದಲ್ಲಿ (ಛಾಂ, ಅ ೭, ಖಂ ೨೩–೨೫.) "ಅನಂತವೇ ಆನಂದ, ಈ ಕಣ್ಣಿನಾಚೆ, ಕಿವಿಯಾಚೆ, ಈ ತಿಳಿವಿನಾಚೆ ಇದ್ದುದೇ ಅನಂತ. ಹಿಂದೆಮುಂದೆ, ಮೇಲೆ ಕೆಳಗೆ ಎಡಬಲಕ್ಕೆ ಎಲ್ಲೆಲ್ಲಿಯೂ ಅನಂತವೇ ತುಂಬಿದೆ. ನಾನು ಮೇಲೆಕೆಳಗೆ ಹಿಂದೆಮುಂದೆ ಎಡಬಲಕ್ಕೆ ಎಲ್ಲೆಲ್ಲಿಯೂ ಇರುವೆನು. ಆತ್ಮನು ಹಿಂದೆಮುಂದೆ, ಮೇಲೆಕೆಳಗೆ, ಎಡಬಲ ದಲ್ಲಿ ಸರ್ವತ್ರವ್ಯಾಪಿಸಿರುವನು. ಇದನ್ನರಿತವನು ಸ್ವಾರಾಜ್ಯವನ್ನನುಭವಿಸುವನು," ಎಂಬ ಸುಂದರವಾದ ಪ್ರತಿಪಾದನವನ್ನು ನೋಡಬಹುದು.

**೧೬. ಉಪನಿಷತ್ಕಾಲದ ದಾರ್ಶನಿಕರು—** ಇನ್ನು ಉಪನಿಷತ್ಕಾಲದಲ್ಲಿ ಆಗಿಹೋದ ಶ್ರೇಷ್ಠ ದಾರ್ಶನಿಕರ ತತ್ವವಿಚಾರಗಳನ್ನು ಇಲ್ಲಿ ಸಂಕ್ಷೇಪದಿಂದ ಚರ್ಚಿಸುವ. ಅವುಗಳನ್ನು ವಿವರವಾಗಿ ವಿಚಾರಿಸುವ ಕಾರ್ಯವನ್ನು ವಿಷಯಾನುಕ್ರಮದಿಂದ ಬರೆದ ಮುಂದಿನ ಪ್ರಕರಣಗಳಲ್ಲಿ ಮಾಡುವೆವು. ಮುಂದೆ ಬರುವ ವಿಷಯದ ಪುನರುಕ್ತಿಯಾಗದ ಧುವಂತೆ ಇಲ್ಲಿ ಆಯಾ ದಾರ್ಶನಿಕರ ತತ್ವಗಳನ್ನು ಸೂತ್ರರೂಪವಾಗಿ ಹೇಳುವ ಕಾರ್ಯವ

ನ್ನಷ್ಟೇ ಮಾಡಿರುವೆವು. ಅದಕ್ಕೂ ಮೊದಲು ಉಪನಿಷದ್ವಿಚಾರಗಳ ವಿಕಾಸಕ್ಕೆ ಸಹಾಯ ಮಾಡಿದ ಹಲಕೆಲವು ಘನವಾದ ದಾರ್ಶನಿಕರ ಹೆಸರುಗಳನ್ನು ನಾವು ಇಲ್ಲಿ ಉಲ್ಲೇಖಿಸುವದು, ಮತ್ತು ವಿಶೇಷತಃ ಅಧ್ಯಾತ್ಮಜ್ಞಾನವನ್ನು ವಿವರಿಸಿದ ತತ್ವಜ್ಞರ ಜ್ಞಾನದಲ್ಲಿಯ ಅನ್ಯೋನ್ಯ ಸಂಬಂಧವನ್ನು ತುಸು ತಿಳಿಸುವದು ಅವಶ್ಯವು. ಈ ನಮ್ಮ ಸದ್ಯದ ವಿಮರ್ಶೆಯಲ್ಲಿ ಅನೈತಿಹಾಸಿಕ ಮತ್ತು ಪೌರಾಣಿಕ ಜನರ ಹೆಸರನ್ನು ಸಹ ಹೇಳುವ ವಿಚಾರವು ನಮ್ಮದಿಲ್ಲ. ಉದಾಹರಣಾರ್ಥವಾಗಿ ಇಂದ್ರ, ವಿರೋಚನ ಪ್ರಜಾಪತಿ ಇವರ ಸಂಭಾಷಣವನ್ನು ನೋಡಿದರೆ ಅವರು ಮೂವರೂ ಐತಿಹಾಸಿಕ ಪುರುಷರಲ್ಲದ್ದರಿಂದ ಅವರ ಸಂಭಾಷಣದಿಂದ ನಮಗೆ ಕೆಲವು ತಾತ್ವಿಕ ಕಲ್ಪನೆಗಳ ಬೋಧವಾದರೂ ಇಂಥ ಒಂದು ವ್ಯಕ್ತಿಯು ಈ ತತ್ವಗಳನ್ನು ಪ್ರತಿಪಾದಿಸಿದನೆಂದು ನಾವು ಹೇಳಲಾರೆವು. ಆ ಶ್ರೇಷ್ಠವಾದ ಕಥೆಯನ್ನು ಬರೆದವನ ಹೆಸರು ನಮಗೆ ಗೊತ್ತಾಗದೆ ಇರುವದು ದುರ್ದೈವದ ಸಂಗತಿಯೆ ಸೈ. ಕೌಷೀತಕಿ ಉಪನಿಷತ್ತಿನಲ್ಲಿಯ ಇಂದ್ರ-ಪ್ರತರ್ದನರ ಸಂಭಾಷಣವು, ತೈತ್ತಿರೀಯದಲ್ಲಿಯ ಭೃಗು-ವರುಣರ ಸಂಭಾಷಣವು, ಕಠದಲ್ಲಿಯ ಯಮ-ನಚಿಕೇತರ ಸಂಭಾಷಣವು ಇವು ಅತ್ಯಂತ ಸುಂದರವಾದವುಗಳಿರುವವು. ಆದರೆ ಇಂದ್ರ ವರುಣ ಮತ್ತು ಯಮ ಇವರು ಐತಿಹಾಸಿಕ ಪುರುಷರಲ್ಲವೆಂದು ತೋರುವದು. ನಚಿಕೇತನು ಐತಿಹಾಸಿಕ ಪುರುಷನಿರಬಹುದು. ಅದೇಪ್ರಕಾರ ಪ್ರತರ್ದನ ಮತ್ತು ಭೃಗು ಇವರಾದರೂ ಐತಿಹಾಸಿಕ ಪುರುಷರೆಂದು ಒಪ್ಪಬಹುದು. ಆದರೆ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಅನೇಕ ತತ್ವಗಳ ಪುರಸ್ಕರ್ತರನ್ನು ಹುಡುಕುವದು ಅಸಾಧ್ಯವೆಂಬದನ್ನು ನಾವು ನೆನಪಿನಲ್ಲಿಡಬೇಕು. ಮುಂಡಕದಲ್ಲಿಯ ತತ್ವಗಳನ್ನು ಯಾರು ಮೊದಲು ಮುಂದಿಟ್ಟರೆಂಬದನ್ನು ಹೇಳುವದು ಶಕ್ಯವಿಲ್ಲ. ಮುಂಡಕದ ಕರ್ತನು ಒಳ್ಳೆ ಸಾರಗ್ರಾಹಿ ಎಂಬದು ಸ್ಪಷ್ಟವಿದೆ ; ಆದರೆ ಅವನ ಹೆಸರು ನಮಗೆ ಗೊತ್ತಾಗದೆ ಹೋಗಿದೆ ಎಂಬುದು ದುಃಖದ ಸಂಗತಿಯು. ಉಪನಿಷತ್ತಿನ ೬ನೆಯ ಅಧ್ಯಾಯದ ೨೧ನೆಯ ಮಂತ್ರದಲ್ಲಿ ಶ್ವೇತಾಶ್ವತರಮುನಿಯ ಹೆಸರಿನ ಉಲ್ಲೇಖವಿರುವದರಿಂದ ಆ ಉಪನಿಷತ್ತು ಆ ಮುನಿಯಿಂದಲೆ ರಚಿತವಾಯಿತೆಂದು ಹೇಳುವದು ಸಾಧ್ಯವು. ಆದುದರಿಂದ ಈ ಉಪನಿಷತ್ಕಾರರ ಹೆಸರುಗಳನ್ನವಲೋಕಿಸುವಾಗ ನಿಶ್ಚಯವಾಗಿ ಐತಿಹಾಸಿಕವೆಂದು ಹೇಳಲಿಕ್ಕೆ ಬರುವಂಥವರ ಬಗ್ಗೆ ಮಾತ್ರ ನಾವು ಬರೆಯುವೆವು. ಹೀಗಿದ್ದರೂ ಇಲ್ಲಿ ಬದುಕಿ ಬಾಳಿ ಅನೇಕ ಶ್ರೇಷ್ಠವಿಚಾರಗಳನ್ನು ನಮಗೆ ಕೊಟ್ಟು ಹೇಳಹೆಸರಿಲ್ಲದೆ ಹೋದ ಅನೇಕ ಋಷಿಮುನಿಗಳಿದ್ದರೆಂಬದನ್ನು ನಾವು ಮರೆಯಕೂಡದು. ಇಂಥವರ ಹೆಸರುದೆಸೆಗಳುಳಿಯದಿದ್ದರೂ ಅವರ ಕೃತಿಯು ಅಳಿಯದೆ ಅಜರಾಮರವಾಗಿದೆ.

**೧೭. ಅನುಭಾವಿಗಳು, ನೀತಿಜ್ಞರು ಮತ್ತು ವಿಮರ್ಶಕರು.**—ತೈತ್ತಿರೀಯದಲ್ಲಿದ್ದ ತ್ರಿಶಂಕು ಮುನಿಯ ಚಿಕ್ಕ 'ವೇದಾನುವಚನ' ವನ್ನು ನೋಡಲಾಗಿ ಅವನು ಅನುಭಾವಿಗಳಲ್ಲಿ ಒಳ್ಳೆ ಉಚ್ಚ ತರಗತಿಯ ಅಂತರ್ದೃಷ್ಟಿಯುಳ್ಳವನೆಂದು ಹೇಳಬಹುದು. ಮೈತ್ರ್ಯುಪನಿಷತ್ತಿನಲ್ಲಿಯ ಆತ್ಮಸಾಕ್ಷಾತ್ಕಾರದ ವರ್ಣನೆಯನ್ನು ಓದಿನೋಡಿದರೆ ಆ ಉಪನಿಷತ್ತಿನ ಕರ್ತೃವಾದ ಮೈತ್ರೀಮುನಿಯು ಆತ್ಮಸಾಕ್ಷಾತ್ಕಾರಿಯಾಗಿರಲಿಕ್ಕೆ ಬೇಕೆಂದು ಹೇಳಬಹುದು. ಸತ್ಯ, ತಪಸ್ಸು, ವೇದಾಧ್ಯಯನ ಈ ಮೂರು ಎಲ್ಲಕ್ಕೂ ಶ್ರೇಷ್ಠವಾದವುಗಳೆಂದು ಅನುಕ್ರಮವಾಗಿ ಪ್ರತಿಪಾದಿಸಿದ ರಾಥೀತರ, ಪೌರೂಶಿಷ್ಟಿ ಮತ್ತು ನಾಕಮೌದ್ಗಲ್ಯರು ಆಯಾ ವಿಷಯಗಳನ್ನು ನಮ್ಮ ಮನಸ್ಸಿನ ಮೇಲೆ ಚನ್ನಾಗಿ ಬಿಂಬಿಸುವರು. ಮಹಿದಾಸ ಐತರೇಯನು ಸುಪ್ರಜಾಜನನ ಶಾಸ್ತ್ರದಲ್ಲಿ ವಿಶೇಷ ಅಭ್ಯಾಸವುಳ್ಳವನೆಂದು ತೋರುವದು. ಮಾನವರ ಆಯುಷ್ಯವನ್ನು ಹೇಗೆ ಹೆಚ್ಚಿಸಬೇಕೆಂಬುದನ್ನು ಅವನು ತನ್ನ ಮುಖ್ಯ ವಿಷಯವನ್ನಾಗಿಟ್ಟುಕೊಂಡಂತೆ ತೋರುವದು ( ಛಾಂ, ಅ ೩, ಖ ೧೬. ). ಯಜ್ಞವಿಧಿಗಳ ಸಾಧನದಿಂದ ಆಯುಷ್ಯವನ್ನು ಬೆಳಿಸಲು ಅವನು ಯತ್ನಿಸುತ್ತಿದ್ದನು. ಆರುಣಿಯು ತಾನು ಸ್ವತಃ ಉಪವಾಸವನ್ನಾಚರಿಸದಿದ್ದರೂ ಎರಡನೆಯವರು ಅದನ್ನು ಆಚರಿಸುವುದನ್ನು ಅವನು ನೋಡಿರಬೇಕೆಂದು ಛಾಂದೋಗ್ಯದಲ್ಲಿಯ ( ಛಾಂ, ಅ ೭, ಖಂ ೧. ) ಉಲ್ಲೇಖದಿಂದ ಹೇಳಬಹುದು. ಪ್ರಾಣವೇ ಬ್ರಹ್ಮವೆಂಬ ತತ್ವದ ಜನಕನು ಕೌಷೀತಕಿಯೇ. ಅವನೊಂದು ಬಗೆಯ ಪ್ರಾಚೀನ ಸತ್ಯಾಗ್ರಹಿಯು. ಅವನು 'ಅಯಾಚಿತ' ವ್ರತವನ್ನು ಆಚರಿಸುತ್ತಿದ್ದನು. ವಿಶಿಷ್ಟ ಕಾಮನೆಗಳ ಪೂರ್ತಿಗಾಗಿ ಸೂರ್ಯ, ಪೌರ್ಣಿಮೆಯ ಚಂದ್ರ, ಅಮಾವಾಸ್ಯೆ ಈ ಮೂವರ ಧ್ಯಾನಮಾಡುವ ಮಾರ್ಗವನ್ನು ಪ್ರಚುರಗೊಳಿಸಿದವನು ಇವನೇ. ಪ್ರಾಣವೇ ಇಂದ್ರಿಯಗಳ ಮತ್ತು ಮನಸ್ಸಿನ ಅಧಿಪತಿಯು ಎಂಬ ತತ್ವವನ್ನು ಪ್ರತಿಪಾದಿಸುವ ವಿಷಯದಲ್ಲಿ ಪೈಂಗ್ಯನು ಕೌಷೀತಕಿಯ ಸಹಾಯಕನು, ಪ್ರತರ್ದನನು ಪ್ರಾಚೀನ ಕಾಲದ ಸ್ವತಂತ್ರ ವಿಚಾರಿಯು. ಯಜ್ಞಾದಿ ಬಾಹ್ಯ ಆಚಾರಗಳಲ್ಲಿಯ ಅವನ ವಿಶ್ವಾಸವು ಹಾರಿಹೋಗಿತ್ತು. ಸತತವಾಗಿ ನಡೆದ ಈ ಶರೀರದಲ್ಲಿಯ ಅಂತರ್ಯಜ್ಞದ ತತ್ವವನ್ನೇ ಅವನು ಪ್ರತಿಪಾದಿಸಿರುವನು. ಪ್ರಾಣ ಮನ ಆತ್ಮಗಳನ್ನೊಳಕೊಂಡ ಪ್ರಜ್ಞಾನಾತ್ಮ ತತ ವನ್ನು ಪ್ರತಿಪಾದಿಸುವದೇ ಅವನ ವಿಶೇಷವೆಂದು ಹೇಳಬಹುದು. ಋಗ್ವೇದವೇ ಶ್ರೇಷ್ಠವೆಂದು ಯಾವನಾದರೂ ತಿಳಿದರೆ ಜನರು ಅವನನ್ನು ಪೂಜಿಸುವರು, ಯಜುರ್ವೇದವೇ ಶ್ರೇಷ್ಠವೆಂದು ಭಾವಿಸಿದರೆ ಅವನು ಶ್ರೇಷ್ಠನಿರುವನೆಂದು ಸಿದ್ಧಮಾಡಲು ಜನರು ಒಂದಾಗುವರು, ಸಾಮವೇದವೇ ಶ್ರೇಷ್ಠವೆಂದು ಪ್ರತಿಪಾದಿಸಿದರೆ ಜನರು ಅವನಿಗೆ ನಮಿಸುವರು, ಎಂದು ಶುಷ್ಕಭೃಂಗಾರನ ಹೇಳುವಿಕೆಯು. ಬ್ರಾಹ್ಮಣಗಳ ವರ್ಚಸ್ಸಿಗೆ ಒಳ

ಗಾಗಿ ವ್ಯುತ್ಪತ್ತಿ ಮತ್ತು ತತ್ವಜ್ಞಾನ ಇವೆರಡನ್ನೂ ಅವಲಂಬಿಸಿದ ಶುಷ್ಕಭೃಂಗಾರನ ತತ್ವ ವಿದು. ಕೊನೆಗೆ ಈ ವಿಶ್ವದಲ್ಲಿ ಎಲ್ಲೆಲ್ಲಿಯೂ ಯಜ್ಞತತ್ವವೇ ಪ್ರಚಲಿತವಿರುವದೆಂದು ಜೈವಲೀ ಮುನಿಯು ಪ್ರತಿಪಾದಿಸಿರುವನು. ಬೃಹದಾರಣ್ಯಕವನ್ನು ಓದಿದರೆ ( ಬೃ, ಅ ೬,ಬ್ರಾ ೨.) ಈ ರೀತಿ ವರ್ಣನೆ ಇರುವದು. " ಆಕಾಶದ ಕಡೆಗೆ ನೋಡಿದರೆ, ದ್ಯುಲೋಕವು ವೇದಿಯು, ಆ ಅಗ್ನಿಯಲ್ಲಿ ಸೂರ್ಯನೇ ಸಮಿತ್ತು. ಅವನ ಕಿರಣಗಳೇ ಹೊಗೆಯು. ದಿನವೇ ಯಜ್ಞಾಗ್ನಿಯ ಬೆಳಕು, ದಿಕ್ಕುಗಳೇ ಕೆಂಡಗಳು, ಉಪದಿಕ್ಕುಗಳೇ ಕಿಡಿಗಳು, ಈ ವೇದಿ ಯಲ್ಲಿ ಶ್ರದ್ಧೆಯೆಂಬ ಆಹುತಿಯನ್ನು ಕೊಟ್ಟರೆ ಚಂದ್ರೋದಯವಾಗುವದು. ಮತ್ತೊಮ್ಮೆ ಈ ಆಕಾಶದ ಕಡೆಗೆ ನೋಡಿದರೆ, ಪರ್ಜನ್ಯವೇ ವೇದಿ, ಸಂವತ್ಸರವೇ ಸಮಿತ್ತು, ಮೋಡ ಗಳೇ ಹೊಗೆ, ಮಿಂಚೇ ಕೆಂಡಗಳು, ಮೋಡಗಳ ಮೊಳಗೇ ಯಜ್ಞಾಗ್ನಿಯ ಕಿಡಿಗಳು, ಇದ ರಲ್ಲಿ ಚಂದ್ರನ ಆಹುತಿ ಕೊಟ್ಟರೆ ಈ ವೇದಿಯಿಂದ ಪರ್ಜನ್ಯದ ಉತ್ಪತ್ತಿಯಾಗುವದು. ಇದೇ ಪ್ರಕಾರವಾಗಿ ಈ ಜಗತ್ತೇ ಒಂದು ವೇದಿ, ಈ ಭೂಮಿಯು ಸಮಿತ್ತು, ಅಗ್ನಿಯೇ ಹೊಗೆ, ನಕ್ಷತ್ರಗಳೇ ಬೆಂಕಿಯ ಕಿಡಿಗಳು, ಈ ವೇದಿಯಲ್ಲಿ ಕೊಟ್ಟ ಮಳೆಯೆಂಬ ಆಹುತಿಯಿಂದ ಅನ್ನೋತ್ಪತ್ತಿಯಾಗುವದು. ಮನುಷ್ಯನೇ ವೇದಿ, ತೆರೆದ ಬಾಯಿಯೇ ಸಮಿತ್ತು, ಉಸುರೇ ಹೊಗೆ, ನಾಲಿಗೆಯೇ ಬೆಳಕು, ಕಣ್ಣೇ ಕೆಂಡಗಳು, ಕಿವಿಗಳೇ ಕಿಡಿಗಳು. ಇಲ್ಲಿ ಅನ್ನವೆಂಬ ಆಹುತಿಯನ್ನಿಕ್ಕಿದರೆ ಈ ವೇದಿಯೊಳಗಿಂದ ಬೀಜವು ಹುಟ್ಟುವದು. ಕೊನೆಗೆ ಸ್ತ್ರೀಯೇ ಒಂದು ದೊಡ್ಡ ವೇದಿ. ಸ್ತ್ರೀಯಲ್ಲಿ ಬೀಜವೆಂಬ ಆಹುತಿಯನ್ನರ್ಪಿಸಿದರೆ ಮನುಷ್ಯನ ಉತ್ಪತ್ತಿಯಾಗುವದು. " ಈ ಪ್ರಕಾರವಾಗಿ ಶ್ರದ್ಧೆಯೆಂಬ ಮೊದಲನೆಯ ಆಹುತಿಯಿಂದ ಕ್ರಮವಾಗಿ ಚಂದ್ರ, ಪರ್ಜನ್ಯ, ಅನ್ನ, ಬೀಜ ಮತ್ತು ಕೊನೆಗೆ ಮನುಷ್ಯ ಇವೆಲ್ಲವುಗಳ ಉತ್ಪತ್ತಿಯು ಆಗುವದೆಂದು ಜೈವಲಿಯು ತನ್ನ ತತ್ವಜ್ಞಾನವನ್ನು ಹೇಳಿರುವನು. ಇದೇ ಅವನ ಪಂಚಾಗ್ನಿ ಸಾಧನವು. ಕೊನೆಗೆ " ಮನುಷ್ಯನು ಸತ್ತನೆಂದರೆ ಅವನ ಚಿತೆಯಿಂದ ಒರ್ವ ತೇಜಸ್ವಿಯಾದ ಪುರುಷನು ಹೊರಬೀಳುವನು. ಅವನು ತನ್ನ ಕರ್ಮಕ್ಕನುಸರಿಸಿ ದೇವಲೋಕಕ್ಕೆ ಅಥವಾ ಪಿತೃಲೋಕಕ್ಕೆ ಹೋಗುವನು. "

**೧೮. ವಿಶ್ವೋತ್ಪತ್ತಿ ಮತ್ತು ಮಾನಸ ಶಾಸ್ತ್ರಗಳನ್ನು ಕುರಿತು ಬರೆದ ತತ್ವಜ್ಞರು**— ವಿಶ್ವೋತ್ಪತ್ತಿಯನ್ನು ಚರ್ಚಿಸಿದ ದಾರ್ಶನಿಕರನ್ನು ಕುರಿತು ಛಾಂದೋಗ್ಯವು ( ಛಾಂ, ಅ ೫, ಖಂ ೨.) ಹೇಳುವದೇನಂದರೆ, ಭೂಲೋಕವೇ ವಿಶ್ವದ ಮೂಲ ವೆಂದು ಉದ್ದಾಲಕನು, ದ್ಯುಲೋಕವೇ ಆದಿಯೆಂದು ಪ್ರಾಚೀನಶಾಲನು, ನೀರು, ಆಕಾಶ, ವಾಯು ಇವು ಅನುಕ್ರಮವಾಗಿ ಸರ್ವಾಧಾರಗಳೆಂದು ಬುಡಿಲ, ಶಾಕರಾಕ್ಷ್ಯ ಮತ್ತು ಇಂದ್ರ ದ್ಯುಮ್ನರು, ಸೂರ್ಯನೇ ಅಥವಾ ದಿವ್ಯಾಗ್ನಿಯೇ ಮೂಲವಸ್ತು ಎಂದು ಸತ್ಯಯಜ್ಞನು

ಪ್ರತಿಪಾದಿಸಿರುವರು. ಪಂಚಭೂತಗಳಲ್ಲಿ ಯಾವದೊಂದು ತತ್ತ್ವವು ವಿಶ್ವದ ಮೂಲವೆಂದು ಮಿಕ್ಕೆಡೆಗೆ ಕೆಲವು ಉಪನಿಷತ್ತುಗಳಲ್ಲಿ ಉಲ್ಲೇಖವಿದ್ದರೂ ಅಲ್ಲಿ ಆ ಮತಪ್ರವರ್ತಕರ ಹೆಸರುಗಳು ಬಂದಿಲ್ಲ. ಈ ಮೇಲಿನ ಅವತರಣದಲ್ಲಿ ಆ ಹೆಸರುಗಳು ಕೊಡಲ್ಪಟ್ಟವೆ. ಇಂದ್ರದ್ಯುಮ್ನನಂತೆ ವಾಯುವು ಈ ವಿಶ್ವದ ಆದಿಯು ಎಂದು ರೈಕ್ವನ ಮತವು ಎಂಬ ಬಗ್ಗೆ ಅವನೊಬ್ಬನ ಹೆಸರಿನ ಉಲ್ಲೇಖವು ಮಾತ್ರ ಇನ್ನೊಂದೆಡೆಗೆ ದೊರೆಯುವದು. ತತ್ತ್ವವಿಚಾರ ಮಾಡುವಾಗ ಸಮನ್ವಯಪದ್ಧತಿಯನ್ನನುಸರಿಸುವ ಅಶ್ವಪತಿ ಕೈಕೇಯಿಯು ಈ ಎಲ್ಲ ಮೇಲಿನ ಮತಗಳನ್ನು ತನ್ನ ವಿಶ್ವಾತ್ಮ ತತ್ತ್ವದಲ್ಲಿ ಒಳಪಡಿಸಿರುವನು. ಛಾಂದೋಗ್ಯದಲ್ಲಿ ( ಛಾಂ, ಅ ೫, ಖಂ ೧೮. ) ಅವನು ' ಪ್ರಾದೇಶಮಾತ್ರ ' ಮತ್ತು ' ಅಭಿವಿಮಾನ ' -- ಈ ಶಬ್ದಗಳ ಅರ್ಥಗಳನ್ನು ಮುಂದೆ ನೋಡುವ--ಎಂಬ ಎರಡು ವಿಶೇಷಣಗಳನ್ನು ವೈಶ್ವಾನರ ಆತ್ಮನಿಗೆ ಹಚ್ಚಿ ದ್ಯುಲೋಕವು ಆ ಆತ್ಮನ ತಲೆಯು, ಸೂರ್ಯನು ಅವನ ಕಣ್ಣು, ವಾಯುವು ಅವನ ಉಸುರು, ಆಕಾಶವು ಅವನ ದೇಹವು, ನೀರು ಅವನ ಮೂತ್ರಾಶಯವು ಮತ್ತು ಪೃಥ್ವಿಯು ಅವನ ಪಾದವು ಎಂದು ವರ್ಣಿಸಿರುವನು. ಸತ್ಯವು ಈ ಪಂಚಭೂತಗಳಲ್ಲಿರದೆ ಅದು ಮಾನವೀ ಶರೀರದಲ್ಲಿರುವದೆಂದೂ ಅಲ್ಲಿಯೂ ಇರದೆ ಅದು ಚಿತ್ತದಲ್ಲಿರುವದೆಂದೂ ಮುಂದೆ ಕೆಲವೆಡೆಗೆ ಪ್ರತಿಪಾದನವಿರುವದು. ಸತ್ಯಕಾಮಜಾಬಾಲನು ಉಪಕೋಸಲನಿಗೆ ( ಛಾಂ, ಅ ೪. ) ಸತ್ಯತತ್ತ್ವದ ವಿಚಾರವನ್ನು ಹೇಳುವಾಗ ಸತ್ಯವು ಸೂರ್ಯ, ಚಂದ್ರ, ಮಿಂಚು ಮುಂತಾದ ವಸ್ತುಗಳಲ್ಲಿರದೆ ಮನುಷ್ಯನ ಕಣ್ಣಿನಲ್ಲಿರುವದೆಂದು ಬೋಧಿಸಿರುವನು. ಸೂರ್ಯಚಂದ್ರಾದಿ ಪ್ರಾಕೃತಿಕ ವಸ್ತುಗಳೂ ಕಣ್ಣು ಮುಂತಾದ ಶಾರೀರಿಕ ವಸ್ತುಗಳೂ ಅಂತಿಮ ಸತ್ತತ್ತ್ವವೆಂದು ತಿಳಿದಿರುವ ಗಾರ್ಗ್ಯನಿಗೆ ( ಬೃ, ಅ ೨. ) ಅವನ ಗುರುವಾದ ಅಜಾತಶತ್ರುವು ಚಿತ್ತದ ಸುಷುಪ್ತಾವಸ್ಥೆಯಲ್ಲಿಯೇ ಸತ್ತತ್ತ್ವವನ್ನು ಹುಡುಕಬೇಕೆಂದು ಉಪದೇಶಿಸಿರುವನು. ಈ ಪ್ರಕಾರ ಬ್ರಹ್ಮಾಂಡದಿಂದ ಪಿಂಡಾಂಡ, ಪಿಂಡಾಂಡದಿಂದ ಪಿಂಡಗತವಾದ ಚಿತ್ತ, ಹೀಗೆ ವಿಚಾರವಿಕಾಸವಾದದ್ದು ಕಂಡುಬರುವದು. ಉಪನಿಷತ್ಕಾರರು ವಿಶ್ವಶಾಸ್ತ್ರಕ್ಕಿಂತಲೂ ಮಾನಸಶಾಸ್ತ್ರದ ಕಡೆಗೂ ಅಧ್ಯಾತ್ಮದ ಕಡೆಗೂ ಹೆಚ್ಚು ಲಕ್ಷ್ಯಗೊಟ್ಟಿರುವರೆಂಬದು ಅಲ್ಲಲ್ಲಿ ಒಡೆದು ಕಾಣುವಂತಿದೆ. ಪ್ರಶ್ನೋಪನಿಷತ್ತಿನಲ್ಲಿ ಪಿಪ್ಪಲಾದ ಮುನಿಗೆ ಪ್ರಶ್ನೆಗಳನ್ನು ಕೇಳುವವರಲ್ಲಿ ಮೊದಲಿಗನಾದ ಕಬಂಧೀ ಕಾತ್ಯಾಯನನೋರ್ವನೆ, ಈ ಪದಾರ್ಥಗಳೆಲ್ಲ ಎಲ್ಲಿಂದ ಬಂದವೆಂಬ ವಿಶ್ವವಿಷಯಕ ವಿಚಾರವನ್ನು ಕೇಳುವನು. ಮಿಕ್ಕವರೆಲ್ಲ ಮಾನಸಶಾಸ್ತ್ರವಿಷಯಕ ಆಧ್ಯಾತ್ಮಿಕ ಪ್ರಶ್ನೆಗಳನ್ನೇ ಬಗೆಬಗೆಯಿಂದ ಕೇಳುವರು. ಇಂದ್ರಿಯಗಳಲ್ಲಿ ಶ್ರೇಷ್ಠವಾವುದೆಂದು ಭಾರ್ಗವ ವೈದರ್ಭಿಯು ಕೇಳುವನು. ಇಂದ್ರಿಯಾಧಿಪತಿಯಾದ ಪ್ರಾಣನು ಎಲ್ಲಿಂದ

ಬಂದನೆಂದು ಕೌಶಲ್ಯ ಆಶ್ವಲಾಯನನು ಕೇಳುವನು. ಸೌರಾಯಣಿ ಗಾರ್ಗ್ಯನು ಕನಸುಗ ಳನ್ನು ಕುರಿತು ಕೇಳುವನು. ಓಂ ಮಂತ್ರದ ಧ್ಯಾನದ ಮಹತ್ವವನ್ನು ಕುರಿತು ಶೈಬ್ಯಸತ್ಯ ಕಾಮನು ಕೇಳುವನು. ಸುಕೇಶೀ ಭಾರದ್ವಾಜನು ಷೋಡಶಕಲಾಯುಕ್ತ ಪುರುಷನ ವಿಷಯಕ್ಕೆ ಪ್ರಶ್ನೆಮಾಡುವನು. ಈ ಪ್ರಶ್ನೆಗಳಿಗೆ ಪಿಪ್ಪಲಾದನು ಕೊಟ್ಟ ಉತ್ತರಗಳನ್ನು ಕಲೆಹಾಕಿದರೆ ಪಿಪ್ಪಲಾದನ ತತ್ವಜ್ಞಾನವು ನಮಗೆ ಸಂಪೂರ್ಣವಾಗಿ ತಿಳಿಯುವದು. ಪಿಪ್ಪ ಲಾದನು ಮಾನಸ ಮತ್ತು ಅಧ್ಯಾತ್ಮಶಾಸ್ತ್ರಗಳಲ್ಲಿ ಪಾರಂಗತನು. ಅರಿಸ್ಟಾಟಲ್ಲನು ಪ್ರತಿ ಪಾದಿಸಿದ ಪದಾರ್ಥ ಮತ್ತು ಕಲ್ಪನೆ ಈ ಎರಡೂ ತತ್ವಗಳಿಗೆ ಸಮಾನವಾದ ರಯಿ ಮತ್ತು ಪ್ರಾಣವೆಂಬ ತತ್ವಗಳನ್ನೂ ಇಂದ್ರಿಯಗಳಿಗಿಂತ ಪ್ರಾಣವು ಹೆಚ್ಚಿನದು, ಪ್ರಾಣವು ಆತ್ಮ ನಿಂದಲೇ ಆವಿರ್ಭವಿಸಿರುವದೆಂಬ ತತ್ವಗಳನ್ನೂ ಪಿಪ್ಪಲಾದನು ಪ್ರತಿಪಾದಿಸಿರುವನು. ಸ್ವಪ್ನ ಸ್ಥಿತಿಯಲ್ಲಿ ಮನುಷ್ಯನ ಮನಸ್ಸು ಅನುಭೂತ ಅನನುಭೂತ ವಸ್ತುಗಳ ಕಲ್ಪನೆಯನ್ನು ಮಾಡಲಿಕ್ಕೆ ಸಮರ್ಥವಿರುವದೆಂದೂ ಸುಷುಪ್ತಿಯಲ್ಲಿ ಮನಸ್ಸು ಆತ್ಮತೇಜದಿಂದ ಆಕ್ರಾಂತವಾಗುತ್ತದೆಂದೂ ಮುನಿಗಳು ವರ್ಣಿಸಿರುವರು. ಆಮರಣವೂ ಓಂಕಾರ ಧ್ಯಾನ ಮಾಡುವವನು ದ್ಯುಲೋಕವನ್ನು ಸೇರಿ ಅಲ್ಲಿ ಹಿರಣ್ಯಗರ್ಭನಿಂದ ಸರ್ವವ್ಯಾಪಕ ಪುರುಷ ನನ್ನು ನೋಡುವ ವಿದ್ಯೆಯನ್ನು ಕಲಿಯುವನೆಂದು ಮುನಿಗಳ ಹೇಳುವಿಕೆಯು. ಮುನಿಗಳು ಹೇಳಿದ ಷೋಡಶಕಲಾಯುಕ್ತಪುರುಷನ ವರ್ಣನೆಯಲ್ಲಿ ಸಾಂಖ್ಯ ಮತ್ತು ವೇದಾಂತ ತತ್ವ ಜ್ಞಾನಿಗಳು ಹೇಳಿದ ಲಿಂಗ ಶರೀರದ ತತ್ವವು ಮೈದೋರಿದೆ. ಬೃಹದಾರಣ್ಯಕೋಪನಿಷ ತ್ತಿನಲ್ಲಿರುವ ಭುಜ್ಯು ಮತ್ತು ಉದ್ದಾಲಕ ಋಷಿಗಳು ಭೂತಪ್ರೇತ ವಿದ್ಯೆಯ ಸಂಶೋಧಕರೆಂದು ಹೇಳಬಹುದು. ಋಗ್ವೇದದ ನಾಲ್ಕನೆಯ ಮಂಡಲದ, ೨೬, ೨೭ ಸೂಕ್ತಗಳಲ್ಲಿ ಮೊದಲು ದೃಗ್ಗೋಚರನಾಗುವ ವಾಮದೇವನು ಬೃಹದಾರಣ್ಯಕದಲ್ಲಿಯ (ಬೃ, ಅ ೧, ಬ್ರಾ ೪, ಮಂ ೧೦) ಪೂರ್ವಜನ್ಮದಲ್ಲಿ ನಾನು ಮನು ಮತ್ತು ಸೂರ್ಯನಿದ್ದೆನೆಂದು ಹೇಳುವನು. ಪುನಃ ಐತರೇಯ ದಲ್ಲಿ ( ಐ, ಅ ೨, ಮಂ ೪, ) ಹೇಳಲ್ಪಟ್ಟ ‘ ಮೂರು ಜನ್ಮಗಳ ’ ಸಂಗತಿಯು ಅವನ ತತ್ವಜ್ಞಾನಕ್ಕೆ ಹೊಂದುವದೆಂದು ಉಲ್ಲೇಖವಿರುವನು. ಈ ಮುನಿಯು ಪುನರ್ಜನ್ಮವಿಷಯ ದಲ್ಲಿ ಅತ್ಯಂತ ಆಸ್ಥೆಯುಳ್ಳವನಿರುವನು. ಮತ್ತು “ ಗರ್ಭದಲ್ಲಿರುವಾಗಲೇ ನಾನು ದೇವತೆ ಗಳ ಜನ್ಮಗಳನ್ನು ಗೊತ್ತು ಹಿಡಿಯಲೆತ್ನಿಸಿನೆನು. ಕಬ್ಬಿಣದ ಒಂದು ನೂರು ಕವಚಗಳು ನನ್ನನ್ನು ಗರ್ಭದಲ್ಲಿ ರಕ್ಷಿಸುತ್ತಿದ್ದವು. ಆನರೆ ಗಿಡಗನಂತೆ ವೇಗದಿಂದ ನಾನು ಭೂಮಿಗಿ ಳಿದೆನು, ಗರ್ಭದಲ್ಲಿರುವಾಗಲೇ ವಾಮದೇವನು ಈ ಮಾತುಗಳನ್ನಾಡಿದನು. ” ಎಂದು ಐತರೇಯದಲ್ಲಿ ವರ್ಣನೆ ಇರುವುದು. ಪುರುಷಾಂಡವು ಸ್ತ್ರೀ ಬೀಜದ ಕೂಡ ಸಂಯುಕ್ತವಾ ಗುವದೇ ಮೊದಲನೆಯ ಜನ್ಮವು, ಕೂಸಾಗಿ ಹುಟ್ಟುವದೇ ಎರಡನೆಯ ಜನ್ಮವು, ಮರಣ

ಪಶ್ಚಾತ್ ಪುನರ್ಜನ್ಮ ಹೊಂದುವದೇ ಅವನ ಮೂರನೆಯ ಜನ್ಮವು, ಹೀಗೆ ಮನುಷ್ಯನಿಗೆ ಮೂರು ಜನ್ಮಗಳಿರುವವೆಂದು ವಾಮದೇವನ ಅಭಿಪ್ರಾಯವಿದ್ದಂತೆ ತೋರುವದು. ಆಧ್ಯಾತ್ಮಿಕ ಮಾನಸಶಾಸ್ತ್ರವಾದಿಯಾದ ಭೃಗುಮುನಿಯು ತೈತ್ತಿರೀಯದಲ್ಲಿ ಅನ್ನ, ಪ್ರಾಣ, ಮನಸ್ಸು, ವಿಜ್ಞಾನ, ಮತ್ತು ಆನಂದ ಈ ಕೋಶಗಳು ಒಂದಕ್ಕಿಂದ ಒಂದು ಮೇಲು ಇದ್ದು ಅವೆಲ್ಲ ಆತ್ಮನ ಆವಿರ್ಭಾವಗಳೆಂದು ಹೇಳಿರುವನು. ಕೊನೆಗೆ ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ಇದೇ ವಿಷಯದ ವಿವಿಧ ಚರ್ಚೆಯು ಬಂದಿದೆ. ಅಲ್ಲಿ ವಾಕ್ ಇದೇ ಎಲ್ಲಕ್ಕೂ ಶ್ರೇಷ್ಠ ತತ್ವವೆಂದು ಜಿತ್ವನ್‌ಶೈಲಿನಿಯು, ಪ್ರಾಣವೇ ಎಲ್ಲಕ್ಕೂ ಹೆಚ್ಚಿನದೆಂದು ಉದಂಕಶೌಲ್ಬಾಯನನು, ಕಣ್ಣು ಕಿವಿ ಮನಸ್ಸು ಅಂತಃಕರಣ ಇವು ಅನುಕ್ರಮವಾಗಿ ಎಲ್ಲಕ್ಕೂ ಹೆಚ್ಚಿನವೆಂದು ವರ್ಕುವಾರ್ಷ್ಣನು, ಗರ್ದಭೀವಿಪೀತ ಭಾರದ್ವಾಜನು, ಸತ್ಯಕಾಮಜಾಬಾಲನು ಮತ್ತು ವಿದಗ್ಧ ಶಾಕಲ್ಯನು ಪ್ರತಿಪಾದಿಸಿರುವರು. ಯಾಜ್ಞವಲ್ಕ್ಯನು ತನ್ನ ಪದ್ಧತಿಗನುಗುಣವಾಗಿ ತನ್ನ ತತ್ವಜ್ಞಾನದಲ್ಲಿ ಇವೆಲ್ಲವುಗಳನ್ನು ಸಮನ್ವಯಿಸಿರುವನು.

**೧೯. ಅಧ್ಯಾತ್ಮವಾದಿಗಳು. —** ಉಪನಿಷತ್ತುಗಳಲ್ಲಿ ಕಂಡುಬರುವ ಆಧ್ಯಾತ್ಮಿಕ ತತ್ವಜ್ಞರಲ್ಲಿ ಶಾಂಡಿಲ್ಯ, ದಧ್ಯಙ್, ಸನತ್ಕುಮಾರ, ಆರುಣಿ ಮತ್ತು ಯಾಜ್ಞವಲ್ಕ್ಯ ಇವರೇ ಶ್ರೇಷ್ಠರು. ಇವರೆಲ್ಲರಲ್ಲಿ ಯಾಜ್ಞವಲ್ಕ್ಯನೇ ಎಲ್ಲಕ್ಕೂ ಹೆಚ್ಚಿನವನು.

(೧) ಶಾಂಡಿಲ್ಯನ ಇಡೀ ತತ್ವಜ್ಞಾನವು ಛಾಂದೋಗ್ಯದ ಮೂರನೆಯ ಅಧ್ಯಾಯದ ಹದಿನಾಲ್ಕನೆಯ ಖಂಡದಲ್ಲಿ ಸಂಕ್ಷೇಪವಾಗಿ ದೊರೆಯುವದು. ಅಲ್ಲಿ ಅವನು ತನ್ನ ತತ್ವಜ್ಞಾನದಲ್ಲಿರುವ ಮುಖ್ಯ ವಿಷಯಗಳನ್ನು ನಮಗೆ ಹೇಳಿರುವನು. ಮೊದಲು ' ತಜ್ಜಲಾನ್ ' ಎಂದು ಕೇವಲವಾದ ಆದಿತತ್ವವನ್ನು ಸಂಬೋಧಿಸಿ ಅದರಲ್ಲಿಯೇ ಎಲ್ಲ ವಸ್ತುಗಳ ಹುಟ್ಟು, ಬಾಳು ಮತ್ತು ಸಾವು ಎಂದು ಹೇಳಿ, ಆಮೇಲೆ ಮನುಷ್ಯನು ಇಹಲೋಕದಲ್ಲಿ ಮಾಡಿದ ಕರ್ಮಗಳು ಪರಲೋಕದಲ್ಲಿಯೂ ಅವನ ಬೆನ್ನುಬಿಡವು ಎಂಬ ಕರ್ಮವಾದವನ್ನು ಪ್ರತಿಪಾದಿಸಿರುವನು. ಮುಂದೆ ಯಾಜ್ಞವಲ್ಕ್ಯನ ' ನೇತಿ ನೇತಿ ' ಎಂಬ ನಿಷೇಧಾತ್ಮಕ ವರ್ಣನೆಗೆ ಪ್ರತಿಯಾಗಿ ಆತ್ಮಸ್ವರೂಪವನ್ನು ' ಇತಿ ಇತಿ ' ಎಂದು ವಿಧಾಯಕವಾಗಿ ವರ್ಣಿಸಿರುವನು. ಆತ್ಮನು ಅಣುವಿಗಿಂತಲೂ ಅಣುವು ಮಹತ್ತಿಗಿಂತಲೂ ಮಹತ್ತು ಎಂದು ಹೇಳಿ ಆತ್ಮನಲ್ಲಿ ಒಂದಾಗಿ ಲಯಹೊಂದುವದೇ ಮನುಷ್ಯನ ಧ್ಯೇಯವೆಂದು ಉಪದೇಶಿಸಿರುವನು.

(೨) ವಾಮದೇವನಂತೆ ದಧ್ಯಙ್ ಋಷಿಯಾದರೂ ವೈದಿಕಕಾಲದಿಂದ ಪ್ರಸಿದ್ಧನು. ಋಗ್ವೇದದ ಮೊದಲನೆಯ ಮಂಡಲದ ೧೧೬ನೆಯ ಸೂಕ್ತದ ಹನ್ನೆರಡನೆಯ ಮಂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಈ ಋಷಿಯು ಬೃಹದಾರಣ್ಯಕದ ಎರಡನೆಯ ಅಧ್ಯಾಯದಲ್ಲಿ ಪ್ರಾನು

ಷ್ಯದಿಂದ ಕಂಗೊಳಿಸುವನು. ಋಗ್ವೇದದಲ್ಲಿ ಹೇಳಿದ 'ಮಧುವಿದ್ಯೆಯು' ಇಲ್ಲಿ ವಿವರವಾಗಿ ವಿವೇಚಿಸಲ್ಪಟ್ಟಿದೆ. 'ಮಧುವಿದ್ಯೆಯ' ರಹಸ್ಯವನ್ನು ಈ ಮುನಿಯು ತಿಳಿದಿದ್ದರೂ ಅದನ್ನು ಯಾರಿಗೂ ತಿಳಿಸಕೂಡದು, ತಿಳಿಸಿದರೆ ಮರಣದಂಡವಾಗುವದೆಂದು ಅವನಿಗೆ ಇಂದ್ರನ ಕಟ್ಟಪ್ಪಣೆ ಇತ್ತಂತೆ. ದಧ್ಯಚ್‌ನಿಂದ ಅಶ್ವಿನೀಕುಮಾರರು ಈ ವಿದ್ಯೆಯನ್ನು ಕಲಿಯಬೇಕೆಂದರು. ಆದರೆ ಆಜ್ಞೆಯನ್ನು ಮೀರಿದರೆ ಇಂದ್ರನು ಋಷಿಯ ತಲೆಯನ್ನು ಕತ್ತರಿಸುವನೆಂದು ತಿಳಿದು ತಾವೇ ಮೊದಲು ಅವನ ತಲೆಹಾರಿಸಿ ಅವನ ಧಡಕ್ಕೆ ಕುದುರೆಯ ರುಂಡವನ್ನು ಹಚ್ಚಿದರು. ದಧ್ಯಚ್‌ನು ಆ ಕುದುರೆಯ ತಲೆಯಿಂದೊಡಗೂಡಿದವನಾಗಿ ಆ ವಿದ್ಯೆಯನ್ನು ಅವರಿಗೆ ಉಪದೇಶಿಸಿದನು. ಇದು ಇಂದ್ರನಿಗೆ ತಿಳಿಯಿತು. ಕೂಡಲೇ ಕೋಪದಿಂದ ಅವನು ದಧ್ಯಚ್‌ನ ತಲೆಯನ್ನು ಕತ್ತರಿಸಿಬಿಟ್ಟನು. ಇದನ್ನುನೋಡಿ ಅಶ್ವಿನೀಕುಮಾರರು ಅವನ ತಲೆಯನ್ನು ಅವನಿಗೆ ಹಚ್ಚಿ ಅವನನ್ನು ಪುನಃ ಮೊದಲಿನಂತೆ ನೆಟ್ಟಗೆ ಮಾಡಿದರು! ಇದೇ ಮುನಿಯು ಬೃಹದಾರಣ್ಯಕದಲ್ಲಿ ಸರ್ವಭೂತಗಳ ಪರಸ್ಪರಾವಲಂಬನದ ತತ್ವವನ್ನು ಪ್ರತಿಪಾದಿಸಿರುವನು. ಎಲ್ಲ ಭೂತಗಳು ಆತ್ಮನಲ್ಲಿರುವವು ಮತ್ತು ಆತ್ಮನಿಂದ ಪರಸ್ಪರ ಸಂಬಂಧವುಳ್ಳವುಗಳಿರುವದರಿಂದ ಅವೆಲ್ಲ ಪರಸ್ಪರಾವಲಂಬಿಗಳೆಂದು ಅವನ ಹೇಳುವಿಕೆಯು. ಆತ್ಮನೆಂಬ ಅಂತಃಸೂತ್ರದಲ್ಲಿ ಪೋಣಿಸಿದ ಮಣಿಗಳಂತಿರುವ ಈ ಚರಾಚರ ವಸ್ತುಗಳೆಲ್ಲ ಅನ್ಯೋನ್ಯಾಶ್ರಯದಿಂದಲೇ ಬಾಳುವವೆಂದು ಅವನು ಹೇಳುವನು. ಋಷಿಯು ಅನ್ನುವದೇನಂದರೆ, "ಪೃಥ್ವಿಯು ಎಲ್ಲ ಭೂತಗಳ ಮಧುವು ಮತ್ತು ಎಲ್ಲ ಭೂತಗಳು ಪೃಥ್ವಿಯ ಮಧುವು; ಯಾಕಂದರೆ ಆ ತೇಜೋಮಯ ಅಮೃತ ಆತ್ಮನೇ ಎಲ್ಲ ವಸ್ತುಗಳಲ್ಲಿ ವಾಸಿಸುವನು. ಅಗ್ನಿಯು ಎಲ್ಲ ಭೂತಗಳ ಸತ್ವವು ಮತ್ತು ಎಲ್ಲ ಭೂತಗಳು ಅಗ್ನಿಯ ಸತ್ವವು; ಯಾಕಂದರೆ ಅಮೃತಮಯ ಆತ್ಮನು ಎಲ್ಲ ವಸ್ತುಗಳ ಸತ್ವವು. ಇದೇ ಪ್ರಕಾರ ವಾಯು, ಸೂರ್ಯ, ಆಕಾಶ, ಚಂದ್ರ, ಮಿಂಚು, ಮೊಳಗು, ಬಯಲು, ಧರ್ಮ, ಸತ್ಯ ಮತ್ತು ಮಾನುಷ್ಯ ಇವು ಎಲ್ಲ ವಸ್ತುಗಳ ಸತ್ವಗಳು ಮತ್ತು ಎಲ್ಲ ವಸ್ತುಗಳು ಇವುಗಳ ಸತ್ವಗಳು. ಯಾಕಂದರೆ ಒಂದೇ ಒಂದು ಧರ್ಮವು, ಒಂದೇ ಸತ್ಯವು ಇವೆಲ್ಲವುಗಳನ್ನು ಏಕಸೂತ್ರದಲ್ಲಿ ಪೋಣಿಸುವವು. ಕೊನೆಗೆ ಜೀವಾತ್ಮವು ಎಲ್ಲ ವಸ್ತುಗಳ ಸತ್ವವು ಮತ್ತು ಎಲ್ಲ ವಸ್ತುಗಳು ಜೀವಾತ್ಮನ ಸತ್ವಗಳು. ಯಾಕಂದರೆ ಇವೆರಡೂ ವಿಶ್ವಾತ್ಮನಿಂದ ನಿಬದ್ಧವಾಗಿರುವವು. ಪರಮಾತ್ಮನೆಂಬ ಸೂತ್ರದಿಂದ ಇವೆಲ್ಲ ವಸ್ತುಗಳು ಪರಸ್ಪರ ಬದ್ಧವಾಗಿರುವವು. ಅನಾದಿಯೂ ಅನಂತವೂ ಇರುವ ವಿಶ್ವರಂಗದಲ್ಲಿ ಈ ಅನೇಕಾನೇಕ ವಸ್ತುಗಳ ನಟನವು ನಡೆದಿರುವದು. ಅವನು ಈ ವಿವಿಧರೂಪಗಳನ್ನು ಧರಿಸುವನು, ಈ ವಿವಿಧರೂಪಗಳು ಅವನ ಅಂಶಾವಿರ್ಭಾವಗಳು. ಏಕವಾಗಿರುವ ಈಶ್ವರನು ತನ್ನ ಯೋಗಸಾಮರ್ಥ್ಯದಿಂದ ಅನೇಕವಾಗಿ

ತೋರುವನು. ” ಈ ರೀತಿಯಾಗಿ ದಧ್ಯಙ್ ಋಷಿಯು, ಏಕಮೇವಾದ್ವಿತೀಯನಾದ ಪರಮಾತ್ಮನು ತಾನೇ ಅನೇಕವಾಗಿ ತೋರುವ ಈ ಬಗೆಯನ್ನು ಹೇಳಿರುವನು.

(೩) ನಾರದನ ಗುರುವಾದ ಸನತ್ಕುಮಾರನು ಮೂರನೆಯ ಮಹತ್ವದ ತತ್ವಜ್ಞಾನಿಯು. ಇವನ ಉಪದೇಶವನ್ನು ನಾವು ಛಾಂದೋಗ್ಯದಲ್ಲಿ ಕಾಣಬಹುದು. ಶಾರೀರಿಕ ಮಾನಸಿಕ ಆಧ್ಯಾತ್ಮಿಕ ವಿಷಯಗಳಲ್ಲಿ ಇವನು ಮಾಡಿದ ವರ್ಗೀಕರಣವನ್ನು ಒತ್ತಟ್ಟಿಗಿಟ್ಟು ನಾವು ಅವನ ತತ್ವಜ್ಞಾನದಲ್ಲಿಯ ಮಹತ್ವದ ಭಾಗವನ್ನಷ್ಟೇ ನೋಡುವ. ಇವನು ಆಧ್ಯಾತ್ಮಿಕ ಸುಖೈಕವಾದವನ್ನು ಪ್ರತಿಪಾದಿಸುವನು. ಅರ್ಥಾತ್ ಇಲ್ಲಿ ಸುಖವೆಂದರೆ ಆಧ್ಯಾತ್ಮಿಕ ಆನಂದವು (ಛಾಂ, ಅ ೭, ಖಂ ೧೭–೨೨.). ಆನಂದವೇ ಎಲ್ಲ ಕ್ರಿಯೆಗಳ ಉಗಮವು. ಕ್ರಿಯೆಯೇ ನಿಷ್ಠೆಗೆ ಕಾರಣವು. ನಿಷ್ಠೆಯಿಂದ ಶ್ರದ್ಧೆಯ ಉತ್ಪತ್ತಿಯು. ಶ್ರದ್ಧೆಯಿಂದ ವಿಚಾರವು ಹುಟ್ಟುವದು. ವಿಚಾರದಿಂದ ಜ್ಞಾನೋದಯವು. ಜ್ಞಾನದಿಂದ ಸತ್ಯದರ್ಶನವು. ಈ ಬಗೆಯಾಗಿ ಆನಂದ, ಕ್ರಿಯೆ, ನಿಷ್ಠೆ, ಶ್ರದ್ಧೆ, ವಿಚಾರ, ಜ್ಞಾನ, ಸತ್ಯ ಇವು ಸತ್ಯಸಾಕ್ಷಾತ್ಕಾರಸೋಪಾನದ ಮೆಟ್ಟಿಲುಗಳು. ‘ ಭೂಮನ್ ’ ಎಂಬ ತತ್ವವನ್ನು ಪ್ರತಿಪಾದಿಸುವವನು ಸನತ್‌ಕುಮಾರನೇ. ಸುತ್ತಲೂ ಸರ್ವಾತ್ಮನನ್ನು ಸತತವೂ ಸಾಕ್ಷಾತ್ಕರಿಸುವದರಿಂದ ಉಂಟಾಗುವ ಅಮಿತ ಆನಂದವೇ ‘ ಭೂಮನ್ ’ ಎನಿಸುವದು. ಆತ್ಮನ ಹೊರತು ಇನ್ನೇನಾದರೂ ಇರುವದೆಂಬ ಜ್ಞಾನವೇ ‘ ಅಲ್ಪ ’ ವೆನಿಸುವದು. ಛಾಂದೋಗ್ಯದಲ್ಲಿ (ಛಾಂ, ಅ ೭, ಖಂ ೨೩–೨೪.) ಹೇಳಿದಂತೆ ಆಕಳು, ಆನೆ, ಕುದುರೆ, ಹೊನ್ನುಹೆಣ್ಣುಗಳು, ಪರಿಚಾರಕರು, ಭೂಮಿ, ಅರಮನೆಗಳು ಇವೆಲ್ಲವುಗಳ ಒಡೆತನವು ‘ ಭೂಮನ್ ’ ಇದಕ್ಕೆ ಹೋಲಿಸಿದರೆ ಕೇವಲ ತುಚ್ಛವಾದುದು. ‘ ಸೋಹಮಾತ್ಮಾ ’ ಎಂಬ ಪ್ರತ್ಯಕ್ಷ ಅನುಭವವಾದಾಗ ‘ ಭೂಮನ್ ’ ಇದರ ಸಾಕ್ಷಾತ್ಕಾರವಾಗಬಲ್ಲದು. ಆತ್ಮನೇ ಎಲ್ಲ ವಸ್ತುಗಳ ಆದಿಯು. ಅದರಿಂದಲೇ ಆಶೆ ಸ್ಮೃತಿಗಳ ಹುಟ್ಟು. ಅದರಿಂದಲೇ ಆಪ, ತೇಜ ಆಕಾಶಗಳ ಉಗಮವು. ಎಲ್ಲವೂ ಅದರಿಂದಲೇ ಹೊರಹೊಮ್ಮಿ ಎಲ್ಲವೂ ಅದರಲ್ಲಿಯೇ ಲಯವಾಗುವುದು. ಪ್ರಜ್ಞೆ, ಪ್ರಭಾವ, ಆನಂದಗಳ ಉಗಮಸ್ಥಾನವು ಈ ಆತ್ಮವಸ್ತುವೇ, ಎಂದು ಮುಂತಾಗಿ ದಿವ್ಯೋಪದೇಶವನ್ನು ಸನತ್ಕುಮಾರನು ಮಾಡಿರುವನು (ಛಾಂ, ಅ ೭, ಖಂ ೨೬.).

(೪) ಯಾಜ್ಞವಲ್ಕ್ಯನನ್ನೊರ್ವನನ್ನು ಬಿಟ್ಟರೆ ಆರುಣಿಯು ಉಪನಿಷತ್ಕಾರರಲ್ಲಿ ಎಲ್ಲಕ್ಕೂ ಹೆಚ್ಚಿನ ಮಂತ್ರದ್ರಷ್ಟನೆಂದು ಹೇಳಬಹುದು. ಇವನು ಯಾಜ್ಞವಲ್ಕ್ಯನ ಗುರುವೆಂದು ಕೆಲವೊಂದೆಡೆಗೆ ಹೇಳಿದ್ದರೂ ಸ್ವಪ್ನಸುಷುಪ್ತಿ ವಿಷಯಕ ಅದ್ವೈತ ಮತ್ತು ಆತ್ಮಾವಿರ್ಭಾವ ವಿಷಯಕ ಅವರೀರ್ವರ ತತ್ವಜ್ಞಾನದಲ್ಲಿ ಎಷ್ಟೋ ಸಾಮ್ಯವು ಕಂಡುಬಂದರೂ ಆರುಣಿಯು ಯಾಜ್ಞವಲ್ಕ್ಯನನ್ನು ಸರಿಗಟ್ಟಲಾರನು. ಮಿಕ್ಕ ಉಪನಿಷತ್ಕಾರರಂತೆ ಮಾನಸ

ಮತ್ತು ಅಧ್ಯಾತ್ಮಶಾಸ್ತ್ರಗಳಲ್ಲಿ ಅವನು ಪಾರಂಗತನು. ಇವನು ಮನಸ್ಸನ್ನು ಕುರಿತು ಮಾತಾಡುವಾಗ ಸುಷುಪ್ತಿಸಮಯಕ್ಕೆ ಮನಸ್ಸು ದಣಿದು (ಛಾಂ, ಅ ೬, ಖಂ ೮, ಮಂ ೨.) ಜೀವಾತ್ಮನು ಪರಮಾತ್ಮನನ್ನು ಸೇರುವನೆಂದು (ಛಾಂ, ಅ ೬, ಖಂ ೮, ಮಂ ೧.) ಹೇಳಿರುವನು. ಈ ವಿಷಯವು ಎಲ್ಲ ಉಪನಿಷತ್ತುಗಳಲ್ಲಿಯೂ ಹಿಂದುಗಡೆ ರೂಢವಾಯಿತು. ಮರಣವನ್ನು ವರ್ಣಿಸುವಾಗ ಮೊದಲು ವಾಚಾಶಕ್ತಿಯು ಮನಸ್ಸಿನಲ್ಲಿ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜದಲ್ಲಿ, ತೇಜವು ದೇವತೆಯಲ್ಲಿ ಅನುಕ್ರಮವಾಗಿ ಲೀನವಾಗುವವೆಂದು ಆರುಣಿಯು ಹೇಳಿರುವನು (ಛಾಂ, ಅ ೬, ಖಂ ೧೫). ಇದೇ ವಿಷಯವನ್ನು ಮುಂದೆ ಯಾಜ್ಞವಲ್ಕ್ಯನು ಸ್ವಲ್ಪ ವಿಸ್ತರಿಸಿ ಹೇಳಿರುವನು. ಅಧ್ಯಾತ್ಮವನ್ನು ಕುರಿತು ವಿಚಾರಿಸುವಾಗ ಆದಿವಸ್ತುವನ್ನು ವಿಶ್ವೋತ್ಪತ್ತಿ ದೃಷ್ಟಿಯಿಂದ ಪರೀಕ್ಷಿಸಿ ಅದೇ ಎಲ್ಲ ವಸ್ತುಗಳ ಮೂಲ ಆಧಾರವು, ಕಬ್ಬಿಣವು ಕಬ್ಬಿಣದ ಆಯುಧಗಳ ಕಾರಣವಿರುವಂತೆ, ಚಿನ್ನವು ಎಲ್ಲ ಚಿನ್ನದ ಅಲಂಕಾರಗಳ ಕಾರಣವಿರುವಂತೆ ಆ ಮೂಲ ವಸ್ತುವೇ ವಿಶ್ವದ ಉಪಾದಾನ ಕಾರಣವು ಎಂದು (ಛಾಂ, ಅ ೬, ಖಂ ೧, ಮಂ ೪-೬.) ಆರುಣಿಯು ಪ್ರತಿಪಾದಿಸಿರುವನು. ಆ ಮೂಲ ವಸ್ತುವೇ ನಿಜವಸ್ತು, ಮಿಕ್ಕದ್ದೆಲ್ಲ ಬರಿಯ ಹೆಸರು ಎಂದು ಹೇಳುವ ಈ ಆರುಣಿಯು ಮಾಯಾವಾದದ ಮುಂಗುರುತನ್ನೇ ತೋರಿಸಿರುವನೆಂದರೂ ಸಲ್ಲುವದು. ಈ ಮೂಲವಸ್ತು 'ಅಸತ್' ಅಲ್ಲ, ಯಾಕಂದರೆ 'ಅಸತ್' ದಿಂದ ಯಾವ ವಸ್ತುವೂ ಹುಟ್ಟಲಾರದು. ಆದುದರಿಂದ ಅದು 'ಸತ್' ಇರುವದೆಂದು ಆರುಣಿಯು ನಿರ್ಣಯಿಸಿರುವನು (ಛಾಂ, ಅ ೬, ಖಂ ೨, ಮಂ ೧-೨.). ಈ 'ಸತ್' ವಸ್ತುವೇ ಕ್ರಮವಾಗಿ ತೇಜ, ಆಪ, ಅನ್ನ, ಎಂಬ ಪದಾರ್ಥಗಳನ್ನು ತನ್ನಿಂದಲೇ ಹುಟ್ಟಿಸುವದು, ಅಂದರೆ ಚೈತನ್ಯ, ಪ್ರವಾಹೀವಸ್ತು, ಮತ್ತು ಜಡವಸ್ತು ಇವುಗಳನ್ನು ಹುಟ್ಟಿಸುವದು. ಇಡೀ ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳೂ ಈ ಮೂರು ಮೂಲತತ್ವಗಳ 'ತ್ರಿವೃತ್ಕರಣ'ದಿಂದಲೇ ಹುಟ್ಟುವವು (ಛಾಂ, ಅ ೬, ಖಂ ೨, ಮಂ ೩-೪.). ಈ ಹುಟ್ಟಿದ ವಸ್ತುಗಳೆಲ್ಲ ಅಸತ್ಯವಾದವುಗಳು, ಮೂಲತತ್ವಗಳು ಮಾತ್ರ ನಿತ್ಯವಾದವುಗಳು. ಅವುಗಳಿಗಿಂತ 'ಸತ್' ಇದು ನಿತ್ಯವಾದದ್ದು. ಅದೇ ಎಲ್ಲವುಗಳ ಆದಿಬೀಜವು (ಛಾಂ, ಅ ೬, ಖಂ ೩-೪.). ಮುಂದೆ ಆ 'ಸತ್' ವಸ್ತುವೇ ಮನುಷ್ಯನ ಆತ್ಮವೆಂದು ಆರುಣಿಯು ಉಪದೇಶಿಸಿರುವನು. 'ತತ್ವಮಸಿ' ಎಂದು ಆರುಣಿಯು ತನ್ನ ಮಗನಾದ ಶ್ವೇತಕೇತುವಿಗೆ ಛಾಂದೋಗ್ಯದ ಆರನೆಯ ಅಧ್ಯಾಯದಲ್ಲೆಲ್ಲ ಪುನಃಪುನಃ ಹೇಳಿರುವನು. ನಿಸರ್ಗದಲ್ಲಿ ಚಲಿಸುವ ಚೈತನ್ಯವೂ ಮನುಷ್ಯನಲ್ಲಿಯ ಚೈತನ್ಯವೂ ಒಂದೇ ಎಂಬುದೇ ಆರುಣಿಯ ಉಪದೇಶದ ಇತ್ಯರ್ಥವು. ಈ ಉಪದೇಶಕ್ಕೂ ಗ್ರೀನನ ಉಪದೇಶಕ್ಕೂ ಒಳ್ಳೇ ಸಾಮ್ಯವಿದೆ. ಈ ಸತ್ತತ್ವವೇ ಸೃಷ್ಟಿಯ ಸೂಕ್ಷ್ಮ ತತ್ವವು.

ಇದು ಶ್ರದ್ಧೆಯಿಂದ ಅಥವಾ ಗುರುಗಳ ಉಪದೇಶದಿಂದ ಮಾತ್ರ ತಿಳಿಯುವದು (ಛಾಂ, ಅ ೬, ಖಂ ೧೨, ೧೪.). ಇದು ವಿಶ್ವದ ಪ್ರಾಣವು. ಶಾಖೆಗಳು ಒಣಗಿದರೂ ವೃಕ್ಷವು ಬದುಕಿರುವದು, ಆದರೆ ವೃಕ್ಷವು ಒಣಗಿತೆಂದರೆ ಶಾಖೆಗಳು ಒಣಗಿ ಹೋಗುವವು. ಅದೇ ರೀತಿಯಾಗಿ ಈ ಸೃಷ್ಟಿಯು ನಾಶವಾದರೂ ದೇವರು ನಿರಂತರವೂ ಇರುವನು. ಅವನು ಎಂದೆಂದಿಗೂ ಇರುವವನಾದುದರಿಂದ ಅಮೃತನು. ಈ ವಿಶ್ವಾತ್ಮನಲ್ಲಿ ವ್ಯಕ್ತಿಗಳ ಲಯವಾಗುವದು. ಹೂಗಳ ವಿವಿಧ ತನಿರಸವು ಜೇನಿನಲ್ಲಿ ಒಂದಾಗಿ ಹೋಗುವದಿಲ್ಲವೇ ? ಸಾಗರಕ್ಕೆ ಸಾಗುವ ನದಿಗಳೆಲ್ಲವೂ ತಮ್ಮ ವ್ಯಕ್ತಿತ್ವವನ್ನು ಕಳಕೊಳ್ಳುವದಿಲ್ಲವೇ ? ಅದೇ ರೀತಿ ಜೀವಾತ್ಮರೆಲ್ಲರೂ ಪರಮಾತ್ಮನಲ್ಲಿ ತಮ್ಮ ವ್ಯಕ್ತಿತ್ವವನ್ನು ಮರೆತು ಮಿಲಿತರಾಗಿ ಬೆರೆತು ಹೋಗುವರು. ಆತ್ಮನೇ ಸತ್ಯ. ಸತ್ಯಸಂಧನಾಗುವವನು ಆತ್ಮನಿಷ್ಠನೂ ಆಗುವನು (ಛಾಂ, ಅ ೬, ಖಂ ೧೬.). ಆತ್ಮನು ಸರ್ವವ್ಯಾಪಿಯು. ನೀರಲ್ಲಿಟ್ಟ ಉಪ್ಪಿನ ಹರಳು ಕರಗಿ ಕಣಕಣಗಳಲ್ಲಿ ಕೂಡಿ ಒಂದಾಗಿ ಹೋಗುವಂತೆ ಆತ್ಮವು ಈ ವಿಶ್ವವನ್ನು ವ್ಯಾಪಿಸಿರುವದು. ಯಾವುದೂ ಆತ್ಮನನ್ನು ಬಿಟ್ಟು ಇರಲಾರದು. ಈ ಪ್ರಕಾರವಾಗಿ ದ್ವೈತಕ್ಕೆ ಎಳ್ಳಷ್ಟು ಎಡೆಯಿಲ್ಲದ ಪೂರ್ಣ ಅದ್ವೈತವನ್ನೇ ಆರುಣಿಯು ಪ್ರತಿಪಾದಿಸಿರುವನು.

(೫) ತನ್ನ ಗುರುವಾದ ಆರುಣಿಯಂತೆ ಇವನಾದರೂ ಮಾನಸ ಮತ್ತು ಅಧ್ಯಾತ್ಮ ಶಾಸ್ತ್ರಗಳಲ್ಲಿ ನಿಷ್ಣಾತನು. ಮೊದಲು ಇವನ ಅಧ್ಯಾತ್ಮ ವಿಚಾರಗಳನ್ನು ನೋಡಿ ಆಮೇಲೆ ಇವನ ಮಾನಸಶಾಸ್ತ್ರವನ್ನು ನೋಡುವ. ಯಾಜ್ಞವಲ್ಕ್ಯನ ತತ್ವಜ್ಞಾನವನ್ನು ಕುರಿತು ನಾವು ಮುಂದೆ ಬಹಳೇ ವಿಸ್ತಾರವಾಗಿ ಬರೆಯಬೇಕಾಗಿದೆ. ಆದರೂ ಇಲ್ಲಿ ಸ್ವಲ್ಪದರಲ್ಲಿಯೇ ಅವನು ಪ್ರತಿಪಾದಿಸಿದ ತತ್ವಗಳನ್ನು ಸಂಗ್ರಹಿಸುವೆವು. ತನ್ನ ಹೆಂಡತಿಯಾದ ಮೈತ್ರೇಯಿ, ಅನ್ಯ ತತ್ವಜ್ಞರು, ಜನಕನು, ಮುಂತಾದವರು ಕೇಳಿದ ಪ್ರಶ್ನೆಗಳಿಗೆ ಯಾವ ಕ್ರಮದಿಂದ ಈ ಋಷಿಯು ಉತ್ತರಗಳನ್ನು ಕೊಟ್ಟನೋ ಆ ಕ್ರಮವನ್ನನುಸರಿಸದೆ ಇಲ್ಲಿ ಬರಿಯ ಅವನ ತತ್ವಜ್ಞಾನದ ತರ್ಕಾನುಕ್ರಮದಿಂದಲೇ ವಿಷಯವನ್ನು ಮಂಡಿಸುವೆವು. ಬೃಹದಾರಣ್ಯಕದ ಮೂರನೆಯ ಅಧ್ಯಾಯವನ್ನು ನೋಡಿದರೆ ಈ ಋಷಿಗೆ ಒಳ್ಳೇ ಬುದ್ಧಿವಂತರಾದ ಪ್ರತಿಪಕ್ಷಿಗಳು ಅನೇಕರಿದ್ದರೆಂಬದು ಕಂಡುಬರುವದು. ಅಶ್ವಲ ಮತ್ತು ಶಾಕಲ್ಯ ಎಂಬವರು ಯಜ್ಞಯಾಗಾದಿಗಳನ್ನೂ ದೇವತಾವಿಷಯವನ್ನೂ ಕುರಿತು ಕೇಳುವವರಾದುದರಿಂದ ಅವರನ್ನು ಸಮಾಧಾನಪಡಿಸುವದು ಕಠಿನವಿರಲಿಲ್ಲ. ಆದರೆ ವಿಶ್ವದ ಮೂಲಕಾರಣವನ್ನು ಕೇಳುವ ಜಾರತ್ಕಾರವನು, ಮಾನಸಶಾಸ್ತ್ರ ಸಂಶೋಧಕನಾದ ಭುಜ್ಯು, ನಿತ್ಯ ಸತ್ಯವನ್ನು ಶೋಧಿಸಲನುವಾದ ಉಷಸ್ತನು, ಆತ್ಮಸಾಕ್ಷಾತ್ಕಾರದ ಮಾರ್ಗವನ್ನು ತಿಳಿದುಕೊಳ್ಳಲುತ್ಸುಕನಾದ ಕಹೋಳನು, ಆತ್ಮನ ಸರ್ವವ್ಯಾಪಕತ್ವವನ್ನರಿಯಲಿಚ್ಛಿಸುವ ಗಾರ್ಗಿ

ಮತ್ತು ಉದ್ದಾಲಕರು, ಇವರೆಲ್ಲರೂ ದುರ್ದಮರಾದ ಪ್ರತಿಸ್ಪರ್ಧಿಗಳೇ ಸೈ. ಈ ಜನರ ಸಂಗಡ ಮತ್ತು ಜನಕರಾಜ, ಮೈತ್ರೇಯಿ, ಮುಂತಾದವರ ಸಂಗಡ ಯಾಜ್ಞವಲ್ಕ್ಯನು ಮಾಡಿದ ಸಂಭಾಷಣದ ಸಾರವನ್ನು ತೆಗೆದರೆ ಅದೇ ಅವನ ತತ್ವಜ್ಞಾನವೆನಿಸುವದು. ಅದನ್ನು ಸಂಕ್ಷೇಪದಿಂದ ಕೆಳಗೆ ಕೊಡುವೆವು. ಸಮುದ್ರವೇ ಎಲ್ಲ ಹರಿಯುವ ನೀರಿನ ಆಶ್ರಯವಿದ್ದಂತೆ, ಚರ್ಮವೇ ಎಲ್ಲ ಸ್ಪರ್ಶಗಳ ಸಾಧನವಿದ್ದಂತೆ, ಮನವೇ ಎಲ್ಲ ವಿಚಾರಗಳ ಆಧಾರವಿದ್ದಂತೆ ಆತ್ಮನೇ ಎಲ್ಲ ವಸ್ತುಗಳ ಮೂಲಾಧಾರನು (ಬೃ, ಅ ೨, ಬ್ರಾ ೪, ಮಂ ೧೧.). ನೀರಿನಲ್ಲಿ ಬೆರೆತ ಉಪ್ಪು ಆ ನೀರಲ್ಲಿ ಸರ್ವವ್ಯಾಪಿಯಾಗಿರುವಂತೆ ಆತ್ಮನು ವಿಶ್ವವ್ಯಾಪಿಯು ಎಂಬ ಉಪಮೆಯನ್ನು ಅವನಾದರೂ ಉಪಯೋಗಿಸುವನು. ಎರಡನೆಯ ಮಾತೆಂದರೆ ಎಲ್ಲ ವಸ್ತುಗಳು ಆತ್ಮನಿಗೋಸ್ಕರವೇ ಅಸ್ತಿತ್ವದಲ್ಲಿರುವವು, ಹಾಗೆ ತಿಳಿಯದಿದ್ದರೆ ಅವೆಲ್ಲ ಮಾಯವಾಗಿ ಹೋಗುವವು ( ಬೃ, ಅ ೨, ಬ್ರಾ ೪, ಮಂ ೬. ). ಮೂರನೆಯ ಮಾತೆಂದರೆ, ಆತ್ಮನಿಗಾಗಿಯೇ ಎಲ್ಲ ವಸ್ತುಗಳೂ ನಮಗೆ ಪ್ರಿಯವಿರುವವು. ಅಂತಃಕರಣದ ಪ್ರತಿಯೊಂದು ಪ್ರೇಮವ್ಯಾಪಾರದಲ್ಲಿ ಆತ್ಮನು ಆತ್ಮನನ್ನು ಅಕ್ಕರದಿಂದ ಕರೆಯುವನು. ಆತ್ಮಸಾಕ್ಷಾತ್ಕಾರವೇ ನಮ್ಮ ಎಲ್ಲ ಪ್ರಯತ್ನಗಳ ಅಂತಿಮ ಸಾಧ್ಯವು ( ಬೃ, ಅ ೨, ಖಂ ೪, ಮಂ ೫. ). ನಾಲ್ಕನೆಯದೇನೆಂದರೆ, ಆತ್ಮನೊಬ್ಬನೇ ಸತ್ಯನು, ನಿತ್ಯನು, ಮಿಕ್ಕದ್ದೆಲ್ಲ ' ಆರ್ತವು ' ವ್ಯರ್ಥ, ಪೊಳ್ಳು ನೋಟವು ಎಂಬ ಮತವನ್ನು ಈ ಮುನಿಯು ಪ್ರಕಟಮಾಡಿರುವನು (ಬೃ, ಅ ३, ಬ್ರಾ ೪, ಮಂ ೨.). ಆಮೇಲೆ ಋಷಿಯು ' ನೇತಿ ನೇತಿ ' ಎಂದು ಆತ್ಮಸ್ವರೂಪದ ವರ್ಣನೆಯನ್ನು ಮಾಡಿರುವನು. ಆತ್ಮನು ಸಣ್ಣವನೂ ಅಲ್ಲ ದೊಡ್ಡವನೂ ಅಲ್ಲ ಹ್ರಸ್ವನೂ ಅಲ್ಲ ದೀರ್ಘನೂ ಅಲ್ಲ, ಅವನು ಕಣ್ಣು ಬಣ್ಣಗಳಿಲ್ಲದವನು, ರಸರುಚಿರಹಿತನು ಎಂದು ಆತ್ಮನ ವರ್ಣನೆಯು ( ಬೃ, ಅ ३, ಬ್ರಾ ೮, ಮಂ ೮. ) ಕೊಡಲ್ಪಟ್ಟಿರುವದು. ಶಾಂಡಿಲ್ಯನು ಮಾಡಿದ ಆತ್ಮನ ವರ್ಣನೆಗೂ ಇದಕ್ಕೂ ಇದ್ದ ವಿರೋಧಾಭಾಸವು ಮನೋವೇಧಕವಿರುವದು. ಆತ್ಮನ ಅಸ್ತಿತ್ವವನ್ನು ಸಿದ್ಧ ಮಾಡುವಾಗ ಆತ್ಮನೇ ಎಲ್ಲ ವಸ್ತುಗಳನ್ನು ನಿಯಮಿಸುವವನು, ಹಗಲಿರುಳು, ಪ್ರಹರಗಳು ಅವನಿಂದಲೇ ನಿಯಮಿಸಲ್ಪಟ್ಟಿವೆ, ಎಂದು ಯಾಜ್ಞವಲ್ಕ್ಯನು ಹೇಳಿರುವನು. ಆತ್ಮನು ಸರ್ವ ವಿಶ್ವವ್ಯಾಪಿಯು. ಅವನು ಅಂತರ್ಯಾಮಿಯು. ಅವನೇ ಸೂತ್ರಧಾರಿಯು, ಎಲ್ಲರ ಅಂತರಂಗದಲ್ಲಿದ್ದು ನಮ್ಮನ್ನು ಸೂತ್ರಗೊಂಬೆಗಳಂತೆ ಅವನೇ ಆಡಿಸುವನು ( ಬೃ, ಅ ३, ಬ್ರಾ ೭. ). ಆತ್ಮನೇ ಎಲ್ಲಕ್ಕೂ ಶ್ರೇಷ್ಠವಾದ ಜ್ಯೋತಿಯು, ಅವನ ತೇಜದಿಂದ ಮಿಕ್ಕ ತೇಜಗಳ ಬೆಳಗುವಿಕೆಯು. ಆತ್ಮನೇ ಮನುಷ್ಯನ ಜ್ಯೋತಿಯೆಂದು ಗೊತ್ತಾಯಿತೆಂದರೆ ಅವನಿಗೆ ಆತ್ಮದ ಅರಿವು ಆಗುವದು ( ಬೃ, ಅ ೪, ಬ್ರಾ ३, ಮಂ ೧-೬.).

ಆತ್ಮನೇ ನಿಜವಾಗಿ ಕೇಳುವವನು, ಹೇಳುವವನು, ನೋಡುವವನು, ವಿಚಾರಿಸುವವನು, ಅವನ ಹೊರ್ತು ಇನ್ನಾರು ವಿಚಾರಿಸುವವರು ? ಆತ್ಮನು ತನ್ನನ್ನು ತಾನೇ ಅರಿತುಕೊಳ್ಳು ವನು. ದ್ವೈತವಿದ್ದಲ್ಲಿ ಒಬ್ಬನು ಇನ್ನೊಬ್ಬನನ್ನು ನೋಡಬಲ್ಲನು. ಆದರೆ ಒಬ್ಬನೇ ಇದು ವಲ್ಲಿ ನೋಡುವ ಅಥವಾ ವಿಚಾರಿಸುವ ಕ್ರಿಯೆಯು ಅಸಾಧ್ಯವು. ಹೀಗಿರುವಾಗ ತನ್ನಲ್ಲಿ ತಾನು ಲೀನವಾಗುವದೊಂದೇ ಮಾರ್ಗವು. ( ಬೃ, ಅ ೨, ಬ್ರಾ ೪, ಮಂ ೧೪. ) ಆದರೆ ಇಂಥ ಆತ್ಮೈಕ್ಯ ಸ್ಥಿತಿಯಲ್ಲಿ ಕೂಡ ಇಂದ್ರಿಯಗಳು ತಮ್ಮ ಕ್ರಿಯೆಗಳನ್ನು ಮಾಡುತ್ತಲೇ ಇರುವವು. ಇದೊಂದು ಯಾಜ್ಞವಲ್ಕ್ಯನ ತತ್ವಜ್ಞಾನದಲ್ಲಿಯ ವಿಶೇಷವು ( ಬೃ, ಅ ೪, ಬ್ರಾ ೩, ಮಂ ೨೩–೩೦. ). ಮಿಕ್ಕ ಉಪನಿಷತ್ತತ್ವಜ್ಞರಂತೆ ಸ್ವಪ್ನಕಾಲದಲ್ಲಿ ಆತ್ಮನು ತನ್ನ ತೇಜ ವನ್ನು ಪಸರಿಸುವನೆಂದು ಈ ಋಷಿಯಾದರೂ ಹೇಳಿರುವನು (ಬೃ, ಅ ೪, ಬ್ರಾ ೩, ಮಂ ೯.). ಆತ್ಮನು ತನ್ನ ಗೂಡು ಬಿಟ್ಟು ಅದನ್ನು ತನ್ನ ಪ್ರಾಣದಿಂದ ರಕ್ಷಿಸುತ್ತ ಹೊರಬೀಳುವನೆಂದು ಯಾಜ್ಞವಲ್ಕ್ಯನು ( ಬೃ, ಅ ೪, ಬ್ರಾ ೩, ಮಂ ೧೨. ) ಹೇಳಿದರೂ ಅವನು ಹಾಗೆ ನಿಜವಾಗಿ ಹೊರಬೀಳದೇ ಆ ಪ್ರಕಾರದ ಆಭಾಸವು ಮಾತ್ರ ಆಗುವದೆಂದು ( ಬೃ, ಅ ೪, ಬ್ರಾ ೩, ಮಂ ೭. ) ಎಚ್ಚರದಿಂದ ಹೇಳಿರುವನು. ಮನುಷ್ಯನು ಕನಸಿನ ಲ್ಲಿರುವಾಗ ಅವನನ್ನು ಒಮ್ಮೆಲೆ ಎಬ್ಬಿಸಕೂಡದು, ಯಾಕಂದರೆ ಅವನ ಆತ್ಮವು ದೇಹಬಿಟ್ಟು ಹೋಗಿಬಿಡುವ ಭಯವಿದೆ ಎಂದು ( ಬೃ, ಅ ೪, ಬ್ರಾ ೩, ಮಂ, ೧೪. ) ಒಮ್ಮೆ ಉಲ್ಲೇ ಖಿಸಿದ್ದಾನೆ. ಸ್ವಪ್ನ ಸ್ಥಿತಿಯಲ್ಲಿ ತಂದೆಯು ತಂದೆಯಲ್ಲ, ತಾಯಿಯು ತಾಯಿಯಲ್ಲ, ಕಳ್ಳನು ಕಳ್ಳನಲ್ಲ, ಕೊಲೆಗಾರನು ಕೊಲೆಗಾರನಲ್ಲ, ಬ್ರಾಹ್ಮಣನು ಬ್ರಾಹ್ಮಣನಲ್ಲ (ಬೃ, ಅ ೪. ಬ್ರಾ ೩-೨೨.). ಸುಷುಪ್ತಿಯನ್ನು ಕುರಿತು ಆರುಣಿಯಂತೆ ಯಾಜ್ಞವಲ್ಕ್ಯನಾದರೂ ಶ್ರಮವೇ ಆ ಸ್ಥಿತಿಯ ಕಾರಣವೆಂದು ಹೇಳಿರುವನು ( ಬೃ, ಅ ೪, ಬ್ರಾ ೩, ಮಂ ೧೯. ). ಸುಷುಪ್ತಿ ಯನ್ನು ಸಂಧ್ಯಾಸಮಯಕ್ಕೆ ಹೋಲಿಸಿ ಆಗ ಆತ್ಮನು ಈ ಲೋಕ ಮತ್ತು ಪರಲೋಕ ಇವೆರಡನ್ನೂ ನೋಡುವನೆಂದು ವರ್ಣಿಸಿರುವನು ( ಬೃ, ಅ ೪, ಬ್ರಾ ೩, ಮಂ ೧೯ ). ಯಾಜ್ಞವಲ್ಕ್ಯನು ಮರಣವನ್ನು ವರ್ಣಿಸುವಾಗ ಬಹಳೇ ಸುಂದರವಾದ, ಮನಗೊಳ್ಳುವ, ರೂಪಕಗಳನ್ನು ಪಯೋಗಿಸಿರುವನು. ಅವುಗಳನ್ನು ನೋಡಲಾಗಿ ಅವನು ನಿಸರ್ಗದ ಸೂಕ್ಷ್ಮ ನಿರೀಕ್ಷಕನಿದ್ದನೆಂದು ಹೇಳಬಹುದು. ಆ ಕಾಲಕ್ಕೆ ಶಾರೀರ ಆತ್ಮನ ಮೇಲೆ ಪ್ರಾಜ್ಞಾತ್ಮನು ಆರೂಢನಾಗುವನೆಂದೂ ಶಾರೀರ-ಆತ್ಮವು ಹೇರಿದ ಬಂಡಿಯಂತೆ ಎಳೆಯುತ್ತ ಸಾಗುವದೆಂದೂ ಹೇಳಿರುವನು ( ಬೃ, ಅ ೪, ಬ್ರಾ ೩, ಮಂ ೩೫. ). ಮರಣದ ಪೂರ್ವ ದಲ್ಲಿ ಕಣ್ಣಿನಲ್ಲಿಯ ಪುರುಷನು ವಿಮುಖನಾಗುವನು ( ಬೃ, ಅ ೪, ಬ್ರಾ ೪, ಮಂ ೧. ). ಆ ಮೇಲೆ ಅಂತಃಕರಣದ ಅಗ್ರವು ತೇಜೋಮಯವಾಗುವದು, ಆ ಬೆಳಕಿನಿಂದ ಆತ್ಮನು

ಕಣ್ಣಿನ, ತಲೆಯ ಅಥವಾ ಇನ್ನಾವದೊಂದು ದ್ವಾರದಿಂದ ಹೊರಬೀಳುವನು (ಬೃ, ಅ ೪, ಬ್ರಾ ೪, ಮಂ ೨.). ಕರ್ಮವೊಂದೇ ಅವನನ್ನು ಹಿಂಬಾಲಿಸುವದು, ಅದೇ ಅವನ ಕ್ರತುವು (ಬೃ, ಅ ೪, ಬ್ರಾ ೪, ಮಂ ೫.). ಜಾರತ್ಕಾರವನಿಗೆ ಈ ಕರ್ಮತತ್ವವನ್ನೇ ಹೇಳಿ, ಯಾಜ್ಞವಲ್ಕ್ಯನು (ಬೃ, ಅ ೩, ಬ್ರಾ ೨, ಮಂ ೧೩.) ಅವನನ್ನು ಮಾತಾಡದಂತೆ ಮಾಡಿದನು. ಜಲಾಯುಕವು ಹುಲ್ಲುಕಡ್ಡಿಯಿಂದ ಹುಲ್ಲುಕಡ್ಡಿಗೆ ಹೋಗುವಂತೆ ತನಗಾಗಿ ಎರಡನೆಯ ದೇಹವೊಂದನ್ನು ಸಿದ್ಧಮಾಡಿದ ಮೇಲೆಯೇ ಆತ್ಮನು ತನ್ನ ಮೊದಲಿನ ದೇಹವನ್ನು ಬಿಡುವನೆಂದು ಯಾಜ್ಞವಲ್ಕ್ಯನ ಮತವು (ಬೃ, ಅ ೪, ಬ್ರಾ ೪, ಮಂ ೩.). ಅಕ್ಕಸಾಲಿಗನು ಹಳೇ ಚಿನ್ನದಿಂದ ಹೊಸ ಹೊಳೆಯುವ ಅಲಂಕಾರವನ್ನು ಮಾಡುವಂತೆ ಆತ್ಮನು ಒಂದು ಜನ್ಮದಿಂದ ಮತ್ತೊಂದಕ್ಕೆ ಹೋಗಿ ಅದನ್ನು ಹೆಚ್ಚು ತೇಜೋಮಯವಾಗಿ ಮಾಡುವನು (ಬೃ, ಅ ೪, ಬ್ರಾ ೪, ಮಂ ೪.). ದೇಹಬಿಟ್ಟು ತೆರಳುವಾಗ ಏನಾದರೂ ಕಾಮನೆಗಳು ಉಳಿದಿದ್ದರೆ ಆತ್ಮನು ಪುನಃ ದೇಹಧಾರಣವನ್ನು ಮಾಡುವನು. ಇಲ್ಲದಿದ್ದರೆ ಬ್ರಹ್ಮನಲ್ಲಿ ಐಕ್ಯಹೊಂದುವನು (ಬೃ, ಅ ೪, ಬ್ರಾ ೪, ಮಂ ೬.). ಆ ಸ್ಥಿತಿಯಲ್ಲಿ ಯಾವ ಪ್ರಜ್ಞೆಯೂ ಉಳಿಯದು. ಆತ್ಮನು ಶರೀರಕ್ಕೆ ಕಾರಣವಾದ ಈ ಪಂಚಭೂತಗಳಲ್ಲಿ ಸೇರುವದರಿಂದ ಪ್ರಜ್ಞೆಯೆಂಬ ಕ್ಷಣಿಕ ಆಭಾಸವು ಉಂಟಾಗುವದು (ಬೃ, ಅ ೨, ಬ್ರಾ ೪, ಮಂ ೧೨.). ಈ ಬಗೆಯ ತತ್ವಜ್ಞಾನವನ್ನು ಕೇಳಿ ಯಾಜ್ಞವಲ್ಕ್ಯನ ಹೆಂಡತಿಯಾದ ಮೈತ್ರೇಯಿಯು ಬೆರಗಾದಳು. ಆದರೆ ಶುದ್ಧ ಅಧ್ಯಾತ್ಮವಾದಿಯಾದ ಮತ್ತು ಪುನರ್ಜನ್ಮವೆಂಬುದು ಸಹ ಮಾಯೆಯೆಂದು ಪ್ರತಿಪಾದಿಸುವ ಯಾಜ್ಞವಲ್ಕ್ಯನ ಈ ತತ್ವಜ್ಞಾನವನ್ನು ನೋಡಿ ನಾವು ಆಶ್ಚರ್ಯಚಕಿತರಾಗುವ ಕಾರಣವಿಲ್ಲ, ಎಲ್ಲೆಲ್ಲಿಯೂ ಆತ್ಮನು ತುಂಬಿರುವನೆಂದ ಮೇಲೆ ಪುನರ್ಜನ್ಮದ ಕಾಲಕ್ಕೆ ಅವನು ಎಲ್ಲಿಂದ ಎಲ್ಲಿಗೆ ಹೋಗುವನೆಂದು ನಾವು ಯಾಜ್ಞವಲ್ಕ್ಯನನ್ನು ಒಂದು ಬಗೆಯ ಚೇಷ್ಟೆಯಿಂದ ಕೇಳಬಹುದು. ಸಾಮಾನ್ಯ ಸ್ತ್ರೀಯಾದ ಮೈತ್ರೇಯಿಯು ಈ ಬಗೆಯ ಪ್ರಶ್ನೆಗಳನ್ನು ಕೇಳಬಹುದೆಂದು ಭಾವಿಸಿ ತಾನು ಹೇಳಿದ ಜ್ಞಾನವು ಇನ್ನು ಸಾಕು ಎಂದು ಜಾಣತನದಿಂದ ಅಲ್ಲಿಯೇ ನಿಲ್ಲಿಸಿಬಿಟ್ಟಿರುವನು (ಬೃ, ಅ ೨, ಬ್ರಾ ೪, ಮಂ ೧೩.).

**೨೦. ಆಗಿನ ಸಾಮಾಜಿಕ ಸ್ಥಿತಿ—** ಇನ್ನು ಈ ತತ್ವಜ್ಞರು ಯಾವ ಸಾಮಾಜಿಕ ಸ್ಥಿತಿಯಲ್ಲಿದ್ದು ತಮ್ಮ ಅತ್ಯುಚ್ಚ-ಆಧ್ಯಾತ್ಮಿಕ ಕಲ್ಪನೆಗಳನ್ನು ಕಟ್ಟಿದರೋ ಆ ಪರಿಸ್ಥಿತಿಯನ್ನು ಸ್ವಲ್ಪ ವಿಚಾರಿಸುವ.

**ವರ್ಣಾಶ್ರಮಗಳು—** ಉಪನಿಷತ್ಕಾಲದಲ್ಲಿ ವರ್ಣಗಳ ಪ್ರಬಂಧವು ಇದ್ದಂತೆ ತೋರುತ್ತಿದೆ. ಅದು ಪುರುಷಸೂಕ್ತದ ಕಾಲಕ್ಕೆ ಅಂದರೆ ಉಪನಿಷತ್ತುಗಳ ಕಾಲಕ್ಕೂ.

ಪೂರ್ವದಲ್ಲಿಯೇ ಸ್ಥಾಪಿಸಲ್ಪಟ್ಟಿತೆಂದು ಹೇಳಬಹುದು. ಬೃಹದಾರಣ್ಯಕದಲ್ಲಿ ಈ ವರ್ಣ ನಿರ್ಮಾಣದ ಬಗ್ಗೆ ಒಂದು ಹೊಸ ತರದ ಕ್ರಮವು ಹೇಳಲ್ಪಟ್ಟಿದೆ. ಭಗವದ್ಗೀತೆಯಲ್ಲಿ ಹೇಳಿದಂತೆ 'ಗುಣ-ಕರ್ಮಾ' ನುಸಾರವಾಗಿ ದೇವರು ಅವುಗಳನ್ನು ನಿರ್ಮಿಸಿದನೆಂದು ಪ್ರತಿಪಾದಿಸದೇ ಒಂದು ಬೇರೆ ಬಗೆಯಿಂದ ಬೃಹದಾರಣ್ಯಕವು ವರ್ಣವಿಚಾರವನ್ನು ಹೇಳುವದು. ಮೊದಲು ಬ್ರಹ್ಮನೊಬ್ಬನೇ ಇದ್ದನು. ಆದರೆ ಅಷ್ಟರಿಂದ ಸಂತುಷ್ಟನಾಗದೆ ಅವನು ಶ್ರೇಷ್ಠರಾದ ಕ್ಷತ್ರಿಯರನ್ನು ನಿರ್ಮಿಸಿದನು. ಆಗ ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು, ಈಶ ಮುಂತಾದವರು ಹುಟ್ಟಿದರು. ಇವರು ಸ್ವರ್ಗ ದಲ್ಲಿಯ ಕ್ಷತ್ರಿಯರು. ಇಷ್ಟರಿಂದಲೂ ಬ್ರಹ್ಮನಿಗೆ ಸಮಾಧಾನವಾಗಲಿಲ್ಲ. ಅವನು ವಸುಗಳು, ಆದಿತ್ಯರು, ಮರುತರು, ವಿಶ್ವೇದೇವತೆಗಳು ಮುಂತಾದ ವೈಶ್ಯರನ್ನು ಹುಟ್ಟಿಸಿ ದನು. ಆದರೂ ಎಲ್ಲವೂ ಪೂರ್ಣವಾಯಿತೆಂದು ಅವನಿಗೆ ತೋರಲಿಲ್ಲ. ಅವನು ಪೂಷನ್ ಮುಂತಾದ ಶೂದ್ರರನ್ನು ನಿರ್ಮಿಸಿದನು. ಆದರೆ ಇನ್ನೂ ಅಪೂರ್ಣತ್ವವಿರುವದೆಂದು ಭಾವಿಸಿ ಎಲ್ಲ ವರ್ಣಗಳನ್ನು ಒಂದೇ ಸೂತ್ರದಿಂದ ನಿಯಮಿಸುವದಕ್ಕಾಗಿ ಧರ್ಮವನ್ನು ನಿರ್ಮಿಸಿದನು. ಆಮೇಲೆ ಬ್ರಹ್ಮನು ದೇವತೆಗಳ ಬ್ರಾಹ್ಮಣನಾದ ಅಗ್ನಿಯ ರೂಪವನ್ನು ಧರಿಸಿ ಸ್ವರ್ಗದಲ್ಲಿದ್ದ ವರ್ಣಗಳಂತೆ ಈ ಲೋಕದಲ್ಲಿಯೂ ವರ್ಣಗಳನ್ನು ನಿರ್ಮಿಸಿದನು. ಪ್ಲೇಟೋನ 'ಕಲ್ಪನಾವಾದ' ದಲ್ಲಿರುವ ಮೂಲ 'ಕಲ್ಪನೆಗಳು' ಮತ್ತು ಪೃಥ್ವಿಯಲ್ಲಿಯ ಅವುಗಳ 'ಪ್ರತಿಬಿಂಬ' ದ ಸಂಗತಿಯಂತೆಯೇ ಸ್ವರ್ಗದಲ್ಲಿದ್ದ ವರ್ಣಗಳಿಗನುಸಾರವಾಗಿಯೇ ಪೃಥ್ವಿಯ ಮೇಲೆ ವರ್ಣಗಳು ನಿರ್ಮಿಸಲ್ಪಟ್ಟವು ಎಂಬ ಈ ವರ್ಣನೆಯು ಇರುವದು (ಬೃ, ಅ ೧, ಬ್ರಾ ೪, ಮಂ ೧೧–೧೫.). ಇನ್ನು ಆಶ್ರಮಗಳ ಬಗ್ಗೆ ವಿಚಾರಿಸಿ ನೋಡಿ ದರೆ ಬ್ರಹ್ಮಚರ್ಯ ಮತ್ತು ಗೃಹಸ್ಥ ಎಂಬ ಎರಡು ಆಶ್ರಮಗಳಂತೂ ಇದ್ದವೆಂದು ಸ್ಪಷ್ಟ ವಾದ (ತೈ, ವ ೧, ಅನು ೧೧.) ಉಲ್ಲೇಖವಿದೆ. ವೈರಾಗ್ಯವು ಉಂಟಾದ ಕೂಡಲೆ ಜಗ ತ್ತನ್ನು ತ್ಯಜಿಸಬೇಕು ಮುಂತಾದ ಉಪದೇಶವನ್ನು ನೋಡಿದರೆ ವಾನಪ್ರಸ್ಥಾಶ್ರಮವೂ ಇತ್ತೆಂದು ಹೇಳಬಹುದು. ಮುಂಡಕದಲ್ಲಿಯ ಮತ್ತು ಇತರ ಕಡೆಯ ಸನ್ಯಾಸದ ಉಲ್ಲೇಖವನ್ನು ಲಕ್ಷಿಸಿದರೆ ಎಲ್ಲಕ್ಕೂ ಕೊನೆಯದಾದ ಸಂನ್ಯಾಸಾಶ್ರಮವಾದರೂ ಇತ್ತೆಂದು ಅನ್ನಬೇಕಾಗುವದು. ಛಾಂದೋಗ್ಯದಲ್ಲಿ ಪರಿವಿಡಿಯಿಂದ ನಾಲ್ಕು ಆಶ್ರಮಗಳು ಉಲ್ಲೇಖಿ ಸಲ್ಪಟ್ಟಿವೆ. ಗೃಹಸ್ಥಾಶ್ರಮಿಗಳು ಯಜ್ಞ, ದಾನ, ಅಭ್ಯಾಸಗಳಲ್ಲಿ ನಿರತರಿರಬೇಕೆಂದೂ ವಾನಪ್ರಸ್ಥರು ತಪಸ್ಸನ್ನು ಮಾಡುತ್ತಿರಬೇಕೆಂದೂ, ಬ್ರಹ್ಮಚಾರಿಗಳು ಬ್ರಹ್ಮಚರ್ಯವ್ರತ ದಿಂದಿದ್ದು ಗುರುಸೇವೆಯಲ್ಲಿ ಸವೆಯುತ್ತಿರಬೇಕೆಂದೂ ಉಪದೇಶವಿರುವದು. ಮರಣ ಪಶ್ಚಾತ್ ಇವರೆಲ್ಲರೂ ಶ್ರೇಷ್ಠವಾದ ಲೋಕಗಳನ್ನು ಪಡೆಯುವರು. ಆದರೆ ಬ್ರಹ್ಮ

ಸಂಸ್ಥನೊಬ್ಬನೇ ಅಂದರೆ ಸನ್ಯಸ್ತವೃತ್ತಿಯಿಂದ ಬ್ರಹ್ಮಚಿಂತನದಲ್ಲಿ ನಿಮಗ್ನನಿರುವವ ನೊಬ್ಬನೇ ಅಮೃತತ್ವವನ್ನು ಪಡೆಯುವನು ( ಛಾಂ, ಅ ೨, ಖಂ ೨೩, ಮಂ ೧. ) ಎಂದು ವರ್ಣನೆಯಿರುವದು. ಈ ಎಲ್ಲ ವಚನಗಳನ್ನು ವಿಮರ್ಶಿಸಿದರೆ ಎಲ್ಲ ಆಶ್ರಮಗಳ ವಿಷ ಯವು ಛಾಂದೋಗ್ಯದಂಥ ಪ್ರಾಚೀನ ಉಪನಿಷತ್ತಿನಲ್ಲಿ ಕೂಡ ವಿವರಿಸಲ್ಪಟ್ಟಿದೆ ಎಂಬದು ಸ್ಪಷ್ಟವಾಗುವದು.

(೨) **ಸಮಾಜದಲ್ಲಿ ಸ್ತ್ರೀಯರ ಸ್ಥಾನವು—** ಉಪನಿಷತ್ತುಗಳಲ್ಲಿ ಮೂರು ಬಗೆಯ ಸ್ತ್ರೀಯರ ವರ್ಣನೆ ಇರುವದು. ಕಾತ್ಯಾಯನಿಯು ಸಾಮಾನ್ಯ ಸಂಸಾರೀ ಸ್ತ್ರೀ ವರ್ಗಕ್ಕೆ ಸೇರಿದವಳು. ಬೃಹದಾರಣ್ಯಕದಲ್ಲಿ ಆಕೆಯ ಹೆಸರಿನ ಉಲ್ಲೇಖವಿರುವದು. ಯಾಜ್ಞವಲ್ಕ್ಯನಂಥ ಋಷಿಗೆ ಯೋಗ್ಯ ಧರ್ಮಪತ್ನಿಯಾದ ಮೈತ್ರೇಯಿಯು ಆಧ್ಯಾತ್ಮಿಕ ಜ್ಞಾನದ ಪಿಪಾಸೆಯಿದ್ದ ಸ್ತ್ರೀವರ್ಗಕ್ಕೆ ಸೇರಿದವಳು. ವಾಗ್ಯುದ್ಧದಲ್ಲಿ ನಿಷ್ಣಾತಳಾದ ಗಾರ್ಗಿಯು ಸ್ತ್ರೀಯರ ಅಧಿಕಾರಗಳಿಗಾಗಿ ಹೆಣಗಾಡುವ ಉಪನಿಷತ್ಕಾಲದ ಹೆಣ್ಣುಗಲಿಯು. ಅನೇಕ ತತ್ವಜ್ಞರಿಂದ ಗಜಬಜಿಸಿದ ಜನಕರಾಜನ ಓಲಗಕ್ಕೆ ಸಹ ಬೆದರದೇ ಯಾಜ್ಞ ವಲ್ಕ್ಯನ ಸಂಗಡ ವಾದಿಸಲಿಕ್ಕೆ ಮುಂದಾದ ಗಾರ್ಗಿಯು, ಇಕೋ ಎರಡು ಪ್ರಶ್ನರೂಪ ಬಾಣಗಳನ್ನು ಬಿಡುವೆನು, ಇವುಗಳನ್ನು ತಡೆದರೆ ನೀನು ಎಲ್ಲಕ್ಕೂ ಶ್ರೇಷ್ಠನೆಂದು ಒಪ್ಪುವೆನು ಎಂದು ಎದೆತಟ್ಟಿ ಹೇಳಿರುವಳು ( ಬೃ, ಅ ೩, ಬ್ರಾ ೮, ಮಂ ೨. ). ಬಲಿಷ್ಠಳೂ ಧೈರ್ಯಶಾಲಿಯೂ ಆದ ಗಾರ್ಗಿಯು ಪ್ರಶ್ನೆಗಳನ್ನು ಕೇಳುತ್ತ ಕೇಳುತ್ತ ಯಾಜ್ಞವಲ್ಕ್ಯ ನನ್ನು ಹತ್ತಿಗೆ ತಂದು ಬಿಟ್ಟಳು. ಮುಂದೆ ಕೇಳಿದರೆ ನಿನ್ನ ತಲೆಕತ್ತರಿಸಿ ಬೀಳುವದೆಂಬ ಭಯವನ್ನು ಅವನು ಆಕೆಗೆ ತೋರಿಸದಿದ್ದರೆ ಆಕೆಯು ಯಾಜ್ಞವಲ್ಕ್ಯನ ಬಾಯಿಯನ್ನು ಪೂರಾ ಕಟ್ಟಿಬಿಡುತ್ತಿದ್ದಳು. ಆದರೆ ಯಾಜ್ಞವಲ್ಕ್ಯನ ಈ ಬೆದರಿಕೆಯಿಂದ ಕಳೆಗೆಟ್ಟಂತೆ ಕಂಡರೂ ಆಕೆಯು ಪುನಃ ಎರಡು ಪ್ರಶ್ನೆಗಳನ್ನು ಕೇಳಿ ಯಾಜ್ಞವಲ್ಕ್ಯನ ಬಾಯಿಂದಲೇ ಆತ್ಮನು ಸರ್ವವ್ಯಾಪಕನೆಂಬ ತತ್ವವನ್ನು ನುಡಿಸಿರುವಳು.

(೩) **ಬ್ರಾಹ್ಮಣರು ಮತ್ತು ಕ್ಷತ್ರಿಯರು—** ರಾಜಸೂಯಯಜ್ಞದಲ್ಲಿ ಬ್ರಾಹ್ಮಣನು ಕ್ಷತ್ರಿಯನಿಗಿಂತ ನೀಚಸ್ಥಾನದಲ್ಲಿ ಕೂಡಬೇಕೆಂದು ಬೃಹದಾರಣ್ಯಕದಲ್ಲಿ ( ಅ ೧, ಬ್ರಾ ೪, ಮಂ ೧೧. ) ಹೇಳಿದೆ. ಆದರೆ ಕ್ಷತ್ರಿಯನು ಬ್ರಾಹ್ಮಣರಿಂದ ಹುಟ್ಟಿದವ ನಾದುದರಿಂದ ಅವನು ಯಾವ ಪರಮೋಚ್ಚಪದವನ್ನು ಪಡೆದರೂ ಬ್ರಾಹ್ಮಣನ ಆಶ್ರಯ ದಿಂದ, ಅವನ ಉಪದೇಶಕ್ಕೆ ಒಳಗಾಗಿಯೇ ನಡೆಯತಕ್ಕದ್ದೆಂದು ಅದೇ ಉಪನಿಷತ್ತಿನಲ್ಲಿ ಉಲ್ಲೇಖವಿದೆ. ಬ್ರಾಹ್ಮಣಸಮಾಜದಲ್ಲಿ ಆರುಣಿಯೇ ಬ್ರಹ್ಮಜ್ಞಾನವನ್ನು ಪಡೆದವರಲ್ಲಿ ಮೊದಲಿಗನೆಂದು ಜೈವಲಿಯು ಛಾಂದೋಗ್ಯದಲ್ಲಿ ( ಅ ೫, ಖಂ ೩, ಮಂ ೭. ) ಹೇಳಿದುದನ್ನು

ನೋಡಿದರೆ ಕ್ಷತ್ರಿಯರೇ ಈ ವಿದ್ಯೆಯಲ್ಲಿ ಶ್ರೇಷ್ಠರಿದ್ದರೆಂದು ತೋರುವದು. ಜೈವಲಿಯು ತನಗಿಂತ ಶ್ರೇಷ್ಠನೆಂಬ ಭಾವನೆಯಿಂದ ಆರುಣಿಯು ಶಿಷ್ಯನೋಪಾದಿಯಲ್ಲಿ ಹೋಗಿ ಅವನಿಗೆ ಹೇಳಿಕೊಂಡಮೇಲೆ ಮಾತ್ರ ಜೈವಲಿಯು ಅವನಿಗೆ ಉಪದೇಶಮಾಡಲನುವಾದನು (ಬೃ, ಅ ೬, ಬ್ರಾ ೨, ಮಂ ೫-೭.). ಆರುಣಿಯು ಸಮಿತ್ಪಾಣಿಯಾಗಿ ನಮ್ರತೆಯಿಂದ ಹೋಗಲಾಗಿ ನೀನು ಬ್ರಾಹ್ಮಣ್ಯವನ್ನು ಹೊಂದಲಿಕ್ಕೆ ಅರ್ಹನೆಂದು ಚಿತ್ರಗಾರ್ಗ್ಯಾಯನೀ ರಾಜನು ಸಂತೋಷದಿಂದ ಆರುಣಿಗೆ ಹೇಳಿ ಆಮೇಲೆ ಅವನಿಗೆ ಬ್ರಹ್ಮೋಪದೇಶವನ್ನು ಮಾಡಿದನೆಂದು ಕೌಷೀತಕಿಯಲ್ಲಿ (ಅ ೧, ಮಂ ೧.) ವರ್ಣನೆಯಿರುವದು. ಇವೆಲ್ಲ ಸಂಗತಿಗಳನ್ನು ನೋಢಿದರೆ ಆ ಕಾಲದಲ್ಲಿ ಕ್ಷತ್ರಿಯರೇ ಐಹಿಕ ಪಾರತ್ರಿಕ ವರ್ಚಸ್ಸಿನಲ್ಲಿ ಬ್ರಾಹ್ಮಣರಿಗಿಂತ ಶ್ರೇಷ್ಠರಿದ್ದರೆಂಬುದು ಸಿದ್ಧವಾಗುವದು. ಇದಕ್ಕೆ ಪ್ರತಿಯಾಗಿ ಬೃಹದಾರಣ್ಯಕ ಮತ್ತು ಕೌಷೀತಕಿ ಉಪನಿಷತ್ತುಗಳಲ್ಲಿ ಗಾರ್ಗ್ಯನು ಅಜಾತಶತ್ರುವಿನೆಡೆಗೆ ಬ್ರಹ್ಮವಿದ್ಯೆಯನ್ನು ಕಲಿಯಲಿಕ್ಕೆ ಹೋದಾಗ ಈ ವಿದ್ಯೆಗಾಗಿ ಬ್ರಾಹ್ಮಣನು ಕ್ಷತ್ರಿಯನೆಡೆಗೆ ಬರುವದು ಅಪವಾದಾತ್ಮಕವೆಂದು ಅಜಾತಶತ್ರುವು ಅಂದಿರುವನು. ಹಾಗಿದ್ದರೂ ಗಾರ್ಗ್ಯನು ಸಮಿತ್ಪಾಣಿಯಾಗಿ ನಮ್ರತೆಯಿಂದ ಬಂದಕೂಡಲೇ ಅಜಾತಶತ್ರುವು ಆತ್ಮವಿಶ್ವಾಸದಿಂದ ತನಗಿರುವ ಶ್ರೇಷ್ಠಜ್ಞಾನವನ್ನು ಅವನಿಗುಪದೇಶಿಸಿರುವನು (ಬೃ, ಅ ೨, ಬ್ರಾ ೧, ಮಂ ೧೫.) (ಕೌ, ಅ ೪, ಮಂ ೧-೧೯.). ಈ ಮೇಲಿನ ಉದಾಹರಣೆಯನ್ನು ನೋಡಿದರೆ, ಸಾಮಾನ್ಯವಾಗಿ ಬ್ರಹ್ಮವಿದ್ಯೆಯಲ್ಲಿ ಬ್ರಾಹ್ಮಣರೇ ಶ್ರೇಷ್ಠರು, ಆದರೆ ಒಮ್ಮೊಮ್ಮೆ ಕ್ಷತ್ರಿಯರು ಕೂಡ ಹೆಚ್ಚಿನ ವರ್ಚಸ್ಸನ್ನು ಹೊಂದುತ್ತಿದ್ದರೆಂದು ತೋರುವದು. ಕೊನೆಗೆ ಬೃಹದಾರಣ್ಯಕ ಮತ್ತು ಮೈತ್ರ್ಯುಪನಿಷತ್ತಿನಲ್ಲಿಯ ಕೆಲವೊಂದು ಭಾಗಗಳನ್ನು ನೋಡಿದರೆ ಬ್ರಾಹ್ಮಣರು ಕ್ಷತ್ರಿಯರಿಗಿಂತ ಬ್ರಹ್ಮವಿದ್ಯೆಯಲ್ಲಿ ಬಹಳೇ ಉಚ್ಚಸ್ಥಾನವನ್ನು ಪಡೆದಿದ್ದರೆಂತಲೂ ಕ್ಷತ್ರಿಯ ಅರಸರು ಬ್ರಾಹ್ಮಣ ಗುರುಗಳ ಕಡೆಯಿಂದ ಅದನ್ನು ಕಲಿಯುತ್ತಿದ್ದರೆಂತಲೂ ಕಂಡುಬರುವದು. ಯಾಜ್ಞವಲ್ಕ್ಯನ ಅದ್ವಿತೀಯವಾದ ಬುದ್ಧಿಸಾಮರ್ಥ್ಯವನ್ನೂ ಅತುಲವಾದ ಅಧ್ಯಾತ್ಮಜ್ಞಾನವನ್ನೂ ನೋಡಿ ಬೆರಗಾಗಿ, 'ಹೇ ಮಹಾಮುನಿಯೇ, ಇಕೋ, ಈ ರಾಜ್ಯವನ್ನು ನಿನಗರ್ಪಿಸಿ ನಿನ್ನ ಚರಣಸೇವೆಗೆ ನಾನು ಸಿದ್ಧನಾಗಿರುವೆನು, ಆಜ್ಞಾಪಿಸಬೇಕು,' ಎಂದು ಜನಕರಾಜನು ಅನ್ನುವದನ್ನು (ಬೃ, ಅ ೪, ಬ್ರಾ ೨, ಮಂ ೪.) ನೋಡಿದರೆ ಈ ಮಾತಿನ ಪ್ರತೀತಿಯಾಗುವದು. ಪಶ್ಚಾತ್ತಾಪದಿಂದ ಆರ್ತನಾಗಿ ಬೃಹದ್ರಥರಾಜನು ಶಾಕಾಯನ್ಯ ಮುನಿಯ ಕಡೆಗೆ ಹೋಗಿ, ಬಾಯಾರಿ ಬಳಲುವ ಕಪ್ಪೆಯನ್ನು ಬತ್ತಿದ ಬಾವಿಯಿಂದ ತೆಗೆದು ನೀರಲ್ಲಿ ಬಿಡುವಂತೆ ನನ್ನನ್ನು ಈ ಭವದುಃಖದೊಳಗಿಂದ ಬಿಡಿಸಿ ಸುಖಭಾಗಿಯನ್ನಾಗಿ ಮಾಡೆಂದು ಹೇಳಿದ ಸಂಗತಿಯು ಮೈತ್ರ್ಯುಪನಿಷತ್ತಿನಲ್ಲಿ (ಅ ೧, ಮಂ ೧-೧೭.) ಇರುವದು. ಈ ಅವ

ತರಣಗಳನ್ನು ನೋಡಲಾಗಿ ಬ್ರಾಹ್ಮಣರು ತಮ್ಮ ಬುದ್ಧಿಬಲವನ್ನೂ ಆತ್ಮಸಾಮರ್ಥ್ಯವನ್ನೂ ಬಹುಶಃ ಯಾವಾಗಲೂ ಅಳಿಯಗೊಡಲಿಲ್ಲವೆಂದು ತೋರುವದು. ಆದರೆ ಒಟ್ಟಾರೆ ಎಲ್ಲ ಉಪನಿಷತ್ತುಗಳಲ್ಲಿಯ ಬೇರೆಬೇರೆ ಕಥೆಗಳನ್ನು ನೋಡಿದರೆ, ಒಮ್ಮೆ ಬ್ರಾಹ್ಮಣರು ಇನ್ನೊಮ್ಮೆ ಕ್ಷತ್ರಿಯರು ತಮ್ಮತಮ್ಮ ಯೋಗ್ಯತೆಯ ಬಲದಿಂದ ಬುದ್ಧಿಯಲ್ಲಿ ಮತ್ತು ಅಧ್ಯಾತ್ಮದಲ್ಲಿ ಮುಂದಾಳುತನವನ್ನು ವಹಿಸುತ್ತಿದ್ದರು ಎಂಬುದು ಸ್ಪಷ್ಟವಿದೆ. ಬ್ರಾಹ್ಮಣ ಅಥವಾ ಕ್ಷತ್ರಿಯ ಇವುಗಳಲ್ಲಿ ಯಾವದೇ ಒಂದು ವರ್ಣಕ್ಕೆ ಅಧ್ಯಾತ್ಮಜ್ಞಾನದ ಗುತ್ತಿಗೆ ಕೊಟ್ಟ ತ್ತೆಂದು ಅಥವಾ ಶ್ರೇಷ್ಠತ್ವದ ತಾಮ್ರಪಟವು ಬರೆದು ಕೊಡಲ್ಪಟ್ಟಿತ್ತೆಂದು ಹೇಳುವದು ಹಾಸ್ಯಾಸ್ಪದವಾಗುವದು. ಅರ್ವಾಚೀನ ಕಾಲದಲ್ಲಿರುವಂತೆಯೇ ಅಧ್ಯಾತ್ಮಜ್ಞಾನದಲ್ಲಿ ಮುಂದೆ ಹೋಗುವ ಅಧಿಕಾರವು ಅವನವನ ಯೋಗ್ಯತೆಯ ಮೇರೆಗೆ ಸಮಾಜದಲ್ಲಿಯ ಪ್ರತಿಯೊಂದು ಉಚ್ಚ ನೀಚ ವ್ಯಕ್ತಿಗೂ ಇತ್ತೆಂದು ಹೇಳಬಹುದು.

**೨೧. ಉಪನಿಷತ್ತತ್ವಜ್ಞಾನದಲ್ಲಿಯ ಮುಖ್ಯ ಪ್ರಶ್ನೆಗಳು—** ಉಪನಿಷತ್ಕಾರರು ಪ್ರತಿಪಾದಿಸಿದ ತತ್ವಗಳ ವಿಚಾರದಿಂದ ಉಂಟಾಗುವ ಮುಖ್ಯ ಮುಖ್ಯ ಪ್ರಶ್ನೆಗಳನ್ನೂ ಅವುಗಳ ಅನ್ಯೋನ್ಯ ಸಂಬಂಧವನ್ನೂ ವಿವರಿಸಿ ಈ ಪ್ರಾಸ್ತಾವಿಕ ಪ್ರಕರಣವನ್ನು ಇನ್ನು ಮುಗಿಸುವದು ಯೋಗ್ಯವು. ಪ್ಲೇಟೋನು ಒಂದೆಡೆಗೆ ಅಂದಂತೆ, ಗ್ರೀಸದೇಶದಂತೆ ಭಾರತದಲ್ಲಿಯೂ ಕೌತುಕವೇ ಎಲ್ಲ ತತ್ವಜ್ಞಾನದ ತಾಯಿಯು. ನಿಸರ್ಗಶಕ್ತಿಗಳೆಲ್ಲ ವಂದನೀಯ ದೇವತೆಗಳೆಂಬ ಕಲ್ಪನೆಯು ಮೊದಲು ಪ್ರಚಲಿತವಿದ್ದರೂ ಬರಬರುತ್ತ ಉಪನಿಷತ್ಕಾರರು ಆ ಕಲ್ಪನೆಗಳನ್ನು ಬಿಟ್ಟು ಬಿಟ್ಟರು. ಗ್ರೀಸದೇಶದಲ್ಲಿ ಹೋಮರ ಮತ್ತು ಹೀಸಿಯಡ್ ಈ ಕವಿಗಳ ಕಾಲದಿಂದ ಥೇಲಿಸ್ ಮತ್ತು ಅನ್ಯಾಕ್ಸಿಮ್ಯಾಂಡರ ಈ ತತ್ವಜ್ಞರ ಕಾಲದವರೆಗೆ ಆದಂಥ ವಿಚಾರವಿಕಾಸವೇ ಋಗ್ವೇದಕಾಲದಿಂದ ಉಪನಿಷತ್ಕಾಲದವರೆಗೆ ಆಯಿತೆನ್ನಬಹುದು. ಆ ಕಾಲಕ್ಕೂ ಈ ಕಾಲಕ್ಕೂ ಇದ್ದ ಭೇದವೇನೆಂದರೆ, ನಿಸರ್ಗಶಕ್ತಿಗಳಿಗೆ ದೇವತಾರೂಪವನ್ನು ಕೊಡುವ ಪ್ರವೃತ್ತಿಯ ನಾಶವಾಗಿ ಅವುಗಳ ಯಥಾರ್ಥಸ್ವರೂಪವನ್ನು ನಿಶ್ಚಯಿಸುವ ತಾತ್ವಿಕ ವೃತ್ತಿಯ ವಿಕಾಸವು ಉಪನಿಷತ್ಕಾಲದಲ್ಲಿ ಕಂಡು ಬರುವದು. ಯಾವುದು ತಿಳಿದರೆ ಎಲ್ಲವೂ ತಿಳಿಯುವದೋ ಅಂತಹ ಜ್ಞಾನವಾವುದು, ಎಂದು ಉಪನಿಷತ್ಕಾರರು ಮುಂಡಕದಲ್ಲಿ (ಮುಂ ೧, ಖಂ ೧, ಮಂ ೩) ಕೇಳಿರುವರು. ಇದನ್ನೇ ಸಂಕ್ಷೇಪದಿಂದ ಹೇಳಬೇಕಾದರೆ, ಅವರು ತಿಳಿವಿನ ತಿರುಳನ್ನು ತಿಳುಕೊಳ್ಳುವ ಕುತೂಹಲವುಳ್ಳವರಾಗಿದ್ದರು, ಜ್ಞಾನದ ಗುಟ್ಟನ್ನು ಗೊತ್ತು ಹಚ್ಚಬೇಕೆಂದಿದ್ದರು. ಅದನ್ನು ಮೊದಲು ಈ ವಿಶ್ವಗೋಲದಲ್ಲಿ ಹುಡುಕಲೆತ್ನಿಸಿದರು. ಇಲ್ಲಿ ಸಿಗದೇ ಹೋದ ಮೇಲೆ ಮನೋಲೋಕದಲ್ಲಿ ಹುಡುಕಿದರು. ದೇಹವಳಿದ ಮೇಲೆ ಉಳಿ

ಯುವ ವಸ್ತು ಯಾವುದೆಂದೂ ದೇಹವು ಸುಷುಪ್ತಿ ಸ್ಥಿತಿಯನ್ನು ಹೊಂದಿದರೂ ಒಳಗೆ ಎಚ್ಚರಿಪ್ಪ ದೇಹವನ್ನು ಪುನಃ ಎಚ್ಚರಿಸುವವರು ಯಾರು ಎಂದೂ ಅವರ ಪ್ರಶ್ನೆಯು (ಕ, ಅ ೨, ವ ೫, ಮಂ ೪-೮. ). ಮರಣದ ತರುವಾಯ ಆತ್ಮನು ಅಳಿಯದೇ ಉಳಿಯುವನೆಂಬ ಅತೀಂದ್ರಿಯ ಆಧ್ಯಾತ್ಮಿಕ ಸತ್ಯವನ್ನು ಹೇಳಿ ಜನಕನ ಓಲಗದಲ್ಲಿ ನಡೆದ ವಾದದಲ್ಲಿ ಯಾಜ್ಞವಲ್ಕ್ಯನು ವಿಜಯಿಯಾದದ್ದು ಇದೇ ಕಾರಣದಿಂದ. ಯಮನು ಪುನಃ ಪುನಃ ಈ ಪ್ರಾಣವೃಕ್ಷವನ್ನು ಕಡಿಯುತ್ತಿದ್ದರೂ ಯಾವ ತಾಯಿ ಬೇರು ಇದಕ್ಕೆ ಪುನಃ ಜೀವವನ್ನು ಕೊಟ್ಟು ಬದುಕಿಸುವದು, ಎಂದು ಯಾಜ್ಞವಲ್ಕ್ಯನು (ಬೃ, ಅ ೩, ಬ್ರಾ ೯, ಮಂ ೨೮) ಕೇಳುವನು. ಪೂರ್ವಜನ್ಮದಲ್ಲಿ ಬುಡಿಲನೆಂಬ ಮುನಿ ಇದ್ದವನು ಈಗ ಆನೆಯಾಗಿರುವನೆಂಬದನ್ನು ಗೊತ್ತು ಹಿಡಿದ ಜನಕನು ಒಳ್ಳೇ ಜಾಣನೆಂದು ಜನರು ಯಾಕೆ ಅನ್ನುತ್ತಿದ್ದರೆಂಬದನ್ನು ನಾವು ಸಹಜವಾಗಿ ಊಹಿಸಬಹುದು. ಅತೀಂದ್ರಿಯಜ್ಞಾನ, ಆತ್ಮಜ್ಞಾನ, ಮರಣ ಪಶ್ಚಾತ್ ನಮ್ಮ ಸ್ಥಿತಿಯು ಏನು ಎಂಬ ಜ್ಞಾನ ಎಲ್ಲಕ್ಕೂ ಹೆಚ್ಚಿನದೆಂದು ಆ ಕಾಲದಲ್ಲಿ ಭಾವನೆ ಇತ್ತು. ಆದರೆ ಆ ಜಿಜ್ಞಾಸೆಯನ್ನು ಸಂಪೂರ್ಣ ತೃಪ್ತಿಗೊಳಿಸುವದು ಸಾಧ್ಯವಿರಲಿಲ್ಲ. ನಿತ್ಯ ನಿರಂತರ ಸನಾತನ ಸತ್ಯವಾವುದು, ಆತ್ಮನೆಂದರೆ ಯಾರು, ಅವನನ್ನು ಬುದ್ಧಿಯಿಂದ ತಿಳಿದು ಹೇಗೆ ವರ್ಣಿಸಬಹುದು, ಎಂಬ ಪ್ರಶ್ನೆಗಳು ಇನ್ನೂ ಹಾಗೆಯೇ ಇದ್ದವು. ಇವುಗಳನ್ನು ಬಿಡಿಸಲಿಕ್ಕೆ ಯತ್ನಿಸಿದ ಪ್ರತಿಯೊಬ್ಬ ಋಷಿಯು ಅಧ್ಯಾತ್ಮವಾದದಲ್ಲಿ ಸೇರಲೇ ಬೇಕಾಗುತ್ತಿತ್ತು. ಅಧ್ಯಾತ್ಮವನ್ನು ಕುರಿತು ಕೆಲವೊಂದು ಪ್ರಮೇಯಗಳನ್ನು ನಿಶ್ಚಯಿಸಿದ ಮೇಲೆ ಆ ಅಧ್ಯಾತ್ಮ ಸ್ಥಿತಿಯನ್ನು ಹೇಗೆ ಪಡೆಯಬೇಕು, ಯಾವ ಆಚರಣೆ ಸಾಧನೆಗಳ ದ್ವಾರಾ ಆ ದಿವ್ಯ ಭಾವವನ್ನು ತನ್ನಲ್ಲಿ ನೆಲೆಗೊಳಿಸಬೇಕೆಂಬುದು ಮುಂದಿನ ಮೆಟ್ಟಲು. ಅನುಭಾವಿಯ ದಿವ್ಯಭಾವವೇ ಈ ಬಗೆಯ ನೈತಿಕ ಆಚರಣೆಯ ಸ್ವಾಭಾವಿಕ ಪರಿಣತಿಯು. ಅದಿಲ್ಲದೇ ಬರಿಯ ನೈತಿಕ ಆಚರಣೆಯೆಂದರೆ ಮದುಮಗನಿಲ್ಲದ ಮದುವೆಯೆಂತೆಯೇ ಸೈ. ಅನುಭಾವವೇ, ಆತ್ಮಾನುಭೂತಿಯೇ, ಎಲ್ಲ ತತ್ವಜ್ಞಾನಗಳ ಅಂತಿಮ ಸಾಧ್ಯವು. ಉಪನಿಷತ್ತುಗಳ ಸಾಧ್ಯವಾದರೂ ಅದೇ ಇತ್ತು. ಉಪನಿಷತ್ತುಗಳಲ್ಲಿಯ ವಿಶ್ವೋತ್ಪತ್ತಿವರ್ಣನೆ, ಮಾನಸಶಾಸ್ತ್ರವಿಚಾರ, ಅಧ್ಯಾತ್ಮವಾದ ಮುಂತಾದವುಗಳೆಲ್ಲ ಋಷಿಗಳ ಆತ್ಮಸಾಕ್ಷಾತ್ಕಾರದ ತತ್ವಕ್ಕೆ ಕೇವಲ ಆನುಷಂಗಿಕವಾದವುಗಳು ಅಥವಾ ಪ್ರಾಸ್ತಾವಿಕವಾದವುಗಳೆಂಬದನ್ನು ಯಾರು ತಿಳಿದುಕೊಂಡಿಲ್ಲವೋ ಅವರಿಗೆ ಉಪನಿಷತ್–ರಹಸ್ಯವು ತಿಳಿದೇ ಇಲ್ಲವೆಂದು ಅನ್ನಬೇಕಾಗುವದು.

---

## ಪ್ರಕರಣ ೨.

---

## ಉಪನಿಷತ್ತುಗಳಲ್ಲಿಯ ವಿಶ್ವೋತ್ಪತ್ತಿ ಶಾಸ್ತ್ರದ ವಿಕಾಸವು.

---

**೧ ಪರತತ್ವದ ಶೋಧವು**—ವಿಶ್ವರಚನೆಯ ಸಂಬಂಧವಾಗಿಯೂ ತತ್ವಜ್ಞಾನದ ಸಂಬಂಧವಾಗಿಯೂ ವಿಚಾರಮಾಡಲಾರಂಭಿಸಿದ ಮಾನವರಲ್ಲಿ ಗ್ರೀಕರೇ ಮೊದಲಿಗರು ಎಂದು ಸರ ಹೆನರಿ ಮೇನ ಇವರು ಹೇಳಿರುವರು. ಆದರೆ ಉಪನಿಷತ್ತತ್ವಜ್ಞಾನವೂ ವಿಶೇಷತಃ ಸೃಷ್ಟಿಯ ಕಾರಣದ ಬಗ್ಗೆ ಉಪನಿಷತ್ತುಗಳಲ್ಲಿ ಮಾಡಿದ ವಿಚಾರವೂ ಈ ವಿಧಾನಕ್ಕೆ ಅಪವಾದವಾಗಿವೆ. ಗ್ರೀಕ ದಾರ್ಶನಿಕರಾದ ಥೇಲಿಸ್ ಮತ್ತು ಅನ್ಯಾಕ್ಸಿಮ್ಯಾಂಡರ ಇವರು ಇನ್ನೂ ಕಣ್ಣು ತೆರೆಯುವ ಪೂರ್ವದಲ್ಲಿಯೇ ಉಪನಿಷತ್ತತ್ವಜ್ಞಾನದ ಮಧ್ಯಾಹ್ನಕಾಲವಾಗಿತ್ತು. ಗ್ರೀಕ ತತ್ವಜ್ಞಾನವು ವಿಶ್ವರಚನೆಯ ವಿಚಾರಗಳಿಂದ ಪ್ರಾರಂಭವಾದಂತೆ ಉಪನಿಷತ್ತತ್ವಜ್ಞಾನಕ್ಕಾದರೂ ವಿಶ್ವರಚನೆ, ವಿಶ್ವದ ಮೂಲಕಾರಣ ಇವುಗಳ ವಿಚಾರದಿಂದಲೇ ಪ್ರಥಮ ಪ್ರೇರಣೆಯಾಯಿತು. ನಕ್ಷತ್ರಮಂಡಿತವಾದ ಈ ನಭೋಮಂಡಲವು, ಕಾಲಕಾಲಕ್ಕೆ ಬರುವ ಈ ಋತುಚಕ್ರವು, ಆಕಾಶದಲ್ಲಿ ಭರ್ರನೇ ಬೀಸುವ ಈ ಬಿರುಗಾಳಿಯು, ಸರ್ವಸಮರ್ಥವಾದ ಈ ದಾವಾಗ್ನಿಯು, ಆಗಾಗ್ಗೆ ಆಗುವ ಜಲಪ್ರಲಯುಗಳು ಮುಂತಾದ ನಿಸರ್ಗಶಕ್ತಿಗಳ ಚಲನವಲನಗಳಿಂದ ಚಕಿತನಾದ ಮನುಷ್ಯನಿಗೆ ಈ ಎಲ್ಲ ವ್ಯಾಪಾರದ ಅರ್ಥವೇನು ಎಂಬ ಪ್ರಶ್ನೆಯು ಎದುರಾಗಿರಲಿಕ್ಕೆ ಸಾಕು. ಗ್ರೀಕ ತತ್ವಜ್ಞಾನದಂತೆ ಉಪನಿಷತ್ತತ್ವಜ್ಞಾನವಾದರೂ ವಿಶ್ವದ ಆದಿಕಾರಣದ ಜಿಜ್ಞಾಸೆಯಿಂದಲೇ ಆರಂಭವಾಯಿತು. ಕ್ಷಣಶಃ ಬದಲಾಗುವ ಈ ವಸ್ತುಗಳಲ್ಲಿ ಸ್ಥಿರತತ್ವವು ಯಾವುದು ? 'ತಜ್ಜಲಾನ್' ಎಂದು ಅನ್ನಲಿಕ್ಕೆ ಬರುವಂತಹದು ಯಾವುದು ? ಯಾವುದರಿಂದ ಈ ಭೂತಗಳು ಹುಟ್ಟಿದವೋ ಯಾವುದರ ಬಲದಿಂದ ಇವು ಜೀವಿಸುವವೋ ಮತ್ತು ಯಾವುದರಲ್ಲಿ ಇವು ಲಯವಾಗುವವೋ ಆ ವಸ್ತುವು ಯಾವುದು ? ಯಾವುದರಿಂದ ವಸ್ತುಗಳು ಹುಟ್ಟುವವೋ, ಹುಟ್ಟಿ ಯಾವುದರ ಬಲದಿಂದ ಬಾಳುವವೋ, ಬಾಳಿ ಯಾವುದರ ಕಡೆಗೆ ಸಾಗಿ ಕೊನೆಗೆ ಯಾವುದರಲ್ಲಿ ಲಯಹೊಂದುವವೋ ಅದೇ ಪರತತ್ವವು ಎಂದು ತೈತ್ತಿರೀಯೋಪನಿಷತ್ತಿನ ಬ್ರಹ್ಮಾನಂದವಲ್ಲಿಯಲ್ಲಿ ಹೇಳಿದೆ. ಪ್ರಾಚೀನ ಗ್ರೀಕ ದಾರ್ಶನಿಕರು ಇದೇ

ತರದ ವಿಚಾರದಲ್ಲಿ ತೊಡಗಿದ್ದರೆಂದು ಅರಿಸ್ಟಾಟಲ್ಲನು ಹೇಳುವನು. ಎಲ್ಲಿಂದ ಹುಟ್ಟಿದೆವು, ಮತ್ತು ಯಾರಲ್ಲಿ ಯಾರಿಂದ ಜೀವಿಸುವೆವು ಎಂದು ಶ್ವೇತಾಶ್ವತರದಲ್ಲಿ ಋಷಿಗಳು ಕೇಳುವ ದನ್ನು ಓದುವಾಗ ಇದನ್ನೆಲ್ಲ ಯಾರು ಮಾಡಿದರು, ಹೇಗೆ ಮಾಡಿದರು, ಎಂದು ಹೇಸಿ ಯಡ್ಡನು ತನ್ನ 'ಥಿಯಾಜೆಸಿ' ಎಂಬ ಪುಸ್ತಕದ ಪ್ರಾರಂಭದಲ್ಲಿ ಕೇಳಿದ್ದು ನೆನಸಿಗೆ ಬರು ವದು. ಈ ಪ್ರಕಾರವಾಗಿ ವಿಶ್ವದ ಮೂಲಕಾರಣದ ಶೋಧಮಾಡುವದು ಉಪನಿಷತ್ಕಾರದ ತತ್ವಜ್ಞರಿಗೂ ಗ್ರೀಕ ದಾರ್ಶನಿಕರಿಗೂ ಸಾಮಾನ್ಯವಾಗಿತ್ತು. ಉಪನಿಷತ್ತುಗಳಿಂದಲೇ ಗ್ರೀಕರು ಈ ವಿಷಯವನ್ನು ಕಲಿತರೆಂದು ಪ್ರತಿಪಾದಿಸುವದು ಸಮಂಜಸವಾಗದಿದ್ದರೂ ಉಪನಿಷತ್ತುಗಳು ಗ್ರೀಕ ತತ್ವಜ್ಞಾನದ ಉದಯವಾಗುವದಕ್ಕೂ ಪೂರ್ವದಲ್ಲಿಯೇ ಹುಟ್ಟಿ ದವೆಂದು ಈಗ ಸಿದ್ಧವಾಗಿರುವದರಿಂದ ತತ್ವವಿಚಾರಗಳ ಹುಟ್ಟು ಗ್ರೀಕರಿಂದಲೇ ಆಯಿತು ಎಂದು ಎದೆತಟ್ಟಿ ಹೇಳುವದು ಒಳ್ಳೇ ಮೂಢ ಸಾಹಸದ ಕೆಲಸವೇ ಸರಿ.

**೨. ಈ ಪ್ರಕರಣದಲ್ಲಿಯ ವಿಷಯವು**-- ವಿಶ್ವದ ಆದಿಕಾರಣದ ಬಗ್ಗೆ ಉಪ ನಿಷತ್ಕಾರರ ವಿಚಾರಗಳು ಹೇಗೆ ವಿಕಾಸಹೊಂದುತ್ತ ಹೋದವೆಂಬುದನ್ನು ಶೋಧಿಸುವದು ಅಶಕ್ಯವಾದ ಮಾತಲ್ಲ. ಈ ವಿಷಯವನ್ನು ಕುರಿತು ಬರೆಯಲ್ಪಟ್ಟ ಉಪನಿಷತ್ತುಗಳಲ್ಲಿಯ ವಾಕ್ಯಗಳನ್ನು ಕಾಲಾನುಕ್ರಮದಿಂದ ಹಚ್ಚಿದರೆ ಆ ವಿಚಾರವಿಕಾಸವು ಸಹಜವೇ ಗೋಚರ ವಾಗುವದು. ಆದರೆ ಸಮನ್ವಯದಿಂದ ಉಪನಿಷದ್ವಿಚಾರಗಳನ್ನು ಮಂಡಿಸಲನುವಾದ ಈ ಗ್ರಂಥದಲ್ಲಿ ಗ್ರೀಸದಂಥ ದೇಶದಲ್ಲಿ ಈ ಬಗ್ಗೆ ಯಾವ ವಿಚಾರಗಳಿದ್ದವೋ ಅವುಗಳ ಕೂಡ ಹೋಲಿಸಿ ನೋಡಲಿಕ್ಕೆ ಬರುವಂತೆ ಬರೆಯುವದು ಯೋಗ್ಯವು. ವಿಶ್ವದ ಆದಿಕಾರಣವನ್ನು ಕುರಿತು ಉಪನಿಷತ್ತುಗಳಲ್ಲಿ ಇದ್ದ ಪ್ರಮೇಯಗಳನ್ನು ಪೌರುಷ ಅಪೌರುಷವೆಂದು ಅಥವಾ ಸಗುಣ ನಿರ್ಗುಣವೆಂದು ಎರಡು ಬಗೆಯಾಗಿ ವಿಭಾಗಿಸಬಹುದು. ಪಂಚಭೂತಗಳಲ್ಲಿ ಯಾವುದೇ ಒಂದು ಅಥವಾ ಎಲ್ಲವುಗಳು ಅಥವಾ ಸತ್, ಅಸತ್, ಪ್ರಾಣ ಮುಂತಾದ ಯಾವುದೇ ಒಂದು ಶಕ್ತಿಯು ವಿಶ್ವದ ಆದಿಕಾರಣವೆಂದು ತಿಳಿದರೆ ಅದು 'ನಿರ್ಗುಣವಾದ' ವೆನಿಸಬಹುದು. ಆತ್ಮನು, ದೇವರು ಇವರಿಂದ ವಿಶ್ವವು ರಚಿಸಲ್ಪಟ್ಟಿತು ಅಥವಾ ಇವರಿಂದ ವಿಕಾಸಹೊಂದಿತು ಎಂದು ತಿಳಿದರೆ ಅದು 'ಸಗುಣವಾದ'ವೆನಿಸುವದು. ಪಂಚಭೂ ತಗಳಲ್ಲಿಯ ಯಾವದೇ ಒಂದು ವಿಶ್ವದ ಆದಿಕಾರಣವೆಂದು ಉಪನಿಷತ್ಕಾರರು ಹೇಳುವಾಗ ಪಂಚಭೂತಗಳೆಂದರೆ ದೇವತೆಗಳು ಎಂದು ನಾವು ಅರ್ಥಮಾಡಕೂಡದು. ಪಂಚಭೂತ ಗಳೆಂದರೆ ಮೂಲತತ್ವಗಳು ಎಂದು ತಿಳಿಯಬೇಕು. ಅಗ್ನಿ ಅಥವಾ ವಾಯುವಿನಿಂದ ಈಸೃಷ್ಟಿಯ ಉತ್ಪತ್ತಿಯು ಎಂದು ಋಷಿಗಳು ಹೇಳುವಾಗ ಆಯಾ ಭೂತವೆ ಮೂಲಕಾರಣವೆಂದು ನಾವು ತಿಳಿಯತಕ್ಕದ್ದು. ಶ್ರೀಶಂಕರ ರಾಮಾನುಜಾದಿ ಆಚಾರ್ಯರು ಆ ಮೂಲತತ್ವಗಳನ್ನು

ಮೂಲತತ್ವಗಳೆಂದಷ್ಟೇ ತಿಳಿಯದೆ ದೇವತೆಗಳೆಂದು ಭಾವಿಸಿರುವರು. ಆದರೆ ಋಷಿಗಳು ಮಾಡಿದ ವಿಧಾನಗಳ ಸರಲತೆ ಮತ್ತು ಸಹಜತೆಗಳ ಕಡೆಗೆ ನೋಡಿದರೆ ಪಂಚಭೂತಗಳ ಹೆಸರುಗಳನ್ನು 'ದೇವತಾ' ಈ ಅರ್ಥದಲ್ಲಿ ಅವರು ಉಪಯೋಗಿಸಿಲ್ಲವೆಂಬುದು ಸ್ಪಷ್ಟವಾಗುವದು. ಒಮ್ಮೊಮ್ಮೆ ಇವುಗಳ ಸಂಬಂಧದಿಂದ 'ದೇವ' ಈ ಶಬ್ದವು ಉಪಯೋಗಿಸಲ್ಪಟ್ಟಿರುವದೇನೋ ನಿಜವು. ಆದರೆ ಗ್ರೀಕದಾರ್ಶನಿಕರೂ ಅದೇ ಪ್ರಕಾರದ ಭಾಷೆಯನ್ನು ಉಪಯೋಗಿಸಿರುವರು. ಅಷ್ಟರಮೇಲಿಂದ ಪಂಚಭೂತಗಳೆಂದರೆ ದೇವತೆಗಳು ಎಂಬ ಭಾವನೆಯು ಅವರಲ್ಲಿತ್ತು ಎಂಬುದು ಸಿದ್ಧವಾಗಲಾರದು. ಇನ್ನೊಂದು ಸಂಗತಿಯೇನಂದರೆ ಶೂನ್ಯ ಅಥವಾ ಅಸತ್‌ದಿಂದ ಸೃಷ್ಟಿಯ ರಚನೆಯಾಯಿತು ಎಂಬ ಕಲ್ಪನೆಗೆ ಗ್ರೀಕರು ಅತಿಶಯವಾಗಿ ವಿರುದ್ಧರಿರುವಂತೆ ಉಪನಿಷತ್ಕಾರರಾದರೂ ವಿರುದರಿರುವರು. ಅಸತ್ತಿನಿಂದ ಅಥವಾ ಪಂಚಭೂತಗಳಲ್ಲಿ ಒಂದರಿಂದ ಸೃಷ್ಟಿಯ ರಚನೆಯಾಗಿರಬಹುದೆಂಬ ಕಲ್ಪನೆಯು ಋಷಿಗಳಿಗೆ ಯೋಗ್ಯವೆಂದು ತೋರದೆ ಹೋದಕೂಡಲೇ ಪ್ರಾಣವು ಅಥವಾ ವಿಶ್ವಶಕ್ತಿಯು ಆದಿಕಾರಣವೆಂದು ಅವರು ಹೇಳಿರುವರು. ಈ ಕಲ್ಪನೆಯು ಸಾಕಷ್ಟು ಸಮಾಧಾನಕಾರಕವಾಗದೆ ಹೋದುದರಿಂದ ಒಬ್ಬಪುರುಷನು ಈ ವಿಶ್ವದ ಆದಿಕಾರಣನಿರಲಿಕ್ಕೆಬೇಕೆಂಬ ವಿಧಾನವನ್ನು ಅವರು ಮಾಡಬೇಕಾಯಿತು. ಈ ವಿಶ್ವವೆಲ್ಲ ಮಾಯೆ ಅಥವಾ ಕನಸು ಎಂದು ಪ್ರತಿಪಾದಿಸುವ ವಾದದಲ್ಲಿ ಸೃಷ್ಟಿರಚನೆಯ ಕಲ್ಪನೆಗೆ ಮಹತ್ವವೇ ಇಲ್ಲವೆಂದು ಹೊಸದಾಗಿ ಹೇಳಬೇಕಾಗಿಲ್ಲ. ಆದರೂ ಶ್ವೇತಾಶ್ವತರದಲ್ಲಿ ಪ್ರತಿಪಾದಿಸಿದ ಸೃಷ್ಟಿರಚನೆಯ ಕ್ರಮವನ್ನು ವಿಚಾರಿಸುವಾಗ ಮೇಲಿನ ಕಲ್ಪನೆಯನ್ನು ಸಹ ವಿವರಿಸುವೆವು.

**೩. ನೀರೇ ವಿಶ್ವದ ಆದಿತತ್ವವು**— ಪಂಚಭೂತಗಳಿಂದ ಸೃಷ್ಟಿಯಾಯಿತು ಎಂಬುದನ್ನು ಹೇಳುವಾಗ ಗ್ರೀಕ ದಾರ್ಶನಿಕನಾದ ಥೇಲಿಸ್‌ನಂತೆ ಮೊದಲು ನೀರೇ ಇತ್ತು, ಅದರಿಂದ ಸತ್ಯವು, ಸತ್ಯದಿಂದ ಬ್ರಹ್ಮ, ಅವನಿಂದ ಪ್ರಜಾಪತಿ, ಪ್ರಜಾಪತಿಗಳಿಂದಲೇ ದೇವತೆಗಳು, ಈ ದೇವತೆಗಳು ಸತ್ಯವನ್ನೇ ಪೂಜಿಸುವರು, (ಬೃ, ಅ ೫, ಬ್ರಾ ೫, ಮಂ ೧.) ಎಂದು ಋಷಿಗಳು ಹೇಳಿರುವರು. ಆತ್ಮವು ಅಥವಾ ಯಾವದೇ ದೇವತೆಯು ಮೊದಲು ಇತ್ತು ಎಂದು ಹೇಳದೆ ಕೇವಲ ನೀರು ಮಾತ್ರ ಇತ್ತು, ಅದರಿಂದ ಎಲ್ಲ ಉತ್ಪತ್ತಿಯು ಎಂದು ಸ್ಪಷ್ಟ ಉಲ್ಲೇಖವಿರುವದು. ಸತ್ಯದಿಂದ ಬ್ರಹ್ಮನ ಉತ್ಪತ್ತಿ ಎಂದು ಹೇಳಿರುವುದರಿಂದ ಬ್ರಹ್ಮವೆಂದರೆ ಆತ್ಯಂತಿಕ ಸತ್ಯವೆಂದು ಈಚೆಗೆ ತಿಳಿಯುವಂತೆ ಆಗ ತಿಳಿದಿರಲ್ಲಿಲ್ಲವೆಂಬುದು ಗೋಚರವಾಗುವದು. ನೀರಿನಿಂದ ಸತ್ಯವು ಅಂದರೆ ಮೊದಲನೆಯ 'ಗೋಚರ' ಪದಾರ್ಥವು ಉತ್ಪನ್ನವಾಯಿತು. ಸ, ತೀ, ಯಮ್ ಈ ಮೂರು ಅಕ್ಷರಗಳು ಕೂಡಿ ಸತ್ಯ ಶಬ್ದವು ಸಾಧಿಸಲ್ಪಟ್ಟಿದೆಯೆಂದೂ ತೀ ಎಂಬ ಅಸತ್ಯವು ಸ ಮತ್ತು,ಯಮ್,

ಎಂಬ ಸತ್ಯ ವಸ್ತುಗಳಿಂದ ಮುಚ್ಚಲ್ಪಟ್ಟಿದೆಯೆಂದೂ (ಬೃ. ಅ ೫, ಬ್ರಾ ೫, ಮಂ ೧. ) ಉಲ್ಲೇಖಿಸಿರುವದು. ಈ ವರ್ತಮಾನಕಾಲವು ಕ್ಷಣಭಂಗುರವಿದ್ದು ಅನಾದಿ ಅನಂತ ಕಾಲದಿಂದ ಅದು ಪರಿವೃತವಿರುವದೆಂದು ಇದರ ಅರ್ಥವು. ಇಂಥ ಸತ್ಯವೆಲ್ಲ 'ಆಪ್' ದಿಂದ ಬಂದಿರುವದೆಂದು ಋಷಿಗಳು ಹೇಳಿದ್ದು ಆಶ್ಚರ್ಯಕರವು. ಥೇಲಿಸ್‌ನು ಇದೇ ಪ್ರಕಾರ ಪ್ರತಿಪಾದಿಸಿರುವನು. ಬಾಯಬಲ್ಲಿನಲ್ಲಿ ಹೇಳಿದಂತೆ ಅಥವಾ ಮನುಸ್ಮೃತಿಕಾರರು ಪ್ರತಿಪಾದಿಸಿದಂತೆ ಸೃಷ್ಟಿರಚನೆಗೆ ದೇವರು ಅವಶ್ಯನೆಂದು ಥೇಲಿಸ್ ಇವನಿಗೆ ಎನಿಸಲಿಲ್ಲ. ಬೃಹದಾರಣ್ಯಕಕಾರರ ವಿಚಾರಸರಣಿಯಾದರೂ ಇದೇ ತರಹದ್ದಿರುವದು.

**೪. ವಾಯುವು** — ನೀರಿನ ತರುವಾಯ, ವಾಯುವು ಎಲ್ಲ ವಸ್ತುಗಳ ಲಯ ಸ್ಥಾನವು, ಆದುದರಿಂದ ಅದು ಎಲ್ಲ ವಿಶ್ವದ ಆದಿಯಾಗಿರಲಿಕ್ಕೆ ಸಾಕು ಎಂದು ರೈಕ್ವನು ಪ್ರತಿಪಾದಿಸಿರುವನು. ಇದರ ಬಗ್ಗೆ ಒಂದು ರುಚಿಕಟ್ಟಾದ ಕಥೆ ಇರುವದು. ಒಮ್ಮೆ ಜಾನುಶ್ರುತಿ ಎಂಬ ಅರಸನು ಕಾಡಿನಲ್ಲಿ ಅಡ್ಡಾಡುತ್ತಿರುವಾಗ ಎರಡು ಹಂಸಗಳ ಸಂಭಾಷಣವನ್ನು ಕೇಳಿದನು. ಒಂದು ಹಂಸವು ಇನ್ನೊಂದಕ್ಕೆ ಅಂದದ್ದು–'ಲೆತ್ತವನ್ನಾಡುವಾಗ ಗೆದ್ದವನಿಗೆ ಎಲ್ಲವೂ ಸಿಗುವಂತೆ ಈ ಜಗತ್ತಿನಲ್ಲಿ ಜನರು ಮಾಡುವ ಎಲ್ಲ ಪುಣ್ಯವು ರೈಕ್ವನಿಗೆ ಸಲ್ಲುವದು.' ಇದನ್ನು ಕೇಳಿ ಜಾನುಶ್ರುತಿಯು ಆಶ್ಚರ್ಯಚಕಿತನಾಗಿ ರೈಕ್ವನೆಂಬ ಸಾಧುವು ಎಲ್ಲಿರುವನೆಂಬುದನ್ನು ಹುಡುಕುವದಕ್ಕಾಗಿ ಒಬ್ಬ ಆಳನ್ನು ಕಳಿಸಿದನು. ಆ ಆಳು ಅತ್ತಿತ್ತ ಹುಡುಕಾಡಿ ಒಂದು ಬಂಡಿಯ ಕೆಳಗೆ ತುರುಕು ಕೆರೆಯುತ್ತ ಕುಳಿತಿರುವ ರೈಕ್ವನನ್ನು ಕಂಡು ಆ ಸಂಗತಿಯನ್ನು ತನ್ನ ಯಜಮಾನನಿಗೆ ಹೇಳಹೋದನು. ಜಾನುಶ್ರುತಿಯು ಕೆಲವು ಆಕಳುಗಳನ್ನೂ ಚಿನ್ನದ ಒಂದು ಕಂಠಿಯನ್ನೂ ಹೆಣ್ಣು ಹೇಸರಗತ್ತೆಯಿಂದ ಎಳೆಯಲ್ಪಟ್ಟ ಒಂದು ರಥವನ್ನೂ ತೆಗೆದುಕೊಂಡು ಹೋಗಿ 'ನೀನು ಯಾವ ದೇವರನ್ನು ಉಪಾಸಿಸುವಿ, ಅದನ್ನು ನನಗೆ ಹೇಳು' ಎಂದು ರೈಕ್ವನನ್ನು ಪ್ರಾರ್ಥಿಸಿದನು. ಶೂದ್ರನಾದ ಅರಸನ ರಥ, ಕಂಠಿ, ಆಕಳುಗಳು ತನಗೆ ಬೇಕಾಗಿಲ್ಲವೆಂದು ರೈಕ್ವನು ಅವನನ್ನು ತಿರುಗಿ ಕಳಿಸಿದನು. ಅರಸನು ಹೋಗಿ ಆಕಳು, ಕಂಠಿ, ರಥ ಮತ್ತು ತನ್ನ ಸುಂದರವಾದ ಕನ್ಯೆ ಇವುಗಳನ್ನೊಡಗೂಡಿ ಮರಳಿಬಂದನು. ಆಗ ರೈಕ್ವನು ಸಂತುಷ್ಟನಾಗಿ ಆ ಸುಂದರಬಾಲಿಕೆಯ ಮೋರೆಯನ್ನೆತ್ತಿ ಹಿಡಿದು, 'ಎಲೈ ಶೂದ್ರರಾಜನೇ, ಈ ಮುಖದ ಮೂಲಕ ನೀನು ನನ್ನನ್ನು ಮಾತಾಡಹಚ್ಚಿರುವಿ' ಎಂದು ಅವನಿಗೆ ತನ್ನ ಜ್ಞಾನವನ್ನು ಹೇಳಿದನು. 'ವಾಯುವೇ ಎಲ್ಲ ವಸ್ತುಗಳ ಲಯಸ್ಥಾನವೆಂಬುದೇ ಆ ಜ್ಞಾನವು. ಬೆಂಕಿಯು ನೊಂದಿದ ಕೂಡಲೇ ವಾಯುವಿನಲ್ಲಿ ಹೋಗುವದು, ಚಂದ್ರನು ಮುಳುಗುವದು ವಾಯುವಿನಲ್ಲಿ, ನೀರು ಬತ್ತಿಹೋಗುವದು ವಾಯುವಿನಲ್ಲಿ. ಈ ಪ್ರಕಾರ ವಾಯುವೇ ಕೊನೆಯ ಲಯಸ್ಥಾನವು' (ಛಾಂ, ಅ ೪,

ಖಂ ೩, ಮಂ ೧-೨). ತನ್ನ 'ಟಬ್ಬಿ'ನಲ್ಲಿ ವಾಸಮಾಡಿರುವ ಗ್ರೀಕದಾರ್ಶನಿಕನಾದ ಡಾಯೋಜೇನೀಸನಂತೆ ತನ್ನ ಬಂಡಿಯ ಬುಡದಲ್ಲಿ ಕುಳಿತ ರೈಕ್ವಮುನಿಯು ವಾಯುವೇ ಎಲ್ಲದರ ಅಂತವೆಂದು ಹೇಳಿರುವನು. ಇನ್ನು ವಾಯುವೇ ಎಲ್ಲದರ ಅಂತವಾಗಿದ್ದರೆ ಅದು ಎಲ್ಲ ವಸ್ತುಗಳ ಆದಿಯಾದರೂ ಇರಲಿಕ್ಕೆ ಬೇಕೆಂಬುದು ತರ್ಕಸಿದ್ಧವಿರುವುದು. ಗ್ರೀಕ ದಾರ್ಶನಿಕನಾದ ಅನ್ಯಾಕ್ಸಿಮೇನೀಸ ಎಂಬವನು ಇದೇ ರೀತಿಯಲ್ಲಿ ವಾಯುವೇ ಎಲ್ಲ ವಸ್ತುಗಳ ಆದಿ, ಅಂತವೆಂದು ಪ್ರತಿಪಾದಿಸಿರುವನು. ಆದರೆ ರೈಕ್ವನು ವಾಯುವೇ ಆದಿಯೆಂದು ಸ್ಪಷ್ಟ ವಾಗಿ ಹೇಳದೇ ಅದು ಎಲ್ಲದರ ಅಂತವೆಂದು ಹೇಳಿ ಸುಮ್ಮನಿರುವನು. ಇವರಿಬ್ಬರಿಗೂ ಇಷ್ಟೇ ಭೇದವು. ಈ ಕಲ್ಪನೆಗೆ ಶಾಸ್ತ್ರದೃಷ್ಟಿಯಿಂದ ಹೆಚ್ಚು ಮಹತ್ವವನ್ನು ಕೊಡಲಿಕ್ಕಾಗದು. ಯಾಕಂದರೆ ಮುಂದೆ ಅನ್ಯಾಕ್ಸಿಮೇನೀಸನು, ನೀರು ಆರಿ ಅಥವಾ ಹೆಪ್ಪುಗಟ್ಟಿ ಎಲ್ಲವೂ ವಾಯುರೂಪ ಹೊಂದುವದೆಂದು ವಿವೇಚಿಸಿದಂತೆ ರೈಕ್ವಮುನಿಯು ಮುಂದಿನ ಎಲ್ಲ ಕ್ರಮ ವನ್ನು ಹೇಳಿಲ್ಲ. ಆದರೂ ಎಲ್ಲ ವಸ್ತುಗಳ ವಿಶೇಷತಃ ಅಗ್ನಿ ಮತ್ತು ಜಲಗಳ ಲಯಸ್ಥಾನವಾ ದರೂ ವಾಯುವೇ ಎಂದು ಆ ಕಾಲಕ್ಕೆ ಪ್ರತಿಪಾದಿಸಿದ ರೈಕ್ವನು ಒಳ್ಳೇ ಧೈರ್ಯಸ್ಥನೆಂದೇ ಹೇಳಬೇಕಾಗುವದು.

೫. **ಅಗ್ನಿಯು**— ಅಗ್ನಿಯು ವಿಶ್ವದ ಮೂಲಕಾರಣವು ಎಂಬ ಪ್ರಮೇಯವು ಉಪನಿಷತ್ತುಗಳಲ್ಲಿ ಅಷ್ಟೊಂದು ಸ್ಪಷ್ಟವಾಗಿ ಹೇಳಲ್ಪಟ್ಟಿಲ್ಲ. ಒಂದೆಡೆಗೆ ಕಠೋಪನಿಷತ್ತಿ ನಲ್ಲಿ ಮಾತ್ರ ಅಗ್ನಿಯು ಈ ವಿಶ್ವವನ್ನು ಪ್ರವೇಶಿಸಿ ಎಲ್ಲ ರೂಪಗಳನ್ನು ಧರಿಸಿತು (ಕಠ, ಅ ೨, ವಲ್ಲಿ ೫, ಮಂ ೯.) ಎಂಬ ವರ್ಣನೆಯಿರುವದು. ಅಗ್ನಿಯ ಬದಲು ಎಲ್ಲ ವಸ್ತುಗಳು, ಎಲ್ಲ ವಸ್ತುಗಳ ಬದಲು ಅಗ್ನಿ ಹೀಗೆ ಸತತ ವಿನಿಮಯವು ನಡೆದಿರುವುದೆಂದು ಹೇಳುವ ಹೆರಾಕ್ಲಿ ಟಸ್ಸನ ಪ್ರಮೇಯದಂತೆಯೇ ಇದಾದರೂ ಇರುವದು. ಮೂಲ 'ಸತ್' ದಿಂದ ಅಗ್ನಿಯು ಹುಟ್ಟಿತು, ಅಗ್ನಿಯಿಂದ ನೀರು, ಅದರಿಂದ ಪೃಥ್ವಿ ಎಂದು ಛಾಂದೋಗ್ಯದಲ್ಲಿ (ಛಾಂ, ಅ ೬, ಖಂ ೮, ಮಂ ೪.) ಉಲ್ಲೇಖವಿರುವುದು. ಇಲ್ಲಿ ನಿಚ್ಚಣಿಕೆಯ ಮೆಟ್ಟಿಲುಗಳಂತೆ ಸೃಷ್ಟಿ ರಚನೆಯಾಗುವಾಗ ಅಗ್ನಿಯಿಂದ ನೀರು, ನೀರಿನಿಂದ ಪೃಥ್ವಿ, ಹೀಗೆ ಉತ್ಪತ್ತಿಯಾಗಿ ಪ್ರಲ ಯದ ಕಾಲಕ್ಕೆ ಪೃಥ್ವಿಯು ನೀರಿನಲ್ಲಿ, ನೀರು ಅಗ್ನಿಯಲ್ಲಿ, ಅಗ್ನಿಯು ಸತ್ತಿನಲ್ಲಿ ಹೀಗೆ ವಿರುದ್ಧ ಕ್ರಮದಿಂದ ಲಯಹೊಂದುವವೆಂದು ಹೆರಾಕ್ಲಿಟಸ್ಸನ ವಿವೇಚನೆಯಿರುವಂತೆಯೇ ಉಪನಿಷತ್ತುಗಳಲ್ಲಿಯೂ ವರ್ಣನೆಯಿರುವದು ಒಳ್ಳೇ ಸೋಜಿಗದ ಸಂಗತಿಯು. ಅಗ್ನಿಯು ಸೃಷ್ಟಿಯ ಮೂಲಕಾರಣವೆಂದು ಪ್ರತಿಪಾದಿಸುವದು ಯಾರಿಗಾದರೂ ಸ್ವಲ್ಪ ಕಠಿನವೇ ಸರಿ. ಯಾಕಂದರೆ ಅಗ್ನಿಯು ಸಾಕ್ಷಾತ್ ಎಲ್ಲ ವಸ್ತುಗಳ ನಾಶಮಾಡುವ ಶಕ್ತಿಯು. ಆದುದರಿಂದ ಅದು ಪ್ರಲಯದ ಒಳ್ಳೇ ಸಾಧನವು. ಛಾಂದೋಗ್ಯದಲ್ಲಿಯ ವರ್ಣನೆಯ ಮೇಲಿಂದ ನಿಯತ

ಕಾಲಿಕವಾದ ಪ್ರಲಯದ ಕಲ್ಪನೆಯನ್ನು ಋಷಿಗಳು ಹೇಳಿರುವರೆಂದು ಊಹಿಸಬಹುದು. ಹೆರಾಕ್ಲಿಟಸ್ ಮತ್ತು ಛಾಂದೋಗ್ಯ ಇವುಗಳಲ್ಲಿಯ ಭೇದವೇನಂದರೆ ಹೆರಾಕ್ಲಿಟಸ್ಸನು ಅಗ್ನಿಯೇ ಮೂಲಕಾರಣವೆಂದು ಹೇಳಿರುವನು. ಆದರೆ ಛಾಂದೋಗ್ಯದಲ್ಲಿ ಅಗ್ನಿಯು ಮೂಲ ಕಾರಣದಿಂದ ಹೊರಬಿದ್ದ ಮೊದಲನೆಯ ವಸ್ತು ಎಂದು ವರ್ಣನೆಯಿರುವದು. ಛಾಂದೋಗ್ಯವು ಅಗ್ನಿಯ ಬದಲಾವಣೆಗಳನ್ನು ಹೇಳುವುದಿಲ್ಲ, ಆದರೆ ಹೆರಾಕ್ಲಿಟಸ್ಸನಿಗೆ ಅಗ್ನಿಯೆಂಗರೆ ಚಾಂಚಲ್ಯದ ಪ್ರತ್ಯಕ್ಷ ಪ್ರತಿಮೆಯೇ ಆಗಿರುವುದು.

**೬. ಆಕಾಶವು—** ಇದುವರೆಗೆ ಹೇಳಿದ ತತ್ವಜ್ಞಾನಿಗಳ ಕಲ್ಪನೆಗಳಿಗಿಂತ ಆಕಾಶವೇ ಆದಿಕಾರಣವೆಂಬ ಪ್ರವಾಹಣ ಜೈವಲಿಯ ತತ್ವವು ಹೆಚ್ಚು ಉಚ್ಚತರವಾದದ್ದು. ಗ್ರೀಕ ತತ್ವಜ್ಞಾನದ ಇತಿಹಾಸದಲ್ಲಿ ಕೂಡ ಆಕಾಶವೇ ಆದಿಯೆಂಬ ಕಲ್ಪನೆಯು ಅಲ್ಲಿಯ ತತ್ವಜ್ಞಾನಿಗಳಿಗೆ ತಡವಾಗಿಯೇ ಹೊಳೆಯಿತು. ಥೇಲಿಸ್, ಅನ್ಯಾಕ್ಸಿಮೇನೀಸ, ಹೆರಾಕ್ಲಿಟಸ್ ಮುಂತಾದವರು ಆಪ್, ತೇಜ, ವಾಯು, ಪೃಥ್ವಿ ಇವು ಪ್ರತ್ಯೇಕವಾಗಿ ಅಥವಾ ಸಾಮೂಹಿಕವಾಗಿ ಆದಿಕಾರಣಗಳೆಂದು ತಿಳಿದಿದ್ದರು. ಆದರೆ ಅರಿಸ್ಟಾಟಲ್ಲನು ಹೇಳುವಂತೆ ಫಾಯಲಾಲಾಸನ ಕಾಲಕ್ಕೆ ಆಕಾಶವು ಆದಿಕಾರಣವೆಂಬ ಕಲ್ಪನೆಯು ಹುಟ್ಟಿತು. ತೇಜ, ವಾಯು, ಆಪ್, ಪೃಥ್ವಿ ಇವು ಹೆಚ್ಚುಕಡಿಮೆ ಇಂದ್ರಿಯಗೋಚರ ವಸ್ತುಗಳು. ಇಂದ್ರಿಯಗೋಚರವಿಲ್ಲದಿರುವ ಆಕಾಶವು ಆದಿಕಾರಣವೆಂದು ಹೇಳುವ ಕಾಲಕ್ಕೆ ತಾತ್ವಿಕ ಕಲ್ಪನೆಗಳ ವಿಕಾಸವು ಹೆಚ್ಚಾಗಿರಲಿಕ್ಕೆ ಸಾಕು. ಎಲ್ಲ ವಸ್ತುಗಳ ಕೊನೆಯ ಗತಿಯಾವುದು ಎಂದು ಕೇಳಲಾಗಿ ಪ್ರವಾಹಣ ಜೈವಲಿಯು ಆಕಾಶವೆಂದು ಹೇಳಿರುವನು. ಇದೆಲ್ಲ ಆಕಾಶದಿಂದಲೇ ಉತ್ಪನ್ನವಾಗುವದು, ಕೊನೆಗೆ ಆಕಾಶವನ್ನೇ ಸೇರುವದು, ಆದುದರಿಂದ ಆಕಾಶವೇ ಎಲ್ಲಕ್ಕೂ ಹಿರಿಯದು, ಅದೇ ಪರಾಯಣವು ಎಂದು (ಛಾಂ, ಅ ೧, ಖಂ ೯, ಮಂ ೧) ಸ್ಪಷ್ಟ ಉಲ್ಲೇಖವಿರುವದು. ಇದೇ ತತ್ವದ ಸಮರ್ಥನವು ಛಾಂದೋಗ್ಯದಲ್ಲಿ (ಛಾಂ, ಅ ೭, ಖಂ ೧೨, ಮಂ ೧) 'ಆಕಾಶವು ತೇಜದಕಿಂತಲೂ ಹೆಚ್ಚಿನದು, ಸೂರ್ಯ ಚಂದ್ರ ನಕ್ಷತ್ರ ವಿದ್ಯುತ್ ಮುಂತಾದವುಗಳೆಲ್ಲ ಆಕಾಶದಲ್ಲಿಯೇ ಇರುವವು, ಆಕಾಶದ ಸಹಾಯದಿಂದಲೇ ಶಬ್ದದ ಉತ್ಪತ್ತಿ…ಆಕಾಶದಲ್ಲಿ ವಸ್ತುಗಳ ಉತ್ಪತ್ತಿ, ಆಕಾಶವಾದಮೇಲೆ ಹಿಂದಿನಿಂದ ವೃಕ್ಷವುಗಳ ಹುಟ್ಟು. ಆದುದರಿಂದ ಆಕಾಶವೇ ಶ್ರೇಷ್ಠವೆಂದು ಉಪಾಸಿಸು' ಎಂದು ಇರುವದು. ಛಾಂದೋಗ್ಯದಲ್ಲಿಯ ಈ ಉಲ್ಲೇಖಗಳ ಮೇಲಿಂದ ನೋಡಲಾಗಿ ಮಿಕ್ಕವುಗಳಿಗಿಂತ ಈ ಆಕಾಶವು ಆದಿವಸ್ತುವು ಎಂಬ ಕಲ್ಪನೆಯೇ ಉಚ್ಚತರವಾಯಿತು.

**೭. ಅಸತ್—** ಅಸತ್ ಎಂಬುದೇ ಮೂಲವಸ್ತುವು ಎಂದು ಕೆಲವು ಉಪನಿಷತ್ತುಗಳಲ್ಲಿ ಪ್ರತಿಪಾದನವಿರುವದು. 'ಎಲ್ಲಕ್ಕೂ ಮೊದಲು ಅಸತ್ ಇತ್ತು, ಅದರಿಂದ ಸತ್

ಹುಟ್ಟಿತು. ಅದು ತನ್ನ ಸಂಕಲ್ಪದಿಂದ ತಾನೇ ಆಕಾರ ಹೊಂದಿತು. ಆದುದರಿಂದ ಅದು ಸುಕೃತವು ಅಂದರೆ ಚನ್ನಾಗಿ ಮಾಡಿದ್ದು ಅಥವಾ ಸ್ವಯಂಕೃತವು ಅಂದರೆ ತನ್ನಿಂದತಾನೇ ಮಾಡಲ್ಪಟ್ಟದ್ದು ಎಂಬ ಹೆಸರನ್ನು ಪಡೆದಿದೆ,' ಎಂದು ತೈತ್ತಿರೀಯದಲ್ಲಿ (ವ ೨, ಅನು ೭) ಮಂತ್ರವಿರುವನು. ಅಸತ್‌ದಂಥ ವಸ್ತುವು ಜಗತ್ತಿನ ಆದಿಕಾರಣವು ಎಂಬ ಕಲ್ಪನೆಗೆ ಸಮ್ಮತಿಸದೇ ಇರುವ ಟೀಕಾಕಾರರು ಈ ವಾಕ್ಯದ ಅರ್ಥವನ್ನು ಬೇರೆ ಬಗೆಯಿಂದ ಹಚ್ಚಿರುತ್ತಾರೆ. ಮೊದಲು ಏನೂ ಇದ್ದೇಇಲ್ಲವೆಂತಲ್ಲ, ಆದರೆ ಯಾವ ಗೋಚರವಸ್ತುವೂ ಇರಲಿಲ್ಲವಾದುದರಿಂದ ಏನೂ ಇಲ್ಲದಂತೆ ಇತ್ತು ; ಆ ಸ್ಥಿತಿಯೊಳಗಿಂದ ಸತ್ ಎಂಬುದು ಉತ್ಪನ್ನವಾಯಿತು ಎಂದು ಅವರು ಅರ್ಥಮಾಡುವದು ಯೋಗ್ಯವೇ ಸರಿ. ಅತ್ಯಂತ ಶ್ರೇಷ್ಠವಾದ ಪರತತ್ವದ ಅಸ್ತಿತ್ವವನ್ನು ಪ್ರತಿಪಾದಿಸುವ ಶ್ರೀ ಶಂಕರಾಚಾರ್ಯರಂಥವರು ಇದರ ಅರ್ಥವನ್ನು ಏನು ಮಾಡಬಹುದೆಂಬುದನ್ನು ನಾವು ಸಹಜವಾಗಿ ಊಹಿಸಬಹುದು. ಆದರೆ ತೈತ್ತಿರೀಯದಲ್ಲಿ ಮೇಲಿನ ಅಜ್ಞೇಯವಾದಾತ್ಮಕ ತತ್ವವು ಪ್ರತಿಪಾದಿಸಲ್ಪಡುವ ಪೂರ್ವದಲ್ಲಿಯೇ ಋಗ್ವೇದದ (ಮಂಡಲ ೧೦, ಸೂ ೧೨೯) ನಾಸದೀಯ ಸೂಕ್ತದಲ್ಲಿ, ಸದಸತ್ ಇವೆರಡೂ ಮೊದಲು ಇರಲಿಲ್ಲ, ಶುದ್ಧ ಕಗ್ಗತ್ತಲೆಯ ಮಹಾಸಾಗರವೊಂದು ಪಸರಿಸಿತ್ತು ಎಂಬ ವರ್ಣನೆಯು ಇರುವದು. ಎಪಿಮೆನಾಯ್ಡಿಸ್ ಎಂಬ ಗ್ರೀಕ ತತ್ವಜ್ಞನಾದರೂ ಇದೇ ಬಗೆಯ ವಿಚಾರವನ್ನು ವ್ಯಕ್ತಮಾಡಿದ್ದಾನೆ. ಬೃಹದಾರಣ್ಯಕದಲ್ಲಿಯೂ (ಅ ೧, ಬ್ರಾ ೨, ಮಂ ೧-೨) ಹೇಳಿರುವುದೇನಂದರೆ, 'ಮೊಟ್ಟಮೊದಲು ಏನೂ ಇರಲಿಲ್ಲ, ಇದೆಲ್ಲ ಮೃತ್ಯುವಿನಿಂದ ಮುಚ್ಚಲ್ಪಟ್ಟಿತ್ತು, ಹಸಿವೆಯಿಂದ ಆವೃತವಿತ್ತು. ಹಸಿವೆಯೆಂದರೆ ಮೃತ್ಯುವು. ಅವನು ತಾನು ಆತ್ಮವುಳ್ಳವನಾಗಬೇಕೆಂದು ಸಂಕಲ್ಪಮಾಡಿದನು. ಅರ್ಚಿಸುತ್ತ ಅತ್ತಿತ್ತ ಅಡ್ಡಾಡತೊಡಗಿದನು. ಅವನ ಅರ್ಚನೆಯಿಂದ ಅಪ್ಪು-ನೀರು ಹುಟ್ಟಿತು. ಅದರ ಬುರುಗು ಗಟ್ಟಿಯಾಗಿ ಪೃಥ್ವಿಯಾಯಿತು. ಪೃಥ್ವಿಯಮೇಲೆ ಮೃತ್ಯುವು ದುಡಿಯಲಾರಂಭಿಸಿದನು. ದುಡಿಯುವ ಶ್ರಮದ ಕಾವಿನಿಂದ ತೇಜವು ಉತ್ಪನ್ನವಾಯಿತು.' ಪ್ರಾರಂಭದಲ್ಲಿರುವ ಅಸತ್ ವಸ್ತುವಿನಿಂದ — ಅದಕ್ಕೆ ಮೃತ್ಯು ಅಥವಾ ಹಸಿವೆಯೆನ್ನಬಹುದು ಇಲ್ಲವೆ ಗ್ರೀಕ ಪರಿಭಾಷೆಯಂತೆ ಶೂನ್ಯ ಅಥವಾ ರಾತ್ರಿ ಎಂದೆನ್ನಬಹುದು — ಆಪ್, ಪೃಥ್ವಿ, ತೇಜ ಎಂಬ ತತ್ವಗಳು ಹುಟ್ಟಿದವೆಂಬ ಸ್ಪಷ್ಟ ವರ್ಣನೆಯು ಇಲ್ಲಿ ಇರುವದು. ವಿಚಾರಮಾಡುತ್ತ ಹೋದ ಹಾಗೆ ಯಾವುದೇ ಗೋಚರವಸ್ತುವು ಆದಿಯಲ್ಲಿ ಇತ್ತು ಎಂದು ನಿರ್ಣಯಾತ್ಮಕವಾಗಿ ಹೇಳಲಿಕ್ಕೆ ಬಾರದೇ ಇದ್ದುದರಿಂದ ಅಸತ್‌ದಿಂದಲೇ ಈ ಇಂದ್ರಿಯಗೋಚರ ವಿಶ್ವವು ನಿರ್ಮಾಣವಾಯಿತು ಎಂದು ಪ್ರತಿಪಾದಿಸುವ ಪ್ರಸಂಗವು ಮಾನವ ವಿಚಾರವಿಕಾಸದ ಇತಿಹಾಸದಲ್ಲಿ ಒಮ್ಮೆ ಬಂದಿತ್ತು ಎಂಬುದು ಇದರ ಮೇಲಿಂದ ವ್ಯಕ್ತವಾಗುವದು. ಪ್ಲೇಟೋ

ಮತ್ತು ಅರಿಸ್ಟಾಟಲ್‌ರವರ ಶ್ರೇಷ್ಠವಾದ ಆಸ್ತಿಕ ಮತ್ತು ವಿಧಾಯಕ ತತ್ತ್ವಜ್ಞಾನಗಳಲ್ಲಿ ಸಹ ವಾದವಿವಾದದ ಮಟ್ಟಿಗಾದರೂ ಅಸತ್ ಎಂಬುದನ್ನು ಗೃಹೀತವೆಂದು ತಿಳಿಯಬೇಕಾಯಿತು. ಇನ್ನು ಪಾರ್ಮೆನಾಯಿಡಿಸ್ಸನ ಸದ್ವಾದದ ವಿರುದ್ಧ ಗಾರ್ಜಿಯಾಸನ ಅಸದ್ವಾದ ಪ್ರತಿಪಾದನೆಯು ಕೇವಲ ವಾದವಿವಾದಾತ್ಮಕವಿರುವದೆಂಬದು ಸ್ಪಷ್ಟವೇ ಇದೆ. ಯಾಕಂದರೆ ಅವರ ಚರ್ಚೆಗೆ ತರ್ಕದ ಆಟವೆಂದೇ ನಾವು ಅನ್ನಬೇಕಾಗುವದು. ಆದರೆ ಅದರ ಗೊಡವೆ ನಮಗೇಕೆ ? ತೈತ್ತಿರೀಯ ಮತ್ತು ಛಾಂದೋಗ್ಯದಲ್ಲಿಯ ಅಸತ್ ಅಂದರೆ ಕೇವಲ ಅಸ್ತಿತ್ವಶೂನ್ಯತೆಯಲ್ಲ, ಅಭಾವವಲ್ಲ. ಮುಂದೆ ಹೆಚ್ಚು ಗೋಚರವಾದ ಸತ್ ಎಂಬುದಕ್ಕೆ ಹೋಲಿಸಿ ನೋಡಿದರೆ ಅದು ಸಾಪೇಕ್ಷವಾಗಿ ಅಸತ್ ಎನಿಸುವದು; ಇಷ್ಟೇ ಅದರ ಅರ್ಥವೆಂಬುದನ್ನು ನಾವು ಲಕ್ಷದಲ್ಲಿಡತಕ್ಕದ್ದು.

**೮. ಅಸತ್ ಮತ್ತು ಬ್ರಹ್ಮಾಂಡವು**— ಅಸತ್ ಇದೇ ವಿಶ್ವದ ಮೂಲವು ಎಂಬ ತತ್ತ್ವದ ಬಗ್ಗೆ ಇನ್ನೊಂದು ಚಮತ್ಕಾರದ ಸಂಗತಿಯು ಇರುವದು. ಅಸತ್ ಮತ್ತು ಬ್ರಹ್ಮಾಂಡದ ಉತ್ಪತ್ತಿಯ ಕಥೆ ಇವುಗಳನ್ನು ಛಾಂದೋಗ್ಯೋಪನಿಷತ್ತು (ಅ ೩, ಖಂ ೧೯, ಮಂ ೧–೩) ಜೋಡಿಸಿರುವದು. ಆ ಕಥೆಯು ಹೀಗೆ ಇರುವದು. 'ಮೊದಲು ಅಸತ್ ಎಂಬುದೇ ಇತ್ತು. ಅದು ಸತ್ ಆಯಿತು. ಅದು ಬೆಳೆದು ದೊಡ್ಡ ತತ್ತಿಯಾಯಿತು. ಹಾಗೆಯೇ ಒಂದು ವರ್ಷ ಬಿದ್ದುಕೊಂಡು ಆಮೇಲೆ ಅದು ಒಡೆಯಿತು. ಒಂದು ಶಕಲವು ಬೆಳ್ಳಿಯದಿತ್ತು, ಇನ್ನೊಂದು ಬಂಗಾರದ್ದು. ಬೆಳ್ಳಿಯ ಭಾಗವು ಪೃಥ್ವಿಯುವಾಯಿತು, ಭಂಗಾರದ್ದು ಆಕಾಶವಾಯಿತು. ತತ್ತಿಯ ದಪ್ಪವಾಗಿರುವ ಭಾಗಗಳು ಬೆಟ್ಟಗಳಾದವು, ತೆಳುವಾಗಿರುವ ಭಾಗಗಳು ಮೋಡಗಳಾದವು. ಅದರಲ್ಲಿಯ ರಕ್ತವಾಹಿನಿಗಳು ನದಿಗಳಾದವು, ಅದರ ರಸವು ಮಹಾಸಾಗರವಾಯಿತು. ಒಳಗಿಂದ ಹೊರಬಿದ್ದುದೇ ಸೂರ್ಯವಾಯಿತು. ಸೂರ್ಯೋದಯವಾದ ಕೂಡಲೇ ಜಯಘೋಷವಾಯಿತು.' ಛಾಂದೋಗ್ಯದಲ್ಲಿಯ ಈ ಕಥೆಯು ಬ್ಯಾಬಿಲೋನಿಯಾ, ಇಜಿಪ್ತ, ಫಿನೀಸಿಯಾ, ಇರಾಣ, ಗ್ರೀಸ ಈ ದೇಶಗಳಲ್ಲಿ ಪ್ರಚಲಿತವಿದ್ದ ಬ್ರಹ್ಮಾಂಡವಿಷಯಕ ಕಥೆಗಳಿಗೆ ಎಷ್ಟು ಸದೃಶವಾಗಿರುವುದೆಂಬದನ್ನು ಬೇರೆ ಹೇಳಲಿಕ್ಕೆ ಬೇಡ. 'ಕ್ರೋನೋಸ ಮತ್ತು ಅದ್ರಾಸ್ಟಿಯಾ ಇವರು ಒಂದು ದೊಡ್ಡ ಅಂಡವನ್ನು ಹುಟ್ಟಿಸಿದರು. ಅದು ಒಡೆದು ಮೇಲಿನ ಅರ್ಧದಿಂದ ಆಕಾಶವು, ಕೆಳಗಿನ ಅರ್ಧದಿಂದ ಪೃಥ್ವಿಯು ಆದವು. ಅದರೊಳಗಿಂದ ಫೇನಿಸ ಎಂಬ ತೇಜಸ್ವಿಯಾದ ದೇವನು ಹೊರಬಿದ್ದನು, ಅವನು ಮಿಕ್ಕದೇವತೆಗಳ ಉತ್ಪಾದಕನು' ಎಂಬ ಕಥೆಯು ಗ್ರೀಕ ಜನರ ಪುರಾಣಗಳಲ್ಲಿರುವದು. ಕ್ರೋನೋಸ ಮತ್ತು ಅದ್ರಾಸ್ಟಿಯಾ ಈ ಹೆಸರುಗಳಿಂದ ಕಾಲ ಮತ್ತು ಕರ್ಮ ಇವೆರಡು ಶಕ್ತಿಗಳು ನಿರ್ದಿಷ್ಟವಾಗುವವು. ಅದ್ರಾಸ್ಟಿಯಾ ಎಂಬ ಗ್ರೀಕ

ಶಬ್ದವು ಕ್ರಿ. ಶ. ಪೂರ್ವದಲ್ಲಿ ೮೦೦ ವರ್ಷ ಗ್ರೀಕ ಜನರಲ್ಲಿ ರೂಢವಿತ್ತು. ಸಂಸ್ಕೃತ 'ಅದೃಷ್ಟ' ಎಂಬ ಶಬ್ದದಿಂದ ಈ ಶಬ್ದವು ಹುಟ್ಟಿರಬಹುದೋ ? ಅದೃಷ್ಟವೆಂದರೂ ದೈವ ಅಥವಾ ಕರ್ಮಶಕ್ತಿ ಎಂಬ ಅರ್ಥವಾಗುವದು. ಗ್ರೀಕರು ಮತ್ತು ನಮ್ಮ ಪೂರ್ವಜರು ಒಂದೇ ಕಡೆಗೆ ಇರುವಾಗ ಈ ಶಬ್ದವನ್ನು ಅವರು ಎತ್ತಿರುವ ಸಂಭವವಿದೆ. ಇರಲಿ. ಅಂಡ ದೊಳಗಿಂದ ಸೂರ್ಯನ ಉತ್ಪತ್ತಿಯಾದ ಕಥೆಯು ಎಷ್ಟೋ ಜನಾಂಗಗಳ ಪುರಾಣಗಳಲ್ಲಿ ರುವದು. ಆದರೆ ಅಸತ್ಏಂದ ಅಂಡದ ಉತ್ಪತ್ತಿ ಎಂಬುದು ನಮ್ಮ ಉಪನಿಷತ್ತುಗಳ ಲ್ಲಿಯ ಕಥೆಯ ವಿಶೇಷವು. ವಿಶ್ವವು ಒಂದು ಅಂಡವೆಂದು ತಿಳಿದಂತೆಯೇ ಅದು ಸಂಪತ್ತಿ ನಿಂದ ತುಂಬಿದ ದೊಡ್ಡ ಕೋಶವು, ಪೃಥ್ವಿಯು ಅದರ ಬುಡವು, ಆಕಾಶವು ಮುಚ್ಚಳವು, ಈ ಪೊಳ್ಳು ಅದರ ಒಳಬದಿಯು, ದಿಕ್ಕುಗಳು ಮೂಲೆಗಳು, ಎಂದು ಉಪನಿಷತ್ಕಾ ರರು ತಿಳಿದಿದ್ದರು (ಛಾಂ, ಅ ೩, ಖಂ ೧೫, ಮಂ ೧). ವಿಶ್ವವು ದುಂಡನ್ನ ತತ್ತಿಯು ಎಂಬ ಕಲ್ಪನೆಗೆ ಪ್ರತಿಯಾಗಿ ಅದು ಚೌಕಾದ ಪೆಟ್ಟಿಗೆಯು ಇರುವದೆಂಬ ಕಲ್ಪನೆಯಾ ದರೂ ಇರುವದು. ಅದನ್ನು ತೋರಿಸುವುದಕ್ಕೆ ಈ ಕೋಶದ ಉಲ್ಲೇಖವನ್ನು ಇಲ್ಲಿ ಮಾಡಿರುವೆವು. ಇದರ ಮೇಲಿಂದ ಅಸತ್ತಿಗೂ ಕೋಶಕ್ಕೂ ಏನಾದರೂ ಸಂಬಂಧವಿರುವು ದೆಂದು ಯಾರೂ ತಿಳಿಯಕೂಡದು.

**೯. ಸತ್**— ಅಸತ್ ಇದು ವಿಶ್ವದ ಮೂಲವು ಎಂಬ ವಿಚಾರವಾದ ಬಳಿಕ ಇನ್ನು ಸತ್ ಇದರ ವಿಚಾರವು. ಛಾಂದೋಗ್ಯದಲ್ಲಿ ಒಂದೆಡೆಗೆ ಸತ್ ಇದೇ ಜಗದಾದಿ ಯಲ್ಲಿ ಇತ್ತೆಂದು ವಚನವಿರುವದು. ಮೊದಲು ಅಸತ್ ಇತ್ತು, ಅದರಿಂದ ಸತ್ ಎಂಬುದಾ ಯಿತು ಎಂಬ ಕಲ್ಪನೆಯನ್ನು ಆ ಉಪನಿಷತ್ತು ಅಲ್ಲಿ ಒಳಿತಾಗಿ ಹೀಯಾಳಿಸಿರುವದು. ಛಾಂದೋಗ್ಯದಲ್ಲಿ (ಅ ೬, ಖಂ ೨, ಮಂ ೧-೪) 'ಅಸತ್‌ದಿಂದ ಸತ್ ಇದರ ಉತ್ಪ ತ್ತಿಯು, ಶೂನ್ಯದಿಂದ ಅಸ್ತಿತ್ವದ ಉತ್ಪತ್ತಿಯು, ಅಭಾವದಿಂದ ಭಾವದ ಉತ್ಪತ್ತಿಯು ಆಗುವ ಬಗೆಹೇಗೆ ? ಮೊಟ್ಟಮೊದಲು ಇದೆಲ್ಲ ಸತ್ ಇತ್ತು, ಇನ್ನುಳಿದದ್ದಾವುದೂ ಇಲ್ಲದೆ ಇದೊಂದೇ ಇತ್ತು ಎಂದು ಭಾವಿಸಲಿಕ್ಕೆ ಬೇಕು. ಈ ಆದಿಯಾದ ಸತ್ ತಾನು 'ಬಹು ಆಗಬೇಕು, ತಾನು ಉತ್ಪನ್ನ ಮಾಡಬೇಕು, ಎಂದು ಬಗೆಯಿತು. ಹೀಗೆ ಬಗೆದು ತೇಜ ವನ್ನು ಹುಟ್ಟಿಸಿತು. ತೇಜವೂ ತಾನು 'ಬಹು' ಆಗಬೇಕೆಂದು ಬಗೆದು ಅಪ್ಪನ್ನು ಹುಟ್ಟಿಸಿತು. ಅಪ್ಪು ಅನ್ನವನ್ನು ಅಥವಾ ಪೃಥ್ವಿಯನ್ನು ಹುಟ್ಟಿಸಿತು,' ಎಂದು ವರ್ಣನೆಯಿರು ವದು. ಅದೇ ಉಪನಿಷತ್ತಿನಲ್ಲಿ (ಛಾಂ, ಅ ೬, ಖಂ ೩, ಮಂ ೨-೩) 'ಮತ್ತೆ ಆ ಆದಿ ದೇವತೆಯಾದ ನಾನೇ ಈಗ ಈ ಮೂರು ದೇವತೆಗಳಾಗಿರುವೆನು. ನಾನೇ ಅವುಗಳಲ್ಲಿ ಪ್ರವೇಶಿಸಿ ನಾಮರೂಪಗಳನ್ನು ಹೊರಪಡಿಸುವೆನು. ಪ್ರತಿಯೊಂದನ್ನು ತ್ರಿವೃತ್ ಅಂದರೆ

ಮೂರು ಮೂರು ಮಾಡಿ ಮಿಶ್ರ ಮಾಡುವೆನು.' ಮುಂದೆ (ಛಾ, ಅ ೬, ಖಂ ೪, ಮಂ ೧-೪) ' ಅಗ್ನಿಯಲ್ಲಿ ಕಾಣುವ ಕೆಂಪು ಬಣ್ಣವು ತೇಜದ ಸ್ವರೂಪವು. ಅದರಲ್ಲಿಯ ಬಿಳೀ ಬಣ್ಣವು ಅಪ್ಪಿನದು. ಅದರಲ್ಲಿಯ ಕಪ್ಪು ಪೃಥ್ವಿಯದು. ಈ ಪ್ರಕಾರ ಅಗ್ನಿಯ ಅಗ್ನಿತ್ವವು ನಷ್ಟವಾಗುವದು. ಅಗ್ನಿ ಎಂಬುದು ಕೇವಲ ಶಬ್ದವು, ಕೇವಲ ವಿಕಾರವು, ನಾಮವು. ನಿಜವಾಗಿ ಇರುವವು ಮೂರು ಬಣ್ಣಗಳು ಮಾತ್ರ. ಸೂರ್ಯನಲ್ಲಿಯ ಕೆಂಪು ತೇಜದ ಬಣ್ಣವು. ಅವನಲ್ಲಿಯ ಬಿಳುಪು ಅಪ್ಪಿನದು. ಅವನ ಕಪ್ಪು ಪೃಥ್ವಿಯದು. ಹೀಗೆ ಸೂರ್ಯನ ಸೂರ್ಯತ್ವವು ನಷ್ಟವಾಗುವದು. ಸೂರ್ಯನೆಂಬುದು ಕೇವಲ ಶಬ್ದ, ಒಂದು ವಿಕಾರವು, ಒಂದು ಹೆಸರು, ನಿಜವಾಗಿರುವವು ಮೂರು ಬಣ್ಣಗಳು ಮಾತ್ರ. ಚಂದ್ರನ ಚಂದ್ರತ್ವವು ವಿದ್ಯುತ್ತಿನ ವಿದ್ಯುತ್ತತ್ವವು ಇವುಗಳ ಹಾದಾದರೂ ಇದೇ. ಮೂರು ಮೂರು ಬಣ್ಣಗಳ ಅಸ್ತಿತ್ವವೇ ಸತ್ಯವಾದುದು,' ಹೀಗೆ ವರ್ಣನೆಯಿರುವುದು. ನಾವು ಲಕ್ಷ್ಯದಲ್ಲಿಡತಕ್ಕ ವಿಷಯಗಳೇನೆಂದರೆ ಇಲ್ಲಿ ಸತ್ ಎಂಬುದೇ ಆದಿ ಎಂದೂ ಅದು ಏಕಮೇವಾದ್ವಿತೀಯವೆಂದೂ ವರ್ಣನೆಯಿರುವದು. ಮುಂದೆ ತೇಜ, ಅಪ್ಪು, ಅನ್ನಗಳಿಂದ ಯುಕ್ತವಾದ ಪ್ರಕೃತಿಯು ಅವರಿಂದ ಹುಟ್ಟಿತೆಂದೂ ವೇದಾಂತದಲ್ಲಿ ಪಂಚಭೂತಗಳ ಪಂಚೀಕರಣ ಪದ್ಧತಿಯಿಂದ ಸಕಲ ವಿಶ್ವವು ನಿರ್ಮಾಣವಾಯಿತೆಂದು ಹೇಳಿರುವಂತೆ ಛಾಂದೋಗ್ಯದಲ್ಲಿ ತ್ರಿವೃತ್ಕರಣದಿಂದ ವಿಶ್ವದ ಉತ್ಪತ್ತಿಯಾಯಿತೆಂದೂ ವಚನಗಳಿರುವವು. ವೇದಾಂತದಲ್ಲಿ ಪೃಥ್ವಿ, ಆಪ್, ತೇಜ, ವಾಯು, ಆಕಾಶ ಈ ಐದರಲ್ಲಿ ಪ್ರತಿಯೊಂದನ್ನು ಅರ್ಧಮಾಡಿ ಅದನ್ನು ತೆಗೆದಿಟ್ಟು, ಪ್ರತಿಯೊಂದರ ಮಿಕ್ಕ ಅರ್ಧದಲ್ಲಿ ನಾಲ್ಕು ಸಮಭಾಗ ಮಾಡಿ, ಒಂದು ಭೂತದ ಇಡೀ ಅರ್ಧ ಭಾಗ ಮತ್ತು ಮಿಕ್ಕ ನಾಲ್ಕು ಭೂತಗಳ ಒಂದೊಂದು ಭಾಗ ಹೀಗೆ ಕೂಡಿಸಿ ಒಂದು ಹೊಸ ವಸ್ತುವನ್ನು ಸಿದ್ಧಮಾಡುವ ಪದ್ಧತಿಯು ರೂಢವಿರುವದು. ಇದೇ ಪಂಚೀಕರಣವೆನಿಸುವದು. ಇದೇ ರೀತಿಯಾಗಿ ಇಲ್ಲಿ ಮೂರೇ ಭೂತಗಳೆಂದು ಭಾವಿಸಿ ಅವುಗಳಿಂದ ಅನ್ಯವಸ್ತುಗಳು ತ್ರಿವೃತ್ಕರಣ ಪದ್ಧತಿಯಿಂದ ಸಾಧಿಸಲ್ಪಟ್ಟಿವೆ. ಅನ್ಯಾಕ್ಸಾಗೋರಾಸ ಎಂಬ ಗ್ರೀಕ ದಾರ್ಶನಿಕನು ಪ್ರತಿಯೊಂದು ವಸ್ತುವಿನಲ್ಲಿ ಪ್ರತಿಯೊಂದು ವಸ್ತುವಿನ ಭಾಗವಿರುವದೆಂದೂ ಭೂತಗಳು ಮಿಶ್ರವಾಗಿ ಅನೇಕ ವಸ್ತುಗಳ ಉತ್ಪತ್ತಿಯಾಯಿತೆಂದೂ ಪ್ರತಿಪಾದಿಸಿರುವನು. ನಾಲ್ಕನೆಯ ಮಹತ್ವದ ವಿಷಯವೆಂದರೆ, ಮೂರು ಭೂತಗಳಿಗೆ ಮೂರು ಬೇರೆ ಬೇರೆ ಬಣ್ಣಗಳೆಂದು ವರ್ಣನೆಯಿರುವದು. ಸಾಂಖ್ಯರು ಮುಂದೆ ತಮ್ಮ ಪ್ರಕೃತಿಯ ಮೂರು ಗುಣಗಳಿಗೆ ಅನುವಾದ ಇವೇ ಮೂರು ಬಣ್ಣಗಳನ್ನು ತಮ್ಮ ತತ್ವಜ್ಞಾನದಲ್ಲಿ ಸೇರಿಸಿಕೊಂಡಿರುವರು. ಕೊನೆಗೆ ಛಾಂದೋಗ್ಯವು ಸ್ಪಷ್ಟವಾಗಿ ಹೇಳುವದೇನೆಂದರೆ, ಮೂರು ಬಣ್ಣಗಳು ಅಥವಾ ಮೂರು ಭೂತಗಳು

ಮಾತ್ರ ಇರುವವು, ನಿಸರ್ಗದಲ್ಲಿಯ ಚಂದ್ರ ಸೂರ್ಯಾದಿ ಎಲ್ಲ ವಸ್ತುಗಳು ಕೇವಲ ವಿಕಾರಗಳು ಅಥವಾ ಹೆಸರುಗಳು ಮಾತ್ರ. ಹುಟ್ಟಿದ ಎಲ್ಲ ವಸ್ತುಗಳು ಕೇವಲ ನಾಮ ರೂಪಾತ್ಮಕವಿರುವವು. ಮೂರು ಭೂತಗಳು ಮಾತ್ರ ಮೂಲ ಸತ್ ವಸ್ತುವಿನಿಂದ ಉತ್ಪನ್ನ ವಾಗಿರುವದರಿಂದ ಸತ್ಯವಿರುವವು. ಛಾಂದೋಗ್ಯದಲ್ಲಿದ್ದ ಈ ಪ್ರತಿಪಾದನವು ಒಂದು ಬಗೆಯ ತ್ರಿಭೂತಾತ್ಮಕ ಅದ್ವೈತವೇ ಸೈ.

**೧೦. ಪ್ರಾಣವು—** ಪ್ರಾಣವು ಸರ್ವರ ಆದಿಯು ಎಂಬ ಉಪನಿಷತ್ಕಲ್ಪನೆಯು ಗ್ರೀಕ್ ದಾರ್ಶನಿಕರ ಕಲ್ಪನೆಗಳಿಗಿಂತ ಎಷ್ಟೋ ಉಚ್ಚತರವಾದದ್ದು. ಪ್ರಾಣದ ಮೂಲ ಅರ್ಥವು ಉಸುರು. ಉಸುರೇ ಮನುಷ್ಯನ ಜೀವವೆಂದು ಮೊದಲು ಭಾವನೆಯಾಗಿರುವುದ ರಿಂದ ಪ್ರಾಣನೆಂದರೆ ಜೀವತತ್ವವೆಂದು ತಿಳಿಯಲ್ಪಟ್ಟಿತು. ಮನುಷ್ಯನಲ್ಲಿಯ ಜೀವತತ್ವವು ಪ್ರಾಣವೆಂಬ ಅಭಿಧಾನವನ್ನು ಹೊಂದಿದಂತೆ ಜಗತ್ತಿನಲ್ಲಿಯ ಜೀವವಾದರೂ ಪ್ರಾಣವೆಂಬ ಹೆಸರನ್ನೇ ಪಡೆಯಿತು. ಹೀಗೆ ಪ್ರಾಣವೆಂದರೆ ಜೀವಶಕ್ತಿಯು ಅಥವಾ ವಿಶ್ವಶಕ್ತಿಯು ಎಂಬ ಅರ್ಥವು ರೂಢವಾಯಿತು. ಛಾಂದೋಗ್ಯದಲ್ಲಿ ( ಅ ೧, ಖಂ ೧೧, ಮಂ ೫ ) ಉಷಸ್ತಿ ಚಾಕ್ರಾಯಣನಿಗೆ ವಿಶ್ವದ ಮೂಲಕಾರಣದ ಬಗ್ಗೆ ಒರ್ವ ಗೃಹಸ್ಥನು ಪ್ರಶ್ನೆಮಾಡಲಾಗಿ ಅವನು 'ಪ್ರಾಣವೇ ಮೂಲವು, ಇವೆಲ್ಲ ವಸ್ತುಗಳು ಕೊನೆಗೆ ಪ್ರಾಣವನ್ನೇ ಪ್ರವೇಶಿಸುವವು, ಪ್ರಾಣದಿಂಪಲೇ ಇವೆಲ್ಲವುಗಳ ಉತ್ಪತ್ತಿಯು ' ಎಂದು ಉತ್ತರಕೊಟ್ಟನು. ಮನುಷ್ಯನ ಉಸುರು ಅವನ ಜೀವವಿದ್ದಂತೆ ವಾಯುವು ಈ ವಿಶ್ವದ ಜೀವವಿರುವದೆಂದು ಪಿಂಡಬ್ರಹ್ಮಾಂ ಡಗಳ ಸಾಮ್ಯವನ್ನು ಹೋಲಿಸುವಾಗ ರೈಕ್ವನು ಛಾಂದೋಗ್ಯದಲ್ಲಿ (ಅ ೪, ಖಂ ೩, ಮಂ ೩–೪ ) ಹೇಳಿರುವನು. ' ಪ್ರಾಣವೇ ಕೊನೆಯ ಸ್ಥಾನವು. ಯಾಕಂದರೆ ಮನು ಷ್ಯನು ಮಲಗಿದನೆಂದರೆ ಅವನ ವಾಣಿ ಅವನ ಕಣ್ಣು ಕಿವಿ ಮನಸ್ಸು ಇವೆಲ್ಲ ಪ್ರಾಣದಲ್ಲಿಯೇ ಲಯಹೊಂದುವವು. ಪ್ರಾಣವೇ ಎಲ್ಲದರ ಕೊನೆಯ ಸ್ಥಾನವು. ಈ ಬಗೆಯಾಗಿ ಪಿಂಡದ ಲಯಸ್ಥಾನವು ಈ ಪ್ರಾಣವು, ಬ್ರಹ್ಮಾಂಡದ ಲಯಸ್ಥಾನವು ಈ ವಾಯುವು ' ಎಂದು ಅವನ ವಚನವಿರುವದು. ಪ್ರಾಣದ ಮಹತ್ವವನ್ನು ಈ ಬಗೆಯಾಗಿ ಪ್ರತಿಪಾದಿಸಿದ ಛಾಂದೋಗ್ಯೋಪನಿಷತ್ತಿನಲ್ಲಿ ಸನತ್ಕುಮಾರನು ನಾರದನಿಗೆ ಬ್ರಹ್ಮವಿದ್ಯೆಯನ್ನು ಹೇಳುವಾಗ ( ಅ ೭, ಖಂ ೧೫, ಮಂ ೧ ) ' ಎಲ್ಲ ಅರಗಳು ರಥಚಕ್ರದ ನಾಭಿಯನ್ನು ಅವಲಂಬಿಸಿರು ವಂತೆ ಎಲ್ಲ ವಸ್ತುಗಳು, ಎಲ್ಲ ಭೂತಮಾತ್ರಗಳು ಪ್ರಾಣದಲ್ಲಿ ಕೇಂದ್ರೀಕೃತವಾಗಿ ಅದನ್ನೇ ಅವಲಂಬಿಸಿವೆ ' ಎಂದು ಅಂದಿರುವನು. ಈ ಬಗೆಯಾಗಿ ಪ್ರಾಣವು ವಿಶ್ವದ ನಾಭಿಯು, ಕೇಂದ್ರವು, ಆಧಾರವು ಎಂದು ಹೇಳಬಹುದು. ' ಪ್ರಾಣವೇ ಪರಮಸತ್ಯವು, ಮನಸ್ಸು ಅದರ ದೂತನು, ಕಣ್ಣು ಕೇವಲ ರಕ್ಷಕನು, ಕಿವಿಯು ಬರಿಯ ಸುದ್ದಿಗಾರನು, ವಾಣಿಯು

ಪರಿಚಾರಿಕೆಯು ; ಪ್ರಾಣವು ಬೇಡದಿದ್ದರೂ ಅದು ಪರತತ್ವವೆಂಬುದನ್ನು ತಿಳಿದು ಈ ಎಲ್ಲ ಭೂತಗಳು ಅವಕ್ಕೆ ಆಹುತಿಗಳನ್ನರ್ಪಿಸುತ್ತವೆ,' ಎಂದು ಕೌಷೀತಕಿ ಋಷಿಯು ( ಕೌ, ಅ ೨, ಮಂ ೧ ) ಹೇಳಿರುವನು. ದೇಹವಲ್ಲಿ ಎಲ್ಲ ಇಂದ್ರಿಯಗಳಿಗಿಂತಲೂ ಪ್ರಾಣದ ಪ್ರಾಧಾನ್ಯವು ಈ ಪ್ರಕಾರವಾಗಿ ಸ್ಥಾಪಿಸಲ್ಪಟ್ಟಿರುವುದನ್ನು ನಾವು ಇಲ್ಲಿ ಕಾಣುವೆವು.

**೧೧. ಪ್ರಾಣೇಂದ್ರಿಯಗಳ ವಾದವು**— ಪ್ರಾಣದ ಶ್ರೇಷ್ಠತ್ವವನ್ನು ಕುರಿತು ಉಪನಿಷತ್ತುಗಳಲ್ಲಿ ಒಂದೆರಡು ರುಚಿಕಟ್ಟಾದ ಕತೆಗಳು ಇರುವವು. ಛಾಂದೋಗ್ಯದಲ್ಲಿಯ (ಅ ೫, ಖಂ ೧, ಮಂ ೬–೧೫ ) ಕತೆಯು ಹೀಗಿರುವದು. ' ತಮ್ಮೊಳಗೆ ಯಾರು ಶ್ರೇಷ್ಠರು ಎಂಬ ವಾದವು ಹುಟ್ಟಿ ಒಮ್ಮೆ ಜ್ಞಾನೇಂದ್ರಿಯಗಳೆಲ್ಲ ಪ್ರಜಾಪತಿಯ ಕಡೆಗೆ ಹೋದವು. ನಿಮ್ಮೊಳಗಿನ ಯಾವ ಶಕ್ತಿಯು, ಬಿಟ್ಟುಹೋದರೆ ಈ ದೇಹದ ಸ್ಥಿತಿಯು ಅತ್ಯಂತ ಹೀನದೀನವಾಗುವದೋ ಅದೇ ಶ್ರೇಷ್ಠವೆಂದು ಪ್ರಜಾಪತಿಯು ಹೇಳಿದನು. ಇದನ್ನು ಪರೀಕ್ಷಿಸುವ, ಎಂದು ಮೊದಲು ವಾಣಿಯು ದೇಹವನ್ನು ಬಿಟ್ಟು ಒಂದು ವರ್ಷದ ವರೆಗೆ ಹೊರಗೆ ಹೋಯಿತು. ಒಂದು ವರ್ಷದ ಮೇಲೆ ಬಂದು ದೇಹವು ತನ್ನ ಹೊರ್ತು ಬದುಕಿದ್ದುದನ್ನು ನೋಡಿ ವಾಣಿಯು ಆಶ್ಚರ್ಯಚಕಿತವಾಯಿತು. ಪ್ರಾಣವನ್ನುಸುರಾಡಿಸುತ್ತ, ಕಣ್ಣಿನಿಂದ ನೋಡುತ್ತ, ಕಿವಿಯಿಂದ ಕೇಳುತ್ತ, ಮನಸ್ಸಿನಿಂದ ವಿಚಾರಿಸುತ್ತ ಮೂಕ ಮನುಷ್ಯನಂತೆ ದೇಹವು ಜೀವಿಸಿತು, ಎಂದು ಎಲ್ಲರೂ ಹೇಳಲಾಗಿ ವಾಣಿಯು ಪುನಃ ದೇಹವನ್ನು ಪ್ರವೇಶಿಸಿತು. ಆ ಮೇಲೆ ಚಕ್ಷುವು ಒಂದು ವರ್ಷದ ಮಟ್ಟಿಗೆ ಹೊರಗೆ ಹೋಯಿತು. ಆದರೂ ದೇಹವು ಕುರುಡರಂತೆ ಮಿಕ್ಕ ವ್ಯವಹಾರಗಳನ್ನು ಮಾಡುತ್ತ ಜೀವಿಸಿತು. ಇದನ್ನು ನೋಡಿ ಆಶ್ಚರ್ಯಬಟ್ಟು ಚಕ್ಷುವಾದರೂ ಪುನಃ ಪ್ರವೇಶಿಸಿತು. ಕಿವಿಯು ಒಂದು ವರ್ಷ ಹೋಯಿತು. ದೇಹವು ಕಿವುಡನಂತೆ ಮಿಕ್ಕ ವ್ಯಾಪಾರಗಳನ್ನೆಲ್ಲ ಮಾಡುತ್ತಲೇ ಬಾಳಿತು. ಇದನ್ನು ನೋಡಿ ಅಚ್ಚರಿಯಿಂದ ಕಿವಿಯು ಪುನಃ ಪ್ರವೇಶಮಾಡಿತು. ಆ ಮೇಲೆ ಮನಸ್ಸು ಹೊರಟುಹೋಯಿತು. ಒಂದು ವರ್ಷದ ನಂತರ ಬಂದು ನೋಡಲಾಗಿ ವಿಚಾರಹೀನವಾದ ಕೂಸಿನಂತೆ ದೇಹವು ಮಿಕ್ಕ ವ್ಯಾಪಾರಗಳನ್ನು ಮಾಡುತ್ತ ಜೀವಿಸಿದುದನ್ನು ಕಂಡಿತು. ಮುಂದೆ ಪ್ರಾಣವು ಹೊರಟ ಕೂಡಲೆ ಮಾತ್ರ ಸೊಕ್ಕಿದ ಒಳ್ಳೇ ಜಾತಿಯ ಕುದುರೆಯು ಗೂಟಗಳನ್ನೆಲ್ಲ ಕಿತ್ತಿಕೊಂಡು ಹೊರಡುವಂತೆ ಪ್ರಾಣವು ಇಂದ್ರಿಯಗಳನ್ನೆಲ್ಲ ದೇಹದಿಂದ ಕಿತ್ತಲಾರಂಭಿಸಿತು. ಆಗ ಎಲ್ಲ ಇಂದ್ರಿಯಗಳು ಕೂಡಿ, ' ಭಗವನ್ ! ನೀನೇ ನಮ್ಮೆಲ್ಲರಲ್ಲಿ ಶ್ರೇಷ್ಠನು, ದಯವಿಟ್ಟು ನಮ್ಮನ್ನು ಬಿಟ್ಟು ಹೋಗಬೇಡ,' ಎಂದು ಹೇಳಿದವು. ವಾಣಿಯು ಪ್ರಾಣಕ್ಕೆ ಅಂದದ್ದು,—

ನಾನು ಧನವಂತನಿದ್ದರೆ ನಿಜವಾಗಿ ನೀನೇ ಆ ಧನವಂತನು. ಚಕ್ಷುವು ಅಂದದ್ದು,-ನಾನು ಜೀವದ ಆಧಾರವಿದ್ದರೆ ನಿಜವಾಗಿ ನೀನೇ ಆ ಆಧಾರನು. ಶ್ರೋತ್ರವು ಅಂದದ್ದು,-ನಾನು ಸಂಪತ್ತು ಇದ್ದರೆ ನಿಜವಾಗಿ ನೀನೇ ಆ ಸಂಪತ್ತು. ಮನಸ್ಸು ಅಂದದ್ದು,-ನಾನು ಆಶ್ರಯಸ್ಥಾನನಿದ್ದರೆ, ನಿಜವಾಗಿ ನೀನೇ ಆ ಆಶ್ರಯವು. ಆದುದರಿಂದಲೇ ಚಕ್ಷು, ಶ್ರೋತ್ರ, ವಾಣಿ, ಮನಸ್ಸು ಮುಂತಾದ ಇಂದ್ರಿಯಗಳಿಗಿಂತ ಪ್ರಾಣವು ಶ್ರೇಷ್ಠವೆಂದು ಹೇಳುತ್ತಾರೆ. ಪ್ರಾಣವೇ ಈ ಎಲ್ಲ ರೂಪಗಳನ್ನು ತಾಳಿ ಕೆಲಸ ಮಾಡುವನು.' ಪ್ರಾಣದ ಶ್ರೇಷ್ಠತೆಯ ಬಗ್ಗೆ ಛಾಂದೋಗ್ಯದಲ್ಲಿಯ ಈ ಕತೆಯು ಎಲ್ಲಕ್ಕೂ ಪ್ರಾಚೀನವೆಂದು ಹೇಳಬಹುದು. ಕೌಷೀತಕಿ ಉಪನಿಷತ್ತಿನಲ್ಲಿ ಇದೇ ಕತೆಯು ಸ್ವಲ್ಪ ವ್ಯತ್ಯಾಸದಿಂದ ಬಂದಿರುವದು. ಅದರಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಇಲ್ಲಿ ಅದನ್ನು ಅವತರಿಸುವ ಅವಶ್ಯಕತೆಯಿಲ್ಲ. ಆದರೆ ಪ್ರಶ್ನೋಪನಿಷತ್ತಿನ ಕತೆಯಲ್ಲಿ ಮಾತ್ರ ಒಂದೆರಡು ಮಹತ್ವದ ಸಂಗತಿಗಳಿವೆ. ಆ ಕತೆಯಲ್ಲಿ ಇಂದ್ರಿಯಗಳಲ್ಲದೆ ಪೃಥ್ವಿ, ಆಪ್, ತೇಜ, ವಾಯು, ಆಕಾಶ ಈ ಪಂಚಭೂತಗಳು ಸಹ ಪ್ರಾಣದ ಸಂಗಡ ಶ್ರೇಷ್ಠತೆಯ ಬಗ್ಗೆ ವಾದಿಸುವವು. ಪ್ರಶ್ನೋಪನಿಷತ್ತಿನಲ್ಲಿ ಕೊಟ್ಟ ಒಂದೆರಡು ಉಪಮೆಗಳು ಚಿತ್ತಾಕರ್ಷಕವಿರುವವು ( ಪ್ರ ೨, ಮಂ ೧-೧೨ . ). ಉಪನಿಷತ್ಕಾರರು ದೇಹಕ್ಕೆ ಅಲ್ಲಿ ಬಾಣವೆಂಬ ಹೆಸರು ಕೊಟ್ಟಿರುವರು. ಮ್ಯಾಕ್ಸ ಮುಲರ್ ಇವರು ಹೇಳುವಂತೆ ಬಾಣವೆಂದರೆ ವೀಣೆಯೆಂಬ ಅರ್ಥವು ಆಗ ರೂಢವಿರಬಹುದು. ಪಂಚಭೂತಗಳು ಮತ್ತು ಇಂದ್ರಿಯಗಳು, ಈ ವೀಣೆಯನ್ನು ನಾವು ಬಾರಿಸಬಲ್ಲೆವೆಂದು ವಾದಿಸುವವು. ಪಾಯಥ್ಯಾಗೋರಾಸ ಮತ್ತು ಪ್ಲೇಟೋ ಇವರಾದರೂ ದೇಹಕ್ಕೆ ವೀಣೆಯ ಉಪಮೆಯನ್ನು ಕೊಟ್ಟಿದ್ದಾರೆ. ಅದೇ ಉಪನಿಷತ್ತಿನಲ್ಲಿ ( ಪ್ರ ೨ ) ಇನ್ನೊಂದೆಡೆಗೆ ಪ್ರಾಣವು ಮಧುರಾಣಿಯಂತೆ ಇರುವದೆಂದು ವರ್ಣನೆಯಿರುವದು. ಮಧುರಾಣಿಯು ಹುಟ್ಟು ಬಿಟ್ಟು ಹೊರಟಕೂಡಲೆ ಮಿಕ್ಕ ಎಲ್ಲ ಮಧುಕರಗಳು ಹೊರಡುವವೆಂಬುದು ಎಲ್ಲರಿಗೂ ಗೊತ್ತಿರುವದು. ಹಾಗೆ ಪ್ರಾಣವು ಹೊರಟಕೂಡಲೆ ಎಲ್ಲ ಇಂದ್ರಿಯಗಳು ದೇಹವನ್ನು ಬಿಟ್ಟುಬಿಡುವವೆಂದು ಅಲ್ಲಿ ಹೇಳಿದೆ. ಇನ್ನೊಂದು ಸಂಗತಿ ಏನೆಂದರೆ ಈ ಉಪನಿಷತ್ತಿನಲ್ಲಿ ಪ್ರಾಣವು ಕೇವಲ ಇಂದ್ರಿಯಗಳ ಅರಸನೆಂದೇ ಅಲ್ಲ, ಆದರೆ ಎಲ್ಲ ದೇವತೆಗಳ ಅರಸನೆಂದು ಪ್ರಾಣದ ಉಪಾಸನೆಯು ಹೇಳಲ್ಪಟ್ಟಿದೆ. ಆದುದರಿಂದಲೇ ಅಗ್ನಿ, ಸೂರ್ಯ, ಪರ್ಜನ್ಯ, ವಾಯು, ಸತ್, ಅಸತ್, ಇವೆಲ್ಲ ಪ್ರಾಣದ ಪರ್ಯಾಯಗಳು, ಪ್ರಾಣಶಕ್ತಿಯಿಂದಲೇ ತಮ್ಮ ಕಾರ್ಯಗಳನ್ನು ಮಾಡುವವು ಎಂದು ವರ್ಣನೆಯಿರುವದು. ಇಲ್ಲಿಯಾದರೂ ವಾಣಿ, ಶ್ರೋತ್ರ, ಚಕ್ಷು ಮುಂತಾದವುಗಳಿಗೆ ಪ್ರಾಣದ ಮೂಲಕವೇ ಶಕ್ತಿಯುಂಟಾಗುವದೆಂಬುದು ಸಿದ್ಧವಿರುವದರಿಂದ ದೇಹವನ್ನು ಬಿಟ್ಟುಹೋಗಬೇಡೆಂದು ಆ ಇಂದ್ರಿಯಗಳು ಪ್ರಾಣವನ್ನು ಪ್ರಾರ್ಥಿಸುವವು.

**೧೨. ಜೀವ-ಮಾನಸ-ಅಧ್ಯಾತ್ಮಶಾಸ್ತ್ರಗಳೂ ಪ್ರಾಣದ ಕಲ್ಪನೆಯೂ** — ಪ್ರಶ್ನ ಅಥವಾ ಛಾಂದೋಗ್ಯದಲ್ಲಿ ಬಂದ ಸಂಗತಿಗಳಿಗಿಂತ ಪ್ರಾಣದ ಬಗ್ಗೆ ಕೌಷೀತಕಿ ಉಪನಿಷತ್ತಿನಲ್ಲಿ ಕೆಲವು ವಿಶೇಷ ಸಂಗತಿಗಳು ಉಲ್ಲೇಖಿಸಲ್ಪಟ್ಟಿರುವವು. ಪ್ರಾಣ ಮತ್ತು ಆಯುಷ್ಯ ಅಂದರೆ ಜೀವ ಇವೆರಡೂ ಒಂದೇ, ಪ್ರಾಣವಿರುವವರೆಗೆ ಆಯುಷ್ಯವು. ಪ್ರಾಣವು ಹೋದಕೂಡಲೆ ಮರಣವು, ಹೀಗೆ ಪ್ರಾಣ ಜೀವಗಳ ಸಂಬಂಧವನ್ನು ಕೌಷೀತಕಿಯಲ್ಲಿ ಹೇಳಿರುವರು. ಮುಂದೆ ಪ್ರಾಣವೆಂದರೆ ಪ್ರಜ್ಞೆ ಎಂಬ ವಚನವಿರುವದು. ಅಲ್ಲಿ ಪ್ರಜ್ಞೆ, ಇದು ಜೀವದಕಿಂತ ಹೆಚ್ಚಿನ ವಸ್ತುವು ಎಂಬ ಸೂಚನೆಯಿರುವದು. ಯಾಕಂದರೆ ಅದರಿಂದ ಜ್ಞಾನೋತ್ಪತ್ತಿಯಾಗುವದು. ಪ್ರಜ್ಞೆಯಿದ್ದಲ್ಲಿ ಜೀವವು ಇದ್ದೇ ತೀರುವದು, ಆದರೆ ಜೀವವಿದ್ದೆಡೆಗೆಲ್ಲ ಪ್ರಜ್ಞೆಯು ಇರುವ ಅವಶ್ಯಕತೆ ಇಲ್ಲ. ಇದನ್ನು ತಿಳಿದು ಪ್ರಾಣವೆಂದರೆ ಜೀವತತ್ವವೂ ಅಹುದು ಪ್ರಜ್ಞಾತತ್ವವೂ ಅಹುದು ಎಂದು ಕೌಷೀತಕಿ ಮುನಿಯು ಹೇಳಿರುವನು. ಆ ಮೇಲೆ ಪ್ರಾಣವೆಂದರೆ ಆನಂದಮಯವಾದ ಅಜರ ಅಮರವಾದ, ಪುಣ್ಯ ಪಾಪ ಕರ್ಮಗಳಿಂದ ಹೆಚ್ಚುಕಡಿಮೆಯಾಗದ ಆತ್ಮವು ಎಂದು (ಕೌ, ಅ ೩, ಮಂ ೨–೯) ವರ್ಣನೆಯಿರುವದು. ಈ ರೀತಿ ಉಪನಿಷತ್ತುಗಳಲ್ಲಿ ಪ್ರಾಣವು ಜೀವಶಾಸ್ತ್ರದಲ್ಲಿಯ ಜೀವವು, ಮಾನಸಶಾಸ್ತ್ರದಲ್ಲಿಯ ಪ್ರಜ್ಞೆಯು, ವೇದಾಂತದಲ್ಲಿಯ ಆತ್ಮವು ಎಂಬ ತಾತ್ವಿಕ ವಿವೇಚನೆಯಿರುವದು.

**೧೩. ವಿಶ್ವಕರ್ತನ ಕಲ್ಪನೆ ಹಾಗೂ ಕಾಲ್ಪನಿಕ ಮತ್ತು ತಾತ್ವಿಕ ದ್ವಂದ್ವಗಳ ಉತ್ಪತ್ತಿ**— ಇದುವರೆಗೆ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಎಂಬ ಪಂಚಭೂತಗಳು ಪ್ರತ್ಯೇಕವಾಗಿ ಅಥವಾ ಎಲ್ಲವೂ ಕೂಡಿ, ಸತ್ ಅಥವಾ ಅಸತ್, ಮೃತ್ಯು, ಹಸಿವೆ, ಪ್ರಾಣ ಮುಂತಾದವುಗಳಲ್ಲಿ ಯಾವುದೊಂದು ಈ ವಿಶ್ವದ ಆದಿಕಾರಣವೆಂಬ ಪ್ರಮೇಯವನ್ನು ವಿವರಿಸಿದ್ದಾಯಿತು. ಈ ಪ್ರಮೇಯಗಳಲ್ಲಿ ವಿಶ್ವಕರ್ತನ ಅವಶ್ಯಕತೆಯಿರಲಿಲ್ಲ. ಸೃಷ್ಟಿಯು ನಿಸರ್ಗಶಕ್ತಿಯಿಂದ ಉದ್ಭವಿಸಿತು ಎಂದು ಈ ಪ್ರಮೇಯಗಳು ಹೇಳುವವು. ಇನ್ನು ಮುಂದೆ ಈ ವಿಶ್ವಕ್ಕೆ ಯಾವನೋ ಒಬ್ಬ ಕರ್ತನಿರುವನು ಎಂಬ ಪ್ರಮೇಯಗಳನ್ನು ನೋಡುವ. ಆದಿಯಲ್ಲಿ ವಿಶ್ವಕರ್ತನು ವಿಶ್ವವನ್ನು ಸೃಜಿಸುವ ಇಚ್ಛೆಯಿಂದ ತಪಸ್ಸುಮಾಡಿ ರಯಿ ಮತ್ತು ಪ್ರಾಣ ಅಂದರೆ ಜಡ ಮತ್ತು ಚೈತನ್ಯವೆಂಬ ಮಿಥುನವನ್ನು ಹುಟ್ಟಿಸಿದನೆಂದು ಪ್ರಶ್ನೋಪನಿಷತ್ತಿನಲ್ಲಿ ಪಿಪ್ಪಲಾದ ಮುನಿಯು (ಪ್ರ ೧, ಮಂ ೩–೧೩) ಹೇಳುವನು. ಗ್ರೀಕ ದಾರ್ಶನಿಕನಾದ ಅರಿಸ್ಟಾಟಲ್ಲನು ಹೇಳಿದ ಜಡ ಮತ್ತು ರೂಪ ಎಂಬ ದ್ವಂದ್ವದ ಕಲ್ಪನೆಯಂತೆ ರಯಿ ಮತ್ತು ಚೈತನ್ಯ ಎಂಬ ಮಿಥುನದ ಕಲ್ಪನೆಯನ್ನು ಹೇಳಿದ ಪಿಪ್ಪಲಾದನ ತೀಕ್ಷ್ಣಬುದ್ಧಿಯನ್ನು ತೋರಿಸುವದು. ಮುಂದೆ

ಪಿಪ್ಪಲಾದನು ಮಾಡಿದ ಈ ಮೊದಲನೆಯ ಪ್ರಮೇಯದ ವಿಸ್ತಾರವು ಬಹಳೇ ಮನೋರಂಜಕವಿರುವದು. ಚಂದ್ರನು ರಯಿಯು, ಸೂರ್ಯನು ಪ್ರಾಣನು. ಪಿತೃಯಾನವೆಂದರೆ ರಯಿಯು, ದೇವಯಾನವೆಂದರೆ ಪ್ರಾಣವು. ಕೃಷ್ಣಪಕ್ಷವು ರಯಿಯು, ಶುಕ್ಲಪಕ್ಷವು ಪ್ರಾಣವು. ಈ ಬಗೆಯಿಂದ ಸೃಷ್ಟಿಕರ್ತನು ಈ ವಿಶ್ವವನ್ನು ಸೃಜಿಸಿದನೆಂದು ವರ್ಣನೆಯಿರುವದು. ಇದೇ ರೀತಿಯಲ್ಲಿ, ವಿಶ್ವಕರ್ತನು ಮೊದಲು ತಪಸ್ಸುಮಾಡಿ ಎಲ್ಲ ವಸ್ತುಗಳನ್ನು ಸೃಜಿಸಿ ಅವುಗಳಲ್ಲಿ ಪ್ರವೇಶಿಸಿದನು. ಪ್ರವೇಶಿಸಿ ಗೋಚರ ಅಗೋಚರ, ಹೆಸರುಳ್ಳದ್ದು ಹೆಸರಿಲ್ಲದ್ದು, ಆಧಾರವಿದ್ದದ್ದು ಆಧಾರವಿಲ್ಲದ್ದು, ಪ್ರಜ್ಞೆಇದ್ದದ್ದು ಪ್ರಜ್ಞೆಇಲ್ಲದ್ದು, ದಿಟ ಸಟೆ, ಹೀಗೆ ಎಲ್ಲವೂ ತಾನೇ ಆದನು ಎಂದು ತೈತ್ತಿರೀಯದಲ್ಲಿ (ತೈ, ವ ೨, ಅನು ೬) ವರ್ಣನೆಯಿರುವದು. ಈ ಎರಡೂ ವರ್ಣನೆಗಳಲ್ಲಿ ವಿಶ್ವಕರ್ತನು ಮಾಡಿದ ತಪಸ್ಸು ಮುಂತಾದ ವಿಷಯಗಳಲ್ಲಿ ಸಾಮ್ಯವಿದ್ದರೂ ಪಿಪ್ಪಲಾದನ ದ್ವಂದ್ವಗಳು ತಾತ್ವಿಕವಲ್ಲ, ಅವು ಕೇವಲ ಕಾಲ್ಪನಿಕವಾದವುಗಳು. ಆದರೆ ಇವೆರಡರಲ್ಲಿಯೂ ಇದ್ದ ಸಗುಣ ವಿಶ್ವಕರ್ತನ ಕಲ್ಪನೆಯು ಹೋದ ಪರಿಚ್ಛೇದದಲ್ಲಿಯ ಕಲ್ಪನೆಗಳಿಗಿಂತ ಹೆಚ್ಚಿನ ವಿಚಾರವಿಕಾಸವನ್ನು ವ್ಯಕ್ತಮಾಡುವದೆಂದು ಹೇಳಬಹುದು.

**೧೪. ಆತ್ಮನು ಮತ್ತು ಹೆಣ್ಣು ಗಂಡಿನ ಹುಟ್ಟು**— ಜಗತ್ತಿನಲ್ಲಿಯ ದ್ವಂದ್ವಗಳ ಹುಟ್ಟಿನ ಬಗ್ಗೆ ವಿಶೇಷತಃ ಸ್ತ್ರೀಪುರುಷರ ಲಿಂಗಭೇದದ ಬಗ್ಗೆ ಬೃಹದಾರಣ್ಯಕದಲ್ಲಿ ಈ ಕೆಳಗಿನ ಕಥೆ ಇದೆ. 'ಆದಿಯಲ್ಲಿ ಆತ್ಮನೊಬ್ಬನೇ ಪುರುಷಾಕಾರನಾಗಿ ಇದ್ದನು. ..............ನಾನು ಅವನು, ಎಂದು ಮೊದಲು ತನ್ನಷ್ಟಕ್ಕೆ ತಾನೇ ಅಂದುಕೊಂಡನು. ಆದುದರಿಂದ ಅವನಿಗೆ 'ನಾನು' ಎಂಬ ಅಭಿಧಾನವು ಬಂದಿತು. ಆದುದರಿಂದಲೇ ನೀನು ಯಾರು, ಎಂದು ಕೇಳಿದ ಕೂಡಲೇ ಮನುಷ್ಯನು ಮೊದಲು 'ನಾನು' ಎಂದು ಆ ಮೇಲೆ ತನ್ನ ಹೆಸರನ್ನು ಹೇಳುವನು. .............. ಆತ್ಮನು ಅಂಜಿದನು. ಆ ಕಾರಣದಿಂದಲೆ ಒಬ್ಬನೇ ಇದ್ದಾಗ ಮನುಷ್ಯನು ಅಂಜುವನು. ನನ್ನ ಹೊರತು ಯಾರೂ ಇಲ್ಲದಾಗ ನಾನು ಯಾಕೆ ಅಂಜಬೇಕೆಂದು ಅವನು ವಿಚಾರಿಸಿದನು. ಕೂಡಲೆ ಎಲ್ಲ ಅಂಜಿಕೆಯು ಹೋಗಿ ಬಿಟ್ಟಿತು. ........ಎರಡನೆಯವನಿದ್ದರೆ ಮಾತ್ರ ಭಯವು. ಆದರೆ ಆತ್ಮನು ಇಷ್ಟರಿಂದ ತೃಪ್ತನಾಗಲಿಲ್ಲ. ಆದುದರಿಂದ ಒಬ್ಬನೇ ಇದ್ದರೆ ಮನುಷ್ಯನಿಗೆ ಸುಖವಾಗುವದಿಲ್ಲ. ಆದುದರಿಂದ ಆತ್ಮನು ಸಂಗತಿಯನ್ನು ಇಚ್ಛಿಸಿದನು.............ತಾನೇ ಇಭ್ಭಾಗವಾಗಿ ಗಂಡೂ ಹೆಣ್ಣೂ ಆದನು. ತನ್ನಿಂದಲೇ ನನ್ನನ್ನು ಹುಟ್ಟಿಸಿ ಇವನು ನನ್ನ ಸಂಭೋಗವನ್ನಿಚ್ಛಿಸುವನಲ್ಲ, ಎಂದು ಹೆಣ್ಣಿದ್ದವಳು ವ್ಯಸನಪಟ್ಟಳು. ಮರೆಯಾಗಬೇಕೆಂದು ಆಕೆ ಆಕಳಾದಳು. ಆದರೆ ಅವನು ಹೋರಿಯಾಗಿ ಸಂಭೋಗಮಾಡಿದನು.............ಆಕೆ ಹೆಣ್ಣು ಕುದುರೆ

ಯಾದಳು. ಅವನು ಗಂಡುಗುದುರೆಯಾದನು. ಆಕೆ ಹೆಣ್ಣುಗತ್ತೆಯಾಗಲು ಅವನು ಗಂಡು ಗತ್ತೆಯಾಗಿ ಸಂಭೋಗಮಾಡಿದನು. ಹೀಗೆ ಇರುವೆಗಳವರೆಗೆ ಎಲ್ಲ ಪ್ರಾಣಿಗಳಲ್ಲಿಯೂ ಗಂಡು ಹೆಣ್ಣು ಉತ್ಪನ್ನವಾಗಿ ಸೃಷ್ಟಿಯಾಯಿತು. ಅವನೇ ಇವನ್ನೆಲ್ಲ ಹುಟ್ಟಿಸಿದನು (ಬೃ, ಅ ೧, ಬ್ರಾ ೪, ಮಂ ೧–೪).' ಜೀವಕೋಟಿಯಲ್ಲಿಯ ಲಿಂಗಭೇದದ ಉತ್ಪತ್ತಿಯು ಮಾತ್ರ ಈ ಉಪನಿಷತ್ತಿನಲ್ಲಿ ಕೊಡಲ್ಪಟ್ಟಿರುವುದು. ಆದರೆ ಜಡಸೃಷ್ಟಿಯ ಉತ್ಪತ್ತಿಯು ಇದರಲ್ಲಿ ಹೇಳಲ್ಪಟ್ಟಿಲ್ಲ.

**೧೫. ಮಧ್ಯಸ್ಥವ್ಯಕ್ತಿಯ ಸಹಾಯದಿಂದ ಆತ್ಮನು ಸೃಜಿಸಿದುದು**— ಐತರೇಯದಲ್ಲಿದ್ದ ಸೃಷ್ಟಿಯ ಉತ್ಪತ್ತಿಯ ವರ್ಣನೆಯು ಎಲ್ಲ ಉಪನಿಷತ್ತುಗಳಿಗಿಂತಲೂ ಪೂರ್ಣವಾಗಿರುವದು (ಐ, ಅ ೧, ಖಂ ೧–೩). 'ಮೊಟ್ಟಮೊದಲು ಆತ್ಮನೊಬ್ಬನೇ ಇದ್ದನು. ಎರಡನೆಯದೊಂದು ಹುಳವು ಸಹ ಇರಲಿಲ್ಲ. ಲೋಕಗಳನ್ನು ನಿರ್ಮಿಸಬೇಕೆಂದು ಆತ್ಮನಿಗೆ ತೋಚಿತು. ಅವನು ಅಂಭ, ಮರೀಚಿ, ಮರ, ಆಪ ಅಂದರೆ ಸ್ವರ್ಗದಾಚೆಗಿನ ಜಲಮಯ ಲೋಕ, ದಿವ್ಯಪ್ರಕಾಶವುಳ್ಳ ಸ್ವರ್ಗ, ಮರಣಮಯ ಭೂಲೋಕ ಮತ್ತು ಪಾತಾಲ ಎಂಬ ನಾಲ್ಕು ಲೋಕಗಳನ್ನು ಸೃಜಿಸಿದನು. ಹೀಗೆ ಸ್ವರ್ಗ ಮತ್ತು ಮೃತ್ಯು ಲೋಕಗಳು ಮೇಲ್ಬದಿಗೆ ಮತ್ತು ಕೆಳಬದಿಗೆ ನೀರಿನಿಂದ ಮುಚ್ಚಲ್ಪಟ್ಟಿರುವವು. ಆ ಮೇಲೆ ಆತ್ಮನು ನೀರಿನಿಂದ ವಿರಾಟಪುರುಷನನ್ನು ಉತ್ಪನ್ನಮಾಡತೊಡಗಿದನು.' ಆದಿ ತತ್ವವಾದ ಆತ್ಮನು ಮತ್ತು ಮುಂದೆ ಸೃಜಿಸಲ್ಪಡುವ ವಿಶ್ವ ಇವುಗಳ ಮಧ್ಯದಲ್ಲಿರುವ ವ್ಯಕ್ತಿಯೆ ವಿರಾಟಪುರುಷನು. 'ಆತ್ಮನು ವಿರಾಟಪುರುಷನ ಮೂಗಿನ ಹೊಳ್ಳೆಗಳಲ್ಲಿ ಪ್ರಾಣವನ್ನೂದಿದನು.' ಗ್ರೀಕ ದರ್ಶನದಲ್ಲಿ ಮತ್ತು ಕ್ರಿಶ್ಚನ್ ತತ್ವಜ್ಞಾನದಲ್ಲಿರುವ 'ಲೋಗೋಸ'ದ ಕಲ್ಪನೆಗೆ ಸದೃಶವಾದ ಉಪನಿಷತ್ತುಗಳಲ್ಲಿಯ ಕಲ್ಪನೆಯು ಇದೇ ಎಂದು ಹೇಳಬಹುದು. ಆದರೆ ಉಪನಿಷತ್ತುಗಳು ಆತ್ಮವಸ್ತುವಿಗೆ ಕೊಟ್ಟಿರುವಂತೆ ಈ ಕಲ್ಪನೆಗೆ ಯಾವ ವಿಶೇಷ ಮಹತ್ವವನ್ನೂ ಕೊಟ್ಟಿಲ್ಲ. 'ಆ ಮೇಲೆ ಆತ್ಮನು ಆ ಪುರುಷನನ್ನು ಕುರಿತು ತಪಸ್ಸುಮಾಡಿದನು. ಅದರಿಂದ ಇಂದ್ರಿಯಗಳು, ಇಂದ್ರಿಯ ವ್ಯಾಪಾರಗಳು ಆ ಮೇಲೆ ಆಯಾ ವ್ಯಾಪಾರಗಳಮೇಲೆ ಅಧಿಷ್ಠಿತವಿರುವ ವಿಶ್ವೇದೇವತೆಗಳು ಹುಟ್ಟಿದವು. ಮೊದಲು ಮುಖವನ್ನು ಹುಟ್ಟಿಸಿದನು. ಅದರಿಂದ ವಾಕ್ ಹುಟ್ಟಿತು. ವಾಕ್ಕಿನಿಂದ ಅಗ್ನಿಯು. ತರುವಾಯ ಮೂಗಿನ ಹೊಳ್ಳೆಗಳನ್ನು ಹುಟ್ಟಿಸಿದನು. ಅವುಗಳಿಂದ ಪ್ರಾಣವು ಹುಟ್ಟಿತು. ಪ್ರಾಣದಿಂದ ವಾಯುವು. ಮುಂದೆ ಕಣ್ಣು ಹುಟ್ಟಿಸಿದನು. ಕಣ್ಣಿನಿಂದ ದೃಷ್ಟಿ ಹುಟ್ಟಿತು, ದೃಷ್ಟಿಯಿಂದ ಸೂರ್ಯನು. ಆ ಮೇಲೆ ಕಿವಿಗಳನ್ನು ಹುಟ್ಟಿಸಿದನು. ಕಿವಿಗಳಿಂದ ಕೇಳುವ ಶಕ್ತಿ ಹುಟ್ಟಿತು, ಅದರಿಂದ ದಿಕ್ಕುಗಳು. ಅವನು ಚರ್ಮವನ್ನು ಹುಟ್ಟಿಸಿದನು. ಚರ್ಮದಿಂದ ಕೂದಲು ಹುಟ್ಟಿತು, ಅದರಿಂದ

ವನಸ್ಪತಿಗಳು. ಆ ಮೇಲೆ ಹೃದಯುವನ್ನು ಹುಟ್ಟಿಸಿದನು. ಹೃದಯದಿಂದ ಮನಸ್ಸು ಹುಟ್ಟಿತು, ಅದರಿಂದ ಚಂದ್ರನು. ಅವನು ನಾಭಿಯನ್ನು ಹುಟ್ಟಿಸಿದನು. ನಾಭಿಯಿಂದ ಅಪಾನವು ಹುಟ್ಟಿತು, ಅದರಿಂದ ಸಾವು ಹುಟ್ಟಿತು. ಅವನು ಶಿಶ್ನವನ್ನು ಹುಟ್ಟಿಸಿದನು. ಶಿಶ್ನದಿಂದ ರೇತಸ್ಸು ಹುಟ್ಟಿತು, ಅದರಿಂದ ಮುಂದೆ ನೀರು. ಈ ರೀತಿ ಈ ವಿವಿಧ ವಸ್ತುಗಳನ್ನು ನಿರ್ಮಿಸುವಾಗ ವಿಶ್ವಕರ್ತನು ವಿರಾಟಪುರುಷನ ದೇಹದಲ್ಲಿ ಮೊದಲು ಆಯಾ ಇಂದ್ರಿಯುಗಳನ್ನೂ, ಆ ಮೇಲೆ ಅವುಗಳ ವ್ಯಾಪಾರಗಳನ್ನೂ ಹುಟ್ಟಿಸಿದನು. ಆ ವ್ಯಾಪಾರಗಳಿಂದ ಮುಂದೆ ಆ ಇಂದ್ರಿಯವಿಷಯಗಳಾದ ಈ ಬ್ರಹ್ಮಾಂಡದ ನಾನಾವಸ್ತುಗಳ ಹುಟ್ಟು ಆಯಿತು. ಮುಂದೆ ಆತ್ಮನು ಹಸಿವೆ ನೀರಡಿಕೆಗಳನ್ನು ಆ ಪುರುಷನ ಬೆನ್ನು ಹಚ್ಚಿದನು.' ಎಂಪೆಡೋಕ್ಲೀಸ್ ಎಂಬ ಗ್ರೀಕ್ ತತ್ವಜ್ಞನು ಹೇಳಿದ ರಾಗದ್ವೇಷಗಳ ಕಲ್ಪನೆಗೆ ಇದು ಸದೃಶವಿರುವದು. ಇರಲಿ. 'ಈ ವಿಶ್ವದಲ್ಲಿ ನಮಗೆ ಸ್ಥಳವನ್ನು ಕೊಡೆಂದು ಹಸಿವೆ ನೀರಡಿಕೆಗಳು ಆತ್ಮನನ್ನು ಕೇಳಿದವು. ನಿಮಗೆ ಈ ದೇವತೆಗಳಲ್ಲಿಯೇ ಸ್ಥಾನ ಕೊಡುವೆನೆಂದು ಹಸಿವೆ ನೀರಡಿಕೆಗಳನ್ನು ಅವನು ದೇವತೆಗಳ ಸಹಭಾಗಿಗಳನ್ನಾಗಿ ಮಾಡಿದನು. ಆದುದರಿಂದ ಯಾವದೇ ದೇವತೆಗೆ ಆಹುತಿ ಕೊಡುವಾಗ ಹಸಿವೆ ನೀರಡಿಕೆಗಳಿಗೆ ಭಾಗವನ್ನು ಕೊಟ್ಟುತೀರಬೇಕಾಗುವದು. ಇಷ್ಟೆಲ್ಲ ನಿರ್ಮಿಸಿದ ಮೇಲೆ ಆತ್ಮನು ಇವೆಲ್ಲವುಗಳಿಗಾಗಿ ಅನ್ನವನ್ನು ಉತ್ಪನ್ನಮಾಡತೊಡಗಿದನು.........ಆ ಮೇಲೆ ದೇಹದಲ್ಲಿ ಆತ್ಮನನ್ನು ಸೇರಿಸುವ ಉದ್ದೇಶದಿಂದ ಈ ದೇಹವು ನನ್ನ ವಿನಾ ಹೇಗೆ ಇರಬಲ್ಲದು, ಎಂದು ಇದರಲ್ಲಿ ಯಾವ ದಾರಿಯಿಂದ ಸೇರಬೇಕೆಂದು ವಿಚಾರಿಸಿದನು, ನೆತ್ತಿಯ ಮೇಲೆ ಬೈತಲ ತೆಗೆಯುವಲ್ಲಿ ತಲೆ ಸೀಳಿ ಒಳಗೆ ಸೇರಿದನು. ಇದೇ ಸ್ಥಾನಕ್ಕೆ 'ವಿದೃತಿ' ಎಂದೆನ್ನುವರು. ಇದು ಆನಂದ ಸ್ಥಾನವು. ಅಲ್ಲಿಯೇ ಸ್ತ್ರೀಯರು ಬೈತಲ ತೆಗೆಯುವರು. ಚಿಕ್ಕ ಮಗುಗಳಿಗೆ ಆ ಸ್ಥಾನದಲ್ಲಿಯೇ ಒಂದು ಸಣ್ಣ ತೂತು ಇರುವದು. ಸನ್ಯಾಸಿಯು ಸಾಯುವಾಗ ಅವನ ಆತ್ಮನು ಹೊರಟುಹೋಗಲಿಕ್ಕೆ ಹಗುರಾಗಬೇಕೆಂದು ನೆತ್ತಿಯ ಆ ಸ್ಥಾನದಲ್ಲಿಯೇ ತೆಂಗಿನಕಾಯಿಯನ್ನು ಒಡೆಯುವರು. ಆತ್ಮನು ಆ ವಿದೃತಿ ದ್ವಾರದಿಂದ ದೇಹವನ್ನು ಪ್ರವೇಶಿಸಿ ಜೀವಾತ್ಮನಾದಂದಿನಿಂದ ಜಾಗೃತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಗುರಿಯಾದನು. ಹೀಗೆ ಜೀವಾತ್ಮನಾದ ಮೇಲೆ ಎಲ್ಲ ಕಡೆಗೆ ನೋಡಿ ಅನ್ಯ ವಸ್ತುಗಳಿರುವವೋ ಎಂದು ಪರೀಕ್ಷಿಸಿದನು. ಆದರೆ ಬ್ರಹ್ಮನೇ ಎಲ್ಲೆಲ್ಲಿಯೂ ಪಸರಿಸಿದುದನ್ನು ನೋಡಿದನು. ಬ್ರಹ್ಮನೇ ಎಲ್ಲ ಕಡೆಗೆ ಪಸರಿಸಿದುದನ್ನು ಜೀವಾತ್ಮನು ನೋಡಿದುದಕ್ಕಾಗಿಯೆ ಬ್ರಹ್ಮನು 'ಇಂದ್ರ', ನೆನಿಸುವನು. ಪರೋಕ್ಷಪ್ರಿಯರಾದ ದೇವತೆಗಳು ಅವನಿಗೆಯೆ ಇಂದ್ರನೆಂಬ ಗೂಢವಾದ ಹೆಸರು ಕೊಟ್ಟಿರುವರು. ಜೀವಾತ್ಮನೇ

ಕೊನೆಗೆ ಹುಟ್ಟಿಸಲ್ಪಟ್ಟ ವಸ್ತುವು ಮತ್ತು ಜೀವಾತ್ಮನಿಗೂ ಪರಮಾತ್ಮನಿಗೂ ತಾತ್ವಿಕ ದೃಷ್ಟಿಯಿಂದ ಐಕ್ಯವಿರುವದೆಂಬ ಎರಡು ಮಾತುಗಳು ಇಲ್ಲಿ ಹೇಳಲ್ಪಟ್ಟಿರುವವೆಂಬುದನ್ನು ನಾವು ಲಕ್ಷಿಸಬೇಕು.

**೧೬. ಆತ್ಮನು ಮತ್ತು ಸಂಭೂತಿವಾದವು—** ಇದುವರೆಗೆ ಕಥಾರೂಪವಾಗಿ ಆತ್ಮನಿಂದ ಸೃಷ್ಟಿನಿರ್ಮಾಣವು ಹೇಗೆ ಆಯಿತು ಎಂಬ ವರ್ಣನೆಗಳು ಮಾಡಲ್ಪಟ್ಟವು. ಉಪನಿಷತ್ತಿನಲ್ಲಿ ಸೃಷ್ಟಿನಿರ್ಮಾಣದ ಮಿಕ್ಕ ವರ್ಣನೆಗಳನ್ನು ಹೇಳುವದಕ್ಕೂ ಪೂರ್ವದಲ್ಲಿ ತೈತ್ತಿರೀಯದಲ್ಲಿರುವ ( ತೈ, ವ ೨, ಅನು ೧ ) ಸಂಭೂತಿವಾದವನ್ನು ಸ್ವಲ್ಪ ನೋಡುವ. ಆತ್ಮನಿಂದ ಆಕಾಶವು, ಆಕಾಶದಿಂದ ವಾಯುವು, ವಾಯುವಿನಿಂದ ತೇಜವು, ತೇಜದಿಂದ ನೀರು, ನೀರಿನಿಂದ ಪೃಥ್ವಿ ಎಂದು ಪಂಚಭೂತಗಳ ಅನುಕ್ರಮವಾದ ಉತ್ಪತ್ತಿಯು ಕೊಡಲ್ಪಟ್ಟಿರುವದು. ಈ ಕ್ರಮದಲ್ಲಿ ಆತ್ಮನು ವಿಶೇಷ ಕಾರ್ಯವನ್ನೇನೂ ಮಾಡಿಲ್ಲ. ಈ ವಿಶ್ವದ ಉತ್ಪತ್ತಿಕ್ರಮಕ್ಕೆ ' ಸಂಭೂತಿ ' ಎಂಬ ಹೆಸರು. ಆತ್ಮನು ಸೃಜಿಸಿದನೆಂಬ ಶಬ್ದಗಳು ಇಲ್ಲಿ ಉಪಯೋಗಿಸಲ್ಪಟ್ಟಿಲ್ಲ. ಇನ್ನೊಂದು ಮಹತ್ವದ ಸಂಗತಿ ಏನೆಂದರೆ, ಯಾವ ಕ್ರಮದಿಂದ ಈ ಭೂತಗಳು ಉತ್ಪನ್ನವಾಗಿರುವವೋ ಅದರ ವಿರುದ್ಧ ಕ್ರಮದಿಂದ ಅವು ಪ್ರಲಯ ಕಾಲದಲ್ಲಿ ಲಯಹೊಂದುವವು. ಈ ವರ್ಣನೆಯು ಅನೇಕ ರೀತಿಯಿಂದ ಮಹತ್ವದ್ದಿರುವದು. ಯಾಕಂದರೆ, ( ೧ ) ಪಂಚಭೂತಗಳ ಸ್ಪಷ್ಟ ಉಲ್ಲೇಖವು ಉಪನಿಷತ್ತುಗಳಲ್ಲಿ ಇದೇ ಮೊದಲನೆಯದು; ( ೨ ) ನಿಚ್ಚಣಿಕೆಯ ಮೇಲಿಂದ ಇಳಿದಂತೆ ಪಂಚಭೂತಗಳು ಸೃಷ್ಟಿನಿರ್ಮಾಣ ಕಾಲಕ್ಕೆ ಮೊದಲು ಕ್ರಮದಿಂದ ಹುಟ್ಟಿ ಮತ್ತೆ ಮೇಲಕ್ಕೆ ಏರಿ ಒಂದರಲ್ಲಿ ಒಂದು ಲಯ ಹೊಂದುವವು ಎಂದು ಹೆರಾಕ್ಲಿಟಸ್ಸನು ಹೇಳಿದಂಥ ಕ್ರಮದ ಉಲ್ಲೇಖವಾದರೂ ಇಲ್ಲಿ ಇದೇ ಮೊದಲನೆಯದು; ( ೩ ) ವಿಶ್ವವನ್ನು ಒರ್ವ ವಿಶ್ವಕರ್ತನು ಮಾಡಿದನು ಎಂಬ ಪ್ರಮೇಯಕ್ಕೆ ಪ್ರತಿರೋಧಿಯಾದ ಸೃಷ್ಟಿಯು ' ಸಂಭವಿಸಿತು ' ಎಂಬ ಪ್ರಮೇಯವು ಇಲ್ಲಿ ಹೇಳಲ್ಪಟ್ಟದೆ; ( ೪ ) ಜಗತ್ತು ಮಿಥ್ಯವಲ್ಲ ಸತ್ಯವು ಎಂಬ ಸ್ಪಷ್ಟ ಧ್ವನಿಯು ಇದರಲ್ಲಿ ಹೊರಡುವದು. ಆದುದರಿಂದ ಇದು ಜಗನ್ಮಿಥ್ಯಾವಾದಿಗಳಿಗೆ ಅಥವಾ ಮಾಯಾವಾದಿಗಳಿಗೆ ವಿರೋಧಿಯಾಗಿರುವದು.

**೧೭. ಮುಂಡಕದಲ್ಲಿಯ ಸಗುಣ-ನಿರ್ಗುಣ ಜಗತ್ಕರ್ತನು—** ಆತ್ಮನಿಂದ ಸೃಷ್ಟಿಯು ಸಂಭವಿಸಿತು ಎಂಬ ಮೇಲೆ ಹೇಳಿದ ಸಂಭೂತಿವಾದದ ಪ್ರಮೇಯವು ಮತ್ತು ಈಶ್ವರನು ಸೃಷ್ಟಿಯನ್ನು ನಿರ್ಮಿಸಿದನು ಎಂದು ಹೇಳಿದ ಶ್ವೇತಾಶ್ವತರದಲ್ಲಿಯ ಸಗುಣ ಸೃಷ್ಟಿಕರ್ತನ ಪ್ರಮೇಯವು ಇವೆರಡು, ವಿಶ್ವೋತ್ಪತ್ತಿಯ ಪೌರುಷ ಅಪೌರುಷ ಪ್ರಮೇಯಗಳು ಅಥವಾ ಸಗುಣ ನಿರ್ಗುಣ ಪ್ರಮೇಯಗಳೆಂದು ಅನ್ನಬಹುದು. ಅವುಗ

ಳನ್ನು ಜೋಡಿಸುವ ಒಂದು ಪ್ರಮೇಯವು ಮುಂಡಕೋಪನಿಷತ್ತಿನಲ್ಲಿ (ಮುಂ ೨, ಖಂ ೧, ಮಂ ೨-೯) ಹೇಳಲ್ಪಟ್ಟಿದೆ. 'ಎಲ್ಲಕ್ಕೂ ಮೊದಲು ಪ್ರಾಣ ಮನ ರಹಿತ, ಅಕ್ಷರಕ್ಕೂ ಆಚೆಗಿದ್ದ, ಶುಭ್ರನೂ, ಅಜನೂ, ದಿವ್ಯನೂ, ಅಮೂರ್ತನೂ ಆದ ಪುರುಷನು ಎಲ್ಲೆಲ್ಲಿಯೂ ವ್ಯಾಪಿಸಿದ್ದನು. ಅವನಿಂದಲೇ ಪ್ರಾಣ, ಮನ, ಸರ್ವೇಂದ್ರಿಯಗಳು, ಆಕಾಶ, ತೇಜ, ವಾಯು, ನೀರು, ವಿಶ್ವಾಧಾರವಾದ ಪೃಥ್ವಿ......ವಿವಿಧ ದೇವತೆಗಳು, ಸಾಧ್ಯರು, ಮನುಷ್ಯರು, ಪಶು ಪಕ್ಷಿ ಮುಂತಾದವುಗಳು ಹುಟ್ಟಿದವು ಅವನಿಂದಲೆ: ಅಕ್ಕಿ, ಯವ, ತಪಸ್ಸು, ಶ್ರದ್ಧೆ, ಸತ್ಯ, ಬ್ರಹ್ಮಚರ್ಯ, ವಿಧಿ ಇವುಗಳ ಉತ್ಪತ್ತಿಯು......ಸಮುದ್ರವು, ಪರ್ವತಗಳು, ಹರಿದಾಡುವ ನದಿಗಳು, ವನಸ್ಪತಿವೃಕ್ಷಗಳು, ಮತ್ತು ಯಾವ ಸಾಧನದಿಂದ ಇವುಗಳನ್ನೆಲ್ಲ ಅಂತರಾತ್ಮನು ಧರಿಸುವನೋ ಆ ರಸವು-ಆ ಶಕ್ತಿಯು ಇವೆಲ್ಲವುಗಳ ಹುಟ್ಟು ಅವನಿಂದಲೇ.' ಈ ಬಗೆಯಾಗಿ ಅಮೂರ್ತ ಮತ್ತು ಅಕ್ಷರದಾಚೆಗಿರುವ ಆದಿಪುರುಷ ನಿಂದ ಎಲ್ಲ ಭೂಲೋಕ ಸ್ವರ್ಲೋಕಗಳಲ್ಲಿಯ ವಸ್ತುಗಳು, ಜೀವ ಜಡಗಳು, ಎಲ್ಲ ನೈತಿಕ ಮಾನಸಿಕ ಗುಣಗಳು ಹುಟ್ಟಿದವು ಎಂಬ ಈ ಪ್ರಮೇಯವು ಕೂಡ ತಾತ್ವಿಕ ವಿವೇಚನದ ದೃಷ್ಟಿಯಿಂದ ಸ್ವಲ್ಪ ಸದೋಷವಿರುವದು. ಆದರೂ ಆದಿ ಪುರುಷನು ಸ್ವತಃ ಸ್ವಸಂಕಲ್ಪದಿಂದ ಸ್ವಸಾಮರ್ಥ್ಯದಿಂದ ವಿಶ್ವವನ್ನು ಸೃಷ್ಟಿಸಿದನೆಂಬ ಪೌರುಷ ಅಂದರೆ ಸಗುಣ ಸೃಷ್ಟಿಕರ್ತ ನಿರುವನೆಂಬ ಪ್ರಮೇಯವನ್ನು ಈ ವಚನವು ಬಹಳ ಮಟ್ಟಿಗೆ ಹೋಲುವದು. ಈ ಪ್ರಮೇಯ ವಾದರೂ ಸೃಷ್ಟಿಯು ಪುರುಷಕೃತವೆಂದು, ಸಗುಣ ಪರಮಾತ್ಮನಿಂದ ನಿರ್ಮಿತವಾದು ದೆಂದು ಸ್ಪಷ್ಟವಾಗಿ ಹೇಳುವುದಿಲ್ಲ. ವಸ್ತುಗಳು 'ಹೊರಬಿದ್ದವು' ಅಥವಾ 'ಹುಟ್ಟಿದವು' ಎಂಬ ಶಬ್ದಗಳಿರುವಲ್ಲಿ 'ಹುಟ್ಟಿಸಿದನು,' 'ಸೃಜಿಸಿದನು,' ಎಂಬ ಶಬ್ದಪ್ರಯೋಗವಿದ್ದರೆ 'ಸಗುಣ ಸೃಷ್ಟಿಕರ್ತನು' ಇರುವನೆಂಬ ಪ್ರಮೇಯವನ್ನು ಹೇಳಿದಂತಾಗುತ್ತಿತ್ತು.

**೧೮. ಶ್ವೇತಾಶ್ವತರದಲ್ಲಿಯ ಸಗುಣ ಸೃಷ್ಟಿಕರ್ತನು**— ಶ್ವೇತಾಶ್ವತರ ದಲ್ಲಿ ಮಾತ್ರ ಪರಮಾತ್ಮನ 'ಪುರುಷ ವಿಧತೆ'ಯು, ಸಗುಣತೆಯು ಸ್ಪಷ್ಟವಾಗಿ ವರ್ಣಿಸಲ್ಪ ಟ್ಟಿರುವದು. ಶೈವ ಸಿದ್ಧಾಂತದ ಸಮರ್ಥನಾರ್ಥವಾಗಿ ಆ ಉಪನಿಷತ್ತು ಬರೆಯಲ್ಪಟ್ಟಿ ತೆಂದು ತಿಳಿದರೂ ಅದರಲ್ಲಿ ಉಲ್ಲೇಖಿಸಿದ ಶಿವನೇ ಪರಮಾತ್ಮನೆಂದು ಭಾವಿಸಿದರೆ ಒಬ್ಬ ಸಗುಣ ಪರಮಾತ್ಮನು ತನ್ನ ಶಕ್ತಿಯಿಂದ ಸೃಷ್ಟಿಯನ್ನು ಹೇಗೆ ನಿರ್ಮಿಸಿದನು ಎಂಬ ಬಗ್ಗೆ ಸ್ಪಷ್ಟವಾದ ತಾತ್ವಿಕ ವಿವೇಚನವು ಆ ಉನಿಪಷತ್ತಿನಲ್ಲಿ ಸಿಕ್ಕುವದು. ಸೃಷ್ಟಿನಿರ್ಮಾಣದ ಬಗ್ಗೆ ಆ ಕಾಲಕ್ಕೆ ಪ್ರಚಲಿತವಿದ್ದ ಎಲ್ಲ ಪ್ರಮೇಯಗಳನ್ನು ಟೀಕಿಸಿ ಶ್ವೇತಾಶ್ವತರ ಋಷಿಯು ಅದು ಪರಮಾತ್ಮಕೃತವು, ಎಂಬ ತನ್ನ ಪ್ರಮೇಯವನ್ನು (ಶ್ವೇ, ಅ ೧, ಮಂ ೨) ಮಂಡಿ ಸಿರುವನು. 'ಕಾಲ, ಸ್ವಭಾವ, ನಿಯತಿ, ಯದೃಚ್ಛೆ, ಪಂಚಭೂತಗಳು, ಪುರುಷ, ಇವು

ಪ್ರತ್ಯೇಕ ಅಥವಾ ಇನ್ನೆಲ್ಲವುಗಳ ಸಂಯೋಗವು ಈ ವಿಶ್ವದ ಆದಿಕಾರಣವೆಂದು ಹಲಕೆಲವರು ವಾದಿಸುವರು' ಎಂದು ಹೇಳಿ ಈ ಎಲ್ಲ ಪ್ರಮೇಯುಗಳನ್ನು ಖಂಡಿಸಿ ಈ ವಿಶ್ವವು ಈಶನಿರ್ಮಿತವೆಂದು ಶ್ವೇತಾಶ್ವತರವು ಪ್ರತಿಪಾದಿಸುವದು. ವಿಶ್ವದ ಆದಿಯು ಕಾಲವೆಂದು ಹೇಳಬೇಕೇ ? ಇಲ್ಲ, ಯಾಕಂದರೆ ಈಶ್ವರನು ಕಾಲದ ಕಾಲನು, ಮರಣದ ಮರಣನು (ಶ್ವೇ, ಅ ೬, ಮಂ ೧೬) (ಮೈ, ಪ ೩. ಅನು ೧೦, ಮಂ ೬). ಸ್ವಭಾವವೆಂದು ಹೇಳಬೇಕೇ ? ಇಲ್ಲ, ಅಂತರಂಗದಲ್ಲಿ ಈಶ್ವರನ ಇರುವಿಕೆಯಿಂದಲೇ ನಿಸರ್ಗವು ಪರಿಣತಿಯನ್ನು ಹೊಂದುವದು (ಶ್ವೇ, ಅ ೫, ಮಂ ೫). ಇನ್ನು ನಿಯತಿ ಅಥವಾ ಯದೃಚ್ಛೆಯಿಂದ ಸೃಷ್ಟಿಯು ನಿರ್ಮಾಣವಾಯಿತೆನ್ನಬೇಕೇ ? ಅದು ಕೇವಲ ದೈವವಾದವೆನಿಸುವದು; ಅಥವಾ ಅದು ತಾತ್ವಿಕ ದೃಷ್ಟಿಯಿಂದ ಬಹಳೇ ಸದೋಷವಾದ ಪ್ರಮೇಯವಾಗುವದು. ಪಂಚಭೂತಗಳು ವಿಶ್ವದ ಮೂಲವೆಂದು ಕೆಲವರು ಅನ್ನಬಹುದು. ಆದರೆ ಪೃಥ್ವಿ ಆಪ್ ತೇಜ ವಾಯು ಆಕಾಶಾದಿಗಳು ಪರಮಾತ್ಮನ ಹೊದಿಕೆಗಳು. ಅವನೇ ಕರ್ಮಾಧ್ಯಕ್ಷನಾಗಿ ನಡೆಸಿರುವದರಿಂದ ಈ ಕಾರ್ಯಗಳೆಲ್ಲ ನಡೆದಿವೆ (ಶ್ವೇ, ಅ ೬, ಮಂ ೨, ೧೧). ಇವೆಲ್ಲವುಗಳ ಸಂಯೋಗವೇ ಕಾರಣವೆಂದರೆ, ಇವುಗಳ ಸಂಯೋಗಕಾರಣನು ಯಾರಾದರೂ ಇರಬೇಕಲ್ಲವೇ (ಶ್ವೇ, ಅ ೬, ಮಂ ೧) ? ಸೃಜಿಸುವ ಕ್ರಿಯೆಯ ಸಂಬಂಧವನ್ನರಿಯದ್ದರಿಂದ ತೀರ ಅಲಿಪ್ತನಿರುವ ಸಾಂಖ್ಯರ 'ಪುರುಷನು' ಅಥವಾ ಸುಖದುಃಖ ಹೇತುವಾಗಿರುವದರಿಂದ ತೀರ ನಿರ್ಬಲನಿರುವ ವೇದಾಂತಿಗಳ ಆತ್ಮನು ಈ ವಿಶ್ವದ ಕರ್ತನಾಗಲಾರನು. ಆದರೆ ಸ್ವಶಕ್ತಿಯಿಂದ ಈ ವಿಶ್ವವನ್ನಾಳುವ, ಪ್ರಲಯಕಾಲದಲ್ಲಿ ಎಲ್ಲರ ಎದುರಿಗೆ ಧುತ್ ಎಂದು ಬಂದು ನಿಲ್ಲುವ, ವಿಶ್ವೋತ್ಪತ್ತಿಕಾಲದಲ್ಲಿ ಅದನ್ನು ನಿರ್ಮಿಸುವ ರುದ್ರನೇ ವಿಶ್ವದ ಆದಿಕರ್ತನೆನ್ನಬೇಕು. ಈ ವಿಶ್ವದ ಬ್ರಹ್ಮಚಕ್ರವು ಅವನ ಸಾಮರ್ಥ್ಯದಿಂದಲೇ ಸಾಗಿರುವದು (ಶ್ವೇ, ಅ ೩, ಮಂ ೨ ; ಅ ೬, ಮಂ ೧. ). ಅವನೇ ಆದಿಕಾರಣನು, ಸರ್ವೇಶ್ವರನು, ಅವನನ್ನು ಹುಟ್ಟಿಸುವವರು ಅಥವಾ ರಕ್ಷಿಸುವವರು ಯಾರೂ ಇಲ್ಲ. ಚೈತನ್ಯಹೀನ, ಜಡ, ನಿಷ್ಕ್ರಿಯವಾದ ಅನೇಕ ಪದಾರ್ಥಗಳ ಚಲನವಲನಕ್ಕೆ ಅವನೇ ಮೂಲನು. ಮೂಲ ಒಂದೇ ಬೀಜವನ್ನು ಅನೇಕ ವಿಧದಿಂದ ಬೆಳೆಯಹಚ್ಚುವವನು ಅವನೇ (ಶ್ವೇ, ಅ ೬, ಮಂ ៩, ೧೨). ಈ ರೀತಿ ವಿಶ್ವೋತ್ಪತ್ತಿಯ ನಿಜವಾದ ತಾತ್ವಿಕ ವಿವೇಚನವು ಈ ಉಪನಿಷತ್ತಿನಲ್ಲಿರುವದು. ಒಬ್ಬನೇ ಒಬ್ಬನಾಗಿರುವ ಸರ್ವಶಕ್ತಿಮಾನ್ ಅದ್ವಿತೀಯ ಪರಮಾತ್ಮನ ಕಿರಿಬೆರಳಿನ ಸುತ್ತಲೂ ಈ ಸೃಷ್ಟಿಚಕ್ರವು ತಿರುಗುತ್ತಿರುವದೆಂಬುದೇ ಈ ವಿವೇಚನದ ತಾತ್ಪರ್ಯವು.

**೧೯. ಉಪನಿಷತ್ತು ಮತ್ತು ಗ್ರೀಕ ತತ್ವಜ್ಞಾನಗಳ ಸಾದೃಶ್ಯವು—** ವಿಶ್ವೋತ್ಪತ್ತಿಯ ಬಗ್ಗೆ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುವ ಪೌರುಷ ಮತ್ತು ಅಪೌರುಷ ಅಥವಾ ಸಗುಣ ಮತ್ತು ನಿರ್ಗುಣ ಪ್ರಮೇಯಗಳನ್ನು ಅಲ್ಲಲ್ಲಿ ಗ್ರೀಕ ದಾರ್ಶನಿಕರ ಪ್ರಮೇಯಗಳಿಗೆ ಹೋಲಿಸುತ್ತ ವರ್ಣಿಸಿದ್ದಾಯಿತು. ಇನ್ನು ಈ ಸಾದೃಶ್ಯಗಳ ವಿವೇಚನವನ್ನು ಸ್ವಲ್ಪ ಮಾಡುವ. ಗ್ರೀಕ ಮತ್ತು ಭಾರತೀಯ ತತ್ವಜ್ಞಾನಗಳಲ್ಲಿಯ ಹೋಲಿಕೆಗಳು ಒಳ್ಳೇ ಮನೋವೇಧಕವಾಗಿವೆ. ಈ ಎರಡು ಸಂಸ್ಕೃತಿಗಳ ಸಂಬಂಧವೇನೆಂಬ ವ್ಯಾಪಕವಾದ ಪ್ರಶ್ನೆಯಲ್ಲಿ ಈ ಎರಡು ತತ್ವಜ್ಞಾನಗಳ ಸಂಬಂಧದ ಪ್ರಶ್ನೆಯಾದರೂ ಒಳಕೊಂಡಿದೆ. ಈ ಸಂಸ್ಕೃತಿಗಳ ನಡುವಿರುವ ವಿಲಕ್ಷಣ ಸಾಮ್ಯದ ಒಗಟನ್ನು ಮೂರು ಬಗೆಯಿಂದ ಬಿಡಿಸುವ ಪರಿಪಾಠವುಂಟು.

(೧) 'ಪರಸ್ಪರಾನುಕರಣ'ವೆಂಬುದು ಇದನ್ನು ಬಿಡಿಸುವ ಒಂದು ರೀತಿಯು. ಆದರೆ ಒಬ್ಬರನ್ನೊಬ್ಬರು ಅನುಕರಿಸಿರಬಹುದೆಂಬುದು ಅಲೆಕ್ಸಾಂಡರನ ದಾಳಿಯ ನಂತರವೇ ಸಂಭವಿಸುವದು ಶಕ್ಯವು. ಶಿಲ್ಪ ಮತ್ತು ನಾಣ್ಯಶಾಸ್ತ್ರದಲ್ಲಿ ಭಾರತೀಯರು ಕೆಲ ಮಾತುಗಳನ್ನು ಗ್ರೀಕರಿಂದ ಕಲಿತಿರಬಹುದು. ಆದರೆ ಭಾರತೀಯರ ಯೋಗ ಮತ್ತು ಸಾಂಖ್ಯಶಾಸ್ತ್ರಗಳಿಂದ ಸಮಾಧಿ ಮತ್ತು ತ್ರಿಗುಣಗಳ ಕಲ್ಪನೆಯನ್ನು ನಿಯೋ-ಪ್ಲೆಟೋನಿಸ್ಟ್ ಪಂಥದವರು ಕಲಿತಿರುವರು. ಇದು ಅಲೆಕ್ಸಾಂಡರನ ದಾಳಿಯಾದಮೇಲೆ ನಡೆದ ಸಂಗತಿಯು. ಆದರೆ ಅದಕ್ಕೂ ಪೂರ್ವದಲ್ಲಿ ಆ ಸಂಸ್ಕೃತಿಗಳ ಸಂಬಂಧವು ಏನು ಮತ್ತು ಹೇಗೆ ಇತ್ತು, ಇದು ಮುಖ್ಯ ಪ್ರಶ್ನೆಯಿರುವದು. ಥೇಲಿಸ್, ಪಾಯಥಾಗೋರಸ್ ಮುಂತಾದ ದಾರ್ಶನಿಕರು ಬ್ರಾಹ್ಮಣರ ಕಡೆಗೆ ಹೋಗಿದ್ದರೆಂದು ಡಾಯೋಜೀನೀಸ್ ಮತ್ತು ಯಾಂಬ್ಲಿಕಸ್ ಎಂಬ ಗ್ರೀಕ ತತ್ವಜ್ಞರು ಬರೆದಿಟ್ಟಿರುವರು. ಆದರೆ ಪ್ಲೇಟೋನ ಲೇಖನಗಳಲ್ಲಿ ಭಾರತೀಯ ತತ್ವಜ್ಞಾನದಬಗ್ಗೆ ಕಿಂಚಿತ್ ಉಲ್ಲೇಖವಾದರೂ ಇಲ್ಲದಿರುವಾಗ ಆ ವಿಧಾನವು ನಿಜವೆಂದು ತಿಳಿಯುವದು ಕಠಿನವು.

(೨) ಇನ್ನು ಗ್ರೀಕ ಮತ್ತು ಭಾರತೀಯ ಸಂಸ್ಕೃತಿಗಳ ಉಗಮವು ಒಂದೇ ಇರುವದು, ಆದುದರಿಂದ ಅವುಗಳಲ್ಲಿ ಈ ಸಾಮ್ಯವಿರುವದೆಂದು ಹೇಳಬಹುದು. ಇದು ಎರಡನೆಯ ರೀತಿಯು. ಅಂಡಾಕೃತಿ ಮೂಲಪುರುಷನಿರುವನು, ಪೃಥ್ವಿ, ಆಕಾಶಗಳೆಂಬ ಮುಚ್ಚಳಗಳೊಳಗಿಂದ ಫೇನಿಸ್ ಅಥವಾ ಸೂರ್ಯನು ಹೊರಬೀಳುವನು ಎಂಬ ಕಲ್ಪನೆಗಳು, ಆತ್ಮನು ಗಂಡು ಹೆಣ್ಣು ರೂಪಗಳನ್ನು ಧರಿಸಿ ಹೀಬ್ರೂ ಪುರಾಣಗಳಲ್ಲಿ ವರ್ಣಿಸಿದಂತೆ ಇಬ್ಭಾಗವಾಗುವನು, ಕಠೋಪನಿಷತ್ತಿನಲ್ಲಿಯ ಅಶ್ವತ್ಥ ಮತ್ತು ಸ್ಕ್ಯಾಂಡಿನೇವ್ವಿಯಾದ ಪುರಾಣದಲ್ಲಿಯ ಇಗ್‌ಡ್ರಾಸಿಲ್ ಎಂಬ ವೃಕ್ಷ, ಈ ಮುಂತಾದ ಸಾಮ್ಯಗಳನ್ನು ನೋಡಿದರೆ ಭಾರ

ತೀಯ ಮತ್ತು ಯುರೋಪೀಯ ಆರ್ಯರು ಒಂದೇ ಕಡೆಗೆ ಇದ್ದಿರಬಹುದೆಂದು ತೋರು ವದು. 'ಗ್ರೀಕ ಮತ್ತು ಸಂಸ್ಕೃತ ಭಾಷೆಗಳ ತುಲನಾತ್ಮಕ ಅಭ್ಯಾಸವು' ಎಂಬ ಪುಸ್ತಕ ದಲ್ಲಿ ಈ ಎರಡೂ ಭಾಷೆಗಳಲ್ಲಿಯ ಅಸಾಧಾರಣ ಸಾಮ್ಯವು, ಎರಡೂ ಜನಾಂಗಗಳು ಎಷ್ಟೋ ವರ್ಷಗಳವರೆಗೆ ಒತ್ತಟ್ಟಿಗೆ ಇದ್ದುದರಿಂದಲೇ ಉಂಟಾಗಿರಬೇಕೆಂದು ನಾವು ಸಿದ್ಧ ಮಾಡಿರುವೆವು.

(೩) ಅಥವಾ ಎರಡೂ ದೇಶಗಳಲ್ಲಿ ಸ್ವತಂತ್ರವಾಗಿ ಒಂದೇ ಬಗೆಯ ತಾತ್ವಿಕ ವಿಚಾರಗಳ ವಿಕಾಸವಾಗಿರಬಹುದು, ಎಂಬುದು ಮೂರನೆಯ ರೀತಿಯು. ಆದಿ ಕಾರಣದ ಕಲ್ಪನೆಗಳು ಎರಡೂ ತತ್ವಜ್ಞಾನಗಳಲ್ಲಿ ಒಂದೇ ಇರುವದನ್ನು ಈ ಮೊದಲೇ ನಾವು ತೋರಿಸಿರುವೆವು. ಗ್ರೀಕ ತತ್ವಜ್ಞನಾದ ಹೇಸಿಯಾಡ್ಡನ ಪ್ರಶ್ನೆ ಮತ್ತು ಶ್ವೇತಾ ಶ್ವತರದಲ್ಲಿಯ ವಿಶ್ವವಿಷಯಕ ಪ್ರಶ್ನೆ ಇವೆರಡೂ ಒಂದೇ ತರಹದ್ದಿರುವವು. ನೀರು ಇದೇ ವಿಶ್ವದ ಆದಿ ಎಂಬ ಬೃಹದಾರಣ್ಯಕದಲ್ಲಿಯ ಕಲ್ಪನೆಗೂ ಥೇಲಿಸ್ ಇವನ ಕಲ್ಪನೆಗೂ ಪೂರ್ಣ ಸಾಮ್ಯವಿರುವದು. ವಾಯುವೇ ಎಲ್ಲ ವಸ್ತುಗಳ ಲಯಸ್ಥಾನವೆಂದು ಛಾಂದೋ ಗ್ಯದಲ್ಲಿರುವ ತತ್ವವು ಮತ್ತು ಅನ್ಯಾಕ್ಸಾಮಿನೀಸನ ಕಲ್ಪನೆ ಇವುಗಳಲ್ಲಿ ಸಾದೃಶ್ಯವಿದೆ. ಹೆರಾಕ್ಲಿಟಸ್ಸನ ಅಗ್ನಿಯ ಕಲ್ಪನೆ ಮತ್ತು ಅಗ್ನಿಯು ಬಹುರೂಪಗಳನ್ನು ತಾಳುವದು ಎಂಬ ಕಠದಲ್ಲಿಯ ಕಲ್ಪನೆ ಇವು ಹೋಲುವವು. ಭೂಮಿಯೇ ವಿಶ್ವಾಧಾರವೆಂಬ ಮುಂಡಕದ ಲ್ಲಿಯ ಕಲ್ಪನೆಯು ಹೇಸಿಯಾಡ್ಡನ ಬರಹದಲ್ಲಿ ತಲೆದೋರಿದೆ. ಆಕಾಶವು ಐದನೆಯ ತತ್ವವೆಂಬ ತೈತ್ತಿರೀಯದಲ್ಲಿಯ ವಿವೇಚನದಂತೆಯೇ ಫಾಯಲಾಲಾಸನ ಗ್ರಹಿಕೆಯಿರು ವದು. ತೈತ್ತಿರೀಯ ಛಾಂದೋಗ್ಯಗಳಲ್ಲಿಯ ಸದಸತ್ ಎಂಬ ಕಲ್ಪನೆಗಳು ಗಾರ್ಜಿಯಾಸ ಮತ್ತು ಪಾರ್ಮೆನಾಯಿಡಿಸ್ ಇವರ ವಿಚಾರಗಳಲ್ಲಿ ವ್ಯಕ್ತವಾಗಿವೆ. ಸೃಷ್ಟಿನಿರ್ಮಾಣ ಕ್ರಮವು ಮತ್ತು ತದ್ವಿರುದ್ಧ ಸೃಷ್ಟಿಯ ಲಯಕ್ರಮವು ಇವು ತೈತ್ತಿರೀಯದಲ್ಲಿ ವರ್ಣಿಸ ಲ್ಪಟ್ಟಿರುವಂತೆ ಹೆರಾಕ್ಲಿಟಸ್‌ನಾದರೂ ವರ್ಣಿಸಿರುವನು. ಅದೇ ಪ್ರಕಾರವಾಗಿ ಛಾಂದೋಗ್ಯ ದಲ್ಲಿಯ ತ್ರಿವೃತ್ಕರಣ ಮತ್ತು ಎಲ್ಲ ವಸ್ತುಗಳಲ್ಲಿ ಪ್ರತಿಯೊಂದು ಮೂಲ ತತ್ವದ ಅಂಶವಿರುವದೆಂಬ ಅನ್ಯಾಕ್ಸಾಗೋರಾಸನ ಕಲ್ಪನೆ ಇವುಗಳಲ್ಲಿ ಸಾದೃಶ್ಯವಿರುವದು. ಇದೆಲ್ಲ ವಿಶ್ವ ಮತ್ತು ಅದರ ಉತ್ಪತ್ತಿ ಇವುಗಳನ್ನು ಕುರಿತು ಇರುವ ವಿಚಾರಗಳ ಸಾಮ್ಯವಾ ಯಿತು. ಇನ್ನು ಮಿಕ್ಕ ತಾತ್ವಿಕವಿಚಾರಗಳ ಸಾಮ್ಯವಾದರೂ ನೋಡುವಂತಿದೆ. ಪಾಯಥ್ಯಾ ಗೋರಾಸನ ಪುನರ್ಜನ್ಮದ ಕಲ್ಪನೆ ಮತ್ತು ಅದಕ್ಕೂ ಪೂರ್ವದಲ್ಲಿ ಋಗ್ವೇದದಲ್ಲಿರುವ ಅದೇ ಕಲ್ಪನೆ, ರಥ ಮತ್ತು ರಥಿಯ ಫೇಡ್ರಸ್‌ನ ಕಥೆ ಮತ್ತು ಕಠೋಪನಿಷತ್ತಿನಲ್ಲಿಯ ರಥ ರಥಿಗಳ ಉಪಮೆ, ಪ್ಲೇಟೋನ 'ಒಳಿತು' ಅಥವಾ 'ಕಲ್ಯಾಣ' ಎಂಬುದೇ

ಸೂರ್ಯನೋಪಾದಿಯಲ್ಲಿ ಎಲ್ಲ ಕಲ್ಪನೆಗಳಲ್ಲಿ ಶ್ರೇಷ್ಠವೆಂದು ಇರುವ ವರ್ಣನೆ ಮತ್ತು ಕಠೋಪನಿಷತ್ತಿನಲ್ಲಿ ಜಗಚ್ಚಕ್ಷುವಾದ ಸರ್ವದೋಷರಹಿತ ಆತ್ಮನೇ ಸೂರ್ಯನೆಂಬ ಕಲ್ಪನೆ, ಪ್ಲೇಟೋನ ತತ್ವಜ್ಞಾನ ಮತ್ತು ವೇದಾಂತಗಳಲ್ಲಿಯ ಮಾಯೆಯ ವಿಚಾರವು ಮತ್ತು ಅವುಗಳಲ್ಲಿರುವ ಧ್ವನಿಸಾದೃಶ್ಯ ( ಮೀಯಾನ್ – ಮಾಯಾ ) ಶಬ್ದಸಾದೃಶ್ಯ ಕಲ್ಪನಾಸಾದೃಶ್ಯಗಳು, ಪಾರ್ಮೆನಾಯಿಡಿಸ್ಸನು ಮಾಡಿದ ಪ್ಲೇಟೋನ ಖಂಡನ ಮತ್ತು ಶಂಕರಾಚಾರ್ಯರು ಮಾಡಿದ ನೈಯ್ಯಾಯಿಕರ ಖಂಡನ, ಋಗ್ವೇದದಲ್ಲಿಯ ವಾಕ್ ಹಾಗೂ ಹೆರಾಕ್ಲಿಟಸ್ಸನ, ಸ್ಟೋಯಿಕರ, ಮತ್ತು ಗ್ರೀಕ ದಾರ್ಶನಿಕರ ಲೋಗೋಸದ ಕಲ್ಪನೆ,–ಇವೆಲ್ಲವುಗಳ ನಡುವಿನ ಸಾಮ್ಯವು ಭಾರತೀಯ ಮತ್ತು ಗ್ರೀಕ ತತ್ವಜ್ಞಾನಗಳಲ್ಲಿದ್ದ ನಿಕಟಸಾದೃಶ್ಯವನ್ನು ಸ್ಪಷ್ಟವಾಗಿ ತೋರಿಸಿಕೊಡುತ್ತದೆ. ಈ ಸಾಮ್ಯಗಳಿರುವ ಕಾರಣವೇನು ? ಒಬ್ಬರು ಮತ್ತೊಬ್ಬರನ್ನು ಅನುಕರಿಸಿದರೆನ್ನಬೇಕೆಂದರೆ ಅದು ಐತಿಹಾಸಿಕ ದೃಷ್ಟಿಯಿಂದ ಸಿದ್ಧವಾಗದ ಸಂಗತಿಯು. ಈ ಎರಡೂ ಜನಾಂಗಗಳ ಕಲ್ಪನೆಗಳು ಒಂದೇ ಉಗಮದಿಂದ ಬಂದುದರಿಂದ ಈ ಸಾಮ್ಯವಿದೆ ಎಂದು ಅನ್ನಬೇಕೆಂದರೆ, ಎರಡೂ ತತ್ವಜ್ಞಾನಗಳಲ್ಲಿ ಕೆಲವು ವಿಲಕ್ಷಣವಾದ ವೈಶಿಷ್ಟ್ಯಗಳಿರುವವು. ಉದಾಹರಣಾರ್ಥವಾಗಿ, ಪಾಯಥ್ಯಾಗೋರಸ್ಸನ ಸಂಖ್ಯಾವಾದ ಹಾಗೂ ಪ್ಲೇಟೋನ ‘ ಕಲ್ಪನಾ ’ ವಾದ ಇವು ಗ್ರೀಕರ ವಿಶೇಷಗಳು ಮತ್ತು ವೇದಾಂತದಲ್ಲಿಯ ತುರೀಯಾವಸ್ಥೆ ಹಾಗೂ ಮೀಮಾಂಸಕರ ‘ಸ್ಫೋಟ’ ವಾದ ಇವು ಭಾರತೀಯರ ವಿಶೇಷಗಳು. ಅನುಕರಣ ಅಥವಾ ಸಾಮಾನ್ಯಉಗಮ ಇವೆರಡೂ ಐತಿಹಾಸಿಕ ದೃಷ್ಟಿಯಿಂದ ಸಿದ್ಧವಾಗದೇ ಹೋದಲ್ಲಿ ಎರಡೂ ಜನಾಂಗಗಳಲ್ಲಿ ಸ್ವತಂತ್ರವಾಗಿ ಆದರೆ ಎರಡರಲ್ಲಿಯೂ ಸಾಮ್ಯವುಳ್ಳ ತತ್ವವಿಚಾರಗಳು ವಿಕಾಸಹೊಂದಿದವೆಂದು ಹೇಳಬೇಕಾಗುವದು. ಭಗವದ್ಗೀತೆಯಲ್ಲಿ ಪರಮಾತ್ಮನು ‘ಅಕ್ಷರಗಳಲ್ಲಿ ಅಕಾರನು’ ಎಂಬ ವರ್ಣನೆ ಮತ್ತು ಬಾಯಿಬಲ್‌ದಲ್ಲಿ ಪರಮಾತ್ಮನು ‘ಅಕ್ಷರಗಳ ಆದಿ ಅಂತನು’ ಎಂಬ ಅದೇ ಬಗೆಯ ವರ್ಣನೆ, ವಿಘ್ನಗಳು ಹೆಚ್ಚಾದಷ್ಟು ಪ್ರೇಮವು ಹೆಚ್ಚಾಗುವದು ಎಂಬ ಕಾಲಿದಾಸನ ವರ್ಣನೆ ಮತ್ತು ಷೇಕ್ಸ್‌ಪಿಯರನ ‘ ಟೂ ಜೆಂಟಲ್‌ಮೆನ್ ಆಫ್ ವ್ಹೆರೋನಾ’ ಎಂಬ ನಾಟಕದಲ್ಲಿರುವ ಅದೇ ಬಗೆಯ ವರ್ಣನೆ, ಇವೆಲ್ಲವುಗಳನ್ನು ನೋಡಿದರೆ ತತ್ವವಿಚಾರಗಳಲ್ಲಿ ಮತ್ತು ಕಾವ್ಯಗಳಲ್ಲಿ ಪರಸ್ಪರಾನುಕರಣವಿಲ್ಲದೆ ಕಲ್ಪನಾಶಕ್ತಿಯು ಭಿನ್ನ ಭಿನ್ನ ದೇಶಕಾಲಗಳಲ್ಲಿ ಒಂದೇ ಬಗೆಯಿಂದ ಹೇಗೆ ಕಾರ್ಯಮಾಡುವದು ಎಂಬುವನ್ನು ಮನಗಾಣಬಹುದು. ಪ್ರತಿಭೆಯು ಎಲ್ಲಿ ಹುಟ್ಟಿದರೂ ತನ್ನ ಇಷ್ಟಕಾರ್ಯವನ್ನು ತಪ್ಪು ತಡೆಯಿಲ್ಲದೆ ಕೈಗೂಡಿಸುವನು. ಆಡ್ಯಾಮ್ಸ್ ಮತ್ತು ಲೇವ್ಹೇರಿಯರ್ ಇವರಿಬ್ಬರೂ ನೆಪ್‌ಚೂನ್ ಗೃಹವನ್ನು ಒಮ್ಮೆಲೇ ಶೋಧಿಸುವದು ಶಕ್ಯವೆಂಬುದು ಪ್ರತ್ಯಕ್ಷ ಸಿದ್ಧವಾದ ಮಾತು.

ಜೀವನಶಾಸ್ತ್ರದಲ್ಲಿಯು ಒಂದೇ ತತ್ವವನ್ನು ಡಾರ್ವಿನ್ ಮತ್ತು ವಾಲೇಸ್ ಇವರಿಬ್ಬರೂ ಒಂದೇ ಸಮಯಕ್ಕೆ ಕಂಡುಹಿಡಿಯುವದು ಶಕ್ಯವು. ಸ್ಕಾಟ್ ಮತ್ತು ಅಮುಂಡ್‌ಸೇನ್ ಈ ಈರ್ವ ಪ್ರವಾಸಿಕರು ಒಂದೇ ಕಾಲಕ್ಕೆ ಉತ್ತರಧ್ರುವವನ್ನು ಗೊತ್ತುಹಚ್ಚುವದು ಸಾಧ್ಯವು. ಹೀಗಿದ್ದ ಮೇಲೆ ಬೇರೆ ಬೇರೆ ತತ್ವಜ್ಞಾನಿಗಳು ಭಿನ್ನ ಭಿನ್ನ ದೇಶಕಾಲಗಳಲ್ಲಿ ಹುಟ್ಟಿದರೂ ಒಂದೇ ತತ್ವವನ್ನು ಸ್ವತಂತ್ರವಾಗಿ ಯಾಕೆ ಗೊತ್ತುಹಿಡಿದಿರಬಾರದು ? ಮಾನವೀ ಪ್ರಜ್ಞಾಶಕ್ತಿಯು ಯಾವದೇ ದೇಶಕಾಲಗಳಲ್ಲಿ ಕಾರ್ಯ ಮಾಡಿದರೂ ಒಂದೇ ಕಟ್ಟಳೆಗನುಸರಿಸಿ ನಡೆಯುವದು ಎಂಬುದು ಸಾರ್ವತ್ರಿಕ ನಿಯಮವು.

---

## ಪ್ರಕರಣ ೩.

# ಮಾನಸಶಾಸ್ತ್ರದ ವಿವಿಧಾಂಗಗಳ ವಿಚಾರವು.

**೧. ಮಾನಸಶಾಸ್ತ್ರದ ಮೂರು ಅಂಗಗಳು—** ಉಪನಿಷತ್ತುಗಳ ಪ್ರಾಚೀನತೆಯನ್ನು ನೆನೆದರೆ ಮಾನಸಶಾಸ್ತ್ರವನ್ನು ಕುರಿತು ಇಷ್ಟೊಂದು ವಿಚಾರಮಾಡಿದ ಶ್ರೇಯಸ್ಸು ಆ ಋಷಿಗಳ ಪಾಲಿಗಿರುವುದನ್ನು ಕಂಡು ಯಾರಿಗಾದರೂ ಸೋಜಿಗವಾಗ ಬಹುದು. ಸಾಮಾನ್ಯವಾಗಿ ತತ್ವಜ್ಞಾನದಲ್ಲಿ, ವಿಶೇಷತಃ ಮಾನಸಶಾಸ್ತ್ರದಲ್ಲಿ ಉಪನಿಷ ತ್ಕಾರರು ಆ ಕಾಲದಲ್ಲಿ ಎಲ್ಲರಿಗಿಂತ ಮುಂದುವರಿದವರಾಗಿದ್ದರು. ಅನುಭವಜನ್ಯ ಮಾನಸ ಶಾಸ್ತ್ರ, ಅಸಾಧರಣ ಮಾನಸಶಾಸ್ತ್ರ, ವಿಚಾರಗಮ್ಯ ಮಾನಸಶಾಸ್ತ್ರಗಳೆಂಬ ಈ ಶಾಖೆಯ ಮೂರು ಬಗೆಯ ಶಾಖೆಗಳಲ್ಲಿಯೂ ಅವರು ವಿಚಾರಮಾಡಿದ್ದರು. ಅನುಭವಜನ್ಯ ಮಾನಸ ಶಾಸ್ತ್ರಕ್ಕಿಂತಲೂ ಅಸಾಧಾರಣ ಮಾನಸಶಾಸ್ತ್ರದಲ್ಲಿ, ಅಸಾಧಾರಣಕ್ಕಿಂತಲೂ ವಿಚಾರಗಮ್ಯ ಮಾನಸಶಾಸ್ತ್ರದಲ್ಲಿ ಅವರ ಗತಿಯು ಹೆಚ್ಚಾಗಿತ್ತು. ಇವೆಲ್ಲ ಶಾಖೆಗಳಲ್ಲಿ ಅವರು ಮಾಡಿ ರುವ ವಿಚಾರಗಳ ಬೆಲೆಕಟ್ಟುವದಾದರೆ ಮೊದಲು ಅವರು ಪ್ರತಿಯೊಂದು ಭಾಗದಲ್ಲಿಯೂ ಮಾಡಿರುವ ವಿಚಾರಗಳನ್ನು ನಾವು ತಿಳಿದುಕೊಳ್ಳುವದು ಅಗತ್ಯವು.

## ೧. ಅನುಭವಜನ್ಯ ಮಾನಸಶಾಸ್ತ್ರವು.

**೨. ಮನಕ್ಕೂ ಅನ್ನಕ್ಕೂ ಸಂಬಂಧವು—** ನಾವು ಮೊಟ್ಟಮೊದಲು ನೆನಪಿನಲ್ಲಿಡಬೇಕಾದ ಒಂದು ಮಾತುಂಟು. ಅದೇನೆಂದರೆ, ಈ ಅನುಭವಜನ್ಯ ಮಾನಸ ಶಾಸ್ತ್ರವು ಮೊನ್ನೆಮೊನ್ನೆ ಹುಟ್ಟಿದ್ದು ; ಆದುದರಿಂದ ಈ ಶಾಸ್ತ್ರದ ಸಂಪೂರ್ಣ ಸಂಶೋಧನ ವನ್ನು ಉಪನಿಷತ್ತಿನಂತಹ ಪ್ರಾಚೀನಗ್ರಂಥಗಳಲ್ಲಿ ನೋಡಲಿಕ್ಕೆ ನಾವು ಬಯಸಕೂಡದು. ಈ ಸಂಬಂಧದಿಂದ ಬೇರೆಬೇರೆ ಉಪನಿಷತ್ತುಗಳಲ್ಲಿ ಬಂದ ಅಲ್ಪಸ್ವಲ್ಪ ಉಲ್ಲೇಖಗಳಿಂದಲೇ ನಾವು ಸಮಾಧಾನಹೊಂದಲಿಕ್ಕೆ ಬೇಕು. ಮನಸ್ಸಿನ ಹುಟ್ಟು ಮತ್ತು ಬೆಳವಣಿಗೆಯು ಅನ್ನದ ಮೇಲೆ ಅವಲಂಬಿಸಿದೆಯೆಂದು ಉಪನಿಷತ್ಕಾರರ ನಂಬುಗೆ. ಮನಸ್ಸು ಅನ್ನಮಯವು ಅಂದರೆ ನಾವು ತಿಂದ ಅನ್ನದಿಂದ ಮನಸ್ಸು ಸಿದ್ಧವಾಗುತ್ತದೆ ಎಂದು ( ಛಾಂ, ಅ ೬, ಖಂ ೫, ಮಂ ೪ ) ವಚನವಿದೆ. ' ನಾವು ಉಂಡ ಅನ್ನವು ಮೂರು ರೀತಿಯಲ್ಲಿ ರೂಪಾಂತರಿಸಲ್ಪಡು ತ್ತದೆ. ಅದರೊಳಗಣ ಎಲ್ಲಕ್ಕೂ ಜಡವಾದ ಭಾಗವು ಮಲವಾಗುತ್ತದೆ, ಮಧ್ಯಮ

ತರಗತಿಯ ಭಾಗವು ಮಾಂಸವಾಗುತ್ತದೆ ಮತ್ತು ಸೂಕ್ಷ್ಮತಮಭಾಗವು ಮನಸ್ಸಿನ ಪೋಷಣೆ ಮಾಡುತ್ತದೆ ' ಎಂದು ( ಛಾಂ, ಅ ೬, ಖಂ ೫, ಮಂ ೧ ) ಒಂದೆಡೆಯಲ್ಲಿ ಹೇಳಿದೆ. ಮುಂದೆ ' ಮೊಸರು ಕಡೆಯಲು ಅದರೊಳಗಣ ಸೂಕ್ಷ್ಮಭಾಗವು ಮೇಲೆ ಬಂದು ಬೆಣ್ಣೆಯು ರೂಪುಗೊಳ್ಳುವಂತೆ ಉಂಡ ಅನ್ನದ ಸೂಕ್ಷ್ಮಭಾಗವು ಮೇಲೆ ಬಂದು ಮನೋರೂಪವನ್ನು ಧರಿಸುತ್ತದೆ ' ಎಂದು ( ಛಾಂ, ಅ ೬, ಖಂ ೬, ಮಂ ೧–೨ ) ಉಲ್ಲೇಖಿಸಿದೆ. ಭಗವದ್ಗೀತೆಯ ಕಾಲದಲ್ಲಿ ಸಹ ಸಾತ್ವಿಕ, ರಾಜಸಿಕ ಮತ್ತು ತಾಮಸಿಕಗಳೆಂಬ ಮನಸ್ಸಿನ ಸ್ಥಿತಿಗಳು ಆಹಾರಭೇದದಿಂದ ಉಂಟಾಗುತ್ತವೆಂದು ತಿಳಿಯುತ್ತಿದ್ದರು ( ಗೀ, ಅ ೧೭, ಮಂ ೮–೧೦ ). ಉಣ್ಣುವ ಅನ್ನದ ಗುಣಗಳು ಉಣ್ಣುವವನ ಮನಸ್ಸಿನ ಗುಣಗಳನ್ನುಂಟು ಮಾಡುತ್ತವೆಯೆಂದು ಒಮ್ಮೆ ನಂಬಿದ ಬಳಿಕ ಶೀಲಶುದ್ಧಿಯ ದೃಷ್ಟಿಯಿಂದ ಆಹಾರವನ್ನು ವಿಮರ್ಶಿಸಿ ಶುದ್ಧಾಹಾರವನ್ನು ಸ್ವೀಕರಿಸಬೇಕೆಂಬ ಮಾತು ಅಪರಿಹಾರ್ಯವಾಗಿ ಬರುತ್ತದೆ. ಈ ಸಂಬಂಧದಿಂದ ಒಂದೆಡೆಯಲ್ಲಿ ( ಛಾಂ, ಅ ೭, ಖಂ ೨೬, ಮಂ ೨ ) ಹೇಳಿರುವುದೇನಂದರೆ:– ' ಆಹಾರವು ಶುದ್ಧವಾಗಿದ್ದರೆ ಸತ್ವಶುದ್ಧಿ ಅಂದರೆ ಸ್ವಭಾವಶುದ್ಧಿಯಾಗುತ್ತದೆ, ಸತ್ವಶುದ್ಧಿಯಾಗಿದ್ದರೆ ಸ್ಮರಣಶಕ್ತಿಯು ದೃಢವಾಗಿರುತ್ತದೆ, ಸ್ಮರಣಶಕ್ತಿಯು ಅಚ್ಚಳಿಯದೆ ಉಳಿದರೆ ಭವಬಂಧನಗಳ ನಾಶವಾಗುತ್ತದೆ. ಈ ಬಗೆಯಿಂದಲೆ ನಾರದನ ದೋಷಗಳು ದೂರಾದವು, ಆದುದರಿಂದಲೆ ಭಗವಾನ್ ಸನತ್ಕುಮಾರರು ಅವನಿಗೆ ತಮಸ್ಸಿನ ಆಚೆಗೆ ಹೋಗುವ ದಾರಿಯನ್ನು ತೋರಿಸಿದರು.' ಅಜ್ಞಾನದ ಕತ್ತಲೆಯ ಆಚೆಗೆ ಬೆಳಕಿನ ಜ್ಞಾನ ಲೋಕಕ್ಕೆ ಹೋಗುವ ದಾರಿಯು ಆಹಾರಶುದ್ಧಿಯಿಂದಲೆ ಆರಂಭವಾಗುತ್ತದೆ; ಯಾಕಂದರೆ ಆಹಾರಶುದ್ಧಿಯಿಂದ ಚಿತ್ತಶುದ್ಧಿಯಾಗುವುದು.

**೩. ಏಕಾಗ್ರಮನಸ್ಸಾದಾಗ ಉಸಿರು ಉಡುಗುವುದು—** ಪ್ರಾಚೀನ ಋಷಿಗಳು ಅತಿ ಸೂಕ್ಷ್ಮನಿರೀಕ್ಷಣೆ ಮಾಡಿ ಕಂಡುಹಿಡಿದ ಮಾತುಗಳಲ್ಲಿ ಮನಸ್ಸನ್ನು ಏಕಾಗ್ರ ಮಾಡುವಾಗ ನಾವು ಯಾವಾಗಲೂ ಶ್ವಾಸನಿರೋಧಮಾಡುತ್ತೇವೆ ಎಂಬುದೊಂದು. ಆಗ ನಾವು ಉಸಿರನ್ನು ಒಳಕ್ಕೆಳೆಯುವುದೂ ಇಲ್ಲ ಅಥವಾ ಹೊರಕ್ಕೆ ಬಿಡುವುದೂ ಇಲ್ಲವೆಂಬಂತೆ ತೋರುತ್ತದೆ. ' ನಾವು ಮಾತಾಡುವಾಗ ಶ್ವಸನ ಅಥವಾ ಉಚ್ಛ್ವಸನಗಳಲ್ಲಿ ಒಂದನ್ನೂ ಮಾಡುವದಿಲ್ಲ ' ( ಛಾಂ, ಅ ೧, ಖಂ ೩, ಮಂ ೩ ). ' ಯಜ್ಞದಲ್ಲಿ ಅರಣಿಯ ಕಟ್ಟಿಗೆಗಳನ್ನು ತಿಕ್ಕಿ ಬೆಂಕಿಯನ್ನು ಹೊರಡಿಸುವಾಗ, ಅಥವಾ ಜಿದ್ದಿನಿಂದ ಓಡುವಾಗ, ಇಲ್ಲವೆ ಬಿಲ್ಲನ್ನು ಬಗ್ಗಿಸಿ ಹೆದೆಯನ್ನು ಏರಿಸುವಾಗ, ಮತ್ತು ಇಂತಹ ಸ್ವಪ್ರಯತ್ನದಿಂದ ಮಾಡತಕ್ಕ ವೀರ್ಯವಂತ ಕರ್ಮಗಳಲ್ಲಿ ತೊಡಗಿದಾಗ ನಾವು ಉಸುರಾಡಿಸದೆ ಶ್ವಾಸನಿರೋಧಮಾಡಿರುತ್ತೇವೆ' ( ಛಾಂ, ಅ ೧, ಖಂ ೩, ಮಂ ೫ ). ಇಂತಹ ಸಮಯದಲ್ಲಿ ನಮ್ಮ ಮನಸ್ಸು ಕೈಕೊಂಡ

ಆ ಕೆಲಸದಲ್ಲಿಯೇ ಒಂದಾಗುವುದರಿಂದ, ಏಕಾಗ್ರವಾಗುವುದರಿಂದ ಆಗ ಶ್ವಾಸೋಚ್ಛ್ವಾಸ ದಂತಹ ಬೇರೆ ಗೌಣಸಂಗತಿಗಳಕಡೆಗೆ ನಾವು ಗಮನಕೊಡುವದಿಲ್ಲ. ಇದಕ್ಕೆ ಕೌಷೀತಕಿ ಉಪನಿಷತ್ತಿನಲ್ಲಿ 'ಅಂತರಗ್ನಿಹೋತ್ರ'ವೆಂದು ಹೆಸರಿದೆ ; ಇದನ್ನು ಕಂಡುಹಿಡಿದ ಪ್ರತ ರ್ದನನೆಂಬ ಋಷಿಯ ಹೆಸರಿನ ಮೇಲಿಂದ ಇದಕ್ಕೆ 'ಪ್ರಾತರ್ದನ ಅಗ್ನಿಹೊತ್ರ' ವೆಂದು ಹೆಸರು ಇಡಲ್ಪಟ್ಟಿದೆ. ಇದನ್ನು ಕುರಿತು ಪ್ರತರ್ದನನು ಹೇಳಿರುವುದೇನಂದರೆ, 'ಮನುಷ್ಯನು ಮಾತಾಡುತ್ತಿರುವಾಗ ಉಸಿರಾಡಿಸಲಾರನು ; ಆದ್ದುದರಿಂದ ಆಗ ಅವನು ಉಸಿರನ್ನು ಮಾತಿನಲ್ಲಿ ಆಹುತಿಕೊಟ್ಟಿರುವನೆಂದು ಹೇಳಬಹುದು ; ಇನ್ನು ಉಸಿರಾಡಿಸುವಾಗ ಅವನು ಮಾತಾಡಲಾರನು, ಆದಕಾರಣ ಆಗ ಉಸಿರಾಡಿಸುವುದರಲ್ಲಿ ಮಾತಿನ ಆಹುತಿ ಹಾಕಿದ ನೆಂದು ಹೇಳಬಹುದು. ಮನುಷ್ಯನು ಎಚ್ಚರಿರಲಿ ನಿದ್ದೆಯಲ್ಲಿರಲಿ, ಅನಂತವೂ ಅಮೃತ ಮಯವೂ ಆದ ಇವೆರಡೂ ಆಹುತಿಗಳನ್ನು ಇಕ್ಕುತ್ತಲೇ ಇರುತ್ತಾನೆ. ಉಳಿದ ಆಹುತಿ ಗಳೆಲ್ಲ ಕರ್ಮಮಯವಾಗಿರುವುದರಿಂದ ಅವು ಕೊನೆಯುಳ್ಳವುಗಳು. ಆದುದರಿಂದ ತಿಳಿದ ವರು ಪೂರ್ವಕಾಲದಲ್ಲಿ ಬೇರೆ ಅಗ್ನಿಹೋತ್ರಗಳನ್ನು ಮಾಡುತ್ತಿದ್ದಿಲ್ಲ' (ಕೌ, ಅ ೨, ಮಂ ೫). ತನ್ನೊಳಗೆ ನಡೆದ ಅಂತರಗ್ನಿಹೋತ್ರದ ಜ್ಞಾನವಾದ ಬಳಿಕ ಮನುಷ್ಯನು ಸಾಮಾನ್ಯಪ್ರಕಾ ರದ ಯಜ್ಞಯಾಗಾದಿಗಳನ್ನು ಮಾಡದಿದ್ದುದರ ಸಮರ್ಥನವು ಇಲ್ಲಿ ಮಾಡಲ್ಪಟ್ಟಿದೆ.

**೪. ಭೀತಿಯ ಉಪಪತ್ತಿಯು** — ಮಾನಸಿನ ವಿವೇಚನಕ್ಕೆ ಸಾಗುವ ಮುಂಚೆ ಪ್ರಾಚೀನ ಋಷಿಗಳ ಇನ್ನೂ ಒಂದು ಸೂಕ್ಷ್ಮ ನಿರೀಕ್ಷಣೆಯ ವಿಚಾರವನ್ನು ಅರಿತುಕೊಳ್ಳಬಹುದು. ಇದು ಭೀತಿಯ ಉಪಪತ್ತಿಗೆ ಸಂಬಂಧಿಸಿದ್ದು. ನಾವು ದ್ವೈತ ವೆನ್ನಲು, ಎರಡುಬಗೆಯಲು, ನಮ್ಮಲ್ಲಿ ಭೀತಿಭಾವನೆಯು ಹುಟ್ಟುತ್ತದೆ ( ತೈ, ವಲ್ಲಿ ೨, ಅನು ೭ ). ಮೊಟ್ಟಮೊದಲು ಆತ್ಮನು ತಾನೊಬ್ಬನೆ ಇದ್ದುದರಿಂದ ಹೆದರಿದನು. ಆದರೆ ತನ್ನನುಳಿದು ಬೇರೆ ಯಾರೂ ಇಲ್ಲ, ಹೆದರುವುದು ಯಾರಿಗೆ, ಎಂದು ಬಗೆದು ಭೀತಿಯನ್ನು ಬಿಟ್ಟನು. ಯಾಕಂದರೆ ಹೆದರಿಕೆಯು ಎರಡನೆಯದರಿಂದ ಹುಟ್ಟುತ್ತದೆ ( ಬೃ, ಅ ೧, ಬ್ರಾ ೪, ಮಂ ೨ ). ಇಂತು ತನ್ನ ತಾನರಿತವನಿಗೆ ಅಂದರೆ ಆತ್ಮನ ಜ್ಞಾನವಾದವನಿಗೆ ಹೆದರಿಕೆಯು ಇಲ್ಲ ; ಯಾಕಂದರೆ ಆಮೇಲೆ ತನ್ನ ಸತ್‌ಸ್ವರೂಪದ ಜ್ಞಾನವಾದವನಿಗೆ ಹೆದ ರಿಸಲು ಕಾರಣವಾಗುವ ಭಿನ್ನವಾದ ವಸ್ತುವೆ ಎಲ್ಲಿಯೂ ಉಳಿಯುವದಿಲ್ಲ.

**೫ ಸಂಕಲ್ಪವೇ ಶ್ರೇಷ್ಠವೆಂಬುದು** —ಸಂಕಲ್ಪವು ಹೆಚ್ಚೋ, ಬುದ್ಧಿಯು ಹೆಚ್ಚೋ, ಎಂಬುದೊಂದು ಮಹತ್ವದ ಚರ್ಚೆಯು ಔಪನಿಷದಿಕ ಮಾನಸಶಾಸ್ತ್ರದಲ್ಲಿ ಕಂಡು ಬರುತ್ತದೆ. ಇವೆರಡರಲ್ಲಿ ಯಾವುದು ಶ್ರೇಷ್ಠವು ಎಂಬ ಮಾತಿನ ತಿಕ್ಕಾಟವು ಛಾಂದೋಗ್ಯ ದಲ್ಲಿ ಬಂದಿದೆ. ಈ ಉಲ್ಲೇಖವು ಮುಂದಿನ ಕಾಲದಲ್ಲಿ ಹೊರಟ ಇಚ್ಛಾಶಕ್ತಿಯು ಹೆಚ್ಚೋ

ವಿಚಾರಶಕ್ತಿಯು ಹೆಚ್ಚೋ ಎಂಬ ವಾದದ ಸ್ವಲ್ಪ ಪೂರ್ವಸೂಚನೆಯೇ ಸರಿ. ಆ ಋಷಿಯು ಸಂಕಲ್ಪವೆ ಹೆಚ್ಚಿನದೆಂದು ಬಹಳ ಚನ್ನಾಗಿ ವಿವರಿಸಿ ಹೀಗೆ ಹೇಳುತ್ತಾನೆ– 'ಆದುದರಿಂದ ಇವೆಲ್ಲವೂ......ಸಂಕಲ್ಪದಲ್ಲಿಯೆ ಸಂಗೃಹೀತವಾಗಿವೆ, ಸಂಕಲ್ಪಾತ್ಮಕವೇ ಇವೆ. ಸಂಕಲ್ಪ ದಲ್ಲಿಯೇ ಸ್ಥಿರವಾಗಿವೆ. ಸ್ವರ್ಗ ಮತ್ತು ಭೂಮಿಗಳು ಸಂಕಲ್ಪಮಾಡುತ್ತವೆ. ವಾಯುವೂ ಆಕಾಶವೂ ಸಂಕಲ್ಪಮಾಡುತ್ತವೆ. ನೀರೂ ಬೆಂಕಿಯೂ ಸಂಕಲ್ಪಮಾಡುತ್ತವೆ. ದ್ಯಾವಾ ಪೃಥ್ವಿಗಳ ಸಂಕಲ್ಪದಿಂದ ಮಳೆಯಾಗುತ್ತದೆ. ಮಳೆಯ ಸಂಕಲ್ಪದಿಂದ ಅನ್ನದ ಸಂಕಲ್ಪವು, ಅನ್ನಗ ಸಂಕಲ್ಪದಿಂದ ಪ್ರಾಣಗಳ ಸಂಕಲ್ಪವು, ಪ್ರಾಣಗಳ ಸಂಕಲ್ಪದಿಂದ ಮಂತ್ರಗಳ ಸಂಕಲ್ಪವು, ಮಂತ್ರಗಳ ಸಂಕಲ್ಪದಿಂದ ಕರ್ಮಗಳ ಸಂಕಲ್ಪವು, ಕರ್ಮಗಳ ಸಂಕಲ್ಪದಿಂದ ಲೋಕಗಳ ಸಂಕಲ್ಪವು, ಲೋಕಗಳ ಸಂಕಲ್ಪದಿಂದ ಎಲ್ಲವುಗಳ ಸಂಕಲ್ಪವು. ಇದುವೆ ಸಂಕಲ್ಪವು, ಸಂಕಲ್ಪದ ಉಪಾಸನೆ ಮಾಡು. ಸಂಕಲ್ಪವು ಬ್ರಹ್ಮವೆಂದು ಭಜಿಸುವವನು ......ಸಂಕಲ್ಪವು ಹೋಗಿ ಮುಟ್ಟುವವರೆಗಿನ ಪ್ರದೇಶದ ಅಧಿಪತಿಯಾಗುವನು, ಈಶ್ವರ ನಾಗುವನು. ಸಂಕಲ್ಪವು ಬ್ರಹ್ಮವೆಂದು ಉಪಾಸನೆ ಮಾಡುವವನಿಗಿದು' (ಛಾಂ, ಅ ೭, ಖಂ ೪, ಮಂ ೨). ಸಂಕಲ್ಪವು ಸರ್ವಶಕ್ತಿಮಂತವಾದುದೆಂದು ಈ ಋಷಿಯು ಪೂರ್ಣ ನಂಬಿ ಗೆಯು. ಸಂಕಲ್ಪವೆ ಸರ್ವಕ್ಕೂ ಶ್ರೇಷ್ಠವೆಂದು ಸಾರುವ ಉಪನಿಷದ್ಭಕ್ತನಾದ ಶೌಪೆನ ಹೌಏರನ ಮನಸ್ಸಿನ ಮೇಲೆ ಬಹಳ ಪರಿಣಾಮ ಮಾಡಿದ ಬೇರೆ ಎಷ್ಟೋ ಉಪನಿಷದ್ಭಾಗ ಗಳಲ್ಲಿ ಮೇಲ್ಕಾಣಿಸಿದ್ದು ಒಂದು ಇರಬೇಕೆಂದು ತೋರುತ್ತದೆ. ವಿಚಾರಸಾಮ್ಯವು ತಿಳಿ ಯುವವಕ್ಕಾಗಿ ಈತನು ಬರೆದಿರುವ 'ಸಂಕಲ್ಪಾತ್ಮಕ ಮತ್ತು ಕಲ್ಪನಾತ್ಮಕವಾಗಿರುವ ಜಗತ್ತು' (The world as will and idea, Book I) ಎಂಬ ಗ್ರಂಥದ ಮೊದಲನೆಯ ಭಾಗದೊಳಗೆ ಮುಂದೆಕೊಟ್ಟ ಅವತರಣವನ್ನು ಓದಬಹುದು.

'ಸಾಗರವನ್ನು ಸೇರಲು ತವಕದಿಂದೋಡುತ್ತಿರುವ ನದಿಗಳ ಅವ್ಯಾಹತವಾದ ರಭಸದ ಪ್ರವೃತ್ತಿಯನ್ನು ನೋಡಿದರೆ, ಲೋಹಚುಂಬಕವು ಎಡೆಬಿಡದೆ ಉತ್ತರಧ್ರುವದತ್ತ ಮತ್ತೆ ಮತ್ತೆ ಒಲೆಯುವದನ್ನು ನಿರೀಕ್ಷಿಸಿದರೆ, ಕಬ್ಬಿಣವು ಲವಲವಿಕೆಯಿಂದ ಲೋಹಚುಂಬ ಕದ ಕಡೆಗೆ ಚಟ್ಟನೆ ಹಾರುವದನ್ನು ದಿಟ್ಟಿಸಿದರೆ, ಧನ ಹಾಗೂ ಋಣ ವಿದ್ಯುತ್ತುಗಳು ಔತ್ಸುಕ್ಯದಿಂದ ಒಂದನ್ನೊಂದು ಮರಳಿ ಸೇರಲು ಹಂಬಲಿಸುತ್ತಿರುವುದನ್ನು ಪರೀಕ್ಷಿಸಿದರೆ ಮತ್ತು ಮನುಷ್ಯನ ಆಕಾಂಕ್ಷೆಗಳಂತೆ ನಡುವೆ ವಿಘ್ನಗಳು ಬಂದಷ್ಟು ಅವುಗಳಲ್ಲಿ ಹಂಬಲವು ಹೆಚ್ಚುವುದನ್ನು ನೋಡಿದರೆ, ಸ್ಫಟಿಕವು ಎಷ್ಟೊಂದು ಆಶ್ಚರ್ಯಕರವಾದ ಅಚ್ಚುಕಟ್ಟುತನ ದಿಂದ ತಟ್ಟನೆ ರೂಪುಗೊಳ್ಳುತ್ತದೆಂಬವನ್ನು ಗಮನಿಸಿದರೆ.........ವಸ್ತುಗಳು ಅದಾವ ಬುದ್ಧಿಯಿಂದ ಒಲಿದು ಕೂಡುವವೊ ಮತ್ತು ಸಿಡಿದು ದೂರಾಗುವವೊ ಅದನ್ನು ಕುರಿ

ತರೆ......ಇದೆಲ್ಲವನ್ನೂ ವಿಮರ್ಶಿಸಿದರೆ ಇಷ್ಟು ಭಿನ್ನ ವಸ್ತುಗಳೊಳಗಿನ ಈ ಪ್ರವೃತ್ತಿಯು ಕೂಡ ನಮ್ಮ ಸ್ವಂತ ಸ್ವಭಾವದ ಪ್ರತಿಬಿಂಬವೆ ಎಂದು ಒಪ್ಪಲು ಬಹಳ ಕಲ್ಪನಾಶಕ್ತಿಯ ಅವಶ್ಯಕತೆಯಿಲ್ಲ. ನಮ್ಮಲ್ಲಿ ತಿಳಿವಿನ ಬೆಳಕಿನಿಂದ ಗುರಿಯನ್ನು ಮುಟ್ಟಬೇಕೆಂದು ಅದಾವ ಶಕ್ತಿಯು ಬೆನ್ನಟ್ಟುವದೊ ಅದೇ ತಿರ್ಯಗ್ವಸ್ತುಗಳಲ್ಲಿ ಕುರುಡನಾಗಿ, ಮೂಕನಾಗಿ ಒಂದೇ ಬಗೆಯಾಗಿ ಒಂದೇ ಒಂದು ದಿಕ್ಕಿನಲ್ಲಿ ಎಳೆಯುತ್ತಿರುತ್ತದೆ; ಆದರೂ ಇವೆರಡಕ್ಕೆ ಸಂಕಲ್ಪ ವೆಂಬ ಒಂದೇ ಹೆಸರು ಸಲ್ಲುತ್ತದೆ. ' ಹೀಗೆ ಉಪನಿಷತ್ತು ಹಾಗೂ ಶೋಪೆನಹಾವೆರ ಇವ ರೀರ್ವರಿಗೂ ಸಾಮಾನ್ಯವಾದ ಸಿದ್ಧಾಂತದ ಮೇರೆಗೆ ಹೇಳುವುದೆಂದರೆ, ಈ ವಿಶ್ವವೆಲ್ಲ ಸಂಕಲ್ಪ ಶಕ್ತಿಯಿಂದ ತುಂಬಿದೆ, ಮತ್ತು ' ಮನುಷ್ಯನು ಮಾಡುವ ಉದ್ದೇಶಪೂರ್ವಕ ಕ್ರಿಯೆಗ ಳಲ್ಲಿ ಕಂಡುಬರುವ ಶಕ್ತಿಯು ವನಸ್ಪತಿ ವರ್ಗದ ( ಬಾಹ್ಯ ಸ್ಪರ್ಶಗಳಿಗೆ ಉತ್ತರ ಕೊಡುವ ) ಚೇತನ ಕ್ರಿಯೆಯಲ್ಲಿಯೂ ಜಡಪದಾರ್ಥಗಳ ಯಾಂತ್ರಿಕ ಕ್ರಿಯೆಗಳಲ್ಲಿಯೂ ತೋರ್ಪಡುವುದು. ಆ ಉದ್ದೇಶಶಕ್ತಿಯೂ ಚೇತನವೂ ಯಾಂತ್ರಿಕ ಕ್ರಮವೂ ಒಂದೇ ಒಂದು ಸಂಕಲ್ಪಶಕ್ತಿಯ ಭಿನ್ನಾವಿರ್ಭಾವಗಳು, ಭಿನ್ನ ರೂಪಗಳು. '

**೬. ಬುದ್ಧಿಯೆ ಶ್ರೇಷ್ಠವೆಂಬುದು**— ಸಂಕಲ್ಪವೆ ಶ್ರೇಷ್ಠವೆಂದೆನ್ನುವ ಛಾಂದೋಗ್ಯ ಉಪನಿಷತ್ತಿನ ಋಷಿಯು ಮುಂದಿನ ಖಂಡದಲ್ಲಿಯೆ ಇದಕ್ಕೆ ವಿಪರೀತ ವಾಗಿ ಬುದ್ಧಿಯೇ ಹೆಚ್ಚೆಂದು ಹೇಳುತ್ತಾನೆ. ಸಂಕಲ್ಪವೆ ಹೆಚ್ಚೆಂಬುದು ಈತನ ಸಿದ್ಧಾಂತವು, ಆದರೆ ಬುದ್ಧಿಯೆ ಹೆಚ್ಚೆಂಬ ಅದಕ್ಕೆ ವಿರುದ್ಧವಾದ ಸಿಂದ್ಧಾಂತವೂ ಇವನದೇ. ಚಿತ್ತವೂ ಸಂಕಲ್ಪಕ್ಕಿಂತ ಶ್ರೇಷ್ಠವು; ಯಾಕಂದರೆ ಮನುಷ್ಯನು ವಿಚಾರಮಾಡುವನೆಂದೇ ಸಂಕಲ್ಪ ಮಾಡುವನು......ಇವೆಲ್ಲ ಚಿತ್ತದಲ್ಲಿ ನೆಲೆಸಿವೆ; ಚಿತ್ತಾತ್ಮಕವೆ ಆಗಿವೆ; ಚಿತ್ತದಲ್ಲಿಯೆ ಸ್ಥಿರ ವಾಗಿವೆ. ಬಹಳ ಕಲಿತವನಿದ್ದರೂ ಅವನು ವಿಚಾರಮಾಡುತ್ತಿದ್ದಿಲ್ಲವಾದರೆ ಜನರು ಅವನನ್ನು ಹುರುಳಿಲ್ಲದವನೆಂಬುವರು...... ತುಸು ಕಲಿತವನಿದ್ದರೂ ಅವನು ವಿಚಾರ ಮಾಡುತ್ತಿದ್ದರೆ ಜನರು ಅವನನ್ನು ಸೇವಿಸುವರು. ಚಿತ್ತವೆ ಕೇಂದ್ರವು, ಚಿತ್ತವೆ ಆತ್ಮವು, ಚಿತ್ತವೆ ಆಧಾರವು ಇವೆಲ್ಲಕ್ಕೂ. ಚಿತ್ತದ ಉಪಾಸನೆಯನ್ನು ಮಾಡು. ಚಿತ್ತವು ಬ್ರಹ್ಮ ವೆಂದು ಭಜಿಸುವವನು ಚಿತ್ತವು ಮುಟ್ಟುವವರೆಗಿನ ಪ್ರದೇಶದ ಅಧಿಪತಿಯಾಗುವನು, ಈಶ ನಾಗುವನು—ಚಿತ್ತವು ಬ್ರಹ್ಮವೆಂದು ಭಜಿಸುವವನು ( ಛಾಂ, ಅ ೭, ಖಂ ೫, ಮಂ ೧. ). ಹೀಗೆ ಹೇಳುವಲ್ಲಿ ಈ ಋಷಿಯು ಸಂಕಲ್ಪಕ್ಕಿಂತ ಚಿತ್ತವು ಹೆಚ್ಚಿನದೆಂದು ನಿಶ್ಚಿತವಾಗಿ ಸಾಧಿಸುತ್ತಿದ್ದಾನೆ. ಇಲ್ಲಿ ಸಂಕಲ್ಪವು ಹೆಚ್ಚೆಂಬುದು ಚಿತ್ತವೆ ಹೆಚ್ಚಿನದೆಂಬುದಕ್ಕೆ ಇಂಬು ಗೊಟ್ಟಿದೆ. ಮೈತ್ರಿ ಉಪನಿಷತ್ತಿನಲ್ಲಿ ಈ ಮಾತನ್ನೇ ಎತ್ತಿಹಿಡಿಯುವ ಒಂದು ವಚನವಿದೆ. ಅದರಲ್ಲಿ ಆ ಋಷಿಯು ಎಲ್ಲ ಚೇತನಾಪ್ರತಿಬಿಂಬಗಳಿಗೆ ಮನವೆ ಮೂಲಕಾರಣವೆಂದು

ಹೇಳಿದ್ದಾನೆ. ‘ ಅವನು ( ಮನುಷ್ಯನು ) ನೋಡುವದು ಮನಸ್ಸಿನಿಂದಲೆ, ಕೇಳುವದು ಮನಸ್ಸಿನಿಂದಲೆ; ಇಚ್ಛೆ, ಸಂಕಲ್ಪ, ಸಂಶಯ, ಶ್ರದ್ಧೆ, ಅಶ್ರದ್ಧೆ, ನಿಶ್ಚಯ, ಅನಿಶ್ಚಯ, ನಾಚಿಕೆ, ಬುದ್ಧಿ, ಮತ್ತು ಭೀತಿ ಇವೆಲ್ಲವೂ ಮನಸ್ಸೆ ಆಗಿವೆ ( ಬೃ, ಅ ೬, ಮಂ ೩೦. ).

**೭. ಬುದ್ಧಿಯ ಬಗೆಬಗೆಯ ಅವಸ್ಥೆಗಳ ಹೆಸರುಗಳು—** ಬುದ್ಧಿಯೆ ಶ್ರೇಷ್ಠವು ಎಂಬ ವಿಚಾರದ ರೀತಿಯು ಕೊನೆಮುಟ್ಟಿದುದು ಐತರೇಯೋಪನಿಷತ್ತಿನಲ್ಲಿ. ಪ್ರತಿಭಾಶಾಲಿಯಾದ ಆ ಉಪನಿಷತ್ಕರ್ತನು ಕಾರ್ಯಭೇದದಿಂದ ಬುದ್ಧಿಗೆ ಕೊಟ್ಟ ಬೇರೆ ಬೇರೆ ಹೆಸರುಗಳನ್ನು ವಿಂಗಡಿಸಿ ಹೇಳಿದುದು ಮಹತ್ವದ್ದಿದೆ. ಬುದ್ಧಿಯ ಬೇರೆ ಬೇರೆ ಅವಸ್ಥೆಗಳನ್ನು ವಿಂಗಡಿಸಿ ಹೇಳಿದ ಈ ಉಲ್ಲೇಖವು ಅತಿಪ್ರಾಚೀನವಾಗಿರುವುದರಿಂದ ನೆನಪಿಡತಕ್ಕುದಾಗಿದೆ. ‘ ಸಂಜ್ಞಾನ (ಸಂವೇದನೆ), ಆಜ್ಞಾನ (ತಿಳಿಯುವದು), ವಿಜ್ಞಾನ (ಕಲ್ಪಿಸುವುದು), ಪ್ರಜ್ಞಾನ (ಧಾರಣೆ), ಮೇಧಾ, ದೃಷ್ಟಿ (ಒಳಗಣ್ಣು), ಧೃತಿ (ಧೈರ್ಯ), ಮತಿ (ಅಭಿಪ್ರಾಯ ಬಡುವುದು), ಮನೀಷೆ (ಕಲ್ಪನಾಶಕ್ತಿ ), ಜುತಿ (ಭಾವನೆ), ಸ್ಮೃತಿ (ನೆನಪು), ಸಂಕಲ್ಪ, ಕ್ರತು ( ಇಚ್ಛೆ ಮತ್ತು ಕ್ರಿಯಾಪ್ರವೃತ್ತಿ ), ಅಸು (ಬಾಳುವ ಆಸೆ), ಕಾಮನೆ, ವಶ (ಆತ್ಮಸಂಯಮ), ಇವೆಲ್ಲವೂ ಬುದ್ಧಿಯ ಪರ್ಯಾಯನಾಮಗಳೇ’ (ಐ, ಅ ೩, ಮಂ ೨). ಈ ಋಷಿಯು ಸಂಜ್ಞಾನ, ಆಜ್ಞಾನ, ವಿಜ್ಞಾನ ಮತ್ತು ಪ್ರಜ್ಞಾನಗಳು ಬುದ್ಧಿಯ ಬೇರೆ ಬೇರೆ ತರಗತಿಗಳೆಂದು ವಿಂಗಡಿಸಿ ಹೇಳುವನಲ್ಲದೆ ಜುತಿ ಮತ್ತು ಸಂಕಲ್ಪಗಳಲ್ಲಿಯ ವ್ಯತ್ಯಾಸವನ್ನೂ ಒಪ್ಪಿಕೊಳ್ಳುತ್ತಾನೆ; ಅದೇ ಮೇರೆಗೆ ಸಂಕಲ್ಪ ಮತ್ತು ಕ್ರತುಗಳಲ್ಲಿ ಭೇದವನ್ನು ಹೇಳಿದ್ದಾನೆ; ಇದಲ್ಲದೆ ಸಂಕಲ್ಪದಲ್ಲಿ ಸಮ್ಯಕ್ ಕಲ್ಪನೆ—ಇಚ್ಛೆಯು ಮಾತ್ರ ಒಳಗೊಂಡಿದೆ, ಆದರೆ ಕ್ರತುವಿನಲ್ಲಿ ಕರ್ಮಪ್ರವೃತ್ತಿಯ ಸಮಾವೇಶವೂ ಆಗಿದೆ ಎಂಬುದನ್ನು ವಿವರಿಸಿದ್ದಾನೆ; ಈ ಋಷಿಯು ಇದರಂತೆ ಮನೀಷೆ ಮತ್ತು ಸ್ಮೃತಿಗಳಲ್ಲಿರುವ ಅಂತರವನ್ನೂ ಅರಿತುಕೊಂಡಿದ್ದಾನೆ. ಕೊನೆಗೆ ಮನಸಿನ ಎಲ್ಲ ಬಗೆಯ ಕಾರ್ಯಗಳಿಗೂ ಬುದ್ಧಿಯೆ ಉಗಮಸ್ಥಾನವೆನ್ನುವುದರಿಂದ ಈ ಋಷಿಯು ಪ್ರಜ್ಞಾನವಾದಿಯೆಂಬುದು ಸ್ಪಷ್ಟವಾಗುತ್ತದೆ.

**೮. ಪ್ರಜ್ಞಾನವಾದವೂ ಜಗನ್ಮಿಥ್ಯಾವಾದವೂ—** ಪ್ರಜ್ಞಾನದಲ್ಲಿ (ಬುದ್ಧಿಯಲ್ಲಿ) ಎಲ್ಲವೂ ಒಳಗೊಂಡಿದೆ ಎಂಬ ವಿಚಾರವೆ ಮುಂದೆ ಮಾಯಾವಾದಕ್ಕೆ ಇಂಬುಗೊಟ್ಟಿತು. ಐತರೇಯ ಉಪನಿಷತ್ತಿನ ಪ್ರಾಜ್ಞವಾದ ಮಹರ್ಷಿಯು ಮಾಯಾವಾದಿಯೂ ಆಗಿದ್ದನು; ಪ್ರಜ್ಞಾನವು (ಬುದ್ಧಿಯು) ಭೂತಮಾತ್ರಗಳಿಗಷ್ಟೆ ಮೂಲ ಕಾರಣವಲ್ಲ; ಪರಬ್ರಹ್ಮವೂ ಪ್ರಜ್ಞಾನವೆ, ಎಂದು ಮುಂದಿನ ಭಾಗದಲ್ಲಿಯೆ ಹೇಳಿದ್ದಾನೆ. “ಈ ಬ್ರಹ್ಮದೇವರು ಈ ಇಂದ್ರನು........ಪೃಥ್ವಿ, ಆಪ್, ತೇಜ, ವಾಯು, ಆಕಾಶಗಳೆಂಬ ಈ ಪಂಚ

ಮಹಾಭೂತಗಳು,......ಅಂಡಜ, ಜಾರುಜ ಮತ್ತು ಸ್ವೇದಜಗಳು, ಉದ್ಭಿಜಗಳು, ಕುದುರೆಗಳು, ಆಕಳು, ಜನರು, ಆನೆಗಳು ಮುಂತಾದ ಪ್ರಾಣಿಮಾತ್ರಗಳೆಲ್ಲವು, ನಡೆದಾಡುವಂತಹವುಗಳಿರಲಿ, ಹಾರಾಡುವಂತಹವುಗಳಿರಲಿ, ಇಲ್ಲವೆ ನಿಂತಲ್ಲಿಯೆ ನಿಲ್ಲುವಂತಹವುಗಳಿರಲಿ ಅವೆಲ್ಲವುಗಳು ಇದ್ದುದು, ಸಾಗಿದುದು ಪ್ರಜ್ಞಾನದ ಮೂಲಕವಾಗಿಯೆ; ಯಾಕಂದರೆ ಪ್ರಜ್ಞಾನವೆ ಇವೆಲ್ಲವುಗಳ ಕಣ್ಣು, ಮತ್ತು ಇವೆಲ್ಲವುಗಳ ಆಧಾರವು ಪ್ರಜ್ಞಾನವೆ. ಪ್ರಜ್ಞಾನವೆ ಬ್ರಹ್ಮವು. (ಐ, ಅ ೩, ಮಂ ೩). ಈ ಅಭಿಪ್ರಾಯವು ನಿರಂಕುಶ ಮಾಯಾವಾದಕ್ಕೆ ಸ್ವಲ್ಪವೂ ಕಡಿಮೆಯಿಲ್ಲ. ಈ ಲೋಕದ ಚರಾಚರ ವಸ್ತುಗಳೂ, ಪಶುಪಕ್ಷಿಗಳೂ, ಪಂಚಮಹಾಭೂತಗಳೂ, ದೇವತೆಗಳೂ ಇವೆಲ್ಲವುಗಳು ಇದ್ದುದು ಪ್ರಜ್ಞಾನದ ಮೂಲಕವಾಗಿಯೆ, ಎಂದು ಐತರೇಯ ಉಪನಿಷತ್ತಿನ ಋಷಿಯು ಹೇಳುತ್ತಾನೆ. ಇವನ ಈ ಅಭಿಪ್ರಾಯವು ಬಾರ್ಕಲೆಯೆಂಬವನ ವಿಚಾರದಂತೆಯೆ ಇದೆ. ‘ ಸ್ವರ್ಲೋಕ, ಭೂಲೋಕಗಳಿಗೆಲ್ಲಕ್ಕೂ ಚಿತ್ತವೆ ಕಾರಣವು, ಚಿತ್ತದಲ್ಲಿಯೆ ಅವೆಲ್ಲವುಗಳುಂಟು. ಚಿತ್ತದ ಹೊರಗೆ ಅವಕ್ಕೆ ಅಸ್ತಿತ್ವವಿಲ್ಲ. ಅವುಗಳ ಇರವು ನನ್ನ ಚಿತ್ತಕ್ಕೆ ಅಥವಾ ಯಾವದೊಂದು ಬೇರೆ ಚಿತ್ತಕ್ಕೆ ಗೊತ್ತಾಗದೆ ಹೋದರೆ ಅವು ಅಸ್ತಿತ್ವದಲ್ಲಿ ಇಲ್ಲವೆನ್ನಬಹುದು ಅಥವಾ ಪರಮಾತ್ಮನ ಅನಂತ ಚೈತನ್ಯಕ್ಕೆ ಅವುಗಳ ಗೊತ್ತು ಇದೆ ಎನ್ನಬಹುದು. ಆದರೆ ಚೈತನ್ಯವನ್ನು ಬಿಟ್ಟು ಸ್ವತಂತ್ರವಾದ ಅಸ್ತಿತ್ವವು ಈ ವಸ್ತುಗಳಿಗೆ ಇದೆ ಎಂದು ಅನ್ನುವದು ಶುದ್ಧ ಅಸಮಂಜಸತನವು, ’ ಎಂದು ಅವನ ಹೇಳಿಕೆ. ಮೈತ್ರಿ ಉಪನಿಷತ್ತಿನಲ್ಲಿಯೂ ಇದೇ ಅರ್ಥದ ಒಂದು ಉಲ್ಲೇಖವಿದೆ ; ಅಂತರಾತ್ಮವು ಅಂದರೆ ಪ್ರಾಣವು ಬಹಿರಾತ್ಮವನ್ನು ( ಹೊರಗಣ ವಸ್ತುವನ್ನು ) ಅಂದರೆ ಸೂರ್ಯನನ್ನು ಸಂರಕ್ಷಿಸುತ್ತದೆ, ಅಂತರಾತ್ಮವೇ ಈ ಬಾಹ್ಯಸೃಷ್ಟಿಯ ಕಾರಣವು, ಎಂಬೀ ಜ್ಞಾನವು ಪಾಪರಹಿತರಾದ ಅಂತರ್ದೃಷ್ಟಿಯ ಜ್ಞಾನಿಗಳಿಗೆ ಮಾತ್ರ ಆಗುತ್ತದೆಂದು ಅಲ್ಲಿ ಹೇಳಿದೆ ( ಮೈ, ಅ ೬, ಮಂ ೧, ).

## ೨. ಅಸಾಧಾರಣ ಮಾನಸಶಾಸ್ತ್ರವು

**೯. ಛಾಂದೋಗ್ಯದಲ್ಲಿಯ ಮರಣವಿಷಯಕ ಪ್ರಮೇಯವು**—ಪ್ರಸ್ತುತ ಉಪನಿಷತ್ತುಗಳಲ್ಲಿ ಪ್ರತಿಪಾದಿಸಿದ ಅಸಾಧಾರಣ ಮಾನಸಶಾಸ್ತ್ರದ ವಿಚಾರವನ್ನು ಮಾಡುವ. ಮೆಯ್ಯು ಮಣ್ಣುಗೂಡಿದ ಬಳಿಕ ಆತ್ಮನ ಅವಸ್ಥೆಯು ಏನಾಗುವದು ಎಂಬ ಪ್ರಶ್ನೆಯು ಉಪನಿಷತ್ತುಗಳಲ್ಲಿ ಕಾಲಕಾಲಕ್ಕೆ ಮತ್ತೆ ಮತ್ತೆ ಬಂದಿದೆ. ಇಹಲೋಕದ ಜೀವನ ವಿಚಾರದಿಂದಲೆ ಋಷಿಗಳು ಸಂತುಷ್ಟರಾಗದೆ ಇರುವುದರಿಂದ ಅದರ ಮರಣಾನಂತರ ಸ್ಥಿತಿಗೆ ಅತ್ಯಂತ ಮಹತ್ವವು ಪ್ರಾಪ್ತವಾಗಿದೆ- ಜೀವನದ ಮೂಲವು ಎಲ್ಲಿರಬಹುದು?

ಎಂಬ ಪ್ರಶ್ನೆಯು ಆಗಾಗ್ಗೆ ಕೇಳಲ್ಪಡುತ್ತದೆ. ‘ಗಿಡವನ್ನು ತುಂಡರಿಸಿದರೆ ಮೊದಲಿನ ಬೇರುಗಳಿಂದ ಹೊಚ್ಚ ಹೊಸತು ಆಗಿ ಅದು ಚಿಗುರುವದು; ಅದರಂತೆ ಮೃತ್ಯುವಿನಿಂದ ಕಡಿಯಲ್ಪಟ್ಟ ಜೀವನವೃಕ್ಷವು ಮತ್ತೆ ಯಾವ ಬೇರಿನಿಂದ ಕೊನರುವುದು? (ಬೃ, ಅ ೩, ಬ್ರಾ ೯, ಮಂ ೨೮). ಋಷಿಗಳು ಮರಣಾನಂತರ ವಿಚಾರವು ಬಹಳ ಶ್ರೇಷ್ಠ ಜ್ಞಾನವೆಂದು ತಿಳಿಯುವರು. ಮರಣಾನಂತರ ಸ್ಥಿತಿಯ ವಿಚಾರವನ್ನು ಅರಿಯದವನು ಜ್ಞಾನಿಯೆಂದೆನಿಸಿಕೊಳ್ಳಲಾರನು. ಆರುಣಿಯ ಮಗನಾದ ಶ್ವೇತಕೇತುವಿಗೆ ಜೈವಲಿಯು ಕೆಳಗಿನಂತೆ ಅಂದನು ಮತ್ತು ಶ್ವೇತಕೇತುವು ತಾನು ಜ್ಞಾನಿಯೆಂದು ಎಣಿಸುತ್ತಿದ್ದರೂ ಅವನು ಅಜ್ಞಾನಿಯೆಂಬ ಮನವರಿಕೆಯನ್ನು ಜೈವಲಿಯು ಮಾಡಿಕೊಟ್ಟನು:—

**ಜೈವಲಿ**— ಮಗು, ತಂದೆಯ ಹತ್ತರ ಅಧ್ಯಯನವಾಗಿದೆಯೆ ?

**ಶ್ವೇತಕೇತು**— ಅಹುದು ಸ್ವಾಮಿ.

**ಜೈ**— ಈ ಹುಟ್ಟಿದವುಗಳೆಲ್ಲ ಹೋಗುವದೆತ್ತ ಎಂಬುದನು ನೀ ಬಲ್ಲೆಯಾ ?

**ಶ್ವೇ**— ಇಲ್ಲ ಸ್ವಾಮಿ.

**ಜೈ**— ಮರಳಿ ಹುಟ್ಟುವದೆಂತು ಬಲ್ಲೆಯಾ ?

**ಶ್ವೇ**— ಇಲ್ಲ ಭಗವನ್.

**ಜೈ**— ದೇವಯಾನ ಪಿತೃಯಾನಗಳು ಬಿಟ್ಟು ಬೇರೆಯಾಗುವ ಸ್ಥಳವು ಗೊತ್ತುಂಟೆ?

**ಶ್ವೇ**— ಇಲ್ಲ ಭಗವನ್.

**ಜೈ**— ಆ ಪರಲೋಕವು ಯಾಕೆ ತುಂಬಿರುವುದಿಲ್ಲವೆಂಬುದನ್ನು ಅರಿತಿರುವೆಯಾ ?

**ಶ್ವೇ**— ಇಲ್ಲ. ಸ್ವಾಮಿ.

**ಜೈ**— ಹಾಗಾದರೆ ಕಲಿತವನೆಂದು ಹೇಳುತ್ತಿಯೇತಕ್ಕೆ ? ಇದೂ ತಿಳಿಯದವನಿಗೆ ಕಲಿತವನೆನ್ನುವುದೆಂತು ? ( ಛಾಂ, ಅ ೫, ಖಂ ೩, ಮಂ ೧–೪ ).

**೧೦. ಕಠೋಪನಿಷತ್ತಿನಲ್ಲಿಯ ಮರಣವಿಚಾರವು**— ಕಠೋಪನಿಷತ್ತಿನಲ್ಲಿ ಮೃತ್ಯುದೇವತೆಯಾದ ಯಮ ಹಾಗೂ ಋಷಿಕುಮಾರ ನಚಿಕೇತ ಇವರಲ್ಲಿ ನಡೆದ ಸುಪ್ರಸಿದ್ಧ ಸಂಭಾಷಣವಿದೆ; ಅದರಲ್ಲಿ ಮರಣಾನಂತರ ಜ್ಞಾನವೇ ಎಲ್ಲಕ್ಕೂ ಹೆಚ್ಚಿನ ಹಿತಕಾರಿಯೆಂದು ಹೇಳಲ್ಪಟ್ಟದೆ. ಯಮನು ಕೊಟ್ಟ ಮೂರು ವರಗಳಲ್ಲಿ ನಚಿಕೇತನು ಮೊದಲು ಎರಡು ಬೇಡಿಕೊಂಡನು. ಬಳಿಕ ಮೂರನೆಯ ವರವೆಂದು ಮನುಷ್ಯನ ಮರಣಾನಂತರ ಜೀವನ ಸ್ಥಿತಿಯನ್ನೇ ಕುರಿತು ತಿಳಿಸಿ ಹೇಳಲಿಕ್ಕೆ ಬೇಕೆಂದು ಹಟಹಿಡಿದನು.

**ನಚಿಕೇತನು**— ಸತ್ತವನ ವಿಚಾರದಲ್ಲಿ ಎನಗೊಂದು ಸಂಶಯವುಂಟು; ಸತ್ತವನ ಜೀವನು ಉಳಿಯುವನೆಂದು ಕೆಲರು. ಅಳಿಯುವನೆಂದು ಅನ್ಯರು. ಆದರೆ

ನಿನ್ನಿಂದ ಇದನ್ನು ಸರಿಯಾಗಿ ತಿಳಿಯಲಪೇಕ್ಷಿಸುತ್ತೇನೆ. ಇದೆ ನನ್ನ ಮೂರನೆಯ ಬೇಡಿಕೆಯು.

**ಯಮನು—** ಹಿಂದಕ್ಕೆ ದೇವತೆಗಳು ಈ ವಿಷಯದಲ್ಲಿ ಸಂಶಯವುಳ್ಳವರಾಗಿದ್ದರು. ಅಲ್ಲದೆ ಈ ವಿಷಯವು ಸೂಕ್ಷ್ಮವಾಗಿದೆ ; ತಿಳಿಯಲಿಕ್ಕೆ ಸುಲಭವಲ್ಲ. ಎಲಾ ನಚಿಕೇತನೆ, ಇನ್ನೊಂದು ವರವನ್ನು ಬೇಡು ; ನನಗೆ ಒತ್ತಾಯಮಾಡಬೇಡ. ಇದೊಂದು ಮಾತನ್ನು ಕೇಳಬೇಡ ಬಿಟ್ಟುಬಿಡು.

**ನ—** ದೇವತೆಗಳಿಗೆ ಸಹ ಈ ಮಾತಿನಲ್ಲಿ ಸಂಶಯವಿತ್ತೆಂದೂ ಇದು ತಿಳಿದುಕೊಳ್ಳಲು ಬಲು ಗಡಚಾದುದೆಂದೂ ನೀನೆ ಹೇಳುವುದು ಗಡ ! ಹೀಗೆಂದ ಬಳಿಕ ಇದನ್ನು ಹೇಳುವುದಕ್ಕೆ ನಿನ್ನ ಹೊರ್ತು ಬೇರೆ ಗುರುವನ್ನು ನಾನು ಕಾಣೆ. ಅಲ್ಲದೆ ಇದಕ್ಕೆ ಸರಿದೊರೆಯಾದ ಇನ್ನಾವ ವರವನ್ನೂ ನಾನರಿಯೆ.

**ಯ—** ಮರ್ತ್ಯಲೋಕದಲ್ಲಿ ಯಾರಿಗೂ ಸಿಗಲು ಅಸಾಧ್ಯವಾಗಿರುವಂತಹ ನಿನಗೆ ಬೇಕಾದ ವರಗಳನ್ನು ಬೇಡು ; ಸಂಗೀತಸಾಧನಗಳೊಂದಿಗೆ ರಥದಲ್ಲಿ ಕುಳಿತ ಈ ದಿವ್ಯ ಸುಂದರಿಯರು ಇರುವರು ; ಮನುಷ್ಯರು ಇವರನ್ನು ಎಂದೂ ಪಡೆಯಲಾರರು ; ಇಂತಹರನ್ನು ನಾನು ನಿನ್ನ ಸೇವೆಗೆ ಕೊಡುತ್ತೇನೆ ; ಇವರ ಸೇವೆಯನ್ನು ಹೊಂದು, ಆದರೆ ಮರಣ ಸಂಬಂಧದಿಂದ ಮಾತ್ರ ಪ್ರಶ್ನೆಕೇಳಬೇಡ.

**ನ—** ಎಲೈ ಮೃತ್ಯುದೇವತೆಯಾದ ಯಮರಾಜನೆ, ಇವೆಲ್ಲವುಗಳು ಕ್ಷಣಿಕವಾದವುಗಳು. ಇವೆಲ್ಲ ಭೋಗಗಳು ಇಂದ್ರಿಯಗಳ ತೇಜಸ್ಸನ್ನು ಕಳೆಯುತ್ತವೆ ; ಅಲ್ಲದೆ ಎಲ್ಲ ಭೋಗಗಳನ್ನು ಸಂಪೂರ್ಣವಾಗಿ ಭೋಗಿಸಲಿಕ್ಕೆ ಈ ಎಲ್ಲ ಆಯುಷ್ಯವೂ ಸಾಲದೆ ಹೋಗುವದು ; ಆದಕಾರಣ ಈ ಕುದುರೆಗಳು, ಈ ನೃತ್ಯಗೀತ ಇವೆಲ್ಲವುಗಳೂ ನಿನ್ನ ಹತ್ತರವೆ ಇರಲಿ. ಅಂದಚಂದ, ಕೂಟಕೂರ್ಮೆಗಳ ಹಿಗ್ಗನ್ನು ನೆನೆದು ಅವು ಕ್ಷಣಿಕವೆಂದು ಮನಗಂಡ ಬಳಿಕ ಯಾವ ಮರ್ತ್ಯನು ಬಲುದಿನ ಬಾಳಲು ಬಯಸುವನು ? ಆದೇನೂ ಇಲ್ಲ. ಎಲ್ಲರಿಗೂ ಸಂಶಯಾಸ್ಪದವಾಗಿರುವ ಮತ್ತು ವಿಚಾರಾರ್ಹವಾಗಿರುವ ಮರಣಾನಂತರ ಸ್ಥಿತಿಯಮಹತ್ವದ ವಿಚಾರವನ್ನೆ ನನಗೆ ತಿಳಿಹೇಳು. ಈ ಗುಟ್ಟಿನ ಹೊರ್ತು ಬೇರೆ ಯಾವ ವರವನ್ನೂ ನಚಿಕೇತನು ಕೇಳುವದಿಲ್ಲ ( ಕಠ, ಅ ೧, ವ ೧, ಮಂ ೨೦–೨೯ ).

**೧೧. ನಿದ್ರೆಯ ಪ್ರಮೇಯವೂ, ದಣಿವಿನ ಹಾಗೂ ಪುರೀತತ್ತಿನ ಸಿದ್ಧಾಂತಗಳು—** ಸಾವಿನ ಸ್ವರೂಪದ ವಿಚಾರವಾದನಂತರ ಅದರ ಸೌಮ್ಯ ಸ್ವರೂಪವಾದ ನಿದ್ರೆಯವಿಚಾರವು ಉಂಟಾಗುತ್ತದೆ. ಈ ಸಂಬಂಧದಿಂದ ಆ ಪ್ರಾಚೀನ ಋಷಿಗಳು

ಹೇಳಿದ ಬಹು ಮನೋವೇಧಕ ಸಿದ್ಧಾಂತಗಳುಂಟು. ಆಧುನಿಕ ಶರೀರಶಾಸ್ತ್ರಜ್ಞರು ದಣಿವೆ ನಿದ್ರೆಗೆ ಕಾರಣವೆನ್ನುತ್ತಾರೆ ; ಉಪನಿಷತ್ತಿನಲ್ಲಿಯೂ ಸರಿಯಾಗಿ ಇದೇ ಕಾರಣವನ್ನೆ ಹೇಳಿದುದು ಕಂಡುಬರುತ್ತದೆ. 'ಗಿಡಗವಾಗಲಿ ಯಾವದೊಂದು ಹಕ್ಕಿಯಾಗಲಿ ಮುಗಿಲಲ್ಲಿ ಹಾರಾಡಿ ದಣಿದು ಪಕ್ಕಗಳನ್ನು ಮುಚ್ಚಿಕೊಂಡು ಗೂಡಿಗೆ ಬರುತ್ತದೆ ; ಅದೇ ಮೇರೆಗೆ ಈ ಮನುಷ್ಯನಾವರೂ ನಿದ್ದೆಹೋಗಲು ತವಕಬಡುತ್ತಾನೆ ; ಒಮ್ಮೆ ನಿದ್ದೆಹೋದಮೇಲೆ ಅವನು ಏನನ್ನೂ ಬಯಸುವುದಿಲ್ಲ ; ಯಾವ ಕನಸನ್ನೂ ಕಾಣುವದಿಲ್ಲ' (ಬೃ, ಅ ೪, ಬ್ರಾ ೩, ಮಂ ೧೯). ನಿದ್ರೆಯ ಸಮಯದಲ್ಲಿ ಶರೀರಸ್ಥಿತಿಯ ವಿಷಯಕ ಈ ಸಿದ್ಧಾಂತವನ್ನುಳಿದು ಇನ್ನೂ ಹಲವು ಬಗೆಯ ವಿಲಕ್ಷಣವಾದ ಸಿದ್ಧಾಂತಗಳನ್ನು ಉಪನಿಷತ್ಕಾರರು ಹೇಳಿರುವರು. ಎಲ್ಲ ಚೇತನೆಗಳ ಶ್ರೇಷ್ಠ ಮೂಲಸ್ಥಾನವಾದ ಮನಸಿನಲ್ಲಿ ಇಂದ್ರಿಯಗಳೆಲ್ಲವೂ ವಿಲೀನವಾಗುವುದರಿಂದ ನಿದ್ರೆಬರುತ್ತದೆಂದು ಪ್ರಶ್ನೋಪನಿಷತ್ತು ಹೇಳುತ್ತದೆ. 'ಎಲೈ ಗಾರ್ಗ್ಯನೆ ! ಸೂರ್ಯನು ಮುಳುಗಲು ಎಲ್ಲ ಕಿರಣಗಳೂ ಆತನ ತೇಜೋಮಂಡಲದಲ್ಲಿ ಒಂದುಗೂಡುತ್ತವೆ ಮತ್ತು ಮೂಡಲು ಆ ಕಿರಣಗಳೆಲ್ಲ ಮತ್ತೆ ಹೊರಬೀಳುತ್ತವೆ ; ಅದರಂತೆ ಎಲ್ಲ ಇಂದ್ರಿಯವೃತ್ತಿಗಳಾದರೂ ಅವೆಲ್ಲವುಗಳಿಗೂ ಮೂಲಾಧಾರವಾದ ಮನಸಿನಲ್ಲಿ ಒಂದಾಗುತ್ತವೆ. ಆದುದರಿಂದಲೆ ಗಾಢನಿದ್ರೆಯಲ್ಲಿ ಮನುಷ್ಯನು ಕೇಳುವುದಿಲ್ಲ ; ನೋಡುವುದಿಲ್ಲ ; ಮೂಸುವುದಿಲ್ಲ ; ಅವನು ಮಲಗಿರುವನೆಂಬರು' (ಪ್ರ ೪, ಮಂ ೨). ಇದೇ ಋಷಿಯು ಸ್ವಲ್ಪ ಮುಂದಿನ ಮಂತ್ರದಲ್ಲಿಯೆ, ಮನಸು ತೇಜಸ್ಸಿನಲ್ಲಿ ವಿಲೀನವಾಗುವುದೆ ನಿದ್ದೆಗೆ ಕಾರಣವೆಂದು ಅಭಿಪ್ರಾಯಬಟ್ಟಿದ್ದಾನೆ. 'ತೇಜಸ್ಸಿನಿಂದ ಆವರಿಸಲ್ಪಟ್ಟಾಗ ಈ ದೇವನು (ಆತ್ಮನು) ಕನಸು ಕಾಣುವುದಿಲ್ಲ. ಆಗ ಶರೀರದಲ್ಲಿ ಸುಖವುಂಟಾಗುತ್ತದೆ (ಪ್ರ ೪, ಮಂ ೬). ನಿದ್ದೆಯನ್ನು ಕುರಿತು ಛಾಂದೋಗ್ಯದಲ್ಲಿ ಇನ್ನೊಂದು ಬಗೆಯ ಸಿದ್ಧಾಂತವಿದೆ. ಆತ್ಮವು ನಾಡಿಗಳಲ್ಲಿ ಸೇರಿಕೊಂಬುದೆ ನಿದ್ದೆಗೆ ನಿಮಿತ್ತವೆಂದು ಅದರ ಅಭಿಪ್ರಾಯವು. 'ಮನುಷ್ಯನು ಗಾಢನಿದ್ದೆಯಲ್ಲಿದ್ದಾಗ ಸುಖಿಯಾಗಿ ಕನಸು ಕಾಣುವುದಿಲ್ಲ; ಆಗ ಅವನ ಆತ್ಮವು ನಾಡಿಗಳಲ್ಲಿ ಸೇರಿರುತ್ತದೆ' (ಛಾಂ, ಅ ೮, ಖಂ ೬, ಮಂ ೩). ಬೃಹದಾರಣ್ಯಕದಲ್ಲಿ ಇದೇ ಕಲ್ಪನೆಯು ವಿಕಾಸಗೊಂಡಿದೆ ; ಆಧುನಿಕಶಾಸ್ತ್ರಗಳ ದೃಷ್ಟಿಯಿಂದ ಅದರಲ್ಲಿರುವ ಶರೀರಶಾಸ್ತ್ರದ ವಿವರಣವು ನಿರಾಧಾರ ಕಲ್ಪನೆಯೆಂದೆನಿಸುವದು ; ಆದರೂ ಆ ಪುರಾತನರು ತಮ್ಮ ವಿಚಾರಗಳಿಗನುಸರಿಸಿ ಅಲ್ಲಿ ನಿದ್ದೆಯ ಕಾರಣವನ್ನು ವಿವೇಚಿಸಿದ್ದಾರೆ. ಹೃದಯದಿಂದ ಪುರೀತತ್ ಎಂಬಲ್ಲಿಗೆ ೭೨೦೦೦ ನಾಡಿಗಳು ಹೋಗಿರುವವೆಂದು ಕಲ್ಪಿಸಿದ್ದಾರೆ. ಈ ಪುರೀತತ್ ಶಬ್ದಕ್ಕೆ ಡಾಯಸನ್ನನು 'ಹೃದಯದ ಸುತ್ತಲಿನ ಪ್ರದೇಶ' ವೆಂದು ಅರ್ಥಮಾಡಿದ್ದಾನೆ ; ಮ್ಯಾಕ್ಸಮುಲ್ಲರನು ಟೀಕಾಕಾರರನ್ನು ಅನುಸರಿಸಿ, 'ಸುತ್ತಲಿನ

ಶರೀರ ' ವೆಂದು ತಪ್ಪು ಭಾಷಾಂತರಿಸಿದ್ದಾನೆ. ಪುರೀತತ್ ಈ ಅವಯವವಿಶೇಷದ ಕಾರ್ಯವನ್ನು ವಿಚಾರಿಸಿವರೆ ಇವಃ ಡೆಕಾರ್ಟನು ಹೇಳುವ ಆತ್ಮನ ಸ್ಥಾನವಾದ ಮಿದುಳಿನೊಳಗಿನ ಪಿನೀಯಲ್‌ಗ್ಲ್ಯಾಂಡ ( Pineal gland ) ಎಂಬ ಗ್ರಂಥಿಗೆ ಸರಿಹೊಂದುತ್ತದೆ ; ಆದರೆ ಶರೀರವಲ್ಲಿ ಅದು ಇರುವ ಸ್ಥಳವನ್ನು ಹೇಳಿದುದು ಮಾತ್ರ ಅವಕ್ಕೆ ಸರಿಹೋಗುವದಿಲ್ಲ. ಪುರೀತತ್ ಇದು ಹೃದಯದ ಸುತ್ತಲಿರುವ ತಿಳುದೊಗಲಿನ ಒಂದು ಬಗೆಯ ಚೀಲವೆಂದೇ ಅರ್ಥಮಾಡಬೇಕಾಗುತ್ತದೆ. ಗಾಢನಿದ್ರೆಯಲ್ಲಿ ಜೀವಾತ್ಮನು ನಾಡಿಗಳ ಮುಖಾಂತರ ಪುರೀತತ್‌ದಲ್ಲಿ ಪ್ರವೇಶಿಸುವನು ; ಹೀಗಾದಾಗ ನಿದ್ದೆಬರುವುದು, ಎಂದು ಆ ಪುರಾತನರು ಕಲ್ಪಿಸಿದ್ದರು. ನೈಯ್ಯಾಯಿಕರು ಇದೇ ಕಲ್ಪನೆಯನ್ನು ಮುಂದೆ ವಿಸ್ತರಿಸಿದರು. ಜೀವಾತ್ಮನು ಪುರೀತತ್‌ದ ಒಳಗಿದ್ದಾಗ ನಿದ್ದೆ ಬರುವುದೆಂದೂ, ಪುರೀತತ್‌ದ ಒಳಸೇರುವುದಕ್ಕಾಗಿ ಅದರ ಹೊಸ್ತಿಲಮೇಲೆ ಇದ್ದಾಗ ಕನಸುಬೀಳುವವೆಂದೂ ಹೃದಯದಿಂದ ಪುರೀತತ್‌ದ ಒರೆಗೆ ಅಲೆದಾಡುತ್ತಿದ್ದಾಗ ಎಚ್ಚತ್ತಿರುವನೆಂದೂ ಅವರ ಭಾವನೆಯು. ನ್ಯಾಯಶಾಸ್ತ್ರದಲ್ಲಿರುವ ಈ ಸಿದ್ಧಾಂತದ ತಾಯಿಬೇರುಗಳು ನಾವೀಗ ಚರ್ಚಿಸುತ್ತಿರುವ ಬೃಹದಾರಣ್ಯಕದಲ್ಲಿ ದೊರೆಯುತ್ತವೆ. ' ಮನುಷ್ಯನು ಗಾಢನಿದ್ರೆಯಲ್ಲಿರುವಾಗ ಅವನಿಗೆ ಯಾತರ ಅರಿವೂ ಇರುವದಿಲ್ಲ. ಆಗ ಜೀವಾತ್ಮನಃ ಹೃದಯದಿಂದ ಪುರೀತತ್ತಿನ ವರೆಗಿರುವ ಹಿತಾ ಎಂಬ ಹೆಸರಿನ ೭೨೦೦೦ ನಾಡಿಗಳಲ್ಲಿ ಒಳಸೇರಿ, ಆನಂದದ ಶಿಖರಕ್ಕೆ ಮುಟ್ಟಿದ ಕುಮಾರನಂತೆ, ಅಥವಾ ಮಹಾರಾಜನಂತೆ ಇಲ್ಲವೆ ಮಹಾಬ್ರಾಹ್ಮಣನಂತೆ ಮಲಗುತ್ತಾನೆ ( ಬೃ, ಅ ೨, ಬ್ರಾ ೧ ಮಂ ೧೯ ).

**೧೨. ನಿದ್ರೆಯ ಸಂಬಂಧದಿಂದ ಪ್ರಾಣ ಮತ್ತು ಬ್ರಹ್ಮನ ಪ್ರಮೇಯವು—** ನಿದ್ದೆಯ ವಿಚಾರದಲ್ಲಿ ಛಾಂದೋಗ್ಯವು ಇನ್ನೊಂದು ಬಗೆಯಿಂದ ಹೇಳುತ್ತದೆ. ಮನಸ್ಸು ಪ್ರಾಣದಲ್ಲಿ ವಿಲೀನವಾದರೆ ನಿದ್ದೆ ಬರುವುದೆಂದು ಅದರ ಅಭಿಪ್ರಾಯವು. 'ದಾರದಿಂದ ಕಟ್ಟಿದ ಹಕ್ಕಿಯು ದಿಕ್ಕುದಿಕ್ಕಿಗೂ ಹಾರಾಡಿ ಇರಲು ಎಲ್ಲಿಯೂ ನೆಲೆಗಾಣದೆ ಕಟ್ಟಿದೆಡೆಯಲ್ಲಿಯೆ ಬಂದೊದಗುವಂತೆ ಮನಸ್ಸು ಸಹ ಅತ್ತಿತ್ತ ಅಲೆದಾಡಿ ನೆಲೆಗಾಣದೆ ಪ್ರಾಣವನ್ನೇ ಆಶ್ರಯಿಸುತ್ತದೆ. ಯಾಕಂದರೆ ಮನಸ್ಸು ಪ್ರಾಣದಿಂದಲೆ ಕಟ್ಟಲ್ಪಟ್ಟಿದೆ' ( ಛಾಂ, ಅ ೬, ಖ ೮, ೧, ೨ ). ಬೃಹದಾರಣ್ಯಕವು ನಿದ್ದೆಯ ಕಾರಣವನ್ನು ಮತ್ತೊಂದು ಬಗೆಯಿಂದ ಹೇಳುತ್ತದೆ; ಹೃದಯದ ಅವಕಾಶದೊಳಗೆ ಜೀವಾತ್ಮನು ಪ್ರವೇಶಿದರೆ ನಿದ್ರೆ ಬರುವುದೆಂದು ಅದರ ವಿಚಾರವು. ಗಾರ್ಗ್ಯನಿಗೆ ಈ ಮಾತನ್ನು ಸಿದ್ಧಮಾಡಿ ತೋರಿಸುವದಕ್ಕಾಗಿ ಅಜಾತಶತ್ರುವು ಒಂದು ಪ್ರಯೋಗವನ್ನು ಮಾಡಿದನು. ಅವನು ಗಾರ್ಗ್ಯನ ಕೈಹಿಡಿದು ಒಬ್ಬ ಮನುಷ್ಯನು ಮಲಗಿದೆಡೆಯಲ್ಲಿ ಬಂದನು. ' **ಎಲೌ ಹಿರಿಯನೆ, ಶ್ವೇತ**

ವಸ್ತ್ರಧಾರಿಯೆ, ಸೋಮನೆ, ಎಲ್ಲರ ಅರಸನೆ,' ಎಂದು ಸಂಬೋಧಿಸಿ ಹೆಸರುಗೊಂಡು ಬಗೆಬಗೆಯಿಂದ ಕರೆದರೂ ನಿದ್ದೆಯಲ್ಲಿದ್ದವನು ಏಳಲಿಲ್ಲ. ಆಗ ಅವನನ್ನು ಕೈಯಿಂದ ಹತ್ತಿಕ್ಕಲು ( ಕೋಲಿನಿಂದ ಬಡಿಯಲು-ಕೌಷೀತಕಿ ಉಪನಿಷತ್ತು ) ಎಚ್ಚೆತ್ತನು. ಆ ಮೇಲೆ ಅಜಾತಶತ್ರುವು ಅಂದದ್ದು, ' ನಿದ್ದೆಯಲ್ಲಿದ್ದಾಗ ಈ ವಿಜ್ಞಾನಮಯ ಪುರುಷನು ಎಲ್ಲಿದ್ದನು, ಮತ್ತು ಈಗ ಎಲ್ಲಿಂದ ಬಂದನು ?' ಗಾರ್ಗ್ಯನಿಗೆ ಉತ್ತರವು ಗೊತ್ತಿದ್ದಿಲ್ಲ. ಆಗ ಅಜಾತಶತ್ರುವು ನುಡಿದುದೇನಂದರೆ, ' ಈ ಮನುಷ್ಯನು ನಿದ್ದೆಯಲ್ಲಿದ್ದಾಗ ವಿಜ್ಞಾನಮಯ ಪುರುಷನು ( ಅಂದರೆ ಆತ್ಮನು ) ಹೃದಯದ ಒಳಭಾಗದ ಅವಕಾಶದಲ್ಲಿ ಮಲಗಿದ್ದನು ( ಬೃ, ಅ ೨, ಬ್ರಾ ೧೫-೧೭ ). ನಿದ್ರೆಯ ಸಂಬಂಧದ ಕೊನೆಯ ಕಾರಣಮೀಮಾಂಸೆಯು ಬಹಳೇ ವಿಲಕ್ಷಣವಾಗಿದೆ; ಗಾಢನಿದ್ರೆಯಲ್ಲಿ ಜೀವಪರಮಾತ್ಮರ ಐಕ್ಯವಾಗಿರುತ್ತದೆಂದು ಹೇಳಿದೆ ! ಸಕಾರಣವಾಗಿ ಏನೂ ಹೇಳಲಿಕ್ಕೆ ಆಗದಾಗ ಬ್ರಹ್ಮನಿಗೆ ತೆಕ್ಕೆಬೀಳುವುದುಂಟು; ಮೇಲಿನ ಕಾರಣಮೀಮಾಂಸೆಯು ಇದೇ ಬಗೆಯದಿರುತ್ತದೆ. ' ಮನವೆಂಬ ಯಾಜಕನು ಯಜಮಾನನಾದ ಬ್ರಹ್ಮನೆಡೆಗೆ ದಿನಾಲು ಹೋಗುತ್ತಾನೆ,' ಎಂದು ಪ್ರಶ್ನೋಪನಿಷತ್ತಿನಲ್ಲಿ ( ಪ್ರ ೪, ಮಂ ೪ ) ಮತ್ತೆ ಒಂದೆಡೆಗೆ ಹೇಳಿದೆ. ಇದೇ ಮಾತನ್ನೆ ಛಾಂದೋಗ್ಯವು ಎತ್ತಿಹಿಡಿಯುತ್ತದೆ. ಅದರಲ್ಲಿ ಹೇಳಿರುವುದೇನಂದರೆ, ' ನಿದ್ದೆ ಮಾಡುತ್ತಾನೆ ಎನ್ನುವುದಕ್ಕೆ ' ಸ್ವಪಿತಿ ' ಎಂಬುವರು. ಯಾಕಂದರೆ ಮಗುವೆ, ಆಗ ಸತ್ ಅಂದರೆ ತನ್ನನ್ನು ಹೊಂದುತ್ತಾನೆ, ತನ್ನಗೂಡ ತಾನು ಒಂದಾಗುತ್ತಾನೆ' ( ಛಾಂ, ಅ ೬, ಖಂ ೮, ಮಂ ೧ ). ಗಾಢನಿದ್ರೆಯಲ್ಲಿ ಜೀವಾತ್ಮನು ಪರಮಾತ್ಮನೊಡನೆ ಒಂದುಗೂಡುವನು ಎಂಬುದೆ ಇದರ ಅಭಿಪ್ರಾಯವು; ಆದುದದರಿಂದಲೆ ಗಾಢನಿದ್ರೆಯನ್ನು ಬ್ರಹ್ಮಾತ್ಮೈಕ್ಯದ ಆನಂದಕ್ಕೆ ಹೋಲಿಸುವದುಂಟು. ನ್ಯಾಯನಿರ್ಣಯನು ಹೇಳಬಹುದಾದಂತೆ ಇವೆರಡೂ ಅವಸ್ಥೆಗಳಲ್ಲಿ 'ದೇವ' ಹಾಗೂ ' ದೆವ್ವ ' ಗಳಲ್ಲಿರುವಷ್ಟು ಸಾಮ್ಯವು ಅಥವಾ ವೈಷಮ್ಯವುಂಟು; ಅಕ್ಷರಸಾದೃಶ್ಯವಿದ್ದರೂ ಎಷ್ಟೊಂದು ಅರ್ಥವ್ಯತ್ಯಾಸವು ! ಈ ನಿದ್ದೆ ಮತ್ತು ಬ್ರಹ್ಮೈಕ್ಯ ಇವುಗಳಲ್ಲಿಯ ಭೇದವು ಮುಂದೆ ಉಪನಿಷತ್ಕಾರರಿಗೂ ಸಮ್ಮತವಾದಂತೆ ತೋರುತ್ತದೆ. ನಿದ್ದೆಯಲ್ಲಿ ಜೀವಪರಮಾತ್ಮರ ಐಕ್ಯವಾದರೂ ಅದರ ಅರಿವು ಜೀವಕ್ಕಿರುವದಿಲ್ಲವೆಂದು ಅಲ್ಲಿಯೆ ಒಂದೆಡೆಯಲ್ಲಿ ಹೇಳಿದೆ. ' ಆ ಎಡೆಯನ್ನು ಅರಿಯದವರು ದ್ರವ್ಯವನ್ನು ಹುಗಿದಿಟ್ಟ ಸ್ಥಳದ ಮೇಲೆ ಮತ್ತೂ ಮತ್ತೂ ಅಡ್ಡಾಡಿದರೂ ಅವರಿಗೆ ಹೇಗೆ ನಿಧಿಯು ದೊರೆಯಲಾರದೊ ಹಾಗೆಯೆ ಅಸತ್ಯದಿಂದ ಎಳೆಯಲ್ಪಡುವ ಈ ಜನಗಳು ಪ್ರತಿನಿತ್ಯದಲ್ಲಿ ಬ್ರಹ್ಮನೆಡೆಗೆ ಹೋದರೂ ಬ್ರಹ್ಮಲೋಕವನ್ನು ಹೊಂದಲಾರರು ' ( ಛಾಂ, ಅ ೮, ಖಂ ೩, ಮಂ ೨ ).

**೧೪. ಕನಸಿನ ಪ್ರಶ್ನೆಯು—** ಇನ್ನು ಮುಂದೆ ಉಪನಿಷತ್ಕಾರರು ನಿದ್ರೆಗೆ ಸಂಬಂಧಿಸಿ ಮಾಡಿದ ಸ್ವಪ್ನಸ್ಥಿತಿಯ ಕಾರಣಮೀಮಾಂಸೆಯ ವಿಚಾರವು. ‘ಕೆಳಗಿನ ಗೂಡನ್ನು ಉಸುರಿನಿಂದ ಕಾಯುತ್ತ ಅಮೃತಮಯ ಪುರುಷನು ಗೂಡಿನಿಂದ ಮನಬಂದತ್ತ ಹಾರಾಡುವನು; ಹಿರಣ್ಮಯ ಪುರುಷನು, ಹಂಸರೂಪನು, ನಿದ್ರೆಯ ಅಂತ್ಯಭಾಗದಲ್ಲಿ ಅತ್ತಿತ್ತ ಅಲೆದಾಡುತ್ತ, ಈ ದೇವನು ತನಗಾಗಿ ಅನೇಕರೂಪಗಳನ್ನುಂಟುಮಾಡುವನು, ಸ್ತ್ರೀಸಹವಾಸದಲ್ಲಿ ಸುಖಭೋಗಿಸುವನು, ಅಥವಾ ಉಣ್ಣುವನು; ಇಲ್ಲವೆ ಭೀಕರವಾದ ನೋಟಗಳನ್ನು ನೋಡುವನು’ ( ಬೃ., ಅ ೪, ಬ್ರಾ ೩, ಮಂ ೯–೧೩ ), ಎಂದು ಬೃಹದಾರಣ್ಯಕವು ಜೀವನು ನಿದ್ರೆಯ ಕೊನೆಗೆ ಗೂಡಿನಿಂದ ಹೊರಬಿದ್ದು ಹೇಗೆ ಮನಬಂದತ್ತ ಅಲೆದಾಡುವನೆಂಬುದನ್ನು ಹೇಳುತ್ತದೆ. ಸುಷುಪ್ತಿ ಮತ್ತು ಸ್ವಪ್ನ ಈ ಅವಸ್ಥೆಗಳು ಪ್ರಜ್ಞೆ ಮತ್ತು ಅಪ್ರಜ್ಞೆ ಇವೆರಡರ ಮಧ್ಯದಲ್ಲಿರುವ ಬೇರೆ ಅವಸ್ಥೆಯೆಂದು ಅಲ್ಲಿಯೇ ಹೇಳಿದೆ. ‘ಈ ಪುರುಷನಿಗೆ ಎರಡು ಅವಸ್ಥೆಗಳು; ಒಂದು ಇಲ್ಲಿ ಇಹಲೋಕದಲ್ಲಿ; ಮತ್ತೊಂದು ಅಲ್ಲಿ ಪರಲೋಕದಲ್ಲಿ; ಇವೆರಡರ ಮಧ್ಯವಾದ ಮೂರನೆಯದೊಂದು ಅವಸ್ಥೆಯುಂಟು. ಅದು ಸ್ವಪ್ನ–ಸುಷುಪ್ತಿಗಳಿಂದಾಗಿದೆ; ಇದಕ್ಕೆ ಸಂಧ್ಯಾವಸ್ಥೆ ಎಂಬ ಹೆಸರು. ಈ ಸ್ಥಾನದಿಂದ ಅವನು ಇಹ ಹಾಗೂ ಪರ ಎರಡೂ ಸ್ಥಾನಗಳನ್ನು ನೋಡುವನು.’ ಈ ಸ್ಥಿತಿಯಲ್ಲಿ ಜೀವಾತ್ಮವು ದಂಡೆಯಿಂದ ದಂಡೆಗೆ ಹರಿದಾಡುವ ಮೀನವನ್ನು ಹೋಲುವುದೆಂಬದೂ ಇಲ್ಲಿ ಹೇಳಲ್ಪಟ್ಟಿದೆ. ‘ದೊಡ್ಡ ಮೀನು ಈಚೆಯ ಮತ್ತು ಆಚೆಯ ಎರಡೂ ತಡಿಗಳಿಗೆ ನೆಗೆದಾಡುವಂತೆ ಈ ಪುರುಷನಾದರೂ ಸ್ವಪ್ನ ಹಾಗೂ ಜಾಗ್ರದವಸ್ಥೆಗಳಲ್ಲಿ ಒಂದರಿಂದ ಇನ್ನೊಂದಕ್ಕೆ ಓಡಾಡುವನು. ಜೀವಾತ್ಮನಿಗೆ ಈ ಅವಸ್ಥೆಯಲ್ಲಿ ಸೃಷ್ಟಿಸುವ ಸ್ವಯಂಭೂ ಸಾಮರ್ಥ್ಯವು ಎಷ್ಟೊಂದಿರುತ್ತದೆಂಬದೂ ಹೇಳಲ್ಪಟ್ಟಿದೆ; ‘ಅಲ್ಲಿ ತೇರುಗಳಿಲ್ಲ, ಕುದುರೆಗಳಿಲ್ಲ; ಅಥವಾ ಬೀದಿಬಟ್ಟೆಗಳಿಲ್ಲ; ಆದರೆ ಅವನೆ ತೇರು, ಕುದುರೆ, ಬೀದಿಬಟ್ಟೆಗಳನ್ನೆಲ್ಲ ಹುಟ್ಟಿಸುವನು; ಅಲ್ಲಿ ಆನಂದಗಳಿಲ್ಲ,ಮೋದಗಳಿಲ್ಲ ಇಲ್ಲವೆ ಪ್ರಮೋದಗಳಿಲ್ಲ,ಆದರೆ ಅವನೆ ಆನಂದಮೋದ–ಪ್ರಮೋದಗಳನ್ನುಂಟುಮಾಡುತ್ತಾನೆ; ಅಲ್ಲಿ ಹೊಂಡಗಳಿಲ್ಲ, ಕೆರೆಗಳಿಲ್ಲ ಅಥವಾ ಹೊಳೆಗಳಿಲ್ಲ; ಆದರೆ ಅವನೆ ಹೊಂಡ–ಕೆರೆ–ಹೊಳೆಗಳನ್ನೆಲ್ಲ ಸೃಜಿಸುವನು. ಯಾಕಂದರೆ ಅವನೆ ನಿಜವಾಗಿ ಕರ್ತೃವು.’ ಇಲ್ಲಿ ಜೀವಾತ್ಮನು ಸ್ವಪ್ನ ಸ್ಥಿತಿಯಲ್ಲಿ ಎಷ್ಟು ಕರ್ತೃತ್ವಶಾಲಿಯೆಂಬುದನ್ನು ಒತ್ತೊತ್ತಿ ಹೇಳಿದೆ. ಕಡೆಗೆ ಕನಸಿನ ಬಗ್ಗೆ ಪ್ರಶ್ನೋಪನಿಷತ್ತಿನಲ್ಲಿ ಹೀಗಿದೆ: ಅವು ಬಹಳ ಮಾಡಿ ದಿನದ ಅನುಭವಗಳ ಪುನರಾವೃತ್ತಿಯಾಗಿದ್ದರೂ ಅವುಗಳಲ್ಲನೇಕ ಪ್ರಸಂಗವಶಾತ್ತಾಗಿ ಅನನುಭೂತವಾದವುಗಳೂ ವಿಲಕ್ಷಣವಾದವುಗಳೂ ಆಗಿರುತ್ತವೆ; ‘ನಿದ್ರೆಯಲ್ಲಿ ದೇವನು ಮಹಿಮೆಯನ್ನು ಅನುಭವಿಸುತ್ತಾನೆ. ಮತ್ತೆ ಮತ್ತೆ ನೋಡಿದು

ವನ್ನೇ (ಕನಸಿನಲ್ಲಿ) ಕಾಣುತ್ತಾನೆ; ಮತ್ತೆ ಮತ್ತೆ ಕೇಳಿದುದನ್ನೇ (ಕನಸಿನಲ್ಲಿ) ಕೇಳು ತ್ತಾನೆ.............ಕಂಡದ್ದು ಕಾಣದ್ದು, ಕೇಳಿದ ಕೇಳದ್ದು, ಭೋಗಿಸಿದ್ದು ಭೋಗಿಸದ್ದು, ಎಲ್ಲವನ್ನೂ ಅನುಭವಿಸುವನು, ಯಾಕಂದರೆ ಎಲ್ಲವೂ ಅವನೇ (ಪ್ರ ೪, ಮಂ ೫). ಇದು ನಿಜವಾಗಿಯೂ ಸ್ವಪ್ನಸ್ಥಿತಿಯ ಸೂಕ್ಷ್ಮ ಪೃಥಕ್ಕರಣವೆಂದು ಹೇಳಬೇಕು.

**೧೪. ಆತ್ಮನ ಲೋಕಾಂತರ ಸ್ಥಿತಿಯ ಸಂಶೋಧನವು**— ಉಪನಿಷ ತ್ಕಾರರು ನಿದ್ದೆ ಮತ್ತು ಕನಸುಗಳಲ್ಲಿ ಕಂಡುಬರುವ ಚಿನ್ಮಯ ಪುರುಷನ ಸ್ಥಿತಿಯ ವಿಚಾರ ಮಾಡಿದಂತೆ, ಅಡ್ಡದಾರಿಗೆ ಬಿದ್ದು ಲೋಕಾಂತರಗಳಲ್ಲಿ ಅಲೆದಾಡುವ ಚಿನ್ಮಯ ಪುರುಷನ ಸ್ಥಿತಿಗತಿಗಳನ್ನು ಮೈತುಂಬಿದವರ ಹಾಗೂ ಬಡಕೊಂಡವರ ಮುಖಾಂತರವಾಗಿ ಅರಿತು ಕೊಳ್ಳುವುದಕ್ಕೆ ನಿರಾಲಸ್ಯದಿಂದ ಯತ್ನಿಸಿರುವರು. ಈ ವಿಷಯದ ಅವರ ವಿಚಾರಗಳು ಪ್ರಾಥಮಿಕ ಸ್ಥಿತಿಯಲ್ಲಿರುವವೆಂಬುದು ನಿಜವು. ಆದರೂ ಅವುಗಳ ಪ್ರಯೋಗಗಳನ್ನು ಅವರು ಯಾವ ಒಣ ಬೊಬ್ಬಾಟಮಾಡದೆ ತಮ್ಮಷ್ಟಕ್ಕೆ ತಾವೆ ನಡಿಸುತ್ತಿದ್ದರೆಂಬುದು ಸ್ಪಷ್ಟ ವಿದೆ. ಅಷ್ಟು ಪ್ರಾಚೀನ ಕಾಲದಲ್ಲಿ ಸಹ ಆತ್ಮನ ಲೋಕಾಂತರ–ಸ್ಥಿತಿ–ವಿಚಾರವು ಅವರ ಮನಸ್ಸನ್ನೆಳೆದಿತ್ತೆಂಬುದನ್ನು ನಿಶ್ಚಿತವಾಗಿ ಸಿದ್ಧಪಡಿಸಲಿಕ್ಕೆ ಒಂದು ಆಧಾರವಿದೆ. ಬೃಹ ದಾರಣ್ಯಕದಲ್ಲಿ (ಬೃ, ಅ ೩, ಬ್ರಾ ೩, ಮಂ ೧) ಒಂದೆಡೆಗೆ ಹೀಗೆ ಉಲ್ಲೇಖವಿದೆ: ಲಾಹ್ಯಾಯನನ ಮಗ ಭುಜ್ಯುವು ಅಧ್ಯಯನಕ್ಕಾಗಿ ಮದ್ರ ದೇಶಕ್ಕೆ ಹೋಗಿದ್ದನು. ಅಲ್ಲಿ ಅವನು ಕಪಿ ಎಂಬವನ ಮಗನಾದ ಪತಂಚಲನಲ್ಲಿ ಅಭ್ಯಾಸಕ್ಕೆ ನಿಂತನು. ಈ ಪತಂಚಲ ನಿಗೆ ಒರ್ವ ಮಗಳಿದ್ದಳು; ಅವಳ ಮೈಯಲ್ಲಿ ಗಂಧರ್ವ ಅಂದರೆ ವಾಯುಪುರುಷನು ಬರುತ್ತಿದ್ದನು; ಅದರಿಂದ ಅವಳನ್ನು ನಡುಕಳಂತೆ (Medium) ಉಪಯೋಗಿಸಿಕೊ ಳ್ಳಲಿಕ್ಕೆ ಬರುತ್ತಿತ್ತು. ಭುಜ್ಯುವು ಅದಕ್ಕೆ (ಗಂಧರ್ವಕ್ಕೆ) ನೀನಾರು, ಎಂದು ಕೇಳಲು ಅದು ನಾನು ಅಂಗಿರಸನ ಮಗ ಸುಧನ್ವನೆಂದುತ್ತರಪಿತ್ತಿತು. ಬಳಿಕ ಭುಜ್ಯುವು ಮತ್ತೆ ಎರಡು ಪ್ರಶ್ನೆಗಳನ್ನು ಕೇಳಿದನು; ವಿಶ್ವದಲ್ಲಿರುವ ಲೋಕಗಳ ನೆಲೆಯನ್ನು ಕುರಿತು ಕೇಳಿ ದುದು ಒಂದು, ಪರೀಕ್ಷಿತಿಯ ಮಕ್ಕಳು ಯಾವ ಲೋಕದಲ್ಲಿರುವರು ಎಂದು ಕೇಳಿದುದು ಮತ್ತೊಂದು. ಈ ಪ್ರಶ್ನೆಯು ಆ ಕಾಲದಲ್ಲಿ ಆಗಿ ಹೋದ ಮಹಾವ್ಯಕ್ತಿಗಳ ಸಂಬಂಧದಿಂದಿರ ಬೇಕೆಂದು ಊಹಿಸಬಹುದು. ಇವೆರಡಕ್ಕೂ ಭುಜ್ಯುವಿಗೆ ದೊರೆತ ಪ್ರತ್ಯುತ್ತರದ ಉಲ್ಲೇಖವು ಅಲ್ಲಿ ಇಲ್ಲ; ಆದರೂ ಇವೆರಡೂ ಪ್ರಶ್ನೆಗಳಿಂದ ಭುಜ್ಯುವು ತನಗೆ ತಿಳಿದ ಮೇರೆಗೆ ಆ ಪ್ರಾಚೀನ ಕಾಲದಲ್ಲಿ ಆಧುನಿಕ ಪರಲೋಕವಿದ್ಯಾವಿಶಾರದರ ದಾರಿಯಿಂದಲೆ ಸಾಗಿದ ಪರಲೋಕಜ್ಞಾನಜಿಜ್ಞಾಸುವಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.

೧೫. **ವಿಚಾರಸಾಮರ್ಥ್ಯವು**— ನವ ಮಾನಸಶಾಸ್ತ್ರವು ' ವಿಚಾರ ಸಾಮರ್ಥ್ಯ 'ವೆಂದು ಹೇಳುವ ಮಾತನ್ನು ಉಪನಿಷತ್ತುಗಳಲ್ಲಿ ಅಡಿಗಡಿಗೆ ಒತ್ತೊತ್ತಿ ಹೇಳಿದುದು ಕಂಡುಬರುತ್ತದೆ. ನಾಲ್ಕು ಕಲಾಯುಕ್ತ ಬ್ರಹ್ಮನ ಪ್ರಕಾಶಯುಕ್ತವಾದ ಪಾದವನ್ನು ಪೂಜಿಸುವವನು ಈ ಲೋಕದಲ್ಲಿ ಪ್ರಕಾಶವಂತನಾಗುತ್ತಾನೆ ( ಛಾಂ, ಅ ೪, ಖಂ ೫, ಮಂ ೩ ). ' ಬ್ರಹ್ಮನು ತೇಜಸ್ವಿಯೆಂದು ಉಪಾಸನೆ ನಡೆಸುವವನು ತೇಜಸ್ವಿಯಾಗುತ್ತಾನೆ ಮತ್ತು ಬೆಳಕೂ ಹೊಳಪೂ ಉಳ್ಳ ಲೋಕಗಳನ್ನು ಹೊಂದುತ್ತಾನೆ ' ( ಛಾಂ, ಅ ೭, ಖಂ ೨, ಮಂ ೨ ). ' ಸೂರ್ಯನು ಹುಟ್ಟಿದಾಗ ಅವನ ಸುತ್ತಲೂ ಎಲ್ಲ ಬಗೆಯ ಕೂಗುಗಳು ಕೇಳಬಂದವು .......; ಇದನ್ನರಿತು ಸೂರ್ಯನೆ ಬ್ರಹ್ಮನೆಂದು ಉಪಾಸನೆಯನ್ನು ಮಾಡುವವನಿಗೆ ಸುತ್ತಕಡೆಯಿಂದಲೂ ಸಂತೋಷಗೊಳಿಸುವ ಕೂಗುಗಳು ಕೇಳಬರಲಿಕ್ಕೆ ಬೇಕು. ಈ ಬಗೆಯ ಕೂಗುಗಳು ಎಡೆಬಿಡದೆ ಕೇಳಬರಲಿ, ಎಡೆಬಿಡದೆ ಕೇಳಬರಲಿ ( ಛಾಂ, ಅ ೩, ಖಂ ೧೯, ಮಂ ೪ ). ' ಬ್ರಹ್ಮನೆ ಎಲ್ಲದರ ಅಡಿಗಲ್ಲು ಎಂದು ಉಪಾಸಿಸುವವನಿಗೆ ಎಲ್ಲರೂ ಅಡಿಗೆರಗುವರು. ಬ್ರಹ್ಮನು ಮಹತ್ತು ಎಂದು ಉಪಾಸಿಸುವವನು ಮಹತ್ವವನ್ನು ಪಡೆಯುವನು; ಬ್ರಹ್ಮನು ಮನವೆಂದುಪಾಸಿಸುವವನು ಮಾನವನ್ನು ಹೊಂದುವನು, ಬ್ರಹ್ಮನು ಪರಿಮರ ( ಕಾಲರೂಪ ) ನೆಂದುಪಾಸಿಸುವವನ ಸುತ್ತಲೂ ಇರುವ ಆತನ ದ್ವೇಷಿಗಳಾದ ಶತ್ರುಗಳೆಲ್ಲ ಸತ್ತು ಬೀಳುವರು ( ತೈ, ವಲ್ಲಿ ೩, ಅನು ೧೦, ಮಂ ೩-೪ ). ' ಬ್ರಹ್ಮನು ಶೂನ್ಯರೂಪನೆಂದು ಅರಿತರೆ ಅವನು ಶೂನ್ಯನೆ ಆಗುತ್ತಾನೆ ; ಬ್ರಹ್ಮನು ಉಂಟು ಎಂದು ತಿಳಿದರೆ ಅವನು ( ಯಾವಾಗಲೂ ) ಸ್ಥಿರವಾಗಿ ಇರುವನು; ಹೀಗೆ ಇದನ್ನು ಅವರು ಅರಿತಿರುವರು (ತೈ, ವಲ್ಲಿ ೨, ಅನು ೬). ಉಪಾಸನೆಯಲ್ಲಿ ಅದ್ಭುತವಾದ ಸಾಮರ್ಥ್ಯವುಂಟೆಂದು ವಿಶ್ವಾಸವುಳ್ಳವರು ಮೇಲಿನ ಅವತರಣಗಳನ್ನು ಅವಶ್ಯವಾಗಿ ಓದಬೇಕು.

## ೩. ಬುದ್ಧಿಗಮ್ಯ ಮಾನಸಶಾಸ್ತ್ರವು.

೧೬. **ಆತ್ಮನಿಲ್ಲದ ಮಾನಸಶಾಸ್ತ್ರವಿರಲಾರದು**— ಆಧುನಿಕ ಮಾನಸಶಾಸ್ತ್ರಜ್ಞರು ಬುದ್ಧಿಗಮ್ಯ ಮಾನಸಶಾಸ್ತ್ರದಕಡೆಗೆ ಸಾಕಷ್ಟು ಲಕ್ಷಗೊಡುವದಿಲ್ಲ. ಅದು ನಿರರ್ಥಕವು ಅಥವಾ ಅಧ್ಯಾತ್ಮಶಾಸ್ತ್ರಕ್ಕೆ ಸಂಬಂಧಿಸಿದ್ದು ಎಂದು ಅವರ ಭಾವನೆಯು. ಆತ್ಮರಹಿತ ಮಾನಸಶಾಸ್ತ್ರವನ್ನು ಬರೆಯುವದರಲ್ಲಿ ಆಧುನಿಕ ಮಾನಸಶಾಸ್ತ್ರಜ್ಞರು ತಮ್ಮತಮ್ಮೊಳಗೆ ಸ್ಪರ್ಧಿಸುತ್ತಿರುವರೆಂದು ಪ್ರೊಫೆಸರ ಜೇಮ್ಸ ವಾರ್ಡ ಇವನು ವಿಮರ್ಶಿಸಿ ಹೇಳಿರುವನು. ಆತ್ಮನ ಪ್ರಾಚೀನ ಕಲ್ಪನೆಯು ಮಾಯವಾಗಿ ಈಗ ಅದರ ಬದಲು ಹೊಸ ಹೊಸ ವಾಸನೆಯ ಹುಟ್ಟುಸಾವಿನಕೂಡ ಹುಟ್ಟಿಸಾಯುವ ' ವಾಸನೆಯ ಕೇಂದ್ರ '

ವೊಂದು ( Centre of interest ) ಇರುವದು, ಅದೇ ಆತ್ಮವು, ಎಂದು ಪ್ರತಿಪಾದಿಸಲ್ಪಡುತ್ತಿರುವದು. ಆದರೆ ಈ ಪ್ರತಿಪಾದನವ ಅಪಸ್ಥತನವು ಸ್ಪಷ್ಟವೆ ಇದೆ. ಯಾಕಂದರೆ ಆತ್ಮನ ಅಮರತ್ವವನ್ನು ಈ ಪ್ರತಿಪಾದಕರು ಒಪ್ಪದಿದ್ದರೂ ಈ ಜೀವಮಾನವಲ್ಲಿ ಯಾವುದೊಂದು ವಾಸನೆಯು ತೃಪ್ತಿಯಾಗದೆ ಹೋದರೆ ಆ ವಾಸನಾದೇಹವು ಆಯಾ ಮನುಷ್ಯನ ಮರಣದ ನಂತರ ಸಹ ಉಳಿಯುವದೆಂದು ಅವರು ಒಪ್ಪಬೇಕಾಗಿಬಂದಿದೆ ! ಆತ್ಮನು ದೇಹತಾಳಲಿಕ್ಕೆ ಅಥವಾ ದೇಹಬಿಟ್ಟು ದೇಹಕ್ಕೆ ಹೋಗಲಿಕ್ಕೆ ಸ್ವತಂತ್ರನಿರುವನೆಂಬ ಗಟ್ಟಿಯಾದ ತಳಹದಿಯ ಮೇಲೆ ಪ್ಲೇಟೋನ ಮತ್ತು ಉಪನಿಷತ್ತಿನ ಆತ್ಮವಿಷಯಕ ಕಲ್ಪನೆಯು ಸ್ಥಿರವಾಗಿ ನಿಂತಿದೆ. ಆ ಕಲ್ಪನೆಯಲ್ಲಿ ಕೊರತೆಗಳೇನೇ ಇರಲಿ. ಅದು ಸ್ಪಷ್ಟವಾಗಿ ತಿಳಿದಾದರೂ ತಿಳಿಯುವದು. ಆದರೆ ದೇಹವಳಿದಮೇಲೆ ಉಳಿಯುವ ಈ ನಿರ್ಜೀವ 'ವಾಸನಾದೇಹ' ವೆಂಬ ಆತ್ಮನ ಕಲ್ಪನೆಯು ನಮ್ಮ ವಿಚಾರಶಕ್ತಿಗೆ ತೋಚದಂತಹದಾಗಿದೆ. ನಿಸರ್ಗವು ಬೇಕಾದುದನ್ನು ಮಾಡಬಹುದು ಎಂಬುದನ್ನು ಒಪ್ಪಿ ತನ್ನ ತತ್ವಜ್ಞಾನದಲ್ಲೆಲ್ಲ ಗೊಂದಲವನ್ನೆಬ್ಬಿಸಲಿಕ್ಕೆ ಸಿದ್ಧವಾದ ಯಾವನಾದರೊಂದು ಅಧ್ಯಾತ್ಮವಾದಿಯು ಈ ಮೇಲಿನ ವಿಧಾನವನ್ನು ಒಪ್ಪಿದರೆ ಒಪ್ಪಬಹುದಲ್ಲದೆ ಇನ್ನಾವ ಜಾಣರೂ ಇದನ್ನು ಒಪ್ಪಲಾರರು.

**೧೭. ಆತ್ಮನ ನಿವಾಸಸ್ಥಾನವು** — ಬುದ್ಧಿಗಮ್ಯ ಮಾನಸಶಾಸ್ತ್ರವು ಮೊದಲು ಆತ್ಮನ ನಿವಾಸಸ್ಥಾನವಾವುದೆಂಬುದನ್ನು ವಿಚಾರಿಸಬಹುದು. ಜಡವಸ್ತುಗಳಂತೆ ಆತ್ಮನು ಅವಕಾಶವನ್ನು ( Space ) ವ್ಯಾಪಿಸುವ ವಸ್ತು ಎಂದು ತಿಳಿದು ಜನರು ಈ ಪ್ರಶ್ನೆಯನ್ನು ಎತ್ತುವ ರೂಢಿಯುಂಟು. ಆತ್ಮನು ಚಿನ್ಮಯನಿರುವದರಿಂದ ಅವನಿಗೆ ಅವಕಾಶದ ಅವಶ್ಯಕತೆಯಿಲ್ಲವೆಂಬುದನ್ನು ಅವರು ದುರ್ಲಕ್ಷಿಸುವಂತೆ ತೋರುತ್ತದೆ. ಆದರೂ ದೇಹದಲ್ಲಿಯ ಯಾವ ಅಂಗಗಳಕೂಡ ಆತ್ಮನ ಸಂಬಂಧವು ಹೆಚ್ಚು ಬರುವದು ಇದನ್ನು ಬುದ್ಧಿಗಮ್ಯ ಮಾನಸಶಾಸ್ತ್ರವು ಚರ್ಚಿಸುವದು. ಪ್ರೊಫೆಸರ ಜೇಮ್ಸ ಇವರು ಬರೆಯುವುದೇನಂದರೆ, 'ಯಾವ ವಸ್ತುವಿನಕೂಡ ನಮ್ಮ ಚಿತ್ತದ ಸಂಬಂಧವು ಬರುವದೊ ಅಲ್ಲಿ ಒಂದು ಬಗೆಯಿಂದ ನಮ್ಮ ಚಿತ್ತವು ಇರುವದು. ಮೃಗಶಿರ ನಕ್ಷತ್ರವನ್ನು ನಾನು ನೋಡುವಾಗ ನಾನು ಜ್ಞಾನರೂಪದಿಂದ ಅಲ್ಲಿರುವೆನು, ಆದರೆ ನಾನು ಅಲ್ಲಿ ಕ್ರಿಯಾರೂಪದಿಂದ ಇಲ್ಲ ; ಯಾಕಂದರೆ ಅಲ್ಲಿ ನಾನು ಯಾವ ಪರಿಣಾಮವನ್ನೂ ಅಥವಾ ಕಾರ್ಯವನ್ನೂ ಉಂಟು ಮಾಡುವದಿಲ್ಲ. ಆದರೆ ನನ್ನ ಮಿದುಳಿನಲ್ಲಿ ನಾನು ಕ್ರಿಯಾರೂಪದಿಂದ ಇರುವೆನು ; ಯಾಕಂದರೆ ನನ್ನ ವಿಚಾರಗಳು ಮತ್ತು ಭಾವನೆಗಳು ನನ್ನ ಮಿದುಳಿನ ಮೇಲೆ ಪರಿಣಾಮವನ್ನುಂಟು ಮಾಡುತ್ತಿವೆ. ಹೀಗಿದ್ದಮೇಲೆ ಪ್ರತ್ಯಕ್ಷ ಕ್ರಿಯಾರೂಪ ಪರಿಣಾಮವನ್ನುಂಟುಮಾಡುವ ಸ್ಥಾನವೇ ಮನಸ್ಸು ಇರುವ ಸ್ಥಾನವು, ಎಂದು ತಿಳಿದರೆ ಮಿದುಳಿನ ಆವರಣವೇ ಆ ಸ್ಥಾನ

ವೆಂದು ನಾವು ಅಂಪರೆ ಅದು ತಪ್ಪಾಗಲಿಕ್ಕಿಲ್ಲ.' ಈ ವಿಷಯಕ್ಕೆ ವಿವಿಧ ಮತಗಳಿರುವವು. ಆತ್ಮನು ಅವಕಾಶವನ್ನು ವ್ಯಾಪಿಸುವ ವಸ್ತು ಎಂದು ಆಯ್. ಎಚ್. ಫೀಕ್ಟ ಎಂಬ ತತ್ವಜ್ಞನ ಮತವು. ಮಿದುಳಿನ ಮೂರನೆಯ ಪೊಳ್ಳಿನಲ್ಲಿರುವ ( 3rd ventricle ) ಗ್ರಂಥಿಯೆ ( Pineal gland ) ಆತ್ಮನ ವಸತಿಸ್ಥಾನವೆಂದು ಡೇಕಾರ್ಟನ ಅಭಿಪ್ರಾಯವು. ಮಿದುಳಿನ ನಿರಾಕಾರವಾದ ಅಣುಗಳ ಯಾವ ಕೇಂದ್ರದಲ್ಲಿ ಜ್ಞಾನನಾಡಿಗಳೆಲ್ಲ ಒಂದಾಗುವವೊ ಅದೇ ಆತ್ಮನ ಸ್ಥಾನವೆಂದು ಲೋಟ್ಸ್ ಎಂಬವನು ಪ್ರತಿಪಾದಿಸುವನು. ಮಿದುಳಿನ ಯಾವದಾದರೊಂದು ಭಾಗದಕೂಡ ಆತ್ಮನ ಸಂಬಂಧವು ಇರುವದೆಂದು ಹೇಳುವದೇ ಆದರೆ ಅದು ಮಿದುಳಿನ ಆವರಣದಕೂಡವೇ ಇರುವದೆಂಬ ಪ್ರೊ. ಜೇಮ್ಸ ಇವರ ಮತವು ಮೇಲೆಯೆ ಹೇಳಲ್ಪಟ್ಟದೆ. ಆತ್ಮನು ಹೃದಯದಲ್ಲಿರುವನೆಂದು ಅರಿಸ್ಟಾಟಲ್ಲನ ಮತವು. ಅವನು ಈ ಅನುಮಾನವನ್ನು ಮಾಡಲಿಕ್ಕೆ ಕಾರಣಗಳೇನೆಂದರೆ, ( ೧ ) ಹೃದಯ ರೋಗಗಳು ಒಮ್ಮೆಲೆ ಮತ್ತು ನಿಶ್ಚಯದಿಂದ ಮರಣವನ್ನು ತರುವವು; ( ೨ ) ಭೀತಿ ಶೋಕ, ಆನಂದ ಮುಂತಾದ ಭಾವನೆಗಳ ಪರಿಣಾಮವು ಹೃದಯದ ಮೇಲೆಯೆ ಹೆಚ್ಚು ಆಗುವದೆಂದು ಕಂಡುಬರುವದು; ( ೩ ) ಗರ್ಭದಲ್ಲಿ ಹೃದಯವೆ ಮೊದಲು ರೂಪುಗೊಳ್ಳುವದು ( Hammond, Aristotle's Psychology p. xxiii). ಉಪನಿಷತ್ತುಗಳಲ್ಲಿ ಇದೇ ಮತವು ಪ್ರತಿಪಾದಿಸಲ್ಪಟ್ಟಿರುವದು. ನಿದ್ರೆಯ ವಿಷಯವನ್ನು ಕುರಿತು ಹೇಳುವಾಗ ಉಪನಿಷತ್ಕಾರರು ಹೃದಯದ ಆವರಣಕ್ಕೆ ಎಷ್ಟು ಮಹತ್ವವನ್ನು ಕೊಟ್ಟಿರುವರೆಂಬುದನ್ನು ಈ ಮೊದಲೇ ನೋಡಿದ್ದೇವೆ. ಆದುದರಿಂದ ಹೃದಯವೆ ಆತ್ಮಸ್ಥಾನವು ಎಂದು ಹೇಳಲಿಕ್ಕೆ ಅವರಿಗೆ ಯಾವ ಆತಂಕವೂ ತೋರಲಿಲ್ಲ. ಮುಂದೆ ಹೆಚ್ಚಿನ ವಿಚಾರವಿಕಾಸವಾದಮೇಲೆ ಹೃದಯದ ಬದಲು ಮಿದುಳೇ ಆತ್ಮನ ಸ್ಥಾನವೆಂದು ಒಪ್ಪಲ್ಪಟ್ಟಿತು. ಯೋಗ ಮತ್ತು ತಂತ್ರ ಗ್ರಂಥಗಳಲ್ಲಿ ಮಾತ್ರ ಬೆನ್ನುರಿ, ಮಿದುಳು, ಮತ್ತು ಅವುಗಳನ್ನು ಸುತ್ತಿಕೊಂಡ ಜ್ಞಾನನಾಡಿಗಳ ಜಾಲ (nervous system ) ಇವುಗಳ ಸ್ಪಷ್ಟ ಉಲ್ಲೇಖವಿದ್ದು ಮಿದುಳಿನಲ್ಲಿಯೆ ಚೇತನ ವ್ಯಾಪಾರವು ನಡೆಯುವದೆಂದು ಬರೆದಿದೆ ( Positive sciences of the Hindus, by Seal, p. 218-19 ).

**೧೮. ಹೃದಯ ಮತ್ತು ಮಿದುಳು ಇವು ಆತ್ಮನ ಸ್ಥಾನಗಳು—** ಒಂದೆಡೆಗೆ ಒಂದು ಉಪನಿಷತ್ತಿನ ಮಹತ್ವದ ಮಂತ್ರದಲ್ಲಿ ಹೃದಯವು ಆತ್ಮನ ಸ್ಥಾನವು ಎಂಬ ವಿಚಾರವನ್ನು ಬಿಟ್ಟು ಮಿದುಳೇ ಆತ್ಮನ ಸ್ಥಾನವೆಂಬ ಕಲ್ಪನೆಯ ಕಡೆಗೆ ಉಪನಿಷತ್ಕಾರರು ಒಲಿಯುವದನ್ನು ನಾವು ನೋಡಬಹುದು. ಹೃದಯವು ಆತ್ಮನ ಸ್ಥಾನವೆಂದು ಬಹುಶಃ ಎಲ್ಲ ಉಪನಿಷತ್ತುಗಳಲ್ಲಿದ್ದರೂ ತೈತ್ತಿರೀಯವನ್ನು ಬರೆದ ಋಷಿಯು, ಒಳ್ಳೆ ಭವಿ

ಷ್ಯವನ್ನು ಕಾಣುವವನಂತೆ ಗೂಢಶೈಲಿಯಲ್ಲಿ, ಆತ್ಮನು ಹೃದಯದಿಂದ ನಮ್ಮ ಕಿರಿನಾಲಿಗೆ ಯೊಳಗಿಂದ ಹಾಯ್ದು ಬೈತಲ ತೆಗೆಯುವ ಸ್ಥಾನದ ವರೆಗೆ ನೆತ್ತಿಗೇರಿ ( ಬ್ರಹ್ಮರಂಧ್ರ ) ಹಾದಿಯಲ್ಲಿ ತನ್ನ ಪ್ರಭುವಾದ ಬ್ರಹ್ಮನಿಗೆ ಬೆಟ್ಟಿಯಾಗುವನೆಂದು ಬಣ್ಣಿಸಿರುವನು. ಇಲ್ಲಿ ಹೃದಯದಲ್ಲಿರುವ ಆತ್ಮನು ಮನೋಮಯ ಪುರುಷನೆಂದು ಕರೆಯಲ್ಪಟ್ಟಿರುವನು. ಆದರೆ ಮಿದುಳಿನಲ್ಲಿ ವಾಸಿಸುವ ಬ್ರಹ್ಮನಿಗೆ ಮನಸಸ್ಪತಿ ಅಂದರೆ ಮನಸ್ಸಿನ ಪ್ರಭು ಎಂಬ ಅಭಿಧಾನವು ಕೊಡಲ್ಪಟ್ಟಿರುವದು. ತೈತ್ತಿರೀಯದಲ್ಲಿ ( ತೈ, ವ ೧, ಅನು ೬, ಮಂ ೧–೨ ) ‘ ಹೃದಯಾಕಾಶದಲ್ಲಿ ಈ ಹಿರಣ್ಮಯ ಪುರುಷನು ವಾಸಿಸುವನು. ಗಂಟಲದಲ್ಲಿ ಅಂಗಳದಿಂದ ಸ್ತನದಂತೆ ಜೋತಾಡುವ ಕಿರಿನಾಲಿಗೆಯೊಳಗಿಂದ ಹಾಯ್ದು ನೆತ್ತಿಯ ಮೇಲೆ ಬೈತಲ ತೆಗೆಯುವ ಸ್ಥಳದ ವರೆಗೆ ಈ ಪುರುಷನು ಸಾಗುವನು; ಆಗ ಅವನಿಗೆ ಇಂದ್ರನು ಬೆಟ್ಟಿಯಾಗುವನು. ಭೂ... ಭುವಃ... ಸುವ... ಮಹ... ಈ ಗೂಢ ಮಂತ್ರವನ್ನುಚ್ಚರಿಸುವಾಗ ಆತ್ಮನು ಬ್ರಹ್ಮನೆಡೆಗೆ ಸಾಗುವನು. ಆತ್ಮನು ಸ್ವರಾಜ್ಯವನ್ನು ದೊರಕಿಸುವನು. ಮನಸಸ್ಪತಿಯನ್ನುಕೂಡುವನು, ವಾಕ್ಪತಿಯಾಗುವನು, ಚಕ್ಷುಸ್ಪತಿಯಾಗುವನು,ಶ್ರೋತ್ರಪತಿಯಾಗುವನು, ವಿಜ್ಞಾನಪತಿಯಾಗುವನು, ಆಕಾಶರೂಪದಿಂದ ಆವಿರ್ಭವಿಸುವ ಬ್ರಹ್ಮನೇ ಆಗುವನು,’ಎಂದು ವರ್ಣನೆಯಿರುವದು. ಈ ಮಂತ್ರಗಳ ಅರ್ಥವನ್ನು ಮಾಡುವದು ಸ್ವಲ್ಪ ಕಠಿನ ಕೆಲಸವೆ ಇದೆ. ಹೃದಯದಿಂದ ಮಿದುಳಿಗೆ ಸಾಗಿದ ಮೇಲೆಯೆ ಆತ್ಮನು ಎಲ್ಲ ಬಗೆಯ ಪ್ರಭುತ್ವವನ್ನು ಪಡೆಯುವನೆಂದು ವರ್ಣನೆಯಿರುವದರಿಂದ ಇಂದ್ರಿಯಗಳ ಕೇಂದ್ರವೂ ಬುದ್ಧಿಯ ಕೇಂದ್ರವೂ ಮಿದುಳಿನಲ್ಲಿಯೆ ಇರುವದೆಂಬುದು ಸ್ಪಷ್ಟವು. ಆದರೆ ಆತ್ಮನು ಹೃದಯದಿಂದ ಮಿದುಳಿನ ವರೆಗೆ ಹೋಗುವ ಮಾರ್ಗವನ್ನು ಸರಿಯಾಗಿ ನಿಶ್ಚಯಿಸುವದು ದುಸ್ತರವು. ಸ್ತನದಂತೆ ಜೋತಾಡುವ ವಸ್ತುವು ಯಾವುದು ? ಅದೇನು ಕಿರಿನಾಲಿಗೆಯೋ ಅಥವಾ ಮಿದುಳಿನ ಬುಡಕ್ಕಿರುವ ಗ್ರಂಥಿಯೋ ( Pituitary Gland ) ? ಡಾಯಸನ್ ಮತ್ತು ಮ್ಯಾಕ್ಸಮುಲರ ಇವರೀರ್ವರೂ ಅದು ಕಿರಿನಾಲಿಗೆಯೆಂದೇ ಹೇಳಿದ್ದಾರೆ: ಗಂಟಲದ ಅಂತರಾಲದಲ್ಲಿ ಜೋತಾಡುವ ಕಿರಿನಾಲಿಗೆಯನ್ನು ನೋಡಿ ಆಶ್ಚರ್ಯಚಕಿತನಾಗಿ ಋಷಿಯು ಅದು ಬ್ರಹ್ಮಮಾರ್ಗವೆಂದು ಹೇಳಿದನೋ ! ಅಥವಾ ಯೋಗಿಗಳು ಆನಂದ ಸಮಾಧಿಯಲ್ಲಿರುವಾಗ ಮಿದುಳಿನ ಪೊಳ್ಳಿನೊಳಗಿಂದ ( Ventricle ) ಗಂಟಲದ ಹವೆಯ ಕೊಳವಿಯಲ್ಲಿ (Pharynx) ಕಿರಿನಾಲಿಗೆಯ ದ್ವಾರಾ ಅಮೃತಧಾರೆಯು ಸುರಿಯುವದೆಂದು ಅವರು ಹೇಳುವ ಅನುಭವವನ್ನು ಲಕ್ಷಕ್ಕೆ ತಂದು ಡಾಯಸನ್ ಮತ್ತು ಮ್ಯಾಕ್ಸಮುಲರ ಇವರು ಆ ಅರ್ಥಮಾಡಿದರೋ ಇದು ತಿಳಿಯದು. ಋಷಿಯು ಛೇದಿಸಿದ ಮಿದುಳನ್ನು ಪ್ರತ್ಯಕ್ಷ ನಿರೀಕ್ಷಿಸಿ ನಮ್ಮ ಅಂಗಳದ ಎಲುಬುಗಳ ಸರಿ ಮೇಲ್ಗಡೆ ಮಿದು

ಳಿನ ಬುಡಕ್ಕೆ ಇರುವ ಗ್ರಂಥಿಯನ್ನು (Pituitary Gland) ನೋಡಿದ್ದರೂ ನೋಡಿರಬಹುದು. ಅದನ್ನು ನೋಡಿ ಅದೇ ಆತ್ಮನ ಮಾರ್ಗವು, ಪೋಷಕ ನಾಡಿಗಳ (Sympathetic nerves) ದ್ವಾರಾ ಮಿದುಳಿನ ಬುಡಕ್ಕಿರುವ ಗ್ರಂಥಿಗೆ ಹೋಗಿ ಆತ್ಮನು ಅಲ್ಲಿಂದ ಮಿದುಳಿನ ಬದಿಯ ಪೊಳ್ಳಿನಲ್ಲಿರುವ ಇಂದ್ರಿಯಕೇಂದ್ರಗಳಲ್ಲಿ ಸೇರುವನೆಂದು ಋಷಿಗಳು ಊಹಿಸಿರಬಹುದೇ ? ಆ ಮಂತ್ರದ ಈ ಅರ್ಥವು ಅಷ್ಟೊಂದು ಅಸಂಭವವಾದುದಲ್ಲ. ಆದರೆ ಋಷಿಗೆ ಶರೀರಶಾಸ್ತ್ರವು ಇಷ್ಟು ಸೂಕ್ಷ್ಮರೀತಿಯಿಂದ ಗೊತ್ತಿತ್ತೆನ್ನಬೇಕೋ ಅಥವಾ ತನ್ನ ಸೂಕ್ಷ್ಮದೃಷ್ಟಿಯಿಂದ ಇದನ್ನೆಲ್ಲ ಕಂಡುಹಿಡಿದಿದ್ದನೆನ್ನಬೇಕೋ ಇದು ತಿಳಿಯದ ಮಾತು !

**೧೯. ದೇಹ ದೇಹಿಗಳ ಸಂಬಂಧವು—** ಶರೀರಶಾಸ್ತ್ರದ ದೃಷ್ಟಿಯಿಂದ ಮೇಲಿನ ವಿವೇಚನೆಗೆ ಎಷ್ಟೇ ಮಹತ್ವವಿರಲಿ. ದೇಹ ಮತ್ತು ದೇಹಿ ಇವುಗಳ ಸಂಬಂಧವೇನು ಎಂಬ ವಿಷಯವನ್ನು ಉಪನಿಷತ್ಕಾರರು ಸೂಕ್ಷ್ಮರೀತಿಯಿಂದ ಚರ್ಚಿಸುತಿದ್ದರೆಂಬುದು ಸಿದ್ಧವಿದೆ. ಮೈತ್ರಿ ಉಪನಿಷತ್ತು ಸ್ವಲ್ಪ ಅರ್ವಾಚೀನ ಉಪನಿಷತ್ತು ಇದ್ದರೂ ಈ ಜಗತ್ತಿನ ನಿಮಿತ್ತಕಾರಣವೇನು ಎಂಬ ಪ್ರಶ್ನೆಗೆ, ಆತ್ಮನ ಚಾಲಕ ಶಕ್ತಿಯೇ ಕಾರಣವಿರುವದೆಂದು ಪ್ಲೇಟೋನಂತೆ ಉತ್ತರ ಕೊಟ್ಟಿರುವದು. ಆ ಉಪನಿಷತ್ತು ಹೇಳುವ ಕತೆ ಏನಂದರೆ: ಪ್ರಾಚೀನಕಾಲದಲ್ಲಿ ವಾಲಖಿಲ್ಯರೆಂಬ ಮುನಿಗಳು ಇರುತ್ತಿದ್ದರು. ಅವರು ಕ್ರತು ಪ್ರಜಾಪತಿಯ ಕಡೆಗೆ ಹೋಗಿ ಈ ದೇಹರಥದ ಸಾರಥಿಯಾರು ಎಂದು ಕೇಳಿದರು. 'ಮಾನ್ಯರೇ ಈ ದೇಹವೊಂದು ಜಡರಥದಂತೆ ಇರುವದು. ಇದರ ಚಾಲಕನಾರು ಇದನ್ನು ದಯವಿಟ್ಟು ತಾವು ನಮಗೆ ಹೇಳಬೇಕು' ಎಂದು ಪ್ರಜಾಪತಿಯನ್ನು ಕೇಳಿಕೊಂಡರು. ಅದಕ್ಕೆ ಪ್ರಜಾಪತಿಯು, 'ಆತ್ಮನೆ ಚಾಲಕನು ; ಶುದ್ಧನೂ ಶಾಂತನೂ ಶಾಶ್ವತನೂ ಅಜನೂ ಸ್ವತಂತ್ರನು ಇದ್ದು ಸ್ವಮಹಿಮೆಯಿಂದ ಇರುವ ಆತ್ಮನೆ ಈ ಅಚೇತನ ಶರೀರವನ್ನು ಪ್ರೇರಿಸುವವನು' (ಮೈ, ಅ ೨, ಮಂ ೩-೪) ಎಂದು ಉತ್ತರಕೊಟ್ಟನು. ಕೌಷೀತಕಿ ಉಪನಿಷತ್ತಾದರೂ ಆತ್ಮನೆ ಈ ಶರೀರಶಕ್ತಿಗಳ ಸ್ವಾಮಿಯೆಂದೂ ಇಂದ್ರಿಯವ್ಯಾಪಾರಗಳ ಒಡೆಯನೆಂದೂ ಹೇಳಿರುವದು. 'ಕ್ಷೌರಕತ್ತಿಯು ಒರೆಯಲ್ಲಿರುವಂತೆ' ಅಗ್ನಿಯು ಅಗ್ನಿಕುಂಡದಲ್ಲಿರುವಂತೆ, ಪ್ರಜ್ಞಾತ್ಮನು ಈ ಶರೀರದಲ್ಲಿ ಉಗುರುತುದಿಯಿಂದ ಕೂದಲ ಕೊನೆಯವರೆಗೆ ವ್ಯಾಪಿಸಿರುವನು. ಒಬ್ಬ ಶ್ರೇಷ್ಠಿಯ ಬಳಗದವರು ಅವನನ್ನವಲಂಬಿಸಿರುವಂತೆ ಈ ಇಂದ್ರಿಯಗಳು ಆತ್ಮನನ್ನವಲಂಬಿಸಿವೆ. ಆ ಶ್ರೇಷ್ಠಿಯು ತನ್ನ ಬಳಗದವರ ಜೊತೆಗೆ ಉಣ್ಣುವಂತೆ, ಬಳಗದವರು ಆ ಶ್ರೇಷ್ಠಿಯನ್ನವಲಂಬಿಸಿ ಉಣ್ಣುವಂತೆ ಈ ಪ್ರಜ್ಞಾತ್ಮನು ಇಂದ್ರಿಯಗಳ ಜೊತೆಗೆ ಭೋಗಿಸುವನು ಮತ್ತು ಇಂದ್ರಿಯಗಳು ಅವನ ಆಧಾರದಿಂದ ಭೋಗಿಸುವವು' (ಕೌ,

ಅ ೪, ಮಂ ೨೦ ). ಆತ್ಮನ ಮೇಲೆ ಇಂದ್ರಿಯಗಳೆಲ್ಲ ಅವಲಂಬಿಸಿರುವದನ್ನೂ ಆತ್ಮನು ಇಂದ್ರಿಯಗಳಲ್ಲೆಲ್ಲ ವ್ಯಾಪಿಸಿರುವದನ್ನೂ ಈ ಮಂತ್ರವು ವ್ಯಕ್ತವಾಗಿ ಹೇಳುತ್ತಿದೆ.

**೨೦. ಆತ್ಮನ ವ್ಯಾಪ್ತಿಯ ವಿಚಾರವು**— ಮೇಲೆ ಅವತರಿಸಿದ ವಚನವು ಆತ್ಮನು ಶರೀರವನ್ನೆಲ್ಲ ವ್ಯಾಪಿಸಿರುವನೆಂಬ ವಿಧಾನವನ್ನು ಸಮರ್ಥಿಸುತ್ತಿದೆ. ಆತ್ಮನು ಆಯಾ ಶರೀರದಷ್ಟೇ ದೊಡ್ಡವನಿರುವನೆಂಬ ಜೈನರ ಸಿದ್ಧಾಂತದ ಮೂಲವು ಈ ವಚನದಲ್ಲಿಯೆ ಇರಬಹುದು. 'ಹಸ್ತಿಪುದ್ಗಲಂ ಪ್ರಾಪ್ಯ ಹಸ್ತಿಪುದ್ಗಲೋ ಭವತಿ ಪಿಪೀಲಿಕಾಪುದ್ಗಲಂ ಪ್ರಾಪ್ಯ ಪಿಪೀಲಿಕಾಪುದ್ಗಲೋ ಭವತಿ,' ಅಂದರೆ ಆನೆಯ ಆತ್ಮನು ಆನೆಯ ಶರೀರವಷ್ಟು ಮತ್ತು ಇರುವೆಯ ಆತ್ಮನು ಇರುವೆಯ ಶರೀರವಷ್ಟು ದೊಡ್ಡವನಿರುವನೆಂದು ಜೈನರ ಮತವಿರುವದು. ಅವಕಾಶವನ್ನು ವ್ಯಾಪಿಸುವ ಗುಣವು ಆತ್ಮನಲ್ಲಿರುವದೆಂಬ ನಂಬಿಗೆಯ ಮೂಲಕ ಈ ತರದ ಅಪದ್ಧ ಅನುಮಾನಗಳು ಹೊರಡುವವು. ಆತ್ಮನು ಅವಕಾಶ ಮರ್ಯಾದೆಯಿಂದ ( Spatial limit ) ಬದ್ಧನಲ್ಲ ಎಂಬ ಕಲ್ಪನೆಗೆ ಈ ಮೇಲಿನ ನಂಬಿಗೆಯು ಅಡ್ಡಬರುವದು. ಉಪನಿಷತ್ತುಗಳಲ್ಲಿ ಬಂದ ಸ್ಥಲಾವಕಾಶದಿಂದ ಮರ್ಯಾದಿತವಾದ ಆತ್ಮನ ಕಲ್ಪನೆಯ ವಿಚಾರವು ಬಹಳ ಮನೋರಂಜಕವಿರುವದು. ಬೃಹದಾರಣ್ಯಕದಲ್ಲಿ ( ಬೃ, ಅ ೫, ಬ್ರಾ ೬, ಮಂ ೧ ) 'ಅಂತರ್ಹೃದಯದಲ್ಲಿರುವ ತೇಜಸ್ವಿಯಾದ ಮನೋಮಯ ಪುರುಷನು ಒಂದು ಅಕ್ಕಿಯ ಕಾಳಿನಷ್ಟು ಅಥವಾ ಜವೆಗೋದಿಯಷ್ಟು ಇದ್ದು ಅವನೇ ಎಲ್ಲರ ಈಶನು, ಅಧಿಪತಿಯು. ಅವನೇ ಇದೆಲ್ಲವನ್ನು ಆಳುವನು,' ಎಂಬ ವಚನವಿರುವದು. ಕಠೋಪನಿಷತ್ತಿನಲ್ಲಿ ಮತ್ತು ಇನ್ನೂ ಕೆಲವೆಡೆಗೆ ಆತ್ಮನು ಅಕ್ಕೀಕಾಳಿನಷ್ಟಿರದೆ ಹೆಬ್ಬೆಟ್ಟಿನಷ್ಟಿರುವನೆಂದು ಉಲ್ಲೇಖವಿದೆ. 'ಶರೀರಮಧ್ಯದಲ್ಲಿದ್ದು ಭೂತ ಮತ್ತು ಭವಿಷ್ಯಕಾಲದ ಎಲ್ಲ ವಸ್ತುಗಳನ್ನು ಆಳುವ ಆತ್ಮನು ಅಂಗುಷ್ಠಮಾತ್ರನು. ಅವನು ಯಾರಿಗೂ ಹೆದರನು' ಎಂದು ಕಠದಲ್ಲಿ ( ಕಠ, ಅ ೨, ವಲ್ಲಿ ೪, ಮಂ ೧೨) ಇರುವದು. ಛಾಂದೋಗ್ಯದಲ್ಲಿ ( ಛಾಂ, ಅ ೫, ಖಂ ೧೮, ಮಂ ೧ ) ಆತ್ಮನು ಅಂಗುಷ್ಠಮಾತ್ರನಿರದೆ ಒಂದು ಚೋಟು ಇರುವನೆಂದು ವರ್ಣನೆ ಇರುವದು. ಈ ಉಪನಿಷತ್ತಿನಲ್ಲಿ 'ಪ್ರಾದೇಶಮಾತ್ರ' ಮತ್ತು 'ಅಭಿವಿಮಾನ' ಎಂಬ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ಈ ಶಬ್ದಗಳು ಟೀಕಾಕಾರರಿಗೆ ಬಹಳ ತೊಂದರೆ ಕೊಟ್ಟಿವೆ. ಆತ್ಮನು ಸರ್ವವ್ಯಾಪಕನಿರುವನೆಂದು ನಂಬಿರುವ ಶಂಕರಾಚಾರ್ಯರು "ಅವನು ಪ್ರಾದೇಶಮಾತ್ರನು' * ಎಂಬ ವಿಧಾನಕ್ಕೆ ಹೇಗೆ ಸಮ್ಮತಿಸಬೇಕು ? ಇನ್ನು ಪ್ರಾದೇಶಮಾತ್ರವೆಂಬ ಶಬ್ದವು ನಿಜವಾಗಿ ಮಹತ್ವದ್ದಿರು

* ಆದುದರಿಂದಲೆ, ದ್ಯುಮೂರ್ಧಾದಿಭಿಃ ಪೃಥಿವೀಪಾದಾಂತೈರ್ವಿಶಿಷ್ಟಮೇಕಂ ಪ್ರಾದೇಶಮಾತ್ರಂ । ಎಂದು ಅವರು ವಿವೇಚಿಸಿರುವರು.

ವದು. ಅಮರಕೋಶ * ಮತ್ತು ಮೇದಿನೀಕೋಶಗಳು † ಪ್ರಾದೇಶಕ್ಕೆ ಒಂದು ಚೋಟು ಎಂಬ ಅರ್ಥವನ್ನು ಹೇಳಿರುವವು. ಇನ್ನೊಂದೆಡೆಗೆ ಪ್ರಾದೇಶಕ್ಕೆ ಚೋಟು ಎಂಬ ಅರ್ಥವು ಇದೆ ಎಂಬುದು ಶಂಕರಾಚಾರ್ಯರಿಗೂ ಗೊತ್ತಿತ್ತು. ಶಂಕರಾಚಾರ್ಯರ ಗ್ರಂಥಗಳ ಮೇಲೆ ಟೀಕೆ ಬರೆದ ಆನಂದಗಿರಿಯು ಜಾಬಾಲ ಶ್ರುತಿಯಲ್ಲಿ ‡ ಈ ಅರ್ಥ ವಿರುವದೆಂದು ಬರೆದಿದ್ದಾನೆ. ಪ್ರಾದೇಶವೆಂದರೆ ಹಣೆಯಿಂದ ಗದ್ದದವರೆಗಿನ ಅಂತರ ವೆಂದು ಶಂಕರಾಚಾರ್ಯರೇ ಒಂದೆಡೆಗೆ ಹೇಳಿದ್ದಾರೆ; ಈ ಅವರ ಅರ್ಥವು ಮಹತ್ವ ದ್ದಿರುವದು. ತಮ್ಮನಾದ ಅರ್ಜುನನಿಗಿಂತ ಭೀಮಸೇನನು ಒಂದು ಪ್ರಾದೇಶದಷ್ಟು ಎತ್ತರನಿದ್ದನು ಎಂದು ಮಹಾಭಾರತದಲ್ಲಿ § ಹೇಳಿದೆ. ಮೈತ್ರಿ × ಉಪನಿಷತ್ತಿ ನಲ್ಲಿ ಇದೇ ಅರ್ಥವಿದೆ. ಆದುದರಿಂದ ನಾವು ಚರ್ಚಿಸುತ್ತಿರುವ ಅವತರಣದಲ್ಲಿ ಒಂದು 'ಪ್ರಾದೇಶ' ವೆಂದರೆ ಹಣೆಯಿಂದ ಗದ್ದದವರೆಗಿನ ಅಂತರವೆಂಬ ಅರ್ಥವನ್ನೇ ತೆಗೆದು ಕೊಳ್ಳುವದು ಉಚಿತವೆಂಬುದು ಸ್ಪಷ್ಟವಿದೆ. 'ಅಭಿವಿಮಾನ' ವೆಂಬ ಶಬ್ದವಾದರೂ ಅಷ್ಟೇ ತೊಂದರೆಕೊಟ್ಟಿದೆ. ಆ ಶಬ್ದಕ್ಕೆ ಶಂಕರಾಚಾರ್ಯರು + ಹೇಳಿದ ಮತ್ತು ಡಾಯಸನ್, ಮ್ಯಾಕ್ಸಮುಲರ, ರಾಜೇಂದ್ರಲಾಲ ಮಿತ್ರ ಮುಂತಾದವರು ಸಮರ್ಥಿಸಿದ ಅರ್ಥವು ಅಸ್ವಾಭಾವಿಕವಿರುವದೆಂದು ಹೇಳಬಹುದು. 'ತನ್ನ ತಾನರಿದವನು' ಎಂದು ಶಂಕರಾಚಾರ್ಯರು ಇದರ ಅರ್ಥವನ್ನು ಹೇಳಿರುವರು. ಇದು ಕಾಂಟನ 'ನಾನು ನಾನೇ ಇರುವೆನು' ಎಂಬ ವಿಧಾನವನ್ನು ಹೋಲುವದು. ಆದರೆ ಆ ಅರ್ಥವು ಅಭಿವಿಮಾನವೆಂಬ ಶಬ್ದದೊಳಗಿಂದ ಹೊರಡುವದಿಲ್ಲವೆಂದು ನಮ್ಮ ಅರಿಕೆಯು. ಅಭಿವಿಮಾನ ಶಬ್ದದ ಅರ್ಥದ ಮಟ್ಟಿಗೆ ಶಂಕರಾಚಾರ್ಯರನ್ನು ಸಮರ್ಥಿಸುವಂತೆ ಡಾಯಸನ್ = ಇವನು ಈ ಉಪ

---

* ಪ್ರಾದೇಶತಾಲಗೋಕರ್ಣಾಸ್ತರ್ಜನ್ಯಾದಿಯುತೇ ತತೇ । ಅಮ. ೨. ೬. ೮೩. ಟೀಕಾಕಾರನು ಪ್ರಾದೇಶವೆಂದರೆ, ತರ್ಜನ್ಯಾದಿಸಹಿತ ವಿಸ್ತೃತಾಂಗುಷ್ಠಃ । ಎಂದು ಹೇಳಿರುವನು.

† ಪ್ರಾದೇಶೋ ದೇಶಮಾತ್ರೇ ಸ್ಯಾತ್ತರ್ಜನ್ಯಂಗುಷ್ಠಸಂಮಿತೇ । ಮೇದಿನಿ.

‡ ಶಾಖಾಂತರೇ ತು ಮೂರ್ಧಾದಿಶ್ಚಿಬುಕಪ್ರತಿಷ್ಠ ಇತಿ ಪ್ರಾದೇಶಮಾತ್ರಂ ಕಲ್ಪಯಂತಿ । ಇಹ ತು ನ ತಥಾಭಿಪ್ರೇತಮ್ । ಛಾಂ. ಅ ೫, ಖಂ ೧೮, ಮಂ ೧ರ ಮೇಲಿನ ಟೀಕೆ.

§ ಪ್ರಮಾಣೇನ ಭೀಮಸೇನಃ ಪ್ರಾದೇಶೇನಾಧಿಕೋಽರ್ಜುನಾತ್ । ಮ. ಭಾ. ೫, ೫೧, ೧೯.

× ಶರೀರಪ್ರಾದೇಶಾಂಗುಷ್ಠಮಾತ್ರಮಣೋರಪ್ಯಣ್ವ್ಯಂ ಧ್ಯಾತ್ವಾ ಅತಃ ಪರಮತಾಂ ಗಚ್ಛತಿ । ಮೈ. ಅ ೬, ಮಂ ೩೮.

\+ ಪ್ರತ್ಯಗಾತ್ಮತಯಾಭಿವಿಮೀಯತೇಽಹಮಿತಿ ಜ್ಞಾಯತ ಇತ್ಯಭಿವಿಮಾನಃ । ಛಾಂ, ಅ ೫, ಖಂ ೧೮, ಮಂ ೧ರ ಮೇಲಿನ ಟೀಕೆ.

= Sechzig Upanishads pp. 150–151.

ನಿಷದ್ವಾಕ್ಯವನ್ನು ಅನುವಾದಿಸಿರುವನು. ' ಅಭಿವಿಮಾನ ' ವೆಂದರೆ ' ತನ್ನೊಂದಿಗೆ ಅಭಿನ್ನ ವಾಗಿರುವ ' ಎಂದು ಮ್ಯಾಕ್ಸಮುಲರನು * ಭಾಷಾಂತರಿಸಿರುವನು. 'ನಾನು ಎಂಬ ಸರ್ವನಾಮದಿಂದ ನಿರ್ದಿಶಿತವಾದ ಮುಖ್ಯವಸ್ತು ' ಎಂದು ರಾಜೇಂದ್ರಲಾಲ ಮಿತ್ರನು † ಅದರ ಅರ್ಥವನ್ನು ಮಾಡಿರುವನು. ' ಅಭಿ ' ಈ ಉಪಪದಕ್ಕೆ ಇದ್ದುದಕ್ಕಿಂತ ಹೆಚ್ಚಿನ ಅರ್ಥವನ್ನು ಕೊಡುವದರಿಂದ ಈ ಎಲ್ಲ ತಪ್ಪುಗಳಾಗುತ್ತಿವೆ ಎಂದು ನಮ್ಮ ಅಭಿಪ್ರಾಯವು. ಬೇಕಾದ ಬುದ್ಧಿಕೌಶಲವನ್ನುಪಯೋಗಿಸಿದರೂ ಡಾಯಸನ್ ಮುಂತಾದವರು ಮಾಡಿದ ' ತಾನು ' ಎಂಬ ಅರ್ಥವು ಇಲ್ಲಿ ಆಗಲಾರದು. ಅಭಿವಿಮಾನವೆಂದರೆ ' ಅಳೆಯುವ ' ಎಂದು ಅರ್ಥಮಾಡುವದು ಹೆಚ್ಚು ಸ್ವಾಭಾವಿಕವಲ್ಲವೆ ? ಅಂದಮೇಲೆ ' ಪ್ರಾದೇಶಮಾತ್ರಮಭಿವಿಮಾನಂ' ಇದರ ಅರ್ಥವು, ಹಣೆಯಿಂದ ಗದ್ದದವರೆಗೆ ಅಳತೆಯುಳ್ಳ, ಎಂದು ಆಗುವದು ; ಮತ್ತು ' ಹಣೆಯಿಂದ ಗದ್ದದವರೆಗೆ ಅಳತೆಯುಳ್ಳ ವೈಶ್ವಾನರ ಆತ್ಮನನ್ನು ಉಪಾಸಿಸುವವನು ಎಲ್ಲ ಲೋಕಗಳಲ್ಲಿ ಎಲ್ಲ ಭೂತಗಳಲ್ಲಿ ಮತ್ತು ಎಲ್ಲ ಆತ್ಮಗಳಲ್ಲಿ ಅನ್ನವನ್ನು ಸೇವಿಸುವನು ' ಎಂದು ಆ ಇಡೀ ವಾಕ್ಯದ ಅರ್ಥವಾಗುವದು. ಅರ್ಥಾತ್ ಹಿಂದೂ ಜನರ ಅಭಿಪ್ರಾಯದಂತೆ ಉತ್ತಮಾಂಗವೆಂದೆನಿಸುವ ಶಿರಸ್ಸಿನ ಅಧಿಪತಿಯಾಗಿ ಹಣೆಯಿಂದ ಗದ್ದದವರೆಗಿನ ಭಾಗದಲ್ಲಿರುವ ಆತ್ಮನನ್ನು ಉಪಾಸಿಸಬೇಕೆಂದು ಇಲ್ಲಿ ಹೇಳಿರುವದು. ಪ್ರೊಫೆಸರ ಜೇಮ್ಸ ಇವನು ತನ್ನ ಆತ್ಮನು ತಲೆಯಲ್ಲಿಯೆ ವಾಸಿಸುವನೆಂದು ಹೇಳುವದು ಆಶ್ಚರ್ಯವಲ್ಲವೆಂಬುದು ಇದರಮೇಲಿಂದ ಕಂಡುಬರುವದು. ಅವನು ತನ್ನ ( Principles of Psychology 1. 301) ಎಂಬ ಮಾನಸಶಾಸ್ತ್ರದ ಗ್ರಂಥದಲ್ಲಿ 'ಚನ್ನಾಗಿ ನಿರೀಕ್ಷಿಸಿ ನೋಡಿದರೆ ತಲೆಯಲ್ಲಿ ನೆತ್ತಿಯಿಂದ ಗಂಟಲದವರೆಗೆ ನಡೆದಿರುವ ಕೆಲವು ವಿಲಕ್ಷಣವಾದ ಚಲನವಲನಗಳೆಲ್ಲ ಕೂಡಿ ಆತ್ಮವೆಂಬ ಹೆಸರನ್ನು ಪಡೆದಿವೆ ' ಎಂದಿರುವನು.

**೨೧. ಅಣೋರಣೀಯಾನ್ಮಹತೋ ಮಹೀಯಾನಾತ್ಮಾ—** ಆತ್ಮನ ವ್ಯಾಪ್ತಿಯ ಬಗ್ಗೆ ಆಗ ಪ್ರಚಲಿತವಿದ್ದ ಕೆಲವು ವಿಚಾರಗಳ ವಿಕಾಸವನ್ನು ನಾವು ಇದುವರೆಗೆ ನೋಡಿದಂತಾಯಿತು. ಮೊದಲು ಆತ್ಮನು ಅಕ್ಕಿಯ ಅಥವಾ ಜವೆಗೋದಿಯ ಕಾಳಿನಷ್ಟು ಇರುವನೆಂಬ ಕಲ್ಪನೆಯು ಇತ್ತು. ಆ ಮೇಲೆ ಅವನು ಅಂಗುಷ್ಠಮಾತ್ರನು, ಮುಂದೆ ಪ್ರಾದೇಶಪ್ರಮಾಣನು ಎಂದು ಉಲ್ಲೇಖಗಳಿರುವವು. ಅದಕ್ಕೂ ಮುಂದೆ ಕೌಷೀತಕಿಯಲ್ಲಿ ಒರೆಗಲ್ಲನ್ನು ವ್ಯಾಪಿಸಿದ ಕ್ಷೌರಕತ್ತಿಯಂತೆ ಆತ್ಮನು ಶರೀರವನ್ನೆಲ್ಲ ವ್ಯಾಪಿಸಿರುವನೆಂಬ ಪ್ರತಿಪಾದನವಿರುವದು. ಇನ್ನು ಆತ್ಮನು ಶರೀರದ ಯಾವದೇ ವಿಶಿಷ್ಟ

---

* Sacred books of the East Vol 1. p. 88.

† Twelve principal Upanishads, by Tukaram Tatya p. 578

ಭಾಗದಲ್ಲಿ ಕಟ್ಟಿಡಲ್ಪಟ್ಟಿಲ್ಲ, ಆದರೆ ಅವನು ಅನಂತನಿರುವದರಿಂದ ಸರ್ವವ್ಯಾಪಿಯಿರುವನು ಎಂಬ ಕಲ್ಪನೆಯನ್ನು ಲಕ್ಷಿಸುವ. ಆತ್ಮನು ನಿತ್ಯನು, ವಿಭುವು, ಸರ್ವಗತನು, ಸೂಕ್ಷ್ಮನು, ಅವ್ಯಯನು, ಸರ್ವ ಭೂತಗಳ ಯೋನಿಯು, ಧೀರರೇ ಅವನನ್ನರಿಯುವರು ಎಂದು ಮುಂಡಕೋಪನಿಷತ್ತು (ಮುಂ, ೧, ಖಂ ೧, ಮಂ ೬) ವರ್ಣಿಸುವದು. ಕಠೋಪನಿಷತ್ತು ಇದೇ ವಿಶೇಷಣಗಳನ್ನು ಸಮರ್ಥಿಸಿ 'ಈ ಮಹಾನ್ ಮತ್ತು ವಿಭುವಾದ ಸರ್ವಗತ ಆತ್ಮನನ್ನರಿತ ಧೀರರು ಶೋಕವನ್ನು ದಾಟುವರು' (ಕಠ, ಅ ೧, ವಲ್ಲಿ ೨, ಮಂ ೨೧) ಎಂದು ಹೇಳಿರುವದು. ಆತ್ಮನ ಆಕಾರದ ಬಗ್ಗೆ ಪ್ರಚಲಿತವಿದ್ದ ವಿವಿಧ ಕಲ್ಪನೆಗಳಲ್ಲಿ ಯಾವುದನ್ನು ಆರಿಸಬೇಕೆಂಬುದು ತಿಳಿಯದೆ ಆ ಎಲ್ಲ ವರ್ಣನೆಗಳನ್ನು ಮೈತ್ರ್ಯುಪನಿಷತ್ತು ಒಂದೇ ವಾಕ್ಯದಲ್ಲಿ ಕಲೆಸಿಬಿಟ್ಟಿರುವದು. 'ಆತ್ಮನು ಅಣುವಿಗಿಂತ ಅಣುವು, ಅಂಗುಷ್ಠಮಾತ್ರನು, ಪ್ರಾದೇಶಪರಿಮಾಣವುಳ್ಳವನು, ಸರ್ವ ಶರೀರವ್ಯಾಪಿಯು, ಎಂಬುದನ್ನರಿತು ಧ್ಯಾನಿಸುವವನು ಪರಮಗತಿಯನ್ನು ಹೊಂದುವನು' (ಮೈ, ಅ ೬, ಮಂ ೩೮) ಎಂದು ವಚನವಿರುವದು. ಈ ಉಪನಿಷತ್ತು ಯಾವ ವಿಧಾನವನ್ನು ಸಮರ್ಥಿಸುವದೆಂಬುದು ತಿಳಿಯುವದೇ ಕಠಿನವು. ರಾಮತೀರ್ಥನೆಂಬ ಟೀಕಾಕಾರನು ಸೂಚಿಸಿದಂತೆ ಮತ್ತು ಕಾವೆಲ್ ಹಾಗೂ ಮ್ಯಾಕ್ಸಮುಲರ ಇವರು ಹೇಳಿದಂತೆ ಈ ಮಂತ್ರಕ್ಕೆ 'ಆತ್ಮನು ಅಂಗುಷ್ಠಮಾತ್ರನಿದ್ದು ಪ್ರಾದೇಶಮಾತ್ರವಿರುವ ಹೃದಯದಲ್ಲಿ ವಾಸಿಸುವನು' ಎಂಬ ಇನ್ನೊಂದರ್ಥವನ್ನು ಹೇಳಬಹುದು. ಆದರೂ ಒಂದಕ್ಕೊಂದು ವಿರೋಧಿಯಾದ ವರ್ಣನೆಗಳನ್ನು ಸಂಧಿಸುವದು ಕಠಿಣವೇ ಸೈ. ಈ ಬಗೆಯ ವಿರೋಧಿಯಾದ ವಿಧಾನಗಳನ್ನು ಸಂಧಿಸುವ ಅವಶ್ಯಕತೆಯನ್ನು ಉಪನಿಷತ್ಕಾರರು ಕಂಡುಹಿಡಿದಿದ್ದರೆಂಬುದು ಕಠೋಪನಿಷತ್ತಿನಲ್ಲಿಯ (ಕಠ, ಅ ೧, ವಲ್ಲಿ ೨, ಮಂ ೨೦) 'ಆತ್ಮನು ಅಣುವಿಗಿಂತಲೂ ಅಣುವು ಇರುವನು; ಮಹತ್ತಿಗಿಂತಲೂ ಮಹತ್ತಿರುವನು; ಹೃದಯಗುಹೆಯಲ್ಲಿ ಅವನ ವಾಸವು' ಎಂಬ ಮಂತ್ರದ ಮೇಲಿಂದ ತಿಳಿಯುವದು. ಇದೇ ಬಗೆಯ ವಚನವು ಛಾಂದೋಗ್ಯದಲ್ಲಿ (ಛಾಂ, ಅ ೩, ಖಂ ೧೪, ಮಂ ೩) 'ನನ್ನ ಆತ್ಮನು ಅಕ್ಕಿಯ ಕಾಳಿಗಿಂತ, ಜವೆಗೋದಿಯ ಕಾಳಿಗಿಂತ, ಸಾಸಿವೆ ಕಾಳಿಗಿಂತ, ಶ್ಯಾಮಾಕಕ್ಕಿಂತ ಚಿಕ್ಕವನು; ಹೀಗಿದ್ದರೂ ಹೃದಯಾಂತರದಲ್ಲಿರುವ ನನ್ನ ಆತ್ಮನು ಈ ಪೃಥ್ವಿಗಿಂತ ದೊಡ್ಡವನು, ಅಂತರಿಕ್ಷಕ್ಕಿಂತ ದೊಡ್ಡವನು, ಆಕಾಶಕ್ಕಿಂತ ದೊಡ್ಡವನು, ಈ ಎಲ್ಲ ಲೋಕಗಳಿಗಿಂತ ದೊಡ್ಡವನು' ಹೀಗೆ ಬಂದಿರುವದು. ಆತ್ಮನು ಜಡವಸ್ತುವಿನಂತೆ ಅವಕಾಶವನ್ನು ವ್ಯಾಪಿಸುವ ಗುಣವುಳ್ಳವನು ಎಂಬ ಕಲ್ಪನೆಯ ಮೂಲಕ ಹೊರಡುವ ಈ ಅನೇಕ ಪರಸ್ಪರ ವಿರುದ್ಧ ಅನುಮಾನಗಳೇ ಆ ಕಲ್ಪನೆಯು ನಾಶವನ್ನು ಮಾಡಲಿಕ್ಕೆ ಸಾಕಾಗಿದ್ದುವು. ಆತ್ಮನು ಅತೀತನಿದ್ದು

ಚಿದ್ಘನನಿರುವನೆಂದು ತಿಳಿದುಕೊಳ್ಳುವದೆ ಈ ಗೊಂದಲದೊಳಗಿಂದ ಹೊರಬೀಳುವ ಉತ್ತಮ ಮಾರ್ಗವು.

**೨೨. ಆತ್ಮನ ಅವಸ್ಥೆಗಳ ಪೃಥಃಕರಣವು—** ಇನ್ನು ಆತ್ಮನು ಶರೀರ ದಲ್ಲಿರುವಾಗ ಹಲವು ಅವಸ್ಥೆಗಳನ್ನು ಹೊಂದುವದು ಅಪರಿಹಾರ್ಯವು. ಮಾಂಡೂ ಕ್ಯೋಪನಿಷತ್ತಿನಲ್ಲಿ ಕೊಟ್ಟ ಈ ಅವಸ್ಥೆಗಳ ವಿವರಣೆಯು ಬಹಳ ಸೂಕ್ಷ್ಮವಿರುವದು, ಮತ್ತು ಆ ಉಪನಿಷತ್ತಿನ ಪ್ರಾಚೀನತೆಯನ್ನು ಲಕ್ಷಕ್ಕೆತಂದರೆ ಈ ವಿವರಣೆಯು ಬಹಳ ಅದ್ಭುತವಾಗಿರುವದೆಂದು ಹೇಳಬಹುದು. ಮಾನಸಶಾಸ್ತ್ರದಲ್ಲಿ ಅತಿ ಚೇತನಾವಸ್ಥೆಯ ಅಥವಾ ಚೇತನಾತೀತ ಅವಸ್ಥೆಯ ( Superconscious ) ಕಲ್ಪನೆಯನ್ನು ಮೊದಲು ಸೂಚಿಸಿದವರು ವಿವೇಕಾನಂದರೆಂದು ಒರ್ವ ಆಧುನಿಕ ಮಾನಸಶಾಸ್ತ್ರಜ್ಞನು ಬರೆದಿರು ವನು. ನಿಜವಾಗಿ ಆ ಶ್ರೇಯಸ್ಸು ಮಾಂಡೂಕ್ಯವನ್ನು ಬರೆದ ಋಷಿಗೆ ಹೋಗತಕ್ಕದ್ದು. ಆತ್ಮನಿಗೆ, ನಮ್ಮ ಚೇತನಕ್ಕೆ, ಮೂರು ಅವಸ್ಥೆಗಳಲ್ಲದೆ ನಾಲ್ಕನೆಯದೊಂದು ಅವಸ್ಥೆಯು ಇರುವದು, ಅದೇ ಅತಿ-ಚೇತನಾವಸ್ಥೆ ಎಂದು ಮಾಂಡೂಕ್ಯೋಪನಿಷತ್ಕಾರರು ಹೇಳಿರುವರು. ಜಾಗೃತ್, ಸ್ವಪ್ನ, ಸುಷುಪ್ತಿ ಮತ್ತು ತುರೀಯ ಅಥವಾ ಶುದ್ಧಾತ್ಮಸ್ಥಿತಿ ಹೀಗೆ ಆತ್ಮನಿಗೆ ನಾಲ್ಕು ಅವಸ್ಥೆಗಳು. ಮಾಂಡೂಕ್ಯೋಪನಿಷತ್ತು ಹೇಳುವುದೇನಂದರೆ, ' ಆತ್ಮನು ಚತು ಷ್ಪಾದನು ಅಂದರೆ ನಾಲ್ಕು ಅವಸ್ಥೆಗಳುಳ್ಳವನು. ಮೊದಲಿನದು ಜಾಗ್ರತಾವಸ್ಥೆಯು. ಆ ಅವಸ್ಥೆಯಲ್ಲಿ ಆತ್ಮನು ಬಾಹ್ಯವಸ್ತುಗಳನ್ನಷ್ಟೆ ಅರಿಯುವನು ಮತ್ತು ಸ್ಥೂಲವಸ್ತು ಗಳನ್ನುಪಭೋಗಿಸುವನು. ಇದು ವೈಶ್ವಾನರವೆಂಬ ಹೆಸರನ್ನು ಪಡೆದಿರುವದು. ಎರಡನೆ ಯದು ಸ್ವಪ್ನದ ಅವಸ್ಥೆಯು. ಆ ಅವಸ್ಥೆಯಲ್ಲಿ ಆತ್ಮನು ಅಂತರ್ವಸ್ತುಗಳನ್ನಷ್ಟೆ ಅರಿಯು ವನು ಮತ್ತು ಸೂಕ್ಷ್ಮವಸ್ತುಗಳನ್ನುಪಭೋಗಿಸುವನು. ಇದು ತೈಜಸವೆಂಬ ಹೆಸರನ್ನು ಪಡೆದಿರುವದು. ಮೂರನೆಯದು ಸುಷುಪ್ತಾವಸ್ಥೆಯು. ಆ ಅವಸ್ಥೆಯಲ್ಲಿ ಆತ್ಮನು ಯಾವ ಕಾಮನೆಯನ್ನೂ ಕಾಮಿಸುವದಿಲ್ಲ. ಯಾವ ಕನಸನ್ನೂ ಕಾಣುವದಿಲ್ಲ. ಇದು ಸುಷುಪ್ತವೆಂಬ ಹೆಸರನ್ನು ಪಡೆದಿರುವದು. ಈ ರೀತಿ ಮೂರನೆಯ ಅವಸ್ಥೆಯಲ್ಲಿ ಗಾಢನಿದ್ರೆಯಿರುವದು. ಅಲ್ಲಿ ಆತ್ಮನು ಪ್ರಜ್ಞಾನಘನನಾಗಿ ಆನಂದಮಯನಾಗಿ ಆನಂದವನ್ನನುಭವಿಸುವನು. ಆ ಸ್ಥಿತಿಯು ಪ್ರಾಜ್ಞವೆಂದೆನಿಸುವದು. ನಾಲ್ಕನೆಯದು ಶುದ್ಧಾತ್ಮಸ್ಥಿತಿಯು. ಅಲ್ಲಿ ಆತ್ಮನು ಹೊರಗಣ ಅಥವಾ ಒಳಗಣ ಅಥವಾ ಎರಡೂಬದಿಯ ವಸ್ತುಗಳನ್ನರಿಯುವದಿಲ್ಲ. ಆಗ ಆತ್ಮನು ಪ್ರಜ್ಞಾನಘನನೂ ಅಲ್ಲ, ಪ್ರಜ್ಞನೂ ಅಲ್ಲ, ಅಪ್ರಜ್ಞನೂ ಅಲ್ಲ ; ಅವೆಲ್ಲವುಗಳಾಚೆ ಗಿರುವದರಿಂದ ಆಗ ಅವನು ಅದೃಷ್ಟನು, ಅವ್ಯವಹಾರ್ಯನು, ಅಗ್ರಾಹ್ಯನು, ಲಕ್ಷಣರಹಿ ತನು, ಬುದ್ಧಿಯಾಚೆಗಿರುವವನು, ಅನಿರ್ದೇಶ್ಯನು, ಏಕಾತ್ಮಪ್ರತ್ಯಯದ ಸಾರನು; ಅದು

ಐದೂ ಬಗೆಯ ಇಂದ್ರಿಯವ್ಯಾಪಾರಗಳ ಉಪಶಮವಾಗುವ ಸ್ಥಾನವು. ಅದು ಶಾಂತವು, ಮಂಗಲವು, ಅದ್ವೈತವು. ಅವನೇ ಆತ್ಮನು ' ( ಮಾಂ, ಮಂ ೨–೧೭ ).

**೨೩. ಪಿಂಡವು ಮತ್ತು ಬ್ರಹ್ಮಾಂಡವು—** ವ್ಯಕ್ತಿಯ ಆತ್ಮನಿಗೆ ಜಾಗ್ರತ್, ಸ್ವಪ್ನ, ಸುಷುಪ್ತ ಮತ್ತು ಶುದ್ಧಾತ್ಮ ಎಂಬ ನಾಲ್ಕು ಅವಸ್ಥೆಗಳು ಇರುವವೆಂಬುದನ್ನು ಗುರುತಿಸಿದ ಸಂಗತಿಯೂ ಆ ಅವಸ್ಥೆಯಲ್ಲಿರುವ ಆತ್ಮನಿಗೆ ಕೊಟ್ಟ ವೈಶ್ವಾನರ, ತೈಜಸ, ಪ್ರಾಜ್ಞ ಮತ್ತು ಆತ್ಮ ಎಂಬ ನಾಲ್ಕು ಹೆಸರುಗಳೂ ಈಚೆಗಿನ ಸುಬದ್ಧವಾದ ವೇದಾಂತ ಶಾಸ್ತ್ರಕ್ಕೆ ಬಲುಮಟ್ಟಿಗೆ ಸಹಾಯಕವಾಗಿವೆ. ಮಾಂಡೂಕ್ಯೋಪನಿಷತ್ತು ಈಚೆಗೆ ರಚಿತವಾದುದೆಂದು ಕೆಲವರು ಅನ್ನುವದರ ಕಾರಣವಾದರೂ ಈ ಸಾಮ್ಯವೇ. ಆದರೆ ಸಮಷ್ಟಿ ಆತ್ಮನ ಇದೇ ಬಗೆಯ ನಾಲ್ಕು ಅವಸ್ಥೆಗಳನ್ನು ಈ ಉಪನಿಷತ್ತು ಉಲ್ಲೇಖಿಸುವದಿಲ್ಲ. ವೇದಾಂತದಲ್ಲಿ ಸಮಷ್ಟಿ ಆತ್ಮನು ಈ ನಾಲ್ಕು ಅವಸ್ಥೆಗಳಲ್ಲಿರುವಾಗ ಕ್ರಮದಿಂದ ವಿರಾಟ್, ಹಿರಣ್ಯಗರ್ಭ, ಈಶ ಮತ್ತು ಬ್ರಹ್ಮ ಎಂಬ ಹೆಸರುಗಳನ್ನು ಪಡೆದಿರುವನು. ವ್ಯಷ್ಟಿಯ ನಾಲ್ಕು ಅವಸ್ಥೆಗಳಿಗೆ ತುಲ್ಯವಾದ ನಾಲ್ಕು ಅವಸ್ಥೆಗಳು ಸಮಷ್ಟಿಯ ಆತ್ಮನಲ್ಲಿಯೂ ಇರುವವೆಂದು ವೇದಾಂತವು ಪ್ರತಿಪಾದಿಸತೊಡಗಿರುವದು. ವ್ಯಷ್ಟಿಯ ಚೇತನದಂತೆಯೆ ಸಮಷ್ಟಿಯ ಚೇತನವು ಇರುವದೆಂದೂ ವ್ಯಷ್ಟಿಯಲ್ಲಿದ್ದುದೆ ಸಮಷ್ಟಿಯಲ್ಲಿ ಅಂದರೆ ವಿಶ್ವದಲ್ಲಿರುವದೆಂದೂ ತಿಳುವಳಿಕೆಯಾಗುವದು ಸಹಜವು. ಉಪನಿಷತ್ತುಗಳಲ್ಲಿ ಈ ವಿಚಾರವು ಒಡೆದು ಕಾಣಿಸದಿದ್ದರೂ ಈ ತರದ ವಿಚಾರಸರಣಿಯ ಛಾಯೆಯು ಅವುಗಳಲ್ಲಿ ತಲೆದೋರಿರುವದು. ಲಾಯಬ್‌ನೀಟ್ಝನ ಪ್ರತಿಬಿಂಬವಾದವು ( Theory of representation ) ಛಾಂದೋಗ್ಯದಲ್ಲಿ ನಿಚ್ಚಳವಾಗಿ ಬಂದಿದೆ. ' ಈ ದೇಹವೆಂಬ ಬ್ರಹ್ಮಪುರದಲ್ಲಿ ಸಣ್ಣ ಪುಂಡರೀಕ ಕಮಲದಂತೆ ಒಂದು ಕಮಲವು ( ಹೃದಯವು ) ಇರುವದು. ಅದಕ್ಕೂ ಚಿಕ್ಕ ಅಂತರಾಕಾಶವು ಆ ಕಮಲದಲ್ಲಿರುವದು. ಅದರಲ್ಲಿರುವ ವಸ್ತುವು ಹುಡುಕಲು ಯೋಗ್ಯವಾದಂತಹದು, ಅರಿತುಕೊಳ್ಳಲಿಕ್ಕೆ ಯೋಗ್ಯವಾದಂತಹದು......ಈ ಹೊರಗಣ ಆಕಾಶದಂತೆಯೆ ಒಳಗಣ ಹೃದಯಾಕಾಶವಿರುವದು. ಭೂಮ್ಯಾಕಾಶಗಳೆರಡೂ ಅದರಲ್ಲಿರುವವು. ತೇಜ, ವಾಯು, ಸೂರ್ಯ, ಚಂದ್ರ, ವಿದ್ಯುತ್ತು, ನಕ್ಷತ್ರಗಳು ಇವೆಲ್ಲ ಅಲ್ಲಿರುವವು ' ( ಛಾಂ, ಅ ೮, ಖಂ ೧, ಮಂ ೧–೩ ); ವ್ಯಷ್ಟಿಯು ಸಮಷ್ಟಿಯ ಸೂಕ್ಷ್ಮಾಕಾರವೆಂಬ ಕಲ್ಪನೆಯ ಆದಿಯು ಇಲ್ಲಿರುವದೆಂದು ಹೇಳಬಹುದು. ಬ್ರಹ್ಮಾಂಡವು ಪಿಂಡದ ವಿಶ್ವರೂಪವು, ಪಿಂಡವು ಬ್ರಹ್ಮಾಂಡದ ಪ್ರತಿಬಿಂಬ ಕಾಣುವ ಕನ್ನಡಿಯು ಎಂದು ವರ್ಣಿಸುವದು ಯೋಗ್ಯವೇ ಸರಿ. ತನ್ನ ( Monadology 66–67 ) ಗ್ರಂಥದಲ್ಲಿ ಲಾಯಬ್‌ನೀಟ್ಝನು, ' ಈ ವಿಶ್ವದ ಅಣುರೇಣುವಿನಲ್ಲಿ ಸಹ ಅನಂತ ಜೀವಗಳು, ಪ್ರಾಣಗಳು, ಆತ್ಮ

ಗಳು ತುಂಬಿರುವವು. ಈ ಸೃಷ್ಟಿಯ ಪ್ರತಿ ಅಣುವೆಂದರೆ ಸುಳಿದಾಡುವ ಜೀವಂತ ಮೀನು ಗಳಿಂದ ತುಂಬಿದ ಒಂದು ಕೆರೆಯೆಂದೇ ಅನ್ನಬಹುದು ' ಎಂದು ಬರೆದಿರುವನು.

**೨೪. ಆತ್ಮನ ಕೋಶಗಳು**— ಉಪನಿಷತ್ತುಗಳಲ್ಲಿ ವಿವೇಚಿಸಲ್ಪಟ್ಟ ಮಾನಸ ಶಾಸ್ತ್ರವಲ್ಲಿಯ ಇನ್ನೊಂದು ಮನೋವೇಧಕವಾದ ವಿಷಯವೆಂದರೆ ಕೋಶಗಳದು. ಆಧು ನಿಕ ಥಿಯಾಸಫಿಸ್ಟರು ಈ ಕೋಶಗಳಿಗೆ ಎಷ್ಟು ಮಹತ್ವವನ್ನು ಕೊಟ್ಟಿರುವರೆಂಬುದನ್ನು ನಾವು ಬಲ್ಲೆವು. ಈ ಕೋಶಗಳಿಗೆ ತುಲ್ಯವಾದ ಏಳು ಬೇರೆ ಬೇರೆ ಭೂಮಿಕೆಗಳಿರುವವೆಂದೂ ಮನುಷ್ಯನ ಶರೀರಗಳು ಆ ಏಳು ಭೂಮಿಕೆಗಳಲ್ಲಿ ವಾಸಿಸುವವೆಂದೂ ಅವರ ಹೇಳಿಕೆಯು. ಅವರು ವಿವರಿಸುವ ಸಪ್ತಶರೀರಗಳೆಂದರೆ, ಅನ್ನಮಯ (Physical), ಜ್ಯೋತಿರ್ಮಯ ( Astral ), ಮನೋಮಯ, ವಿಜ್ಞಾನಮಯ, ಆನಂದಮಯ ಅಥವಾ ಆತ್ಮಮಯ, ತತ್ವಮಯ ( Monadic ) ಮತ್ತು ದಿವ್ಯ ಎಂಬಿವೇ ಏಳು. ಉಪನಿಷತ್ತುಗಳ ದೃಷ್ಟಿ ಯಿಂದ ಈ ಸಿದ್ಧಾಂತಕ್ಕೆ ಏನಾದರೂ ಪುಷ್ಟಿ ಸಿಕ್ಕುವುದೊ ಹೇಗೆ ಇದನ್ನು ನೋಡುವ. ಈ ಬಗೆಯ ವಿಚಾರಗಳನ್ನು ತೈತ್ತಿರೀಯೋಪನಿಷತ್ತೊಂದೇ ವ್ಯಕ್ತಮಾಡುವದು. ಈ ಉಪ ನಿಷತ್ತಿನ ದ್ವಿತೀಯ ವಲ್ಲಿಯಲ್ಲಿ ಈ ಕೆಳಗಿನಂತೆ ವರ್ಣನೆಯಿರುವದು: ' ಅನ್ನರಸಮಯ ವಾದ ಈ ಶರೀರದಲ್ಲಿ ಪ್ರಾಣಮಯವಾದ ಒಂದು ಶರೀರವು ಅಥವಾ ಕೋಶವು ಇರುವದು. ಮೊದಲನೆಯದು ಎರಡನೆಯದರಿಂದ ಪೂರ್ಣವು, ವ್ಯಾಪ್ತವು. ಅದೂ ಪುರುಷಾಕಾರವೇ ಇರುವದು. ಈ ಪ್ರಾಣಶರೀರಾಂತರದಲ್ಲಿ ಮನೋಮಯ ಕೋಶವಿರುವದು. ಮೊದಲನೆ ಯದು ಎರಡನೆಯದರಿಂದ ಪೂರ್ಣವು, ವ್ಯಾಪ್ತವು. ಅದೂ ಪುರುಷಾಕಾರವೇ.......... ಮನೋಮಯ ಶರೀರದಲ್ಲಿ ಮತ್ತೆ ವಿಜ್ಞಾನಮಯ ಕೋಶವೊಂದು ಇರುವದು. ಮನೋಮ ಯವು ವಿಜ್ಞಾನಮಯದಿಂದ ಪೂರ್ಣವು, ವ್ಯಾಪ್ತವು. ಅದೂ ಪುರುಷವಿಧವೇ......ಕೊನೆಗೆ ವಿಜ್ಞಾನಶರೀರಾಂತರದಲ್ಲಿ ಆನಂದಮಯಕೋಶವೆಂಬುದು ಇರುವದು. ಅದರಿಂದ ವಿಜ್ಞಾನ ಶರೀರವು ಪೂರ್ಣವು, ವ್ಯಾಪ್ತವು. ಅದೂ ಪುರುಷಾಕಾರವೇ ಇರುವದು. ' ( ತೈ; ವಲ್ಲಿ ೨, ಅನು ೨–೫ ). ಗಾರುಡಿಗನ ಚೀಲದಲ್ಲಿರುವ ಆಟಗಳಂತೆ ಅಥವಾ ಸೆಳೆ ಸೆಳೆದಂತೆ ಹೊರಡುವ ಉಳ್ಳೀಗಡ್ಡೆಯ ಪದರಗಳಂತೆ ಈ ಜಡಶರೀರದಲ್ಲಿ ಅನೇಕ ಶರೀರಗಳು ಅಥವಾ ಕೋಶಗಳು ಇರುವವೆಂದೂ ಅವುಗಳನ್ನರಿತವನೆ ಜಾಣನೆಂದೂ ಅನ್ನಮಯ, ಜ್ಯೋತಿ ರ್ಮಯ, ಪ್ರಾಣಮಯ, ವಿಜ್ಞಾನಮಯ, ಆನಂದಮಯವೆಂಬುವೇ ಆ ಶರೀರಗಳೆಂದೂ ಪ್ರತಿಯೊಂದು ಅಂತಃಶರೀರವು ಒಂದು ಬಾಹ್ಯಶರೀರದಿಂದ ಆವರಿಸಲ್ಪಟ್ಟಿರುತ್ತದೆಂದೂ ಇವೆಲ್ಲ ಕೋಶಗಳು ಪುರುಷವಿಧವಿರುವವೆಂದೂ ಇಲ್ಲಿ ವರ್ಣನೆಯಿರುವದು. ಮನುಷ್ಯನಿಗೆ ಪಂಚಕೋಶಗಳಿರುವವೆಂಬ ಕಲ್ಪನೆಗೆ ಇಲ್ಲಿಂದಲೆ ಆರಂಭವಾಗಿರುವದೆಂದುಹೇಳಬಹುದು.

**೨೫. ಆಧುನಿಕ ತಿಳುವಳಿಕೆಗಳ ಸತ್ಯಾಸತ್ಯತೆ—** ಆಧುನಿಕ ಥಿಯಾಸಫಿಸ್ಟ ಎಂಬ ದಾರ್ಶನಿಕರು ಪಂಚಕೋಶ ಮುಂತಾದವುಗಳಿಗೆ ಇಲ್ಲದ ಮಹತ್ವವನ್ನು ಕೊಟ್ಟಿದ್ದಾರೆ. ಸೂಕ್ಷ್ಮಶರೀರವು ಈ ಮಾನವಶರೀರದ ಆಕಾರದ್ದೇ ಇರುವದೆಂದೂ ಈ ಶರೀರವು ಮರಣಹೊಂದಿದ ಮೇಲೆ ಅದು ಕೆಲ ದಿನಗಳ ವರೆಗೆ ಅಲ್ಲಿಯೆ ಸುತ್ತುವದೆಂದೂ ಮಗುವಿನ ಸೂಕ್ಷ್ಮಶರೀರವು ಅವರ ಮರಣದ ನಂತರ ಮೂರು ದಿನಗಳ ವರೆಗೆ ಮಾತ್ರ ಇಲ್ಲಿ ಇರುವದೆಂದೂ ದೊಡ್ಡವರದು ಸೂತಕದ ದಿನಗಳು ಮುಗಿಯುವ ವರೆಗೆ ಇರಬಹುದೆಂದೂ ಅವರು ಹೇಳುವರು. ಕನಸಿನಲ್ಲಿ ನಾವು ಹಾರಾಡುವೆವೆಂದು ತಿಳಿಯುವಾಗ ಇಲ್ಲವೆ ಸಮುದ್ರದಲ್ಲಿಯ ಮೀನುಗಳಂತೆ * ಈಸಾಡುವೆವೆಂದು ಅನುಭವಿಸುವಾಗ ಈ ಸೂಕ್ಷ್ಮಶರೀರವು ತನ್ನ ಅನುಭವವನ್ನು ಈ ಹೊರಗಣ ಶರೀರಕ್ಕೆ ತಿಳಿಸುವದೆಂದೂ ವ್ಯಕ್ತವಾದ ಐದು ಕೋಶಗಳಷ್ಟೇ ಉಪನಿಷತ್ತುಗಳಲ್ಲಿ ವಿವೇಚಿಸಿಲ್ಪಟ್ಟಿದ್ದರೂ ಅವ್ಯಕ್ತವಾದ 'ಅನುಪಾದಕ' ಮತ್ತು 'ಆದಿ' ಶರೀರಗಳೆಂಬೆರಡು ಹೆಚ್ಚಿನವಿರುವವೆಂದೂ ಅವರು ಹೇಳುತ್ತಾರೆ. ಈ ಹೆಚ್ಚಿನ ಶರೀರಗಳಿಗೆ ಬುದ್ಧರ ಪರಿಭಾಷೆಯಲ್ಲಿ ಪರಿನಿರ್ವಾಣವೆಂತಲೂ ಮಹಾಪರಿನಿರ್ವಾಣವೆಂತಲೂ ಹೆಸರುಂಟು. ಹೀಗಿದ್ದರೂ ಪ್ರತ್ಯೇಕವಾದ ಶಬ್ದಗಳನ್ನು ಉಪಯೋಗಿಸಿದ ಮಾತ್ರಕ್ಕೆ ಬೇರೆ ವಸ್ತುಗಳೇ ಇರುವವೆಂದು ತಿಳಿಯುವದು ತಪ್ಪೆಂದು ನಮಗೆ ತೋರುತ್ತದೆ. ಪಂಚಕೋಶಗಳೆಂಬ ಶಬ್ದಗಳನ್ನು ಮೇಲೆ ಉಪಯೋಗಿಸಿದ್ದರೂ ಅವು ಮಾನಸಶಾಸ್ತ್ರದಲ್ಲಿಯ ಕೆಲವು ಕಲ್ಪನೆಗಳಿಗೆ ಕೊಟ್ಟ ರೂಪಕಗಳೆಂಬದನ್ನು ನಾವು ನೆನಪಿನಲ್ಲಿಡಬೇಕು. ಶರೀರ, ಪ್ರಾಣ, ಮನಸ್ಸು, ಬುದ್ಧಿ ಹಾಗೂ ಆನಂದವನ್ನನುಭವಿಸುವ ಸಾಮರ್ಥ್ಯ ಇವು ಮನುಷ್ಯನ ಘಟಕಾವಯವಗಳು. ಮೇಲಿನ ತೈತ್ತಿರೀಯದ ಅವತರಣಿಕೆಯಲ್ಲಿ ಇದೇ ಅರ್ಥವುಂಟು. ಆದರೆ ಮಾನಸಶಾಸ್ತ್ರದ ದೃಷ್ಟಿಯನ್ನು ಬಿಟ್ಟುಕೊಟ್ಟು ಆ ಶಬ್ದಗಳ ಆಧಾರದಿಂದ ಯಾವುದೋ ಒಂದು ಗೂಢವಾದ ತತ್ವಜ್ಞಾನವನ್ನು ರಚಿಸುವದು ನ್ಯಾಯವಾಗಲಿಕ್ಕಿಲ್ಲ. ಶಂಕರಾಚಾರ್ಯರು ಈ ಕೋಶಗಳನ್ನು ಒಪ್ಪಿದರೂ ಅವು ಕೇವಲ ಕಲ್ಪನಾಸೃಷ್ಟಿಯಲ್ಲಿರುವವೆಂದು ಅವರು ತಿಳಿದಿದ್ದರು. ನಾವು ನಮ್ಮ ವಿವೇಕಬುದ್ಧಿಯಿಂದ † ಅವುಗಳನ್ನು ಕಂಡು ಹಿಡಿದು ನಿಜವಾದ ಆತ್ಮವು ಅನ್ನ, ಪ್ರಾಣ, ಮನಸ್ಸು, ವಿಜ್ಞಾನ ಹಾಗೂ ಆನಂದಕೋಶಗಳಾಚೆಗಿರುವದನ್ನು ಗುರುತಿಸಬೇಕೆಂದು ಅವರು ಹೇಳಿರುವರು.

---

* ಇದು ಆನುವಂಶಿಕವಾಗಿ ಬಂದ ಅಥವಾ ವಂಶದ ಪೂರ್ವಾನುಭವವಿರಬಹುದೆಂದು ಸ್ಪೆನ್ಸರನ ಅನುಯಾಯಿಗಳು ಅನ್ನಬಹುದು.

† ಅನ್ನಪ್ರಾಣಮನೋಮಯವಿಜ್ಞಾನಾನಂದಪಂಚಕೋಶಾನಾಮ್ । ಏಕೈಕಾಂತರಭಾಜಾಂ ಭಜತಿ ವಿವೇಕಾತ್ತ್ಯಾಜ್ಯತಾಮಾತ್ಮಾ ॥ ಸ್ವಾತ್ಮನಿರೂಪಣಂ

ಆನಂದಮಯಕೋಶವೆ ಬ್ರಹ್ಮವೊ ಅಥವಾ ಬ್ರಹ್ಮನು ತಿಳಿಯಲಿಕ್ಕೆ ನಾವು ಆ ಕೋಶದಾಚೆಗೆ ಹೋಗಬೇಕೊ ಎಂಬ ಬಗ್ಗೆ ಅವರು ತಮ್ಮ ನಿಶ್ಚಿತವಾದ ಮತವನ್ನು ಕೊಟ್ಟಿಲ್ಲವೆಂಬದು * ಅವರ ತೈತ್ತಿರೀಯ ಭಾಷ್ಯದಲ್ಲಿ ಕಂಡು ಬರುವದು. ಏನೇ ಆದರೂ ಕೋಶಗಳು ತತ್ವತಃ ನಿಜವಲ್ಲೆಂದೂ ಈ ಕೋಶಗಳ ಮೇಲೆ ರಚಿಸಲ್ಪಟ್ಟ ವಿಚಾರವು ಅಜ್ಞಾನಮೂಲಕವೆಂದೂ ಅವರು ಗಟ್ಟಿಯಾಗಿ ಪ್ರತಿಪಾದಿಸಿರುತ್ತಾರೆ.

**೨೬. ಕೋಶಗಳೂ ಮೂಲ ವಸ್ತುವೂ—** ಅನ್ನ, ಪ್ರಾಣ, ಮನಸ್ಸು, ವಿಜ್ಞಾನ ಹಾಗೂ ಆನಂದಗಳು ನಿಜವಾಗಿಯೂ ಬೇರೆ ಬೇರೆ ಕೋಶಗಳೆಂದೇ ತಿಳಿಯಕೂಡದೆಂಬುದು ಅದೇ ತೈತ್ತಿರೀಯ ಉಪನಿಷತ್ತಿನಲ್ಲಿಯ ೩ ನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಕಾಣಿಸಲಾಗಿದೆ. ಋಷಿಯು ಅಲ್ಲಿ ಮೂಲ ವಸ್ತುವಾವದೆಂಬದನ್ನು ನಿರ್ಣಯಿಸಲುದ್ಯುಕ್ತನಾಗಿ ಅನ್ನ, ಪ್ರಾಣ, ಮನಸ್ಸು ಹಾಗೂ ವಿಜ್ಞಾನಗಳು ಅನುಕ್ರಮವಾಗಿ ಮೂಲ ವಸ್ತುಗಳಾಗಲಾರವೆಂಬದನ್ನು ಉಲ್ಲೇಖಿಸಿ ಆನಂದವೇ ಆ ಸತ್ಯ ವಸ್ತುವೆಂಬದನ್ನು ಹೇಳುವನು. ಭೃಗುವು ತಂದೆಯಾದ ವರುಣನ ಕಡೆಗೆ ಹೋಗಿ ಸತ್ಯವಸ್ತುವಿನ ಸ್ವರೂಪವನ್ನು ಕುರಿತು ಪ್ರಶ್ನೆಮಾಡುವನು. ತಂದೆಯು ಮಗನಿಗೆ, ತಪಸ್ಸು ಮಾಡಿ ಆ ಸತ್ಯವನ್ನು ನೀನೇ ತಿಳಿದುಕೊಳ್ಳಬೇಕೆಂದು ಹೇಳುವನು. ಯಾವುದರಿಂದ ಉತ್ಪತ್ತಿಯಾಗುವದೊ ಯಾವುದರಲ್ಲಿ ಉತ್ಪನ್ನವಾದ ವಸ್ತುಗಳು ವಾಸಮಾಡುವವೊ ಹಾಗೂ ಕೊನೆಗೆ ಆ ವಸ್ತುಗಳು ಲಯಹೊಂದಿ ಯಾವುದರಲ್ಲಿ ಲೀನವಾಗುವವೊ ಅದೇ ಆ ಮೂಲವಸ್ತುವಾಗಬಲ್ಲುದೆಂದು ಮಾತ್ರ ಅವನು ಭೃಗುವಿಗೆ ತಿಳಿಸಿದ್ದನು. ಮಗನು ತಪಸ್ಸು ಮಾಡಿ ತಂದೆಯ ಕಡೆಗೆ ಬಂದು ಅನ್ನವೆ ಆ ಮೂಲ ವಸ್ತುವಿರುವದೆಂದು ಹೇಳಿದನು. ಅದರಿಂದ ತಂದೆಗೆ ಸಮಾಧಾನವಾಗದೆ ಮತ್ತೆ ತಪವನ್ನಾಚರಿಸೆಂದು ಮಗನಿಗೆ ಹೇಳಿದನು. ಮಗನು ಪುನಃ ಪುನಃ ಬಂದು ಅನುಕ್ರಮವಾಗಿ ಪ್ರಾಣ ಮನಸ್ಸು ವಿಜ್ಞಾನಗಳು ಆ ಮೂಲವಸ್ತುವಿರುವದೆಂದು

* ತೈ, ವಲ್ಲಿ ೩, ಮಂ ೬ ಮತ್ತು ತೈ, ವಲ್ಲಿ ೨, ಮಂ ೨ ಇವುಗಳ ಮೇಲಿನ ಶಂಕರಾಚಾರ್ಯರ ಭಾಷ್ಯಗಳಲ್ಲಿಯು ವಿರೋಧವನ್ನು ನೋಡಬಹುದು. ತೈ, ವಲ್ಲಿ ೩, ಮಂ ೬ ಇದರ ಮೇಲಿನ ಭಾಷ್ಯವು—ಏವಂ ತಪಸಾ ವಿಶುದ್ಧಾತ್ಮಾ (ಅನ್ನ) ಪ್ರಾಣಾದಿಷು ಸಾಕಲ್ಯೇನ ಬ್ರಹ್ಮಲಕ್ಷಣಮಪಶ್ಯನ್ ಶನೈಃಶನೈರಂತರಮನುಪ್ರವಿಶ್ಯ ಅಂತರತಮಮಾನಂದಂ ಬ್ರಹ್ಮ ವಿಜ್ಞಾತವಾನ್ ತಪಸೈವ ಸಾಧನೇನ ಭೃಗುಃ। ತೈ, ವಲ್ಲಿ ೨, ಮಂ ೨ ಇದರ ಮೇಲಿನ ಭಾಷ್ಯವು—ಅನ್ನಮಯಾದಿಭ್ಯ ಆನಂದಮಯಾಂತೇಭ್ಯ ಆತ್ಮಭ್ಯೋಽಭ್ಯಂತರತಮಂ ಬ್ರಹ್ಮ ವಿದ್ಯಯಾ ಪ್ರತ್ಯಗಾತ್ಮತ್ವೇನ ದಿದರ್ಶಯಿಷುಃ ಶಾಸ್ತ್ರಮವಿದ್ಯಾಕೃತಂ ಪಂಚಕೋಶಾಪನಯನೇನ ಅನೇಕ ತುಷಕೋದ್ರವವಿತುಷೀಕರಣೇನೇವ ತದಂತರ್ಗತ ತಂಡುಲಾನ್ ಪ್ರಸ್ತೌತಿ।

ಹೇಳಿದನು; ಆದರೆ ಇದರಿಂದಲೂ ತಂದೆಗೆ ಸಮಾಧಾನವಾಗಲಿಲ್ಲ. ಕೊನೆಗೆ ಆನಂದವೆ ಎಲ್ಲ ವಸ್ತುಗಳ ಮೂಲವಿರುವದೆಂದು ಮಗನು ಬಂದು ಹೇಳಿದ ಕೂಡಲೆ ಉಪನಿಷತ್ತು ಅಲ್ಲಿಯೆ ಮುಗಿಯುವದು. ಇದರಿಂದ ತಂದೆಗೆ ಸಮಾಧಾನವಾಯಿತೊ ಇಲ್ಲವೊ ಎಂಬುದು ತಿಳಿಯುವಹಾಗಿಲ್ಲ. ಆದರೂ ಈ ಜ್ಞಾನವು ಕೊನೆಯವರೆಗೂ ಭಾರ್ಗವೀ ವಾರುಣಿ ವಿದ್ಯೆಯೆಂದು ಗೂಢವಾಗಿ ಕರೆಯಲಾಗುವದೆಂದೂ ಸ್ವರ್ಗದಲ್ಲಿಕೂಡ ಇದೇ ಶ್ರೇಷ್ಠವು ಅಂದರೆ ದೇವತೆಗಳಿಗೆ ಕೂಡ ಇದೇ ಮಾನ್ಯವೆಂದೂ ಹೇಳಲಾಗಿದೆ ( ತೈ, ವಲ್ಲಿ ३, ಮಂ ೧–೬ ).

**೨೭. ಪುನರ್ಜನ್ಮವಾದವು ಆರ್ಯರ ಕಲ್ಪನೆಯು**— ಇನ್ನು ಉಪನಿಷತ್ತಿನಲ್ಲಿಯ ಪುನರ್ಜನ್ಮ ವಿಚಾರಕ್ಕೆ ಆರಂಭವು; ಆದರೆ ಉಪನಿಷತ್ತಿನಲ್ಲಿರುವ ಪುನರ್ಜನ್ಮವಿಚಾರವು ತಿಳಿಯಬೇಕಾದರೆ ಅದರ ಮೂಲಭೂತವಾದ ವೇದಗಳಲ್ಲಿ ಈ ಕಲ್ಪನೆಯು ಯಾವ ಸ್ವರೂಪದಲ್ಲಿತ್ತೆಂಬುದನ್ನು ಅರಿತುಕೊಂಬುದು ಅತ್ಯವಶ್ಯವು. ಭಾರತೀಯ ತತ್ವಜ್ಞಾನದ ಆರಂಭಕಾಲದಲ್ಲಿ ಪುನರ್ಜನ್ಮವಾದವೆ ಒಳ್ಳೇ ಗಡಚಾದ ವಿಷಯವು. ಭಾರತೀಯರ ವಿಚಾರವಿಕಾಸದ ಇತಿಹಾಸದಲ್ಲಿ ಪುನರ್ಜನ್ಮಕಲ್ಪನೆಯು ತೀರ ಅರ್ವಾಚೀನವೆಂದೂ ಈ ಕಲ್ಪನೆಯು ಋಗ್ವೇದದಲ್ಲಿ ಇಲ್ಲವೇ ಇಲ್ಲವೆಂದೂ ಇದು ಅನಾರ್ಯರ ಕಲ್ಪನೆಯು ಎಂದೂ ಕೆಲವರು ವಾದಿಸುವರು. ಹಿಂದೂ ದೇಶದ ಮೂಲನಿವಾಸಿಗಳಿಂದಲೆ ಮೊಟ್ಟಮೊದಲು ಈ ವಿಚಾರದ ಪ್ರೇರಣೆಯು ಇಲ್ಲಿ ಒಕ್ಕಲಾಗಲು ಬಂದ ಆರ್ಯ ಜನಾಂಗದವರಿಗೆ ಉಂಟಾಗಿರುವುದು ವಿಶೇಷ ಸಂಭವನೀಯವೆಂದು ಪ್ರೊಫೆಸರ ಮ್ಯಾಕಡೋನೆಲ್ಲರ ತರ್ಕವು. ಭಾರತೀಯ ಆರ್ಯರು ಪುನರ್ಜನ್ಮದ ಕಲ್ಪನೆಯನ್ನು ಇಲ್ಲಿಯ ಮೂಲ ನಿವಾಸಿಗಳಿಂದ ಎತ್ತಿಕೊಂಡಿರುವುದು ನಿಜವಾಗಿದ್ದರೂ, ಭೋಗಾದೇವ ಕ್ಷಯಃ ( ಮಾಡಿದುದನ್ನು ಉಂಡೇ, ಅನುಭೋಗಿಸಿಯೆ ತೀರಿಸಬೇಕಾಗುವುದು ) ಎಂಬ ನೈತಿಕ ಸಿದ್ಧಾಂತಕ್ಕೆ ಜೋಡಿಸಿ ಅವ್ಯಾಹತ ಜನ್ಮಚಕ್ರದ ಸಿದ್ಧಾಂತವನ್ನು ಸಮಂಜಸವೂ ಸಯುಕ್ತಿಕವೂ ಆಗುವಂತೆ ಬಿತ್ತರಿಸಿದುದರ ಸಂಪೂರ್ಣ ಶ್ರೇಯಸ್ಸು ಆರ್ಯರಿಗೆಯೆ ಇರುತ್ತದೆ, ಎಂದು ( History of Sanskrit Literature. p. 387 ) ಅವರೇ ಪ್ರತಿಪಾದಿಸಿರುವರು. ಆದರೆ ಪಾಯಥಾಗೋರಾಸನ ಗ್ರಂಥದಲ್ಲಿಯೂ ಪುನರ್ಜನ್ಮ ವಿಚಾರವು ತಲೆಹಾಕಿರುವುದಲ್ಲ ! ಇದಕ್ಕೆ ಸಮಾಧಾನವನ್ನು ಹೇಳಹೋಗಿ ಮ್ಯಾಕಡೋನೆಲ್ಲ ಸಾಹೇಬರು ‘ ಫಾಯಥಾಗೋರಾಸನು ಭಾರತೀಯ ಶಾಸ್ತ್ರ ಹಾಗೂ ತತ್ವಜ್ಞಾನಗಳ ಮೇಲೆ ಕೈಯ್ಯಾರಿಕೊಂಡಿದ್ದುದೆ ಇದಕ್ಕೆ ಸಂಭವನೀಯ ಕಾರಣವಿರಬೇಕು ’ ಎಂದು ಒಪ್ಪಿಕೊಳ್ಳುವ ಹೊತ್ತು ಬಂದಿದೆ. ಅಲ್ಲದೆ ಅವರು ಹೇಳುವದೇನಂದರೆ, ‘ ಪಾಯಥಾಗೋ

ರಾಸನ ಗ್ರಂಥದಲ್ಲಿರುವ ಪುನರ್ಜನ್ಮಕಲ್ಪನೆಗೆ ಬೇರೊಂದು ಯಾವ ಮೂಲ ಕಾರಣವೂ ಕಂಡುಬರುವದಿಲ್ಲ; ಈ ಕಲ್ಪನೆಯು ಪರಕೀಯರದೆಂದು ಗ್ರೀಕರು ತಿಳಿದಿದ್ದರು; ಇಜಿಪ್ತದ ಪ್ರಾಚೀನ ನಿವಾಸಿಗಳಿಗೆ ಈ ಕಲ್ಪನೆಯ ಗಂಧವೂ ಇಲ್ಲದುದರಿಂದ ಅವನು ( ಪಾಯಥಾಗೋರಾಸನು ) ಅವರಿಂದಲೂ ಈ ಕಲ್ಪನೆಯನ್ನು ಎತ್ತಿರುವುದು ಶಕ್ಯವಿಲ್ಲ. ' ( Loc. cit. p. 422 ). ಆದರೆ ಕ್ರಿಸ್ತಾಬ್ದ ೧೮೯೪ ನೆಯ ವರುಷ ಹೆರ್ ರೊಹಡೆ ಎಂಬವನ Psyche, Seelen kult ಮತ್ತು Unsterblichkeitsglaube der Griechen ಎಂಬ ಗ್ರಂಥವು ಹೊರಬಿದ್ದ ಬಳಿಕ ಒಂದು ಹೊಸ ಸಿದ್ಧಾಂತವೆ ಮುಂದೆ ಬಂದಿತು. ಅದೇನೆಂದರೆ, ಕೆಲವೊಂದು ಪರಿಸ್ಥಿತಿಯಲ್ಲಿ ಯಾವದೇ ಜನಾಂಗದಲ್ಲಿ ಕಂಡು ಬರುವ ಪುನರ್ಜನ್ಮದ ಕಲ್ಪನೆಗೆ ಆಯಾ ಜನಾಂಗದ ವಿಚಾರವಿಕಾಸವೆ ಕಾರಣವು ಹೊರ್ತು ಒಂದು ರಾಷ್ಟ್ರದ ವಿಚಾರದ ಪರಿಣಾಮವು ಮತ್ತೊಂದು ರಾಷ್ಟ್ರದ ಮೇಲೆ ಆಯ್ತು ಎಂದು ಸಿದ್ಧಮಾಡದೆ ಇದ್ದ ಅಥವಾ ಸಿದ್ಧಮಾಡಲಿಕ್ಕೆ ಬಾರದ ವಿಧಾನವನ್ನು ಮಾಡುವದು ಅನವಶ್ಯಕವು. ಈ ದೃಷ್ಟಿಯಿಂದಲೆ ಪುನರ್ಜನ್ಮದ ಕಲ್ಪನೆಯು ಗ್ರೀಕರಲ್ಲಿ ಹೋಮರ ಕವಿಯಲ್ಲಿ ಉಗಮಗೊಂಡು ಆರಫೀಯಸನಿಂದ ಪಾಯಥಾಗೋರಾಸನ ವರೆಗೆ ಅವರ ನಾಡಿನಲ್ಲಿಯೆ ಎಡೆಬಿಡದೆ ಹರಿಯುತ್ತ ಬಂದುದನ್ನು ಕಾಣಬಹುದು. ಅದರಂತೆ ಆರ್ಯರು ಇಲ್ಲಿಯ ಮೂಲ ನಿವಾಸಿಗಳಿಂದ ಈ ಕಲ್ಪನೆಯನ್ನು ಎತ್ತಿಕೊಂಡರೆಂಬ ಅನವಶ್ಯಕ ವಿಚಾರಸರಣಿಯ ಸಹಾಯ ತಕ್ಕೊಳ್ಳದೆಯೆ ಭಾರತೀಯ ಆರ್ಯರಲ್ಲಿಯೂ ಈ ಕಲ್ಪನೆಯು ಋಗ್ವೇದದಲ್ಲಿ ಮೊದಲ್ಗೊಂಡು ಬ್ರಾಹ್ಮಣ ಮತ್ತು ಉಪನಿಷತ್ತುಗಳ ವರೆಗೆ ಅವ್ಯಾಹತವಾಗಿ ಜಲ್ಲುವರಿದು ಹಬ್ಬಿರುವುದೆಂದು ಸಿದ್ಧಪಡಿಸಬಹುದು. ಇಂತು ಈ ಪುನರ್ಜನ್ಮ ಕಲ್ಪನೆಯನ್ನು ಆರ್ಯರು ಅನಾರ್ಯರಿಂದ ಎತ್ತಿಕೊಂಡಿರುವದಿಲ್ಲ; ಆರ್ಯರ ವಿಚಾರ ಸರಣಿಯಲ್ಲಿಯೆ ಕ್ರಮಕ್ರಮವಾಗಿ ಈ ಕಲ್ಪನೆಯ ವಿಕಾಸವಾದುದು ನಿಚ್ಚಳವಾಗಿ ಕಂಡು ಬರುತ್ತದೆ.

**೨೮. ಋಗ್ವೇದದ ದಶಮಮಂಡಲದಲ್ಲಿರುವ ಪುನರ್ಜನ್ಮವಿಚಾರವು—** ಋಗ್ವೇದದ ಬಹುಭಾಗದಲ್ಲಿ ಪುನರ್ಜನ್ಮಕಲ್ಪನೆಯು ಸ್ಪಷ್ಟವಾಗಿ ಕಂಡುಬರುವದಿಲ್ಲವೆಂಬುದು ನಿಜ. ಸಂತುಷ್ಟರೂ ಸಮಾಧಾನಿಗಳೂ ಆದ ಆರ್ಯರ ಮನಸ್ಸು ಮರಣಾನಂತರ ವಿಚಾರಕ್ಕೆ ಹೆಚ್ಚಾಗಿ ಎಳೆಸಿರಲಿಕ್ಕಿಲ್ಲ. ದೇವಲೋಕ, ಪಿತೃಲೋಕಗಳಲ್ಲಿ ನಚ್ಚಿದ ಅತಿ ಪ್ರಾಚೀನ ಆರ್ಯರು ಅದಕ್ಕೂ ಉದ್ದನೀರಿಗೆ ಹೋಗಲಿಲ್ಲ. ಸಾಧು ಸಜ್ಜನರು ಜೇನಿನಿಂದ ತುಂಬಿತುಳುಕುವ ಸ್ವರ್ಗಕ್ಕೆ ಹೋಗುವರೆಂಬ ನಂಬುಗೆಯಿಂದ

ಅವರು ಸಮಾಧಾನಗೊಂಡಿದ್ದರು. * ಸಾಮಾನ್ಯ ಜನರು ಯಮಲೋಕಕ್ಕೆ ಹೋಗುವರೆಂದೂ ಅಲ್ಲಿ ಯಮನು ಅವರ ಬಳಿಗೆ ಹೋಗಿ ಅವರಲ್ಲಿ ಹಲವರನ್ನು ತನ್ನ ಸುತ್ತಲೂ ತಕ್ಕೊಳ್ಳುವನೆಂದೂ 'ಇವರಲ್ಲಿ ಯಾರನ್ನೂ ಕದ್ದೊಯ್ಯುವದು ಯಾರಿಗೂ ಸಾಧ್ಯವಿಲ್ಲ' ವೆಂದೂ † ವಿಶ್ವಾಸವಿಟ್ಟು ಅವರು ವಿಶ್ರಬ್ಧರಾಗಿದ್ದರು. ಋಗ್ವೇದದ ಬಹುಭಾಗದಲ್ಲಿ ಪುನರ್ಜನ್ಮಕಲ್ಪನೆಯು ಸುಸ್ಪಷ್ಟವಾಗಿಲ್ಲವೆಂಬದು ನಿಜವೆಂದು ಒಪ್ಪಿಕೊಂಡರೂ ಇನ್ನು ಬೇರೆ ಕೆಲವೆಡೆಗಳಲ್ಲಿ ಈ ಕಲ್ಪನೆಯ ಛಾಯೆಯು ಮೂಡಿರುವದು ಸತ್ಯವೆಂದು ಸಮ್ಮತಿಸಲೆ ಬೇಕಾಗುತ್ತದೆ. ಈ ಕಲ್ಪನೆಯ ಪ್ರಥಮಾವಸ್ಥೆಯಲ್ಲಿ, ಜೀವವು ಬೇರೆ ಇದ್ದು ಜಡವನ್ನು ಚಲಿಸುವದು ಅಥವಾ ಜಡ ಸೃಷ್ಟಿಯು ಜೀವದಿಂದೊಡಗೂಡಿರುವದು ಎಂಬ ವಿಚಾರಗಳು ಕಂಡುಬರುತ್ತಿವೆ. ಹತ್ತನೆಯ ಮಂಡಲದ ೧೬ ನೆಯ ಸೂಕ್ತದ ಒಂದು ಮಂತ್ರದಲ್ಲಿ ಅಂತ್ಯಕ್ರಿಯೆಯು ವರ್ಣನೆಯಿದೆ. ಅದರಲ್ಲಿ ಮೃತ ಮನುಷ್ಯನ ಕಣ್ಣಿಗೆ ಅದರ ಸಮಾನಧರ್ಮಿಯಾದ ಮತ್ತು ವಿರಾಟ ಪುರುಷನ ಕಣ್ಣಾದ ಸೂರ್ಯನಲ್ಲಿ ಹೋಗಲಿಕ್ಕೂ ಉಸುರಿಗೆ ಅದರ ಸಮಾನಧರ್ಮಿಯಾದ ವಾಯುವಿನಲ್ಲಿ ಬೆರೆಯಲಿಕ್ಕೂ ಚೈತನ್ಯಕ್ಕೆ ಅದರ ಧರ್ಮಕ್ಕೆ ಅನುಗುಣವಾಗಿ ಸ್ವರ್ಗಕ್ಕೆ ಅಥವಾ ಭೂಮಿಗೆ ಇಲ್ಲವೆ ನೀರು ಅಥವಾ ಔಷಧಿವನಸ್ಪತಿಗಳಲ್ಲಿಗೆ ಹೋಗಿ ಇರಲಿಕ್ಕೂ ಆಜ್ಞಾಪಿಸಿದ್ದುಂಟು. ‡ ಈ ಸೂಕ್ತವು ಪುನರ್ಜನ್ಮವನ್ನಷ್ಟೇ ಕುರಿತು ಇಲ್ಲ; ಆದರೆ ಇದು, ಜೀವವು ಜಡಪ್ರೇರಕವು, ಜಡವು ಜೀವಯುಕ್ತವು ಎಂಬ ದೃಷ್ಟಿಯಿಂದ ನೋಡಬೇಕೆಂಬುವದನ್ನು ಸೂಚಿಸುತ್ತಿದೆ. ಇದರಲ್ಲಿ ಉಪಯೋಗಿಸಲ್ಪಟ್ಟಿರುವ 'ಧರ್ಮ' ಎಂಬ ಶಬ್ದವು ಮಾತ್ರ ಬಹಳೇ ಅರ್ಥಪೂರ್ಣವಾಗಿರುವುದು. ಸ್ವರ್ಗ ಅಥವಾ ಭೂಮಿಯನ್ನು ಕುರಿತು ಹೋಗಲಿಕ್ಕೆ ಜೀವಾತ್ಮನಿಗೆ ಈ ಸೂಕ್ತವು ಹೇಳುತ್ತಿದೆ. ಇದರಲ್ಲಿ ಕರ್ಮಸಿದ್ಧಾಂತದ ಆರಂಭದ ಸ್ವರೂಪವು ಕಂಡುಬರುತ್ತದೆ. ಆದರೆ ಋಗ್ವೇದದ ಹತ್ತನೆಯ ಮಂಡಲದ ಇನ್ನೊಂದು ಮಂತ್ರದಲ್ಲಿ, ಜಡವೆಲ್ಲ ಚೈತನ್ಯಮಯವು ಎಂದು ಒತ್ತಿ ಹೇಳಿರುವಲ್ಲಿ ಕರ್ಮಸಿದ್ಧಾಂತವು ಇನ್ನೂ ಹೆಚ್ಚು ನಿಶ್ಚಿತ ಸ್ವರೂಪವನ್ನು ತಾಳಿದೆ. ಈ ಮಂತ್ರವೆಲ್ಲವೂ § ಮೃತ ಪುರುಷನ ಆತ್ಮನನ್ನು

* ತದಸ್ಯ ಪ್ರಿಯಮಭಿ ಪಾಥೋ ನರೋ ಯತ್ರ ದೇವಯವೋ ಮದಂತಿ । ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥ ಋ ೧, ಸೂ ೧೫೪, ಮಂ ೫.

† ಯಮೋ ನೋ ಗಾತುಂ ಪ್ರಥಮೋ ವಿವೇದ ನೈಷಾ ಗವ್ಯೂತಿರಪಭರ್ತವಾ ಉ । ಯತ್ರಾ ನಃ ಪೂರ್ವೇ ಪಿತರಃ ಪರೇಯುರೇನಾ ಜಜ್ಞಾನಾಃ ಪಥ್ಯಾ ಅನು ಸ್ವಾಃ ॥ ಋ ೧೦, ಸೂ ೧೪, ಮಂ ೨.

‡ ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ । ಅಪೋ ವಾ ಗಚ್ಛ ಯದಿ ತತ್ರ ತೇ ಹಿತಂ ಓಷಧೀಷು ಪ್ರತಿತಿಷ್ಠಾ ಶರೀರೈಃ ॥ ಋಕ್ ೧೦, ೧೬, ೩.

§ ಋಕ್ ೧೦. ೫೮ ೧–೧೨.

ಕುರಿತು ಇದೆ ; ಇಲ್ಲಿಂದ ತೆರಳಿದ ಆತ್ಮನನ್ನು ಮರಳಿ ಕರೆದು ಮತ್ತೆ ಬದುಕಿ ಬಾಳುವಂತೆ ಮಾಡುವುದಕ್ಕೋಸುಗ ಈ ಮಂತ್ರಗಳನ್ನು ಹೇಳುತ್ತಿರುವೆನೆಂದು ಆ ಕವಿಯು ಅನ್ನುತ್ತಾನೆ. ಅವನು ಹೇಳುವುದೇನಂದರೆ, 'ಜೀವವು ಸ್ವರ್ಗಕ್ಕೆ ಹೋಗಿರಬಹುದು, ಇಲ್ಲವೆ ಪೃಥಿವಿಗೆ ಹೋಗಿರಬಹುದು, ಅಥವಾ ನಾಲ್ಕುದಿಕ್ಕಿನಿಂದೊಡಗೂಡಿದ ಜಗತ್ತಿಗೆ ಹೋಗಿರಬಹುದು : ಅದು ಹಲವು ಕಡೆಗಳಲ್ಲಿ ಕಲೆತುಕೊಂಡಿರಬಹುದು, ಇಲ್ಲವೆ ಸಮುದ್ರದ ತೆರೆಗಳೊಡನೆ ಬೆರೆತುಕೊಂಡಿರಬಹುದು ; ಇಲ್ಲವೆ ಪ್ರಕಾಶಕಿರಣಗಳಲ್ಲಿ ಕೂಡಿರಬಹುದು ; ನೀರುಗಳಲ್ಲಿ ಅಥವಾ ಔಷಧಿವನಸ್ಪತಿಗಳಲ್ಲಿ ಚೈತನ್ಯರೂಪದಿಂದ ಇರಬಹುದು ; ಇಲ್ಲವೆ ಸೂರ್ಯ ನೆಡೆಗೆ ಉಷಸ್ಸಿನ ಬಳಿ ಅಥವಾ ಬೆಟ್ಟದಮೇಲೆ ಹೋಗಿರಬಹುದು ; ಇಲ್ಲವೆ ಪ್ರಪಂಚ ವೆಲ್ಲೆಲ್ಲ ಪಸರಿಸಿ ಭೂತ ಹಾಗೂ ಭವಿಷ್ಯತ್ತಿನೊಡನೆ ಒಂದುಗೂಡಿರಬಹುದು ; ಅಂಥ ಜೀವವನ್ನು ಗಾಯನಮಾಡಿ ಮರಳಿ ಕರೆದು ದೇಹದಲ್ಲಿ ನೆಲೆಗೊಳ್ಳುವಂತೆ ಮಾಡುತ್ತೇನೆ.' ಸಂಗೀತದ ಸಾಮರ್ಥ್ಯದಲ್ಲಿ ಎಷ್ಟೊಂದು ವಿಶ್ವಾಸವಿದು ! ಆದರೆ ಜಡದಲ್ಲಿ ಜೀವದ ಅಸ್ತಿತ್ವ ವನ್ನು ಈ ಸೂಕ್ತವು ಪ್ರತಿಪಾದಿಸುತ್ತಿರುವದೆಂಬುದು ಸ್ಪಷ್ಟವಿದೆ. ಮಹಾಭೂತಗಳೊಡನೆ ( Elements ) ಕೂಡಿಕೊಂಡಿರುವುದರಿಂದ ಜೀವನು ಸತ್ತಮೇಲೆ ಸರ್ವಸ್ವಿ ವಿನಾಶ ಹೊಂದುವದಿಲ್ಲವೆಂದು ಇದರ ಭಾವಾರ್ಥವಿದೆ.

**೨೯. ಋಗ್ವೇದದ ಮೊದಲನೆಯ ಮಂಡಲದೊಳಗಿನ ಪುನರ್ಜನ್ಮವಿಚಾರವು**— ಆದರೆ ಜಡದಲ್ಲಿ ಜೀವವಿದೆ ಎಂಬುದು ಹೇಳುವುದೆ ಋಗ್ವೇದದ ಕೊನೆಯ ಸಿದ್ಧಾಂತವೆ ? ಎಂದೂ ಅಲ್ಲ. ನಮ್ಮ ಮಾತಿಗೆ ಪುಷ್ಟಿಕೊಡುವ ಮಹತ್ವದ ಒಂದು ಸೂಕ್ತವು ಋಗ್ವೇದದಲ್ಲಿದೆ ; ಆದರೆ ಆ ಸೂಕ್ತಕ್ಕೆ ಯಾವ ಮಹತ್ವವನ್ನು ಕೊಡ ಬೇಕೋ ಅದರ ಹತ್ತಾಂಶದಷ್ಟು ಸಹ ಮಹತ್ವವನ್ನು ಯಾರೂ ಕೊಟ್ಟಿಲ್ಲ. ರೋಥ, ಬೊಹಟಲಿಂಗ್‌ಕ, ಗೆಲ್ಡನೇರ ಇವರು ಕೊಟ್ಟ ಅದೇ ಸೂಕ್ತದಲ್ಲಿಯ ಎರಡು ಮಂತ್ರಗಳ ಅರ್ಥವನ್ನು ಲಕ್ಷಿಸದೆ ಋಗ್ವೇದದಲ್ಲಿ ಪುನರ್ಜನ್ಮದ ವಿಷಯವೆ ಇಲ್ಲವೆಂದು ಜನರು ಪುನಃ ಪುನಃ ಪ್ರತಿಪಾದಿಸುವುದನ್ನು ಕಂಡು ಸೋಜಿಗವೆನಿಸುತ್ತದೆ. ಋಗ್ವೇದದ ೧ನೆಯ ಮಂಡಲದಲ್ಲಿ ಒಡವದಂತಿರುವ ೧೬೪ನೆಯ ಪ್ರಖ್ಯಾತವಾದ ಸೂಕ್ತವೆ ನಾವು ಹೇಳುವುದು. ಇದರಲ್ಲಿ ೫೨ ಮಂತ್ರಗಳಿವೆ. ಇವುಗಳ ಅನುಭಾವಿ ಕರ್ತೃವಾದ ಕವಿಯು ಅವುಗಳ ಲ್ಲೆಲ್ಲ ಸಂಶಯಭಾವಯುಕ್ತ ಅನುಭಾವವಾದವನ್ನು ಉಸಿರಿರುವನು. 'ಇದನ್ನೆಲ್ಲ ನಿರ್ಮಿಸಿ ದವನು ಬಹುತರವಾಗಿ ಇದರ ನೈಜವನ್ನೆ ಅರಿಯನು' * ಎಂದು ಅವನು ಹೇಳುವನು. ಈ ಕವಿಯು ಅನುಭಾವಕ್ಕೆ ಬಹಳೇ ಮಹತ್ವವನ್ನು ಕೊಟ್ಟಿದ್ದಾನೆ. 'ಇದನ್ನರಿತವನು,

---

* ಯ ಈಂ ಚಕಾರ ನ ಸೋಽಸ್ಯ ವೇದ । ಋ, ೧, ಸೂ ೧೬೪, ಮಂ ೩೨,

ನಿಜವನ್ನರಿತವನು ತನ್ನ ತಂದೆಯ ತಂದೆಯು' * ಎಂದು ಅವನು ಸಾರುತ್ತಾನೆ. ಈ ಸೂಕ್ತವು ಋಗ್ವೇದದ ಮೊದಲನೆಯ ಮಂಡಲದಲ್ಲಿದ್ದ ಮಾತ್ರಕ್ಕೆ ಋಗ್ವೇದದ ಹಳೆಯ ಭಾಗವೆಂದು ತಿಳಿಯಲಾಗದು. ಯಾಕೆಂದರೆ ಅಲ್ಲಿ ಅನೇಕದೇವತೆಗಳ ಏಕತ್ವವು ಬಹು ಚನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. † ಈ ಬಗೆಯ ವಿಚಾರಸರಣಿಯು ಋಗ್ವೇದದ ಆರಂಭ ಕಾಲದ್ದಲ್ಲ ; ಮುಂದಿನಕಾಲದ್ದೇ. ವೇದಕಾಲದ ಕೊನೆಯ ಭಾಗದಲ್ಲಿ ರಚಿಸಲ್ಪಟ್ಟಿರುವು ದೆಂದು ಸರಿಯಾಗಿ ನಿಶ್ಚಯಿಸಲ್ಪಟ್ಟಿರುವ ಪ್ರಖ್ಯಾತವಾದ ಪುರುಷಸೂಕ್ತದೊಳಗಿನ ಮಂತ್ರವೆ ಈ ಸೂಕ್ತದಲ್ಲಿಯೂ ಉದ್ಧೃತವಾಗಿದೆ. ‡ ಹಿಂದುಗಡೆಯ ಕಾಲದಲ್ಲಿ ಮುಂಡ ಕೋಪನಿಷತ್ತಿನಲ್ಲಿ ವಿಶೇಷ ಮಹತ್ವದ್ದೆನಿಸಿಕೊಂಡ ಎರಡು ಹಕ್ಕಿಗಳ ವಿಷಯವಾಗಿರುವ ಪ್ರಸಿದ್ಧವಾದ ಮಂತ್ರವೂ § ಈ ಸೂಕ್ತದಲ್ಲಿಯೆ ಇದೆ. ಈ ಆಧಾರಗಳಿಂದ ಈ ಸೂಕ್ತವು ಋಗ್ವೇದದ ಮೊದಲನೆ ಮಂಡಲದಲ್ಲಿದ್ದರೂ ಋಗ್ವೇದಕಾಲದ ಕೊನೆಯ ಭಾಗದಲ್ಲಿ ರಚಿ ಸಲ್ಪಟ್ಟಿರಲಿಕ್ಕೆ ಬೇಕೆಂದು ಖಂಡಿತವಾಗಿ ಗೊತ್ತಾಗುತ್ತದೆ. ಋಗ್ವೇದದೊಳಗಿನ ಈ ಸೂಕ್ತವು ಮುಂಚಿನದೊ ಹಿಂಚಿನದೊ ಎಂಬ ಮಾತು ಹೇಗಿದ್ದರೂ ಇದರೊಳಗಿಂದ ಹೊರಹೊಮ್ಮುವ ಪುನರ್ಜನ್ಮದ ಕಲ್ಪನೆಯು ದುರ್ಲಕ್ಷಿಸಲ್ಪಟ್ಟಿದ್ದು ಆಶ್ಚರ್ಯಕರವಾಗಿದೆ. ಈ ಇಡೀ ಸೂಕ್ತವು ಹಿರಾಕ್ಲಿಟಸ್ಸನ ರೀತಿಯಲ್ಲಿ ರಚಿಸಲ್ಪಟ್ಟಿರುವುದೇನೋ ನಿಜ ; ಇದ ರಲ್ಲಿ ಅಗ್ನಿ, ಆವು, ಕರು, ಪ್ರಥಮ ಧರ್ಮಜನು ಇವುಗಳ ಸಂಬಂಧದ ಸೂಚನೆಗಳು ಇರು ವುದೂ ನಿಜ ; ಆದರೂ ಈ ಸೂಕ್ತದಲ್ಲೆಲ್ಲ ಚೈತನ್ಯಮಯ ಆತ್ಮನ ವಿಚಾರವು ಬೆರೆತುದು ಕಂಡುಬರುವದು. ಜೀವಾತ್ಮ ಪರಮಾತ್ಮನ ಪರಸ್ಪರ ಸಂಬಂಧವನ್ನು ಸೂಚಿಸುವ 'ಎರಡು ಹಕ್ಕಿಗಳ' ಉಲ್ಲೇಖವೂ ಮಹತ್ವದ್ದಿದೆ ; ಕವಿಯು ಅಲ್ಲಿ ಒಂದು ಗೂಢರೀತಿಯಲ್ಲಿ ತನ್ನೀ ವಿಚಾರವನ್ನು ರೂಪಕದಿಂದ ವ್ಯಕ್ತಬಡಿಸಲಿಕ್ಕೆ ಹವಣಿಸುತ್ತಿರುವನೆಂಬುದು ಸ್ಪಷ್ಟವಿದೆ. ಉದಾಹರಣಾರ್ಥವಾಗಿ, ಕವಿಯು ಪ್ರಶ್ನೆಮಾಡುವುದೇನಂದರೆ, ಜಗತ್ತಿನ ಜೀವಾಳನೂ, ಚೈತನ್ಯನೂ ಆದ ಅಸ್ಥಿರಹಿತ ಆತ್ಮನು ಅಸ್ಥಿವಂತ ದೇಹದಲ್ಲಿ ಬಂದು ನಿಲ್ಲುವ ಬಗೆಯನ್ನು

---

* ಕವಿರ್ಯಃ ಪುತ್ರಃ ಸ ಈಮಾ ಚಿಕೇತ ಯಸ್ತಾ ವಿಜಾನಾತ್ ಸ ಪಿತುಷ್ಪಿತಾಸತ್ ।
ಋ ಮಂ ೧, ಸೂ ೧೬೪, ಮಂ ೧೬.

† ಏಕಂ ಸದ್ವಿಪ್ರಾ ಬಹುಧಾ ವದಂತಿ ಅಗ್ನಿಂ ಯಮಂ ಮಾತರಿಶ್ವಾನಮಾಹುಃ ।
ಋ ೧, ಸೂ ೧೬೪, ಮಂ ೪೬.

‡ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ಋ ೧, ಸೂ ೧೬೪, ಮಂ ೫೦.

§ ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥ ಋ ೧, ಸೂ ೧೬೪, ಮಂ ೨೦.

ಸರಿಯಾಗಿ ಅರಿತವರು ಯಾರು ? ಈ ಬಗೆಯು ಅರಿಯದಿದ್ದರೆ, ಹೊರಬಿದ್ದು ವಿದ್ವಾಂಸರ ಬಳಿ ತಿಳಿಯಲು ಹೋದವರು ಯಾರು ? ' * ಬಳಿಕ ಕವಿಯು ಸ್ಪಷ್ಟವಾಗಿ ಹೀಗೆ ಹೇಳಿದ್ದಾನೆ, ಈ ಉಸುರಾಡಿಸುವ, ತವಕದಿಂದ ನಡೆಯುವ, ಅಲೆದಾಡುವ ಜೀವವು ಮಣ್ಣಿನಿಂದಾದ ಈ ಮೈಯಲ್ಲಿ ಕಾಲೂರಿ ನಿಂತಿದೆ. † ಅಮೃತ ತತ್ವವು ಮಣ್ಣಿನೊಡಗೂಡಿ ಸ್ವಾಭಾವಿಕ ಶಕ್ತಿಯಿಂದ ಹಿಂದೆ ಮುಂದೆ ಅಲೆದಾಡುತ್ತಿರುವುದು; ಆದರೆ ಜಡ ಮತ್ತು ಜೀವ ಇವೆರಡೂ ವಿರುದ್ಧ ದಿಕ್ಕಿನಲ್ಲಿ ಎಡೆಬಿಡದೆ ಚಲಿಸುತ್ತಿರುವುದರಿಂದ ಜನರು ಇವೆರಡರಲ್ಲಿ ಒಂದನ್ನು ಮಾತ್ರ ಚಲಿಸುವುದನ್ನು ನೋಡಬಲ್ಲರು, ಮತ್ತೊಂದರ ಗತಿಯನ್ನು ನೋಡಲಾರರೆಂಬುದು ‡ ಸೋಜಿಗವು ಎಂದು ಕವಿಯು ಹೇಳುತ್ತಾನೆ. ಓಲ್ಡೆನಬರ್ಗ ಎಂಬವನ ಅಭಿಪ್ರಾಯಕ್ಕೆ ವಿರುದ್ಧವಾಗಿ ರೋಥ, ಬೋಹಟಲಿಂಗ್ಕ, ಮತ್ತು ಗೆಲ್ಡನೇರ ಇವರು ಋಗ್ವೇದದಲ್ಲಿ ಪುನರ್ಜನ್ಮಕಲ್ಪನೆಯು ಉಂಟೆಂಬುದಕ್ಕೆ ಸಾಕಷ್ಟು ಆಧಾರವು ಕೊನೆಯ ಇವೆರಡೂ ಮಂತ್ರಗಳಲ್ಲಿ ಸಿಕ್ಕುತ್ತದೆಂದು ಹೇಳುತ್ತಾರೆ. ಯಾಕಂದರೆ ಜೀವಾತ್ಮನಿಗೆ ಗತಿಯೂ ವೇಗವೂ ಉಂಟೆಂದೂ ಕೊನೆಮೊದಲುಗಳುಂಟೆಂದೂ ಹಿಂದೆ ಮುಂದೆ ಅಲೆದಾಟವುಂಟೆಂದೂ ವಿವರಿಸಿ, ಜೀವಾತ್ಮನು ಮೈಗೊಂಡು ಕೊನೆಗೆ ಮೈಯನ್ನುಳಿದು ಅದರ ವಿರುದ್ಧ ದಿಕ್ಕಿಗೆ ಹೊರಡುತ್ತಾನೆ, ಎಂದು ಸರಿಯಾಗಿ ತಮ್ಮ ವಿಚಾರವನ್ನು ಹೇಳಿದ್ದಾರೆ. ೩೮ ನೆಯ ಮಂತ್ರವಲ್ಲಿ ನಿತ್ಯಾನಿತ್ಯ ತತ್ವವಿಚಾರವು ಇರುವುದಾದರೂ ಅವರಲ್ಲಿ ಸಾಯಂಪ್ರಾತಃಕಾಲದ ನಕ್ಷತ್ರಗಳ ಮಾತೇ ಉಂಟೆಂದು ಓಲ್ಡೆನ್‌ಬರ್ಗನು ಅಪಾರ್ಥವನ್ನು ಮಾಡಿದ್ದಾನೆ. ಆದರೆ ಈ ಮಂತ್ರದೃಷ್ಟನಾದ ಕವಿಯು, ' ತಪ್ಪದೆ ಹಿಂದುಮುಂದಿನ ದಾರಿಗಳಿಂದ ಅಲೆಯುವ, ಹಬ್ಬಿದ ಬೆಳಕಿನ ಹೊದಿಕೆಯನ್ನು ಹೊತ್ತ, ಭೂಲೋಕಕ್ಕೆ ಮೇಲಿಂದ ಮೇಲೆ ಮರಳಿ ಬರುವ, ದೇಹಪಾಲಕನನ್ನು ನನ್ನ ( ಒಳ ) ಕಣ್ಣಿನಿಂದ ಕಂಡಿರುವೆನು, ' § ಎಂದು ಹೇಳಿದ್ದಾನೆ. ಇಲ್ಲಿ ಪುನರ್ಜನ್ಮದ ಕಲ್ಪನೆಯು ನಿಸ್ಸಂದಿಗ್ಧವಾಗಿದೆ. ೩೦ ನೆಯ ಮಂತ್ರದಲ್ಲಿ

* ಕೋ ದದರ್ಶ ಪ್ರಥಮಂ ಜಾಯಮಾನಮಸ್ಥನ್ವಂತಂ ಯದನಸ್ಥಾ ಬಿಭರ್ತಿ । ಭೂಮ್ಯಾ ಅಸುರಸೃಗಾತ್ಮಾ ಕ್ವಸ್ವಿತ್ ಕೋ ವಿದ್ವಾಂಸಮುಪಗಾತ್ ಪ್ರಷ್ಟುಮೇತತ್ ॥
ಋ ೧, ಸೂ ೧೬೪, ಮಂ ೪.

† ಅನಚ್ಛಯೇ ತುರಗಾತು ಜೀವಮೇಜದ್ ಧ್ರುವಂ ಮಧ್ಯ ಆ ಪಸ್ತ್ಯಾನಾಮ್ ।
ಋ ೧, ಸೂ ೧೬೪, ಮಂ ೩೦.

‡ ಅಪಾಙ್ ಪ್ರಾಙೇತಿ ಸ್ವಧಯಾ ಗೃಭೀತೋಽಮರ್ತ್ಯೋ ಮರ್ತ್ಯೇನಾ ಸಯೋನಿಃ । ತಾ ಶಶ್ವಂತಾ ವಿಷೂಚೀನಾ ವಿಯಂತಾ ನ್ಯನ್ಯಂ ಚಿಕ್ಯುರ್ನ ನಿಚಿಕ್ಯುರನ್ಯಮ್ ॥ ಋ ೧, ಸೂ ೧೬೪, ಮಂ ೩೮.

§ ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಮ್ । ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ ॥ ಋ ೧, ಸೂ ೧೬೪, ಮಂ ೩೧.

'ಉಸುರಾಡಿಸುವ, ತವಕದ ನಡಿಗೆಯ, ಜೀವನು' ಎಂದು ಉಲ್ಲೇಖವಿದೆಯಷ್ಟೆ; ಅದರ ಮುಂದಿನ ಮಂತ್ರದಲ್ಲಿಯ ಅಂದರೆ ೩೧ ನೆಯದರಲ್ಲಿರುವ 'ದೇಹಪಾಲಕನು' ಯಾರೆಂದು ಕೇಳಿದರೆ ಜೀವಾತ್ಮನಲ್ಲದೆ ಮತ್ತಿನ್ನಾರು ? ಅಲ್ಲದೆ 'ಮೇಲಿಂದ ಮೇಲೆ ಮರಳುವ' (ವರಿವರ್ತಿ) ಎಂಬ ಶಬ್ದವು ಈ ಲೋಕದಲ್ಲಿ ಜೀವನ ಪುನರ್ಜನ್ಮ ವಿಚಾರವನ್ನೆ ಸೂಚಿಸುತ್ತದೆ. ಮನಸಿನಲ್ಲೆಲ್ಲ ತುಂಬಾ ಈ ಕಲ್ಪನೆಯಿದ್ದುದರಿಂದಲೆ ಕವಿಯು, ಹಿರಾಕ್ಲಿಟಸ್ಸನ ರೀತಿಯಲ್ಲಿ ಈ ಲೋಕಕ್ಕೆ ಬರುವವರಿಗೆ ದೂರ ಹೋಗುವವರೆಂದೂ, ತಿರುಗಿ ಅತ್ತ ಸಾಗಿದವರಿಗೆ ಇತ್ತ ಬರುವವರೆಂದೂ * ಹೇಳುತ್ತಾನೆ. ಹಿರಾಕ್ಲಿಟಸ್ಸನಾದರೂ ಇದೇ ಸರಣಿಯಿಂದ ಅಮರರಿಗೆ (ದೇವರಿಗೆ) ಮರ್ತ್ಯರೆಂದೂ ಮರ್ತ್ಯರಿಗೆ ಅಮರರೆಂದೂ ಹೇಳಿದ್ದಾನೆ.

**೩೦. ಪುನರ್ಜನ್ಮದ ಕಲ್ಪನೆಯೂ ಆಯಾ ಜನಾಂಗದ ಮನೋವಿಕಾಸವೂ**— ಋಗ್ವೇದದಷ್ಟು ಪುರಾತನ ಕಾಲದಲ್ಲಿ ಸಹ ಆರ್ಯರಲ್ಲಿ ಪುನರ್ಜನ್ಮದ ಕಲ್ಪನೆಯು ಇದ್ದೇ ಇತ್ತೆಂದು ಸಿದ್ಧಪಡಿಸುವದಕ್ಕಾಗಿ ಇಷ್ಟೊಂದು ವಿಸ್ತೃತವಾಗಿ ವಿವೇಚಿಸಬೇಕಾಯಿತು. ಈ ಪುನರ್ಜನ್ಮದ ಕಲ್ಪನೆಯಲ್ಲಿ ಮೂರು ಮೆಟ್ಟುಗಳಿರುವವು. ದೇಹದಿಂದ ಹೊರಡುವ ಆತ್ಮನ ದಾರಿಯೆಂಬುದು ಮೊದಲನೆಯದು; ಔಷಧಿ ವನಸ್ಪತಿಗಳು, ನೀರು ಇಂಥಲ್ಲಿ ಅವನ ವಸತಿ ಇದು ಎರಡನೆಯದು; ಮತ್ತೆ ಜನ್ಮತಾಳಿ ಮನುಷ್ಯಯೋನಿಯಲ್ಲಿ ಸಹ ಮರಳಿ ಬರುವುದು ಮೂರನೆಯದು. ಈ ಮೂರೂ ಮೆಟ್ಟುಗಳ ಕಲ್ಪನೆಗಳು ಋಗ್ವೇದದಲ್ಲಿ ಗರ್ಭಿತವಾಗಿವೆ. ಅಲ್ಲದೆ ಮುಂದಿನ ಜನ್ಮವು ಎಂಥ ಯೋನಿಯಲ್ಲಿ ಆಗಬೇಕೆಂಬುದನ್ನು ನಿರ್ಧರಿಸುವ ಧರ್ಮದ, ನಿಯಮದ, ಕಲ್ಪನೆಯು ಪ್ರಾಥಮಿಕ ಸ್ವರೂಪದಲ್ಲಿ ಮೇಲ್ಕಾಣಿಸಿದ ಮೂರೂ ಮಾತುಗಳೊಡನೆ ಅಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಪುನರ್ಜನ್ಮ ಕಲ್ಪನೆಯು ಅನಾರ್ಯವೆಂದೂ ಭಾರತೀಯ ಆರ್ಯರು ಈ ಕಲ್ಪನೆಯನ್ನು ಆರ್ಯರಲ್ಲದ ಇಲ್ಲಿಯ ಮೂಲ ನಿವಾಸಿಗಳಿಂದ ಎತ್ತಿಕೊಂಡರೆಂದೂ ಹಿಂದುಸ್ಥಾನದ ಹೊರಗಿನ ದೇಶಗಳಲ್ಲಿ ಈ ಕಲ್ಪನೆಯು ಯಾವದೋ ಒಂದು ಅತರ್ಕ್ಯ ರೀತಿಯಿಂದ ಹಬ್ಬಿಗೊಂಡಿತೆಂದೂ ಮತ್ತೆ ಮತ್ತೆ ಹೇಳುವುದರಲ್ಲಿ ಅರ್ಥವೇನೂ ಇಲ್ಲ. ಬಹುತರವಾಗಿ ಪ್ರತಿಯೊಂದು ಜನಾಂಗದ ಮನಸ್ಸಿನಲ್ಲಿಯೂ ಕೆಲವು ಕಲ್ಪನಾಬೀಜಗಳಿರುವವು; ಅವು ಸರಿಯಾಗಿ ವಿಕಸಿತವಾದರೆ, ಪುನರ್ಜನ್ಮದ ಕಲ್ಪನೆಯು ಬರಲಿಕ್ಕೆ ಆಸ್ಪದವಿದೆಯೆಂದು ಮನುಷ್ಯಜಾತಿಯ ಮಾನಸಶಾಸ್ತ್ರದ ವಿಚಾರ ಮಾಡಿದರೆ ಕಂಡುಬರುತ್ತದೆ. ಅಂದಬಳಿಕ ಇಜಿಪ್ತವು ಹಿಂದುಸ್ಥಾನದಿಂದ ಪುನರ್ಜನ್ಮ ಕಲ್ಪನೆಯನ್ನು ಎತ್ತಿಕೊಂಡಿತು ಎಂಬುವುದು ಎಷ್ಟು ಅಸಂಗತ

---

* ಯೇ ಅರ್ವಾಂಚಸ್ತಾಂ ಉ ಪರಾಚ ಆಹುರ್ಯೇ ಪರಾಂಚಸ್ತಾಂ ಉ ಅರ್ವಾಚ ಆಹುಃ ।
ಋ ೧, ಸೂ ೧೬೪, ಮಂ ೧೯.

ವಾಗಬಹುದೊ ಅಷ್ಟೇ, ಗ್ರೀಸಕ್ಕೆ ಹಿಂದುಸ್ಥಾನದಿಂದ ಈ ಕಲ್ಪನೆಯು ಹೋಯಿತೆಂಬು ವದೂ ವಿಸಂಗತವಾಗಿದೆ. ಮೃತ ಮನುಷ್ಯನು ಮರಳಿ ಭೂಲೋಕದಲ್ಲಿ ಅಲೆದಾಡ ಲಿಕ್ಕೂ ಜೀವಿತಕಾಲದಲ್ಲಿ ತಾನು ಪ್ರೀತಿಸಿದ ಸ್ಥಳಗಳಿಗೆ ಭೆಟ್ಟಿಕೊಡಲಿಕ್ಕೂ ಅಥವಾ ಬೆಳ್ಳಕ್ಕಿ, ಬಕಪಕ್ಷಿ, ಹಾವು, ಮೊಸಳೆ ಇಲ್ಲವೆ ಒರ್ವ ಬಾಲೆಯ ರೂಪುಗೊಳ್ಳಲಿಕ್ಕೂ ಬರ ಬಹುದೆಂದು ಇಜಿಪ್ತಿನವರು ನಂಬಿದ್ದರಿಂದು ಪ್ರೊಫೆಸರ ಕೀಥರು * ಒಪ್ಪುತ್ತಿದ್ದರೆ, 'ಇದು ನಿಜವಾಗಿ ಪುನರ್ಜನ್ಮವೆ; ಆದರೆ ಗ್ರೀಸ ಅಥವಾ ಹಿಂದುಸ್ಥಾನದಲ್ಲಿಯ ಪುನರ್ಜನ್ಮ ಕಲ್ಪನೆಯಿಂದ ಇದು ಭಿನ್ನವಾದುದು ' ಎಂದು ಅವರು ಅನ್ನುವುದರಲ್ಲಿ ತಾತ್ಪರ್ಯವೇನೂ ಇಲ್ಲ. ಆತ್ಮನು ದೇವಸದೃಶವಾದ ಒಂದು ತತ್ವದಂತೆ ಹೊರಗಣಿಂದ ಬಂದು ದೇಹದಲ್ಲಿ ಇರುವುದು ಶಕ್ಯವಿದೆಯೆಂದು ಒಮ್ಮೆ ಒಪ್ಪಿದರೆ, ಆತ್ಮನು ದೇಹದಲ್ಲಿ ಬಂದು ನಿಂತಂತೆ ಅದನ್ನು ತೊರೆದುಹೋಗುವನೆಂದು ತಿಳಿದರೆ, ದೇಹತ್ಯಾಗದ ನಂತರ ಆತ್ಮನು ಅಶರೀರಿ ಯಾಗಿ ಇರುವದು ಸಾಧ್ಯವಿದೆಯೆಂದು ಬಗೆದರೆ, ದೇಹಬಿಟ್ಟು ಹೋದ ಆತ್ಮನು ಮರಳಿ ಭೂಮಿಗೆ ಬಂದು ಯಾವದೇ ಬಗೆಯ ಯಾವದೇ ರೂಪದಲ್ಲಿ ನೆಲಸುವನೆಂದು ಭಾವಿಸಿದರೆ, ಒಂದು ಬಗೆಯಿಂದ ಆತ್ಮನ ಅಮರತ್ವವನ್ನು ಒಪ್ಪಿದಂತಾಯಿತು. ಆ ಮೇಲೆ ಮುಂದೆ ಪ್ರತ್ಯಕ್ಷ ಪುನರ್ಜನ್ಮದ ಕಲ್ಪನೆಯು ದೂರವಿಲ್ಲ. ಆದರೆ ಪುನರ್ಜನ್ಮಕಲ್ಪನೆಯು ಪರಿಪಕ್ವ ಸ್ಥಿತಿಗೆ ಬಂದುದು ಮುಂದೆ ಬಹುಕಾಲದ ನಂತರ. ಈ ಪುನರ್ಜನ್ಮಕಲ್ಪನೆಯ ಪರಿಪಕ್ವ ಸ್ಥಿತಿಯೊಳಗಿನ ವಿಚಾರವು ಪಾಯಥಾಗೋರಾಸ, ಪ್ಲೇಟೊ ಹಾಗೂ ಭಾರತೀಯರ ಯೋಗ ಶಾಸ್ತ್ರದಲ್ಲಿ ಕಂಡು ಬರುತ್ತಿರುವುದು. ವೇದೋಪನಿಷತ್ತುಗಳಲ್ಲಿ ಈ ಕಲ್ಪನೆಯು ಇಷ್ಟು ಸ್ಪಷ್ಟ ಸ್ವರೂಪದಲ್ಲಿತ್ತೆಂದು ಹೇಳಲಿಕ್ಕಾಗದಿದ್ದರೂ ಅರಿಮರವಿನಿಂದ ವಾಮ ದೇವನುಸುರಿದ ' ಹಿಂದಿನ ಜನ್ಮಗಳಲ್ಲಿ ನಾನು ಮನು ಮತ್ತು † ಸೂರ್ಯನಾಗಿದ್ದೆನು' ಎಂಬ ವಾಕ್ಯವು ವೇದೋಪನಿಷತ್ತುಗಳಲ್ಲಿ ಕೂಡ ಈ ಕಲ್ಪನೆಯು ತಕ್ಕಮಟ್ಟಿಗೆ ಮೈದೋ ರಿದೆ ಎಂದು ತೋರಿಸುವದು.

**೩೧. ಕಠೋಪನಿಷತ್ತಿನಲ್ಲಿಯ ಪುನರ್ಜನ್ಮವಿಚಾರವು**— ಇನ್ನು ಉಪನಿಷತ್ತುಗಳಲ್ಲಿಯೆ ಕಂಡುಬರುವ ಪುನರ್ಜನ್ಮವಿಚಾರದ ಕಡೆಗೆ ನೋಡುವೆವು. ಋಗ್ವೇದದಲ್ಲಿ ಒಡಪಿನಂತಿರುವ ಒಂದು ಮಂತ್ರದಲ್ಲಿ ಪುನರ್ಜನ್ಮಕಲ್ಪನೆಯ ಈಷನ್ಮಾತ್ರ ವಿಚಾರವು ಪ್ರಕಟವಾಗಿರುವುದೆಂದು ನಾವು ಈ ಮೊದಲೆ ಸಿದ್ಧಮಾಡಲೆತ್ನಿಸಿದ್ದೇವೆ. ಆದರೆ

---

* R. A. S. Journal 1909 p. 569 Seq : Pythagoras and Transmi--gration.

† ಅಹಂ ಮನುರಭವಂ ಸೂರ್ಯಶ್ಚ । ಬೃ, ಅ ೧, ಬ್ರಾ ೪, ಮಂ ೧೦.

ಉಪನಿಷತ್ತುಗಳಲ್ಲಿ ಈ ಕಲ್ಪನೆಯು ಬಹು ವಿಕಸಿತವಾಗಿದೆ. ನಚಿಕೇತನ ತಂದೆಯು ಆತನಿಗೆ, ನಿನ್ನನ್ನು ಮೃತ್ಯುದೇವತೆಯಾದ ಯಮನಿಗೆ ಅರ್ಪಿಸಿರುವೆನೆನ್ನಲು ಅವನು, ನನಗೆ ಇದೇನು ಅಸಾಧಾರಣವಾದ ಹಾಡು ಒದಗಿತೆನ್ನುವಹಾಗಿಲ್ಲ, ಎಂದು ನುಡಿದನು. 'ನಿಜವಾಗಿ ನಾನು ಮತ್ತೊಂದು ಲೋಕಕ್ಕೆ ಹೋಗುವ ಬಹು ಜನರಲ್ಲಿ ಮೊದಲಿಗನು ; ಆದರೆ ಹೀಗೆ ಹೋಗುವ ಹಲವು ಜನರ ಸಂಗಡವೇ ನಾನಾದರೂ ಹೋಗುವೆನು. ಯಮನು ನನಗೆ ಮಾಡುವುದಾದರೂ ಏನು ? (ಈ ಮೊದಲು ಮಡಿದ) ಮೊದಲಿಗರನ್ನು ನೋಡು, ಅದರಂತೆ ಮುಂದೆ ಅವರ ಸ್ಥಳಕ್ಕೆ ಬಂದವರನ್ನೂ ನೋಡು ; ಮನುಷ್ಯನು ತೃಣಧಾನ್ಯಗಳಂತೆ ಹಣಾಗುವನು, ತೃಣಧಾನ್ಯಗಳಂತೆ ಮರಳಿ ಹುಟ್ಟುವನು' (ಕಠ, ಅ ೧, ವಲ್ಲಿ ೧, ಮಂ ೫-೬). ಇಲ್ಲಿ ನಚಿಕೇತನು ಬಾಯ್‌ಬಲ್ಲಿನ ವಿಚಾರಗಳನ್ನು ಮುಂಗಂಡು ಸೆಂಟ ಜಾನನಿಗಿಂತಲೂ ಹೆಚ್ಚಿನ ಮಾತು ಹೇಳುತ್ತಾನೆ. 'ಒಂದು ಗೋದಿಯ ಕಾಳು ಭೂಮಿಯಲ್ಲಿ ಬಿದ್ದು ನಾಶಹೊಂದುವವರೆಗೂ ಅದು ತನ್ನಷ್ಟಕ್ಕೆ ತಾನೆ ಉಳಿಯುವುದು ; ಆದರೆ ತಾನು ನಷ್ಟವಾಗಿ ಹಲವು ಕಾಳುಗಳನ್ನು ಹುಟ್ಟಿಸುವುದು' * ಎಂದು ಸೆಂಟ ಜಾನನ ವಚನವು. ಕಾಳು ಮರಳಿ ಹುಟ್ಟುವುದೆಂದು ಸೆಂಟ ಜಾನನು ಹೇಳುವುದೇ ಇಲ್ಲ ; ಆದರೆ ನಚಿಕೇತನು ಹೇಳುವುದೇನಂದರೆ, ತೃಣಧಾನ್ಯವು ಹುಟ್ಟಿ ಹಣ್ಣಾಗಿ ಭೂಮಿಯಲ್ಲಿ ಬಿದ್ದು ಸತ್ತು ಮರಳಿ ಹುಟ್ಟುವುದು ; ಅದರಂತೆಯೆ ಮನುಷ್ಯನು ಬದುಕುವದು, ಸಾಯುವದು, ಮತ್ತೆ ಹುಟ್ಟುವುದಕ್ಕಾಗಿ.

**೩೨. ಬೃಹದಾರಣ್ಯಕದೊಳಗಿನ ಪುನರ್ಜನ್ಮವಿಚಾರವು—** ಪುನರ್ಜನ್ಮಸಂಬಂಧದಿಂದ ಬಹಳ ಪ್ರಖ್ಯಾತವಾದ ಉಲ್ಲೇಖವು ಬೃಹದಾರಣ್ಯಕದಲ್ಲಿದೆ. ಅದರಲ್ಲಿ ಮನುಷ್ಯನ ಹುಟ್ಟುಸಾವಿನ ರೀತಿಯ ವರ್ಣನೆಯು ವಿಸ್ತಾರಪೂರ್ವಕವಾಗಿ ಬಂದಿದೆ. ತಮ್ಮ ರಾಜನೂ ಈಶನೂ ಆದ ಆತ್ಮನು ಅವತರಿಸತಕ್ಕ ಕಾಲದಲ್ಲಿ ಅವನ ಪರಿಚಾರಕ್ಕಾಗಿ ಮಹಾಭೂತಗಳು ಹೇಗೆ ಕೈಕಟ್ಟಿಕೊಂಡು ನಿಲ್ಲುತ್ತವೆ ಮತ್ತು ಅವತಾರ ಸಮಾಪ್ತಮಾಡಿಕೊಂಡು ಆತ್ಮನು ಹೊರಡುವ ಸಮಯದಲ್ಲಿ ಅವು ಅವನನ್ನು ಕಳಿಸಲು ಹೇಗೆ ಹಿಂಬಾಲಿಸುತ್ತವೆ ಎಂಬುದನ್ನು ಅಲ್ಲಿ ಮೊದಲು ಹೇಳಿದೆ. 'ಅರಸನ ಆಗಮನ ಕಾಲಕ್ಕೆ ಉಗ್ರರೂ (ಪೋಲೀಸರೂ), ಪ್ರತ್ಯೇನಸರೂ (ಮ್ಯಾಜಿಸ್ಟ್ರೇಟರೂ), ಸೂತರೂ (ರಥನಡಿಸುವರೂ), ಪಟ್ಟಣಗಳೊಡೆಯರೂ ಕೂಡಿ, ಅನ್ನ, ನೀರು, ಡೇರೆಗಳನ್ನು ತಕ್ಕೊಂಡು, 'ಅವನು ಬಂದನು, ಬಿಜಯಂಗೈದನು' ಎಂದೆನ್ನುತ್ತ ಒಡೆಯನ ಆದರಸತ್ಕಾರಕ್ಕೆ ಅನುವಾಗುವಂತೆ ಮಹಾಭೂತಗಳಾದರೂ ಅವನು (ಜೀವನು) ಜನಿಸುವಾಗ 'ಬ್ರಹ್ಮನು

* ಸೆಂಟ ಜಾನನ ಸಂದೇಶವು. ೧೨-೨೪.

ಬಂದನು, ಬ್ರಹ್ಮನು ಬಿಜಯಂಗೈದನು ' ಎಂದೆನ್ನುತ್ತ ಸೇವೆಗೆ ಸಿದ್ಧವಾಗುತ್ತನೆ. ಇದೇ ಪ್ರಕಾರ ಅರಸನು ಮುಂದಕ್ಕೆ ಪ್ರಯಾಣಬೆಳಿಸುವಾಗ ಉಗ್ರರೂ ( ಪೋಲಿಸರು ), ಪ್ರತ್ಯೇನಸರೂ (ಮ್ಯಾಜಿಸ್ಟ್ರೇಟರು), ಸೂತರೂ, ಪಟ್ಟಣಗಳೊಡೆಯರೂ ಅರಸನ ಪರಿಚಾರಕರಾಗುವಂತೆ ಅಂತಕಾಲಕ್ಕೆ ಪ್ರಾಣಗಳು ಆತ್ಮನ ಸುತ್ತಲೂ ಕೂಡುತ್ತವೆ ' ( ಬೃ, ಅ ೪, ಬ್ರಾ ೩, ಮಂ ೩೭–೩೮ ). ಇದರ ತರುವಾಯ ಕಣ್ಮುಂದೆ ಕಟ್ಟುವಂತೆ ಮರಣ ಪ್ರಸಂಗದ ವರ್ಣನೆಯು ಯಥಾತಥ್ಯವಾಗಿ ಮಾಡಲ್ಪಟ್ಟಿದೆ. ' ಪ್ರಾಣಗಳು ಸುತ್ತಲೂ ಕೂಡಿದಾಗ ಆತ್ಮನು ಅಲ್ಲಲ್ಲಿಯ ಎಲ್ಲ ಬೆಳಕನ್ನೂ ಸೇದಿ ಕೂಡಿಸಿಕೊಂಡು ಹೃದಯದಲ್ಲಿ ಸೇರುತ್ತಾನೆ. ಕಣ್ಣೊಡೆಯನು ಅಂದರೆ ಚಾಕ್ಷುಷ ಪುರುಷನು ತಿರುಗಿ ಒಳಗೆ ಹೊರಳಿದೊಡನೆ ಆ ಮನುಷ್ಯನಿಗೆ ರೂಪಿನ ಜ್ಞಾನವು ಇಲ್ಲದಾಗುತ್ತದೆ, ಅವನು ಏಕಾಗ್ರನಾಗುತ್ತಾನೆ ; ಆದುದರಿಂದಲೆ ಆಗ ಅವನು ಕಣ್ಣಿನಿಂದ ನೋಡಲಾರನೆಂದು ಹೇಳುವರು. ಅವನು ತನ್ನಲ್ಲಿ ತಾನು ಒಂದಾಗುತ್ತಾನೆ. ಆದುದರಿಂದಲೆ ಅವನು ನುಡಿಯಲಾರನು, ಕೇಳಲಾರನು, ಇಲ್ಲವೆ ಅರಿಯಲಾರನು, ಎಂದು ಹೇಳುವರು. ಬಳಿಕ ಅವನ ಹೃದಯಾಗ್ರವು ಬೆಳ್ಳನೆ ಬೆಳಗುವದು; ತನ್ಮುಖಾಂತರವಾಗಿ ಆತ್ಮನು ಕಣ್ಣು, ನೆತ್ತಿ ಅಥವಾ ಬೇರೆ ಎಡೆಯಿಂದ ಹೊರಬೀಳುವನು. ಬೆಂಬತ್ತಿ ಜೀವವು ಹೊರಡುವದು. ಜೀವದೊಡನೆ ಪ್ರಾಣವಾಯುಗಳೂ ತೆರಳುವವು. ಆತ್ಮನನ್ನು ಹಿಂಬಾಲಿಸಿಯೆ ಅವನ ವಿದ್ಯೆ, ಅವನ ಕರ್ಮ, ಮತ್ತು ಅವನ ಪೂರ್ವಪ್ರಜ್ಞೆಯೂ ಸಾಗುವವು ' ( ಬೃ, ಅ ೪, ಬ್ರಾ ೪, ಮಂ ೧–೨ ). ಕೊನೆಯ ವಾಕ್ಯದಲ್ಲಿ 'ಕರ್ಮ' ದ ಸಿದ್ಧಾಂತದ ಉಲ್ಲೇಖವಿದೆ ; ಆದರೆ ಮತ್ತೆ ಅದರ ಮುಂದಿನ ಸಾಲುಗಳಲ್ಲಿಯೆ ಅದರ ವಿಶೇಷ ವಿವರವಿದೆ : ' ಕೋರಿಹುಳವು ಹುಲ್ಲಿನ ಒಂದು ತುದಿಗೆ ಹೋಗಿ ಇನ್ನೊಂದು ಕಡ್ಡಿಯ ಆಧಾರವನ್ನು ಹಿಡಿದುಕೊಂಡು ಬಳಿಕ ಅದರಮೇಲೆ ತನ್ನನ್ನು ಎಳಕೊಳ್ಳುತ್ತದೆ. ಅದರಂತೆಯೆ ಆತನಾದರೂ ಈ ದೇಹಾಂತ್ಯಕ್ಕೆ ಬಂದು ಮತ್ತೊಂದು ದೇಹದ ಆಧಾರವನ್ನು ಹಿಡಕೊಂಡ ಬಳಿಕ ಇದನ್ನು ಬಿಡುವನು. ಅಕ್ಕಸಾಲಿಗನು ಒಂದು ಬಂಗಾರದ ತುಂಡನ್ನು ತಕ್ಕೊಂಡು ಅದಕ್ಕೆ ಮೊದಲಿಗಿಂತಲೂ ಹೊಸಹೊಸತಾದ ಅಂದದ ಚಂದದ ರೂಪಕೊಡುವಂತೆ ಈ ಆತ್ಮನಾದರೂ ಈ ದೇಹವನ್ನು ತ್ಯಜಿಸಿ, ಅಜ್ಞಾನವನ್ನು ಹೋಗಲಾಡಿಸಿ, ಮೊದಲಿಗಿಂತಲೂ ಹೆಚ್ಚುಹೊಸತಾದ, ಚೆನ್ನವಾದ ರೂಪವನ್ನು ನಿರ್ಮಿಸುವನು. ಈ ರೂಪು ಹಿಂದಿನ ಹಿರಿಯರಂತಹದಿರಬಹುದು, ಗಂಧರ್ವರಂತಹದಿರಬಹುದು, ದೇವರಂತಹದಿರಬಹುದು, ಪ್ರಜಾಪತಿಯಂತಹದಿರಬಹುದು, ಬ್ರಹ್ಮನಂತಹದಿರಬಹುದು, ಅಥವಾ ಬೇರೆ ಯಾವ ಪ್ರಾಣಿಗಳಂತೆಯೂ ಇರಬಹುದು. ಈ ಆತ್ಮನು ಹೇಗೆ ಮಾಡಿರುವನು ಹೇಗೆ ನಡೆದಿರುವನು ಹಾಗೆ ಆಗುವನು. ಒಳಿತು

ಮಾಡಿದವನು ಒಳ್ಳೆದನಾಗುವನು, ಕೆಡಕು ಮಾಡಿದವನು ಕೇಡಿಯಾಗುವನು; ಪುಣ್ಯಕಾರ್ಯದಿಂದ ಪುಣ್ಯವಂತನಾಗುವನು, ಪಾಪಕಾರ್ಯದಿಂದ ಪಾಪಿಯಾಗುವನು. ಆದುದರಿಂದಲೆ ಮನುಷ್ಯನು ಕಾಮನಾಮಯನೆಂದು ಹೇಳುವರು. ಯಾಕಂದರೆ ಕಾಮನೆಯಂತೆ ಕ್ರತುವು ( ಕರ್ಮಪ್ರವೃತ್ತಿಯು ), ಕ್ರತುವಿನಂತೆ ಕರ್ಮವು, ಕರ್ಮದಂತೆ ಫಲವು ' ( ಬೃ, ಅ ೪, ಬ್ರಾ ೪. ಮಂ ೩–೫ ). ಈ ಭಾಗವು ಹಲವು ದೃಷ್ಟಿಯಿಂದ ಮಹತ್ವದ್ದಾಗಿದೆ. ಆತ್ಮನು ಈ ದೇಹವನ್ನು ಬಿಡುವ ಮೊದಲು ಮತ್ತೊಂದು ದೇಹವನ್ನು ಗೊತ್ತುಪಡಿಸಿಡುವನು ಎಂದು ಹೇಳುವುದು ಮೊದಲನೆಯ ಮಾತು ; ಹೀಗೆ ಹೇಳಿದುದರಿಂದ ವಿದೇಹಾವಸ್ಥೆಯು ಶಕ್ಯವೊ ಎಂಬ ಪ್ರಶ್ನೆಯು ಹುಟ್ಟುತ್ತದೆ. ಮತ್ತೊಂದು ಮಾತೆಂದರೆ ಆತ್ಮನಲ್ಲಿ ಸೃಜಿಸುವ ಸಾಮರ್ಥ್ಯವುಂಟೆಂದು ಹೇಳಿದ್ದು. ಸುವರ್ಣಕಾರನು ಬಂಗಾರದ ಆಭರಣವನ್ನು ಸಿದ್ಧಪಡಿಸುವಂತೆ ಆತ್ಮನು ದೇಹವನ್ನು ಹುಟ್ಟಿಸುವನೆಂದು ಅರಿಸ್ಟಾಟಲ್ಲನ ರೀತಿಯಲ್ಲಿ ಹೇಳಲ್ಪಟ್ಟಿದೆ. ದೇಹವು ಬದಲಾದ ಸರತಿಗೊಮ್ಮೆ ಫಿನಿಕ್ಸ ಪಕ್ಷಿಯಂತೆ ಆತ್ಮನು ನವೋನವವೂ ಕಲ್ಯಾಣಕರವೂ ಆದ ರೂಪವನ್ನು ಧರಿಸುತ್ತಾನೆಂದು ಹೇಳಿದ್ದು ಇನ್ನೊಂದು ವಿಶೇಷ ಸಂಗತಿಯು. ಆತ್ಮನಿಗೆ ಯಾವಾಗಲೂ ಕರ್ಮದಂತೆ ಫಲವು ; ಪುಣ್ಯಮಾಡಿದ್ದರೆ ಪವಿತ್ರದೇಹವು, ಪಾಪಮಾಡಿದ್ದರೆ ಅಪವಿತ್ರದೇಹವು ಬರುವದೆಂದು ಹೇಳಿದ್ದು ಇನ್ನೊಂದು ಮಾತು. ಬೃಹದಾರಣ್ಯಕದ ಇದೇ ಭಾಗದಲ್ಲಿಯೆ ಮುಂದೆ ಹೇಳಿದುದೇನಂದರೆ, ' ಕಾಮನೆಗಳೆಲ್ಲ ತೃಪ್ತವಾದವನು ಆಪ್ತಕಾಮನು ; ಆಪ್ತಕಾಮನಿಗೆ ಬಯಕೆಗಳಿಲ್ಲದ್ದರಿಂದ ಅವನು ನಿಷ್ಕಾಮನು ; ನಿಷ್ಕಾಮನ ಬಯಕೆಗಳೆಲ್ಲ ಆತ್ಮನಲ್ಲಿಯೆ ಒಂದಿರುವುದರಿಂದ ಅವನು ಆತ್ಮಕಾಮನು. ಇಂತಹ ಆತ್ಮಕಾಮನಿಗೆ ಸಾವಿಲ್ಲ ; ಅವನಿಂದ ಪ್ರಾಣಗಳು ತೊಲಗುದದಿಲ್ಲ. ಯಾಕಂದರೆ ಅವನು ( ಬದುಕಿರುವಾಗಲೆ ) ಬ್ರಹ್ಮಸ್ವರೂಪನಾದ್ದರಿಂದ ( ಮೈಮಣ್ಣುಗೂಡುವಾಗ ) ಬ್ರಹ್ಮನನ್ನು ಹೊಂದುವನು. ಮೇಲಣ ಭಾವವನ್ನೊಳಗೊಂಡ ಇದೊಂದು ಮಂತ್ರವುಂಟು: ಹೃದಯದೊಳಗಿನ ಕಾಮನೆಗಳೆಲ್ಲ ತೀರಿದ ಬಳಿಕ ಮರ್ತ್ಯನು ಅಮರನಾಗಿ ಬ್ರಹ್ಮನನ್ನು ಹೊಂದುತ್ತಾನೆ ಮತ್ತು ನಿರ್ಜೀವವೂ ಚಲ್ಲಲ್ಪಟ್ಟದೂ ಆದ ಹಾವಿನಪರಿಯು ಹುತ್ತಿನಮೇಲೆ ಬಿದ್ದಿರುವಂತೆ ಅವನ ದೇಹವು ಬಿದ್ದಿರಬಹುದು. ವಿದೇಹಿಯಾದ ಅವನು ಅಮರನೆ ಆಗಿರುತ್ತಾನೆ, ಅವನ ಪ್ರಾಣಗಳು ಬ್ರಹ್ಮಸ್ವರೂಪವನ್ನು ಹೊಂದುತ್ತವೆ, ತಿಳಿಬೆಳಕಾಗುತ್ತವೆ ' ( ಬೃ, ಅ ೪, ಬ್ರಾ ೪, ಮಂ ೬–೯ ).

**೩೩. ಪಾಪಿಯ ಗತಿ**—ಅಮರ ಜೀವನವನ್ನು ಕುರಿತು ಬೇಗನೆ ಹೇಳತಕ್ಕದ್ದಿದೆ. ಅದನ್ನು ಹೇಳುವ ಮೊದಲು ಉಪನಿಷತ್ತುಗಳಲ್ಲಿ ಸಾಮಾನ್ಯ ಜೀವದ ಗತಿಯು ಬಗ್ಗೆ ವಿಶೇಷ

ವಾಗಿ ಅಧಮಜೀವದ ಗತಿಯ ಬಗ್ಗೆ ಏನು ಹೇಳಿರುವುದೆಂಬವನ್ನು ನೋಡುವದು ಅವಶ್ಯವು. ಈ ವಿಚಾರದಲ್ಲಿ ಅಧಮಜೀವಗಳ ಗತಿಯನ್ನು ಕುರಿತು ಬೃಹದಾರಣ್ಯಕ, ಈಶ, ಮತ್ತು ಕಠೋಪನಿಷತ್ತುಗಳಲ್ಲಿ ಬಹಳ ಉಲ್ಲೇಖಗಳಿವೆ. ಪಾಪಿಯು 'ಆನಂದರಹಿತ' ವಾದ 'ಅಸುರ' ರ ಲೋಕಕ್ಕೆ ಹೋಗುವನೆಂದೂ ಆ ಲೋಕವು ಕಾಳ್ಗತ್ತಲೆಯಿಂದ ಮುಸುಕಿರುವುದೆಂದೂ ಉಪನಿಷತ್ತಿನ ಋಷಿಗಳು ನಂಬಿದ್ದರೆಂದು ಆ ಉಲ್ಲೇಖಗಳಿಂದ ತಿಳಿಯುತ್ತದೆ. ಉಪನಿಷತ್ತುಗಳಲ್ಲಿ ಕಂಡುಬರುವ ಈ 'ನರಕ' ಲೋಕದ ನಂಬುಗೆಯು ಆರ್ಯಜನಾಂಗದ ಬೇರೆ ಬೇರೆ ಶಾಖೆಗಳಲ್ಲಿಯೂ ಕಂಡುಬರುತ್ತದೆ. ಆದರೆ ಪಾಪಿಗಾದ ಈ ಹಾಡು ಅನಂತಾನಂತ ಕಾಲಕ್ಕೂ ತಪ್ಪದೆ ಉಳಿವುದೊ ಅಥವಾ ಇಂತಿಷ್ಟು ಕಾಲಕ್ಕೆ ತೀರುವುದೊ ಎಂಬ ಬಗ್ಗೆ ಉಪನಿಷತ್ತುಗಳಲ್ಲಿ ಏನೂ ಬರೆದಿಲ್ಲ. ಬೃಹದಾರಣ್ಯಕವು ಹೇಳುವುದೇನಂದರೆ, 'ಅವಿದ್ವಾಂಸರೂ ಬುದ್ಧಿಹೀನರೂ ಆದವರು ಕಾಳ್ಗತ್ತಲೆಯಿಂದ ಸುತ್ತುಮುತ್ತಲ್ಪಟ್ಟ ಹಿಗ್ಗಿಲ್ಲದ ನಾಡಿಗೆ ಹೋಗುತ್ತಾರೆ' (ಬೃ, ಅ ೪, ಬ್ರಾ ೪, ಮಂ ೧೧). ಈಶೋಪನಿಷತ್ತು ಹೇಳುವುದೇನಂದರೆ, 'ಆತ್ಮಘಾತ ಮಾಡಿಕೊಂಡಂತಹ ಜನರು ಕಾಳ್ಗತ್ತಲೆಯಿಂದ ಸುತ್ತಲ್ಪಟ್ಟ * ಅಸುರ ಲೋಕಕ್ಕೆ ಹೋಗುತ್ತಾರೆ' (ಈಶ, ಮಂ ೩). ಇದೇ ಉಪನಿಷತ್ತು ಮತ್ತೆ ಹೆಚ್ಚಿಗೆ ಹೇಳುವದೇನಂದರೆ, 'ಅವಿದ್ಯೆಯು ಅಂದರೆ ನಿಜವಲ್ಲದ ಜ್ಞಾನದ ಉಪಾಸನೆಯನ್ನು ಮಾಡುವವರು ಕಾಳತ್ತಲೆಯನ್ನು ಸೇರುತ್ತಾರೆ' (ಈಶ, ಮಂ ೯, ). ಇದೇ ವಿಚಾರವೆ ಬೃಹದಾರಣ್ಯಕದಲ್ಲಿಯೂ ಒಂದೆಡೆಯಲ್ಲಿ ಬಂದಿದೆ. (ಬೃ, ಅ ೪, ಬ್ರಾ ೪, ಮಂ ೧೦, ). ಕಠೋಪನಿಷತ್ತು ಹೇಳುವದೇನಂದರೆ, 'ನೀರು ಕುಡಿದ, ಹುಲ್ಲು ತಿಂದ, ಹಾಲು ಕೊಟ್ಟ, ಬಂಜೆ ಆಕಳುಗಳನ್ನು ದಾನಮಾಡುವವನು ಆನಂದರಹಿತ ಲೋಕಕ್ಕೆ ತೆರಳುತ್ತಾನೆ' (ಕಠ, ಅ ೧, ವ ೧ ಮಂ ೩). ಈ ಉಲ್ಲೇಖಗಳಿಂದ ಅಪಂಡಿತನಿಗೂ ಬುದ್ಧಿವಿಹೀನನಿಗೂ ಆತ್ಮಘಾತಿಗೂ ಠಕ್ಕುದಾನಿಗೂ ಸತ್ತಬಳಿಕ ಸೂರ್ಯನಿಲ್ಲದ ಲೋಕಕ್ಕೆ ಹೋಗಬೇಕಾಗುತ್ತದೆಂದು ಉಪನಿಷತ್ಕಾರರು ನೆಚ್ಚಿದ್ದಂತೆ ಕಂಡುಬರುತ್ತದೆ.

**೩೪. ಬೃಹದಾರಣ್ಯಕದೊಳಗಿನ ಜೀವನ ಮರಣಾನಂತರ ಸ್ಥಿತಿಯ ವಿಚಾರವು**—ಪಾಪಿಗಳನ್ನು ಬಿಟ್ಟು ಉಳಿದ ಬಗೆಯ ಜೀವಗಳ ಬಗ್ಗೆ ಬೃಹದಾ

---

* ಡಾ. ರಾ. ಗೋ. ಭಾಂಡಾರಕರರು ಬಾಂಬೇ ಬ್ರಾಂಚ ಆಫ್ ರಾಯುಲ ಏಶಿಯಾಟಿಕ ಸೊಸೈಟಿಯ ಮಾಸಪತ್ರಿಕೆಯಲ್ಲಿ ಕೆಳಗೆ ಕಾಣಿಸಿದ ಮನೋವೇಧಕ ಸೂಚನೆಗಳನ್ನು ಮಾಡಿರುವರು: ದೈತ್ಯಸಂಬಂಧಿ ಎಂಬರ್ಥದ 'ಅಸುರ್ಯಾ' ಎಂಬ ಶಬ್ದವು ಅಸೀರಿಯನ್ ದೇಶವಾಚಿಯಿರಬಹುದು. ಅಸೀರಿಯನ್ ಹಾಗೂ ಅಸೂರ್ಯನ್ ಎಂಬವುಗಳಲ್ಲಿ ಶಬ್ದಶಾಸ್ತ್ರದ ವ್ಯುತ್ಪತ್ತಿಯಿಂದ ಭೇದವಿಲ್ಲ. ಗ್ರೀಕ ಭಾಷೆಯಂತೆ ಇಲ್ಲಿಯೂ ಇ ಮತ್ತು ಉ ಗಳು ಅದಲುಬದಲಾಗುತ್ತಿರುತ್ತವೆ.

ರಣ್ಯಕದಲ್ಲಿ ಒಂದು ಉಲ್ಲೇಖವಿದೆ. ಈ ಸಂಬಂಧದ ಉಲ್ಲೇಖಗಳಲ್ಲಿ ಇದೇ ಎಲ್ಲಕ್ಕೂ ಹಳೆಯದೆಂದು ತೋರುತ್ತದೆ. ಸತ್ತಬಳಿಕ ಜೀವನು ವಾಯು, ಸೂರ್ಯ, ಚಂದ್ರಲೋಕಗಳಿಂದ ಮೇಲಕ್ಕೇರುತ್ತ ಏರುತ್ತ, ಪ್ಲೇಟೋನು ಹೇಳುವ 'ಸುದೈವಿಗಳ ದ್ವೀಪಗಳಂತಹ' (Isles of the Blessed) ಶೋಕರಹಿತ ಹಿಮರಹಿತ ಒಂದು ಪ್ರದೇಶಕ್ಕೆ ಹೋಗಿ ಅಲ್ಲಿ ಶಾಶ್ವತವಾಗಿ ನೆಲೆಸುವನು, ಎಂಬುದೆ ಆ ಉಲ್ಲೇಖದ ಸಾರಾಂಶವು. 'ಮನುಷ್ಯನು ಈ ಲೋಕದಿಂದ ತೆರಳುತ್ತಲೆ ವಾಯುವನ್ನು ಸೇರುತ್ತಾನೆ. ಅಲ್ಲಿ ವಾಯುವು ಅವನಿಗೆ ತೇರಿನ ಗಾಲಿಯ ಕಿಂಡಿಯಷ್ಟು ದೊಡ್ಡ ಕಿಂಡಿಯನ್ನು ಮಾಡಿ ಕೊಡುವುದು. ಅದರೊಳಗಿಂದ ಮೇಲೆ ಸೂರ್ಯಲೋಕಕ್ಕೆ ಬರುತ್ತಾನೆ. ಸೂರ್ಯನು ಅಲ್ಲಿ ಅವನಿಗೆ 'ಲಂಬರ'ದಷ್ಟು ಅಗಲವಾದ ಕಿಂಡಿಯನ್ನು ಮಾಡಿಕೊಡುವನು. ಅದರೊಳಗಿಂದ ಮೇಲಕ್ಕೆ ಬಂದು ಚಂದ್ರಲೋಕವನ್ನು ಹೊಗುತ್ತಾನೆ. ಚಂದ್ರನು ನಗಾರೆಯ ಕಿಂಡಿಯಷ್ಟು ಹರವಾದ ಕಿಂಡಿಯನ್ನು ಅಲ್ಲಿ ಅವನಿಗೆ ಮಾಡಿಕೊಡುವನು. ಅದರೊಳಗಿಂದ ಮೇಲೆ ಹತ್ತಿ ಶೋಕರಹಿತವೂ ಹಿಮರಹಿತವೂ ಆದ ಪ್ರದೇಶಕ್ಕೆ ಬಂದು ಅಲ್ಲಿ ಶಾಶ್ವತವಾಗಿ ನಿಲ್ಲುತ್ತಾನೆ' (ಬೃ, ಅ ೫, ಬ್ರಾ ೧೦, ಮಂ ೧). ಉಪನಿಷತ್ತುಗಳಲ್ಲಿ ಈ ಸಂಬಂಧದಿಂದ ಅತಿಪ್ರಾಚೀನ ಉಲ್ಲೇಖವೆಂದರೆ ಇದೇ. ಈ ಮಂತ್ರದಲ್ಲಾಗಲಿ ಅಥವಾ ಇದು ಇರುವ ಭಾಗದೊಳಗಾಗಲಿ ಮೇಲ್ಕಾಣಿಸಿದ ಔರ್ಧ್ವದೇಹಿಕ ಸ್ಥಿತಿಯು ಎಲ್ಲ ಜೀವಿಗಳಿಗೂ ಲಭಿಸುವಂತಹದೊ ಇಲ್ಲವೆ ಸಾಧುಜೀವಿಗಳಿಗಷ್ಟೇ ಲಭಿಸುವುದೊ ಎಂಬುದರ ಉಲ್ಲೇಖವಿಲ್ಲ. ಜೀವಗಳಲ್ಲಿ ಭೇದಾಭೇದವನ್ನೇನೂ ಕಲ್ಪಿಸದೆ ಅಲ್ಲಿ ಮೇಲಿನಂತೆ ಹೇಳಿದೆ. ಇನ್ನು ಮುಂದೆ ಹೇಳಲಿಕ್ಕಿರುವ ಛಾಂದೋಗ್ಯದೊಳಗಿನ ಉಲ್ಲೇಖವು ಅರ್ವಾಚೀನವಿರಲಿಕ್ಕೆ ಬೇಕು; ಯಾಕಂದರೆ ಅದರಲ್ಲಿ ಪ್ರಾಪಂಚಿಕನಿಗೊಂದು ಗತಿ ಪಾರಮಾರ್ಥಿಕನಿಗೆ ಮತ್ತೊಂದು ಗತಿ ಎಂದು ವಿಂಗಡಿಸಿ ಅನುಕ್ರಮವಾಗಿ ಮೊದಲನೆಯವನಿಗೆ ಪಿತೃಯಾನವು ಮತ್ತೊಬ್ಬನಿಗೆ ದೇವಯಾನವು ದೊರೆಯುವದೆಂದು ನಿರ್ಧರಿಸಿದೆ. ಆದುದರಿಂದ ಮೇಲೆ ಕೊಟ್ಟಿರುವ ಬೃಹದಾರಣ್ಯಕದ ವಚನಗಳಿಗಿಂತ ಇಂತಿಂತಹರಿಗೆ ಈ ಈ ಗತಿಯೆಂದು ಔರ್ಧ್ವದೇಹಿಕ ಸ್ಥಿತಿವಿಚಾರವು ಇದರಲ್ಲಿ ಹೆಚ್ಚು ವಿಸ್ತಾರಪೂರ್ವಕವಾಗಿ ಬಂದಿದೆಯೆಂಬುದು ಸ್ಪಷ್ಟವು. ಸಾಧಾರಣವಾಗಿ ಎಲ್ಲ ಉಪನಿಷತ್ತುಗಳಲ್ಲಿಯೂ ಕಂಡುಬರುವಂತೆ ಬೃಹದಾರಣ್ಯಕದೊಳಗಾದರೂ ಚಂದ್ರನು ಸೂರ್ಯನಿಗಿಂತ ಮೇಲಿರುವನೆಂದು ಹೇಳಿದ್ದು ಲಕ್ಷಿಸತಕ್ಕ ಇನ್ನೊಂದು ಮಾತಾಗಿದೆ. ಇಲ್ಲಿ ಹೇಳಿದ ಭಾಗ್ಯವಂತನು ಕೊನೆಗೆ ಹೋಗಿ ನೆಲೆಸುವ ಪ್ರದೇಶವು ಹಿಮರಹಿತವಾಗಿದೆಯೆಂದು ಹೇಳಿರುವುದು ನೆನಪಿನಲ್ಲಿಡತಕ್ಕ ಮೂರನೆಯ ಸಂಗತಿಯು. ಈ ಉಪನಿಷತ್ತಿನ ತತ್ವಜ್ಞಾನಿಯ ವಾಸಸ್ಥಾನವು ಹಿಮಪೀಡಿತವಿತ್ತೆಂದು

ಹೀಗೆ ಬರೆದಿರಬಹುದೋ? 'ಶಾಶ್ವತ'ಜೀವನದ ಕಲ್ಪನೆಯು ಈ ಮಂತ್ರದಲ್ಲಿ ಬಂದಿರುವುದು ಮತ್ತೊಂದು ಮಹತ್ವದ ವಿಚಾರವು. ಆ ಜೀವವು ಆ ಭಾಗ್ಯಭೂಮಿಯಲ್ಲಿ ನಿರಂತರವಾಗಿ ನಿಲ್ಲುವುದೆಂದು ಇಲ್ಲಿ ಹೇಳಿದೆ.

**೩೫. ಛಾಂದೋಗ್ಯದೊಳಗಿನ ದೇವಯಾನವೂ ಪಿತೃಯಾನವೂ**— ಈ ಮೊದಲೆ ಹೇಳಿದಂತೆ ಛಾಂದೋಗ್ಯದೊಳಗೆ ಔರ್ಧ್ವದೇಹಿಕ ವಿಚಾರವು ಎಷ್ಟೋ ಬದಲಾವಣೆ ಹೊಂದಿದೆ. ಅರ್ಚಿರ್ಮಾರ್ಗ ಮತ್ತು ಧೂಮಮಾರ್ಗ, ದೇವಯಾನ ಮತ್ತು ಪಿತೃಯಾನಗಳೆಂದು ಮರ್ತ್ಯರಿಗೆ ಎರಡು ದಾರಿಗಳು ತೆರೆದಿವೆಯೆಂದು ಅದರೊಳಗೆ ಹೇಳಿದೆ. ಋಗ್ವೇದದ * ಮಂತ್ರಗಳಲ್ಲಿ ಸೂಕ್ಷ್ಮವಾಗಿ ಹೇಳಲ್ಪಟ್ಟ ಈ ಎರಡು ದಾರಿಗಳ ವಿಚಾರವೆ † ಭಗವದ್ಗೀತೆಯಲ್ಲಿ ಸರಸವಾಗಿ ವರ್ಣಿತವಾಗಿದ್ದು ಜನಮನದಲ್ಲಿ ನಿತ್ಯವಾಗಿ ಉಳಿಯುವಂತೆ ಮಾಡಲ್ಪಟ್ಟಿದೆ. ಅರಣ್ಯವಾಸಿ ತಪಸ್ವಿಯಾದ ಶ್ರದ್ಧಾವಂತನು ಸತ್ತಬಳಿಕ ಅವನ ಔರ್ಧ್ವದೇಹಿಕ ಕರ್ಮಗಳನ್ನು ಮಾಡಿರಲಿ ಮಾಡದಿರಲಿ; ಅವನು 'ಅರ್ಚಿರ್ಮಾರ್ಗದಿಂದ ಮೇಲೆ ಹೋಗುವನು ; ಬಳಿಕ ಅರ್ಚಿಸ್ಸಿನಿಂದ ಹಗಲಿಗೆ, ಹಗಲಿನಿಂದ ಶುಕ್ಲಪಕ್ಷಕ್ಕೆ, ಶುಕ್ಲಪಕ್ಷದಿಂದ ಉತ್ತರಾಯಣದ ಆರುತಿಂಗಳಿಗೆ, ಉತ್ತರಾಯಣದ ಆರುತಿಂಗಳಿಂದ ಸಂವತ್ಸರಕ್ಕೆ, ಸಂವತ್ಸರದಿಂದ ಸೂರ್ಯನಿಗೆ, ಸೂರ್ಯನಿಂದ ಚಂದ್ರನಿಗೆ, ಚಂದ್ರನಿಂದ ವಿದ್ಯುತ್ತಿಗೆ ಏರುತ್ತೇರುತ್ತ ಹೋಗುವನು. ಅಲ್ಲಿ ಒಬ್ಬ ಅ–ಮಾನವ ಪುರುಷನಿರುವನು. ಅವನು

---

* ಋಗ್ವೇದ, ಮಂಡಲ ೧೦, ಸೂ. ೧೮, ಮಂ ೧ರಲ್ಲಿ ಉಲ್ಲೇಖಿತವಾದ ದೇವಯಾನವೆಂಬುದಕ್ಕೂ ಉಪನಿಷತ್ತಿನಲ್ಲಿರುವ ಅರ್ಥವೇ ಉಂಟು:–

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।

ಈ ಮಂತ್ರದಲ್ಲಿ ಹೇಳಿದ ದೇವಯಾನದಿಂದ ಬೇರೆಯಾದ ಮತ್ತೊಂದು ಮಾರ್ಗವು ಪಿತೃಯಾನವಿರಲಿಕ್ಕೆ ಬೇಕು. ಆದರೆ ಋಗ್ವೇದದಲ್ಲಿ ಪಿತೃಯಾನ ಶಬ್ದವು ಪ್ರೇತಸಂಸ್ಕಾರದೊಡನೆ ಉಲ್ಲೇಖಿಸಲ್ಪಡದೆ ಯಜ್ಞದ ಗುಣಧರ್ಮಗಳೊಡನೆ ಉಲ್ಲೇಖಿಸಲ್ಪಡುತ್ತಿರುತ್ತದೆ.

ಪಂಥಾ ಅನು ಪ್ರವಿದ್ವಾನ್ ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿಭಾಹಿ ।

ಋ ಮಂಡಲ ೧೦, ಸೂ ೨, ಮಂ. ೭.

† ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥
ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥

ಭ. ಗೀ. ಅ ೮, ಮಂ ೨೪–೨೬.

ಅಲ್ಲಿ ಹೋದವನನ್ನು ಬ್ರಹ್ಮನಲ್ಲಿಗೆ ಒಯ್ಯುತ್ತಾನೆ. ಇದೆ ದೇವಪಥವು, ಇದೆ ಬ್ರಹ್ಮಪಥವು. ಈ ಹಾದಿಯನ್ನು ಹಿಡಿದವರು ಮಾನವರ ಸಂಸಾರಚಕ್ರದಲ್ಲಿ ಸಿಲುಕಿ ಬೀಳುವದಿಲ್ಲ, ಎಂದೆಂದೂ ಸಿಲುಕಿಬೀಳುವದಿಲ್ಲ' (ಛಾಂ, ಅ ೪, ಖಂ ೧೫, ಮಂ ೫-೬). ಗ್ರಾಮಗಳಲ್ಲಿ ವಾಸಮಾಡಿ ಪುಣ್ಯದೊರಕಬೇಕೆಂದು ದಾನಧರ್ಮಗಳನ್ನು ಮಾಡುವವರು 'ಧೂಮಮಾರ್ಗದಿಂದ ಹೋಗುತ್ತಾರೆ ; ಧೂಮದಿಂದ ರಾತ್ರಿಗೆ, ರಾತ್ರಿಯಿಂದ ಕೃಷ್ಣಪಕ್ಷಕ್ಕೆ, ಕೃಷ್ಣಪಕ್ಷದಿಂದ ದಕ್ಷಿಣಾಯನದ ಆರುತಿಂಗಳಿಗೆ ಹೋಗುತ್ತಾರೆ ; ಆದರೆ ಅಲ್ಲಿಂದ ಸಂವತ್ಸರಕ್ಕೆ ಅವರು ಹೋಗಲಾರರು. ಈ ಮಾಸಗಳಿಂದ ಪಿತೃಲೋಕಕ್ಕೂ, ಪಿತೃಲೋಕದಿಂದ ಆಕಾಶಕ್ಕೂ, ಆಕಾಶದಿಂದ ಚಂದ್ರನಲ್ಲಿಗೂ ಹೋಗುವರು. ಚಂದ್ರನತ್ತಣಿಂದ ಮತ್ತೆ ಕೆಳಗೆ ಬೀಳುವ ಕಾಲವಾಗುವವರೆಗೂ ಅಲ್ಲಿ ನಿಲ್ಲುವರು. ಬಳಿಕ ಕೆಳಗೆ ಬರುವ ಬಟ್ಟೆ ಯಾವದೆಂದರೆ, ಚಂದ್ರನಿಂದ ಆಕಾಶ, ಆಕಾಶದಿಂದ ವಾಯು ; ವಾಯುರೂಪವಾದ ಬಳಿಕ ಹೊಗೆಯ ರೂಪು, ಹೊಗೆಯಾದ ತರುವಾಯ ಅಭ್ರವು, ಅಭ್ರರೂಪದ ನಂತರ ಮೇಘ. ಮೇಘಗಳಾಗಿ ಮಳೆಯಾಗುತ್ತದೆ. ಬಳಿಕ ಅವರು ಭತ್ತ, ಗೋದಿ, ಅಥವಾ ಔಷಧಿವನಸ್ಪತಿಗಳು, ಎಳ್ಳು, ಉದ್ದುಗಳು ಇವುಗಳಲ್ಲಿ ಯಾವುದೊಂದು ಆಗುತ್ತಾರೆ. ಇಲ್ಲಿಂದ ಮುಂದಿನ ಬಟ್ಟೆಯು ತಿಳಿಯುವದು ದುಸ್ತರ. ಆವಾವನು ಈ ಅನ್ನವನ್ನು ಉಣ್ಣುವನೊ ಅಥವಾ ರೇತವಿಸರ್ಜನ ಮಾಡುವನೊ ಅವನಹಾಗೆ ಅವರು ಆಗುತ್ತಾರೆ' (ಛಾಂ, ಅ ೫, ಖಂ ೧೦, ಮಂ ೧-೬).

**೩೬ ಔರ್ಧ್ವದೇಹಿಕವಿಚಾರದಲ್ಲಿರುವ ನೈತಿಕ ಮೂಲತತ್ವವು**— ಮರಣಾನಂತರ ಜೀವನ ಸ್ಥಿತಿಗತಿಗಳೇನಿರಬಹುದು ಎಂಬ ಬಗ್ಗೆ ಪ್ರಾಚೀನರು ಮಾಡಿದ ವಿಚಾರಗಳ ಫಲಿತಾಂಶವೆ ಮೇಲೆ ವಿವರಿಸಿದ ಎರಡು ದಾರಿಗಳು. ಆದರೆ ಇವೆರಡೂ ದಾರಿಗಳೂ ಕೇವಲ ಕಾಲ್ಪನಿಕವೆಂದರಿತುಕೊಳ್ಳಲು ಬಹಳ ಪರಿಶ್ರಮವು ಬೇಡ. ಆದರೆ ಎಷ್ಟೋ ಕಾಲದವರೆಗೆ ಇವು ಕಾಲ್ಪನಿಕ ಮಾರ್ಗಗಳು ಎಂಬುದು ತಿಳಿದಿರಲೇ ಇಲ್ಲ. ಇವುಗಳ ವ್ಯವಸ್ಥಿತ ಉಪಪತ್ತಿಯನ್ನು ಕೊಡುವ ಹವ್ಯಾಸದಿಂದ ಹಲವರು ಇವುಗಳ ಸಮರ್ಥನ ಮಾಡುವುವಕ್ಕೆ ಹವಣಿಸಿರುವರು. ಅವರೊಳಗೆ ಸೂರ್ಯ, ಚಂದ್ರ, ಧೂಮ, ರಾತ್ರಿ ಇವು ಆ ದಾರಿಯ ಅಧಿದೇವತೆಗಳೆಂದು ಪ್ರತಿಪಾದಿಸುವವರೇ ಸ್ವಲ್ಪ ಹೆಚ್ಚು ಸಮಂಜಸರು. ಈ ಅಧಿದೇವತೆಗಳು ಜೀವನ ಯೋಗ್ಯತೆಗೆ ಅನುಸರಿಸಿ ಅವನಿಗೆ ಅನುಗುಣವಾದ ಲೋಕಕ್ಕೆ ಕಳುಹುವರೆಂದು ಅವರ ಅಭಿಪ್ರಾಯವು. ಬುದ್ಧಿಗೆ ಅಗಮ್ಯವಾದ ಈ ವಿಷಯದಲ್ಲಿ ವಿಚಾರವು ಹರಿಯಧಿದ್ದಾಗ ಕಲ್ಪನಾಶಕ್ತಿಯಿಂದ ರಚಿತವಾದ ವಿವೇಚನೆಯಿದು ಎಂಬುದು ಸಹಜವಾಗಿ ತಿಳಿಯುವಂತಿದೆ. ಮಹಾರಾಷ್ಟ್ರದ ಸಂಸ್ಕೃತಿಸಂರಕ್ಷಕ

ರಾದ ಸುಪ್ರಸಿದ್ಧ ರಾಮದಾಸಸ್ವಾಮಿಗಳು ಇವೆರಡೂ ದಾರಿಗಳಲ್ಲಿ ನಂಬುಗೆಯನ್ನಿಡು ವದು ಅವಶ್ಯಕವಿಲ್ಲೆಂದೂ ದಕ್ಷಿಣಾಯನ ಉತ್ತರಾಯಣವೆಂಬ ಭ್ರಮವು ಸಂದೇಹಿ ಗಳಿಗೆ ಇರುವದು, ಸಾಧುಗಳಿಗಲ್ಲ, ಸಾಧುವು ಜೀವನ್ಮುಕ್ತನು, ಪಾಪಪುಣ್ಯಗಳಿಗೆ ತಿಲಾಂ ಜಲಿಯನ್ನಿತ್ತವನು ಎಂದೂ ತಮ್ಮ ದಾಸಬೋಧಗ್ರಂಥದ ೭ನೆಯ ಸ್ಕಂದನ ೧೦ನೆಯ ಸಮಾಸದ ೧೩–೧೫ ಓವಿಗಳಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಸತ್ತಬಳಿಕ ಜೀವಾತ್ಮನ ಇರವು ಎಂತು, ಎಂಬುದು ಮಾನವನಿಗೆ ಬಗೆಹರಿಯುವಂತಿಲ್ಲ. ಆದುದರಿಂದ ಉಪನಿಷ ತ್ಕಾರರು ಈ ಒಡಪನ್ನು ಒಡೆದರೆಂದು ಅವರಿಗೆ ಶ್ರೇಯಸ್ಸು ಕೊಡುವದಕ್ಕಿಂತ ಇದನ್ನು ಒಡೆಯಲು ಹವಣಿಸಿದುದಕ್ಕೆ ಅವರಿಗೆ ನಾವು ಹೆಚ್ಚು ಶ್ರೇಯಸ್ಸು ಕೊಡಬೇಕು. ಸತ್ತ ಬಳಿಕ ಆಗುವಜೀವಾತ್ಮನ ಪರಿಳಿತಗಳ ಪ್ರತ್ಯಕ್ಷ ಸ್ಥಿತಿಗತಿಗಳು ಏನು ಎಂತು ಎಂಬ ಚರ್ಚೆಯು ತತ್ವಜ್ಞಾನಕ್ಕೆ ಸಂಬಂಧಪಟ್ಟಿಲ್ಲ; ಬರಿಯ ಪರಿಳಿತಗಳ ಕಲ್ಪನೆಯ ವಿಚಾರವೆ ತತ್ವಜ್ಞಾನಕ್ಕೆ ಸಂಬಂಧಿಸಿದುದು. ಈ ದೃಷ್ಟಿಯಿಂದ ಜೀವಾತ್ಮನ ಪರಿಳಿತಗಳ ಕಲ್ಪನೆಯು ಉಪನಿಷತ್ತು ಗಳಲ್ಲಿ ನೀತಿಯ ಅಡಿಗಲ್ಲಿನ ಮೇಲೆ ಭದ್ರವಾಗಿ ನಿಲ್ಲಿಸಲ್ಪಟ್ಟಿರುವುದೆಂಬುದನ್ನು ನೋಡಿದರೆ ಯಾರಿಗಾದರೂ ಆದರಾಶ್ಚರ್ಯಗಳುಂಟಾಗದಿರವು. 'ಕರ್ಮದಂತೆ ಫಲ' ಎಂಬುದೆ ಔರ್ಧ್ವದೇಹಿಕ ವಿಚಾರದ ಬುಡಕ್ಕಿರುವ ನೈತಿಕ ಮೂಲತತ್ವವು. ಇದರಿಂದಲೆ ತಾತ್ವಿಕ ದೃಷ್ಟಿಯಿಂದಾದರೂ ಇದಕ್ಕೆ ಬಹಳ ಬೆಲೆಯು. ಮೇಲೆ ಕೊಟ್ಟ ಛಾಂದೋಗ್ಯದ ಭಾಗ ಗಳ ಮುಂದಿನ ಮಂತ್ರಗಳಲ್ಲಿಯೆ ಹೇಳಿರುವುದೇನಂದರೆ, 'ರಮಣೀಯ' ಆಚರಣವುಳ್ಳ ವರು ಕೂಡಲೆ ರಮಣೀಯ ವರ್ಣದಲ್ಲಿ ಜನಿಸುವರು ; ಬ್ರಾಹ್ಮಣ, ಕ್ಷತ್ರಿಯ ಅಥವಾ ವೈಶ್ಯಯೋನಿಯಲ್ಲಿ ಹುಟ್ಟುವರು. ಕೀಳು ನಡೆವಳಿಯವರು ಕೀಳ್ಮೆಯಲ್ಲಿ ಹುಟ್ಟುವರು; ನಾಯಿ, ಹಂದಿ ಇಲ್ಲವೆ ಚಾಂಡಾಲಯೋನಿಯಲ್ಲಿ ಜನಿಸುವರು' ( ಛಾಂ, ಅ ೫, ಖಂ ೧೦, ಮಂ ೭ ). ಕೌಷೀತಕಿ ಉಪನಿಷತ್ತಿನಲ್ಲಿ ಈ ಮಾತೇ ಹೆಚ್ಚು ನಿಶ್ಚಿತಸ್ವರೂಪವನ್ನು ತಾಳಿದೆ 'ಕರ್ಮ' ಬಂಧನದ ಉಲ್ಲೇಖವು ಅಲ್ಲಿ ಸ್ಪಷ್ಟವಾಗಿದೆ. ಮನುಷ್ಯನ ಕರ್ಮ ಮತ್ತು ವಿದ್ಯೆ ಗಳಿಗೆ ಅನುಸಾರವಾಗಿ ಅವನು ಕೀಟಕ, ಪತಂಗ, ಮೀನ, ಶಕುನಪಕ್ಷಿ, ಶಾರ್ದೂಲ, ಸಿಂಹ, ಸರ್ಪ, ಅಥವಾ ಮನುಷ್ಯ ಇಲ್ಲವೆ ಮಿಕ್ಕುಳಿದ ಜೀವಜಂತುಗಳಲ್ಲಿ ಏನಾದರೊಂದು ಆಗಿ ಹುಟ್ಟುವನು ( ಕೌ, ಅ ೧, ಮಂ ೨ ) ಎಂಬ ವಚನವು ಅದರಲ್ಲಿದೆ.

**೩೭. ಇದರ ಬಗ್ಗೆ ಉಪನಿಷತ್ಕಾರರು ಮತ್ತು ಪ್ಲೇಟೊ ಇವರ ವಿಚಾರಗಳ ತುಲನೆ**—ನಿತ್ಯತಮೋಜೀವಿಗಳು ಬಹುಶಃ ಅನಂತಕಾಲದವರೆಗೂ ಪಾತಾಳಲೋಕದಲ್ಲಿ ಸೆರೆಯಾಗಿರುವರೆಂದು ನಚ್ಚಿದ ಪ್ಲೇಟೋನಂತೆಯೆ ಉಪನಿಷತ್ತಿನ ತತ್ವಜ್ಞಾನಿಗಳ ನಂಬುಗೆಯೂ ಇತ್ತೆಂದು ಮೇಲೆ ವಿವರಿಸಿದ್ದಾಯಿತು. ಹಾಗೂ 'ದೈವುಳ್ಳ

ವರ ದ್ವೀಪ' ದಂತಹದೊಂದು ನಾಡು ಉಂಟೆಂದೂ ಇವರೀರ್ವರ ತಿಳಿವಳಿಕೆಯೂ ಇದ್ದಿತೆಂದು ಹೇಳಿದ್ದಾಯಿತು. ಆದರೆ ಆ ನಾಡಿನಲ್ಲಿ ಜೀವಪುರುಷನು ಶಾಶ್ವತವಾಗಿ ನಿಲ್ಲುವನೆಂಬ ಉಪನಿಷತ್ಕಾರರ ಕಲ್ಪನೆಯು ಮಾತ್ರ ಪ್ಲೇಟೋನಿಂದ ಭಿನ್ನವಾದುದು. ಉಪನಿಷತ್ಕಾರರು 'ದೇವಯಾನ'ವೆಂಬದೊಂದುಂಟೆಂದೂ ಆ ಮಾರ್ಗವು ಕ್ರಮಕ್ರಮವಾಗಿ ಮೇಲಮೇಲಕ್ಕೆ ಜೀವಾತ್ಮನನ್ನು ಒಯ್ದು ಕಟ್ಟಕಡೆಗೆ ಬ್ರಹ್ಮಪದದವರೆಗೆ ಒಯ್ಯುವುದೆಂದೂ ಜೀವಾತ್ಮನು ಅದನ್ನು ಹೊಂದಿದ ಬಳಿಕ ಎಂದೆಂದೂ ಮರಳುವದಿಲ್ಲವೆಂದೂ ನಂಬಿದ್ದರು. ಇದೇ ವೇರಿಗೆ ಪಿತೃಯಾನವೆಂಬುದೊಂದುಂಟೆಂದೂ ಅದು ಸ್ವರ್ಗಕ್ಕೆ ಒಯ್ಯುವುದೆಂದೂ ಪುಣ್ಯದ ಬೆಂಬಲವಿರುವವರೆಗೆ ಜೀವನು ಅಲ್ಲಿರುವನೆಂದೂ ಪುಣ್ಯವು ಕ್ಷೀಣವಾಗಲು ಅಲ್ಲಿಂದ ಮಳೆಹನಿಗಳ ರೂಪದಿಂದ ಮರಳಿ ಭೂಮಿಗೆ ಬಂದು ತನ್ನ ಕರ್ಮಕ್ಕನುಸರಿಸಿ ಉಚ್ಚನೀಚ ದೇಹಧಾರಣ ಮಾಡುವನೆಂದೂ ಅವರು ನೆಚ್ಚಿದ್ದರು. ಆದರೆ ಪ್ಲೇಟೋನು ಹೇಳುವ ಪಾತಾಳದೊಳಗಿನ ತಮೋಲೋಕದ( Tartarus ) ಅಥವಾ ಡಾಂಟೇನು ಹೇಳುವ ಪ್ರಾಯಶ್ಚಿತ್ತಲೋಕದ ( Purgatory ) ಕಲ್ಪನೆಯು ಉಪನಿಷತ್ಕಾರರಲ್ಲಿ ಇತ್ತೆಂದು ಹೇಳಲಿಕ್ಕೆ ಉಪನಿಷತ್ತಿನಲ್ಲಿ ಎಲ್ಲಿಯೂ ಆಧಾರವಿಲ್ಲ. ಉಪನಿಷತ್ಕಾರರು, ಮುಂದಿನಕಾಲದ ತತ್ವಜ್ಞಾನಿಗಳಂತೆ ಈ ಲೋಕದಲ್ಲಿಯೆ ಪಾಪವನ್ನು ಪುಣ್ಯಕರ್ಮಗಳಿಂದ ತೊಳೆದುಬಿಡಲು ಬೇಕಾದಷ್ಟು ಅನುವು ಇರಲು ಈ ಬಗೆಯ ಬೇರೊಂದು ಲೋಕದ ಕಲ್ಪನೆಮಾಡುವ ಅವಶ್ಯಕತೆಯಿಲ್ಲವೆಂದು ತಿಳಿದಿದ್ದರು. ಆದುದರಿಂದಲೆ ಅವರು ಪ್ಲೇಟೋ ಅಥವಾ ಡಾಂಟೇನಂತೆ ಈ ಬಗೆಯ ಬೇರೊಂದು ಲೋಕವನ್ನು ಕಲ್ಪಿಸಿಲ್ಲ. ಆದರೆ ಉಪನಿಷತ್ಕಾರರು ತಿರ್ಯಗ್ಜಂತುಗಳದೊಂದು ಬೇರೆ ಲೋಕವನ್ನೆ ಕಲ್ಪಿಸಿದ್ದಾರೆ. ಅವುಗಳಿಗೆ ಈ ಉನ್ನತಿಪಥವನ್ನು ಹಿಡಿಯುವ ಅಧಿಕಾರವೆ ಇಲ್ಲವೆಂದು ಛಾಂದೋಗ್ಯವು ಹೇಳುತ್ತದೆ. ಹುಟ್ಟುಸಾವುಗಳಲ್ಲಿ ಯಾವಾಗಲೂ ಇವು ಸುತ್ತಾಡುತ್ತಲೆ ಇರಬೇಕೆಂದು ಅದು ಆಜ್ಞಾಪಿಸುತ್ತದೆ. ದೇವಯಾನ ಅಥವಾ ಪಿತೃಯಾನಗಳಲ್ಲಿ ಯಾವ ಹಾದಿಯನ್ನು ಹಿಡಿಯಲಿಕ್ಕೂ ಈ ಜಂತುಗಳಿಗೆ ಇಂಬಿಡಲ್ಪಟ್ಟಿಲ್ಲ. ಮೈದೋರುವುದು ಮಣ್ಣುಗೂಡುವುದು, ಹುಟ್ಟುಸಾವು, ಈ ಚಕ್ರದಲ್ಲಿಯೇ ಅವು ತಿರುಗುತ್ತಿರಲಿಕ್ಕೆಬೇಕು. ಉಳಿವುದಕ್ಕೆ ಸಾವುದು ಅವುಗಳ ಧರ್ಮವಲ್ಲ ; ಸಾವುದಕ್ಕೆ ಉಳಿವುದು ಅವುಗಳ ಧರ್ಮವು ( ಛಾಂ, ಅ ೫, ಖಂ ೧೦, ಮಂ ೮ ). ಹುಲಿ, ಸಿಂಹ, ತೋಳ, ಅಥವಾ ಕರಡಿ ಇವುಗಳನ್ನು ಸಹ ಈ ಉಪನಿಷತ್ತು ಹುಳ, ತೊನಸೆ, ಅಥವಾ ನೊಣ ಇವುಗಳ ವರ್ಗದಲ್ಲಿಯೆ ಎಣಿಸುತ್ತದೆ ( ಛಾಂ, ಅ ೬, ಖಂ ೯, ಮಂ ೩ ).

**೩೮. ದೇವಯಾನದ ವಿಷಯಕ್ಕಿರುವ ಮತವೈಚಿತ್ರ್ಯಗಳು—** ದೇವಯಾನವಿಚಾರದಲ್ಲಿ ಮುಂದಿನವರು ಮುಂಚಿನವರಿಗಿಂತ ಸ್ವಲ್ಪಮುಂದೆ ಹೋದು

ದನ್ನು ಗಮನಿಸುವಂತಿದೆ. ಕೌಷೀತಕಿ ಉಪನಿಷತ್ತು ದೇವಯಾನ್ಯವನ್ನು ವಿಲಕ್ಷಣವಾಗಿ ಬೇರೊಂದು ಬಗೆಯಾಗಿ ವರ್ಣಿಸುತ್ತದೆ. ದೇವಯಾನದಿಂದ ಸಾಗಿದ ಜೀವಾತ್ಮನು 'ಮೊದಲು ಅಗ್ನಿಲೋಕ, ಬಳಿಕ ವಾಯುಲೋಕ, ತರುವಾಯ ವರುಣಲೋಕ, ಹಿಂದುಗಡೆ ಸೂರ್ಯ ಲೋಕ, ಅಲ್ಲಿಂದ ಇಂದ್ರಲೋಕ, ಆ ಮೇಲೆ ಪ್ರಜಾಪತಿಲೋಕ, ಕೊನೆಗೆ ಬ್ರಹ್ಮಲೋಕ ವನ್ನು ಸೇರುತ್ತಾನೆ' ಎಂದು ಅದರ ಅಭಿಪ್ರಾಯವು. ಬೃಹದಾರಣ್ಯಕ ಅಥವಾ ಛಾಂದೋಗ್ಯ ಉಪನಿಷತ್ತುಗಳಲ್ಲಿ ಹೇಳಿದ ಪ್ರದೇಶಗಳನ್ನು ಬಿಟ್ಟೇಬಿಟ್ಟು, ಅವುಗಳ ಬದಲು ಹೊಸ ಲೋಕಗಳನ್ನು ಕೌಷೀತಕಿಯು ಹೇಳುತ್ತದೆ. 'ಹಗಲಿನಲೋಕ' ಅಥವಾ 'ಶುಕ್ಲ ಪಕ್ಷದಲೋಕ' ಈ ಬಗೆಯ ಅರ್ಥವಿಹೀನ ಕಲ್ಪನೆಗಳನ್ನು ತೆಗೆದೊಗೆದು ನಿಜವಾಗಿ ದೇವ ತೆಗಳೆಂದು ತಿಳಿಯಲ್ಪಟ್ಟ ದೇವತೆಗಳ ಬೇರೆಬೇರೆ ಲೋಕಗಳನ್ನು ಕಲ್ಪಿಸುತ್ತದೆ. ಅನಂತರ ಈ ಉಪನಿಷತ್ತು ಹೇಳುವುದೇನಂದರೆ. 'ಆತ್ಮನು ಬ್ರಹ್ಮಲೋಕವನ್ನೈದಿದೊಡನೆ ಬ್ರಹ್ಮನು ಸ್ವತಃ ತನಗೆ ಸಲ್ಲತಕ್ಕ ಬೆಡಗಿನಿಂದಲೆ ಆ ಆತ್ಮನ ಸ್ವಾಗತಮಾಡಲಿಕ್ಕೆ ಪರಿವಾರದವರಿಗೆ ಆಜ್ಞಾಪಿಸುತ್ತಾನೆ. ಈ ಆತ್ಮನು ಮುಪ್ಪುಮೀರಿದ ನದಿಯನ್ನು ಸೇರಿರುವದರಿಂದ ಅವನೆಂ ದೆಂದೂ ಮುದುಕನಾಗನು ಎಂದು ಪರಿವಾರದವರಿಗೆ ಬ್ರಹ್ಮನು ಹೇಳುತ್ತಾನೆ. ಬ್ರಹ್ಮನ ಅಪ್ಪಣೆಯ ಮೇರೆಗೆ ಐನೂರು ಅಪ್ಸರೆಯರಲ್ಲಿ ನೂರ್ವರು ಹಣ್ಣುಹಂಪಲಗೊಂಡು, ಮತ್ತೆ ನೂರ್ವರು ಅಂಜನಗಳಂಗೊಂಡು, ಮತ್ತೆ ನೂರ್ವರು ಹೂಮಾಲೆಗಳಂಗೊಂಡು, ಮತ್ತೆ ನೂರ್ವರು ವಸ್ತ್ರಗಳಂಗೊಂಡು, ಮತ್ತುಳಿದ ನೂರ್ವರು ಸುಗಂಧದ್ರವ್ಯಗಳಂಗೊಂಡು ಆತ್ಮನ ಬಳಿಗೆ ಹೋಗಿ, ಆತ್ಮನನ್ನು ಬ್ರಹ್ಮನ ಅಲಂಕಾರಗಳಿಂದ ಶೃಂಗರಿಸುತ್ತಾರೆ. ಇಂತು ಅಲಂಕೃತನೂ ಬ್ರಹ್ಮಜ್ಞನೂ ಆದ ಆತ್ಮನು ಬ್ರಹ್ಮನೆಡೆಗೆ ಸಾಗುತ್ತಾನೆ. ಅವನು ಮುಪ್ಪು ಮೀರಿದ ಹೊಳೆಗೆ ಬಂದು ಅದನ್ನು ಮನಸಿನಿಂದಲೆ ದಾಟಿಬಿಡುತ್ತಾನೆ. ಬಳಿಕ ಸುಕೃತ ದುಷ್ಕೃತಗಳನ್ನೆಲ್ಲ ತೊರೆದು ಬಿಡುತ್ತಾನೆ. ಅವನ ಪ್ರೀತಿಯ ಬಾಂಧವರು ಸತ್ಕರ್ಮಗಳ ಲ್ಲಿಯೂ, ಅಪ್ರಿಯಬಾಂಧವರು ದುಷ್ಕರ್ಮಗಳಲ್ಲಿಯೂ ಭಾಗಿಗಳಾಗುತ್ತಾರೆ. ರಥವನ್ನು ಭರದಿಂದ ಓಡಿಸುವವನು ಗಿಮಿಗಿಮಿ ತಿರುಗುವ ಗಾಲಿಗಳನ್ನು ನಿರೀಕ್ಷಿಸುವಂತೆ ಈ ಆತ್ಮನೂ ಹಗಲು, ರಾತ್ರಿ, ಒಳಿತು, ಕೆಡಕು, ಮತ್ತು ಎಲ್ಲ ಬಗೆಯ ದ್ವಂದ್ವಗಳನ್ನೂ ನೋಡುತ್ತಾನೆ. ಸುಕೃತ ಇಲ್ಲವೆ ದುಷ್ಕೃತವಾವುದೂ ಇಲ್ಲದುದರಿಂದಲೂ ಬ್ರಹ್ಮನನ್ನು ಬಲ್ಲವನಾದುದ ರಿಂದಲೂ ಅವನು (ಆತ್ಮನು) ಬ್ರಹ್ಮನೆಡೆಗೆ ಸಾಗುತ್ತಾನೆ (ಕೌ, ಅ ೧, ಮಂ ೪).

೩೯. **ಅಮೃತತ್ವದ ಕಲ್ಪನೆಯು** – ಅಮೃತತ್ವದ ಕಲ್ಪನೆಯು ಉಪನಿಷ ತ್ತಿನೊಳಗಿನ ಮಾನಸಶಾಸ್ತ್ರದ ಕೊನೆಯ ಶಿಖರವು. ಈ ಸಂಬಂಧದಿಂದಿರುವ ಉಪನಿಷ ನ್ಮಂತ್ರಗಳ ಅರ್ಥಮಾಡುವ ವಿಷಯದಲ್ಲಿ ಅತ್ಯಂತ ತೀಕ್ಷ್ಣವಾದ ಮತಭೇದಗಳಿವೆ. ಪ್ರತಿ

ಯೊಬ್ಬ ಆಚಾರ್ಯರೂ ತನ್ನ ತನ್ನ ಪಂಥದ ಪುರಸ್ಕಾರಕ್ಕಾಗಿಯೆ ಈ ಮಂತ್ರಗಳನ್ನು ಎಳೆದಾಡುತ್ತಿರುವುದರಿಂದ ಬಲ್ಲಿದರಲ್ಲಿ ಮತಭೇದವಾಗಿದೆ. ಆದರೆ ಯಾವ ಪಂಥಾಭಿಮಾನಿಗಳೂ ಅಲ್ಲದ ನಾವು, ಈ ಮಂತ್ರಗಳ ನಿಜವಾದ ಅರ್ಥವನ್ನು ಅರಿತುಕೊಳ್ಳಬಲ್ಲೆವು; ಯಾಕಂದರೆ ನಮ್ಮ ಯಾವದೊಂದು ವಿಶಿಷ್ಟ ಪಂಥದ ಪುಷ್ಟೀಕರಣಾರ್ಥವಾಗಿ ಈ ಮಂತ್ರಗಳನ್ನು ದುಡಿಸಿಕೊಳ್ಳದೆ ಕೇವಲ ಐತಿಹಾಸಿಕ ದೃಷ್ಟಿಯಿಂದ ಆಯಾ ಮಂತ್ರಗಳಿಗಿರುವ ಅರ್ಥವನ್ನು ಹೇಳುವುದೆ ನಮ್ಮ ಉದ್ದೇಶವು. ಈ ದೃಷ್ಟಿಯಿಂದ ನೋಡಲಾಗಿ ಉಪನಿಷತ್ತಿನಲ್ಲಿ ಅಮೃತತ್ವದ ವಿಷಯಕ್ಕಿರುವ ವಿಚಾರಗಳು ಸರಿಯಾದ ಕ್ರಮದಲ್ಲಿ ವಿಕಾಸ ಹೊಂದಿರುತ್ತವೆಂದು ಕಂಡು ಬರುವವು. ಯಾವದೇ ಒಂದು ಜೀವನ ಶಾಶ್ವತ ಪದವಿಯನ್ನು ಕುರಿತು ಛಾಂದೋಗ್ಯದಲ್ಲಿ ಒಂದೆಡೆಗೆ ಹೀಗೆ ಹೇಳಿದೆ, ‘ ಮನುಷ್ಯನು ಬಯಸುವದು ತನ್ನ ಉಪಾಸ್ಯ ದೇವತೆಯ ಕೂಡ ‘ ಸಲೋಕತೆ, ’ ‘ ಸಾರ್ಷ್ಟಿತೆ ’ ( ಗುಣಸಾಮ್ಯ ) ಮತ್ತು ‘ಸಾಯುಜ್ಯ’ ಮುಕ್ತಿಯು. ಆಜನ್ಮಪರ್ಯಂತ ಆರಾಧಿಸಿರುವ ದೇವನ ಅಡಿಸೇರಬೇಕು, ಅಲ್ಲಿ ಸಾಧ್ಯವಿರುವ ಎಲ್ಲ ಸುಖವನ್ನೂ ಹೊಂದಬೇಕು , ಎಂಬುದೆ ಭಕ್ತನ ಬಯಕೆಯು ( ಛಾಂ, ಅ ೨, ಖಂ ೨೦, ಮಂ ೨ ). ಮುಂಡಕ ಉಪನಿಷತ್ತಿನಲ್ಲಿ ಆತನ ( ಪರಮಾತ್ಮನ ) ‘ ಸಹವಾಸ ’ ಸೌಖ್ಯವು ದೊರೆವುದೆ ಶ್ರೇಷ್ಠ ಮುಕ್ತಿಯೆಂದು ಅಭಿಪ್ರಾಯವಿದೆ ( ಮುಂ ೩, ಖಂ ೨, ಮಂ ೬ ). ಆದರೆ ಬರಿಯ ಸಹ-ವಾಸದಿಂದ ಸಮಾಧಾನವಾಗದೆ ಅದೇ ಉಪನಿಷತ್ತು ಸಾರುವುದೇನಂದರೆ, ‘ಅನುರನಾಗಿ’ ಸಂಪೂರ್ಣನಾಗಿ ಬ್ರಹ್ಮನಂತೆಯೆ ಸ್ವರೂಪಧಾರಣ ಮಾಡಿಕೊಂಡಿರುವುದೆ ಮೇಲ್ತರಗತಿಯದು ’ ( ಮುಂ ೩, ಖಂ೧, ಮಂ ೩ ). ಈ ಕಲ್ಪನೆಯೆ ರಾಮಾನುಜಾಚಾರ್ಯರ ಮತದಲ್ಲಿ ಅತ್ಯಂತ ಮುಖ್ಯವಾಗಿದೆ. ಆದರೆ ಶಂಕರಾಚಾರ್ಯರಿಗೆ, ನಿರ್ಗುಣನಿರಾಕಾರ ಬ್ರಹ್ಮನೊಡನೆ ಒಂದುಗೂಡುವುದೆ ಮುಕ್ತಿಯು ಎಂಬ ಕಲ್ಪನೆಗಿಂತ ಬೇರೆ ಯಾವ ವಿಚಾರದಿಂದಲೂ ಸಮಾಧಾನವಾಗಲಿಲ್ಲ. ‘ನದಿಗಳು ಸಮುದ್ರವನ್ನು ಸೇರಿ ನಾಮರೂಪಗಳನ್ನಳಿದು ಮಹಾಸಾಗರದಲ್ಲಿ ಒಂದುಗೂಡುವಂತೆ ಜ್ಞಾನಿಯೂ ನಾಮರೂಪಗಳನ್ನಳಿದು ಪರಬ್ರಹ್ಮನಲ್ಲಿ ಒಂದುತ್ತಾನೆ’ ( ಮುಂ ೩, ಖಂ ೨, ಮಂ ೭-೮ ), ಹಾಗೂ ( ಪ್ರ೬, ಮಂ೫ ). ‘ಹಲವು ( ಹೂಗಳ ) ಮಕರಂದವು ಸೇರಿ ಮಧುವು ( ಜೇನು ) ಸಿದ್ಧವಾದ ಬಳಿಕ ಇದು ಈ ಗಿಡದ ಮಧು, ಇದು ಆ ಗಿಡದ ಮಧುವೆಂದು ಹೇಗೆ ಬೇರ್ಪಡಿಸಲಿಕ್ಕೆ ಬರುವದಿಲ್ಲವೊ ಹಾಗೆಯೆ ಬ್ರಹ್ಮನಲ್ಲಿ ಬಂದು ಒಂದುಗೂಡಿದ ಆತ್ಮವು ಇದು ಈ ದೇಹದಿಂದ ಬಂದುದು ಎಂದು ಬೆರಳಿಟ್ಟು ತೋರಿಸಲು ಬರುವದಿಲ್ಲ’ ( ಛಾಂ, ಅ ೬, ಖಂ ೬, ಮಂ ೧೦ ). ಇದುವೆ ಅದ್ವೈತರ ಅಮೃತತ್ವದ ಕಲ್ಪನೆಯು. ಮುಂಡಕೋಪನಿಷತ್ತಿನಲ್ಲಿ ಈ ಬಗ್ಗೆ ಹೇಳಿದಕೊನೆಯ ಮಹ

ತ್ವದ ಮಾತೊಂದುಂಟು. 'ತನ್ನ ತಾನರಿತವನ ಆತ್ಮವು, ವೈಮಣ್ಣುಗೂಡಿದ ಬಳಿಕ ವಿಶ್ವದೊಡನೆ ಒಂದುತ್ತದೆ' ಎಂದು ಅದರ ಅಭಿಪ್ರಾಯವು (ಮುಂ ೩,ಖಂ ೨, ಮಂ ೫ ). * 'ಶಕ್ತಿಮಂತನಾದ ಆ ಆತ್ಮನು ದಿಕ್ಕುದಿಕ್ಕಿಗೂ ಹರಡುವನು ತನ್ನ ಸಾಮರ್ಥ್ಯವನ್ನು, ಅವನ ಧ್ವನಿಯು ಹಬ್ಬುವುದು ಬಿರುಗಾಳಿಗುಂಟ ; ಅವನು ನಿಲ್ಲುವನು ಉದಯ ಭಾನುವಿನ ಮಧ್ಯದಲ್ಲಿ; ಅವನು ಕಂಗೊಳಿಸುವನು ಚಿಕ್ಕೆಗಳ ಪಕ್ಕದಲ್ಲಿ; ಅವನ ಬಿಡಾರ ವುಂಟು ಎಲ್ಲಿ ನೋಡಿವಡಲ್ಲಿ.' † ಅಥವಾ ಅನ್ಯಾದೃಶ ಕಲ್ಪನಾಶಕ್ತಿಯುಳ್ಳ ಒರ್ವ ಕವಿ ವರ್ಯನು ನುಡಿದಂತೆ: ಅವನು ನಿಸರ್ಗದೇವಿಯೊಡನೆ ಒಂದಾಗಿರುವನು. ಇರುಳು ಹಕ್ಕಿಯ ಸವಿನುಡಿಯಲ್ಲಿ, ಸಿಡಿಲಿನ ಗಡಗಡದಲ್ಲಿ ಎಲ್ಲೆಲ್ಲಿಯೂ ಈ ವಿಶ್ವದ ಉಲಿವಿನಲ್ಲಿ ಕೇಳಿಸುವದು ಅವನ ಧ್ವನಿಯು. ಈ ವಿಶ್ವಾತ್ಮನೆ ಅವನಾತ್ಮನನ್ನು ತನ್ನಲ್ಲಿ ಒಂದಿಸಿಕೊಂಡಿ ರುವನು. ಕತ್ತಲೆಯಲ್ಲಿ, ಬೆಳಕಿನಲ್ಲಿ, ಸ್ಥಿರಚರಗಳಲ್ಲಿ ಅವನ ಇರವನ್ನು ಕಾಣಬಲ್ಲೆವು ನಾವು. ವಿಶ್ವಾತ್ಮನೆ ಈ ವಿಶ್ವದ ಆಧಾರನು. ಪ್ರೇಮರಜ್ಜುವಿನಿಂದ ನಿಯಮಿಸುವನಾ ಈಶನಿದನ್ನು. ಅವನೆ ಇದಕ್ಕೆ ಚೈತನ್ಯವನಿತ್ತು ಚಲಿಸುವನು. ಆ ವಿಶ್ವಾತ್ಮನಲ್ಲಿಯೆ ಅವನುಲೀನನು.

---

* 'ಟೆನಿಸನ್ನನ ' ಇನ್ ಮೆಮೋರಿಯಮ್ ' ಎಂಬ ಕಾವ್ಯ, ೧೨೦.

† ಶೆಲಿಯು ' ಅಡೋನಿಸ್ ' ಎಂಬ ಕಾವ್ಯ ೪೨.

## ಪ್ರಕರಣ ೪.

# ಇತ್ತೀಚಿನ ದರ್ಶನಗಳ ಬೀಜಗಳು

೧. **ಪ್ರಾಸ್ತಾವಿಕ** – ಉಪನಿಷತ್ತುಗಳೊ ! ವಿವಿಧ ಮತಗಳ ತವರುಮನೆ. ಆದರೆ ಅವುಗಳ ಭಾಷ್ಯಕಾರರೆಲ್ಲರು ಮಾತ್ರ ಅವುಗಳಲ್ಲಿ ಒಂದೇ ಒಂದು ದರ್ಶನವು ಸಾಂಗೋಪಾಂಗವಾಗಿಯೂ ಸಮಗ್ರವಾಗಿಯೂ ಪ್ರತಿಪಾದಿಸಲ್ಪಟ್ಟಿದೆ ಎಂದು ಪರಂಪರಾ ಗತವಾಗಿ ತಿಳಿಯುತ್ತಬಂದಿದ್ದಾರೆ. ಅಂತೆಯೆ ತಮ್ಮಿಂದ ಭಿನ್ನವಾಗಿರುವ ಮತಗಳು ಅಭಿ ಪ್ರೇತವಿರುವ ಮಂತ್ರಗಳನ್ನು ಕೂಡ ತಮ್ಮ ತಮ್ಮ ಮತಗಳನ್ನೆತ್ತಿಹಿಡಿಯುವ ಮಹಾವಾಕ್ಯ ಗಳೆಂದೇ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶುದ್ಧಾದ್ವೈತ ಮುಂತಾದ ದರ್ಶನಕಾರರು ಸಾಧಿಸಿರುವರು. ಶ್ರುತಿಯ ಅರ್ಥವನ್ನು ಕುರಿತಿರುವ ತಪ್ಪು ಕಲ್ಪನೆಯೆ ಈ ಗೊಂದಲಕ್ಕೆ ಮೂಲಕಾರಣವು. ಋಗ್ವೇದದಂತೆ ಉಪನಿಷತ್ತುಗಳಾದರು ಶ್ರುತಿಗಳಾದ ಕಾರಣ, ಪರ ಸ್ಪರ ವಿರೋಧಕ ಮಂತ್ರಗಳು ಇವುಗಳಲ್ಲಿರುವುದೇ ಅಸಂಭವವೆಂದು ಈ ಭಾಷ್ಯಕಾರರ ಮತವು. ಇನ್ನೊಂದು ಕಾರಣವೆಂದರೆ ಈ ಭಾಷ್ಯಕಾರರಲ್ಲಿ ಇತಿಹಾಸನಿಷ್ಠ ವಿಮರ್ಶಕ ಬುದ್ಧಿಯಿಲ್ಲ. ಅನೇಕಾನೇಕ ಪ್ರಾಚೀನ ಋಷಿಗಳು ತಮಗೆ ತಿಳಿದೋ ತಿಳಿಯದೆಯೋ ತಮ್ಮೊಳಗೆ ಉದ್ಭೂತವಾದ ಸತ್ಯದರ್ಶನದ ವರ್ಣನೆಯನ್ನು ಇದ್ದಕ್ಕಿದ್ದಂತೆ ನಿರ್ವಂಚನೆ ಯಿಂದ ಉಪನಿಷತ್ತುಗಳಲ್ಲಿ ಪ್ರಕಟಿಸಿರುವರೆಂದು ಇವರು ತಿಳಿಯರು; ಅಂತೆಯೆ ಅತ್ತಿತ್ತ ಎಳೆದಾಡಿ ಎಲ್ಲ ಮಂತ್ರಗಳನ್ನು ತಂದು ತಮ್ಮ ತಮ್ಮ ವಿಶಿಷ್ಟಮತಗಳಲ್ಲಿ ಕಟ್ಟುವರು. ಇದು ಯುಕ್ತವಲ್ಲ. ಭಾರತೀಯ ದರ್ಶನಶಾಸ್ತ್ರದ ವಿವಿಧಶಾಖೆಗಳ ತವರುಮನೆಯೆ ಉಪನಿಷ ತ್ತುಗಳೆಂದು ಈ ಪ್ರಕರಣದಲ್ಲಿ ನಾವು ಕಂಡುಕೊಳ್ಳಬಹುದು. ಒಂದಾನೊಂದು ಬೆಟ್ಟದ ಹಲವು ಮಗ್ಗಲುಗಳಲ್ಲಿ ಹಲಕೆಲವು ಹೊಳೆಗಳು ಹುಟ್ಟಿ ಬೇರೆ ಬೇರೆ ಹಾದಿಗಳನ್ನು ಹಿಡಿದು ಹರಿಯುವಂತೆ ಈ ಉಪನಿಷತ್ತುಗಳ ಉತ್ತುಂಗ ತತ್ವಶಿಖರದಿಂದ ವಿವಿಧ ವಿಚಾರ ಗಳ ಹಳ್ಳಗಳು ಹೊಳೆಯಾಗಿ ಜೀವನಸಾಗರದೆಡೆಗೆ ಹರಿದಿವೆ. ಹಳ್ಳಕ್ಕೆ ಹಳ್ಳ ಕೂಡಿ ಹೊಳೆಯಾಗಿ, ಹೊಳೆಗೆ ಹೊಳೆ ಕೂಡಿ ನಡುವೆ ಅನೇಕ ವಿಚಾರಪ್ರವಾಹಗಳು ಬಂದು ಸೇರಿ, ಒಂದು ವಿಚಾರಸಾಗರವೇ ಜೀವನಸಮುದ್ರದೆಡೆಗೆ ಬಂದು ಅವುಗಳ ಸಂಗಮವಾಗು ತ್ತಿರುವಂತೆ ಕಂಗೊಳಿಸುವದು. ಹೀಗಾಗಿ, ಉಪನಿಷತ್ತುಗಳಲ್ಲಿ ಜೈನ ಮತ್ತು ಬೌದ್ಧ ದರ್ಶನಗಳ ಬೀಜಗಳೂ ಯೋಗದಂತೆಯೆ ಸಾಂಖ್ಯದರ್ಶನದ ಬೀಜಗಳೂ ಮೀಮಾಂಸೆಯ

ಹಾಗೂ ಶೈವದರ್ಶನದ ಬೀಜಗಳೂ ಭಗವದ್ಗೀತೆಯ ಭಕ್ತಿಮಾರ್ಗದ, ದ್ವೈತದ, ಅದ್ವೈತದ, ವಿಶಿಷ್ಟಾದ್ವೈತದ ಬೀಜಗಳೂ ಕಂಡುಬರುವವು. ಉಪನಿಷತ್ತುಗಳು ಒಂದೇ ಒಂದು ಮತವನ್ನು ಪ್ರತಿಪಾದಿಸುವವೆಂದು ಯಾರೂ ಎದೆತಟ್ಟಿ ಕೈಯೆತ್ತಿ ಸಾರಲಾರರು. ಉಪನಿಷತ್ತುಗಳ ಚಿಕಿತ್ಸಾಪೂರ್ವಕವಾದ ಅಭ್ಯಾಸದ ಜೊತೆಗೆ ಪಾಶ್ಚಿಮಾತ್ಯ ವಿಚಾರದಿಂದ ಉತ್ಪನ್ನವಾದ ಇತಿಹಾಸನಿಷ್ಠ ವಿಮರ್ಶಕ ಬುದ್ಧಿ ಕೂಡಿದ ಮೇಲೆ ಇವುಗಳಿರುದಿರು ಸಿಲ್ಲಲಾರದೆ ' ಉಪನಿಷತ್ತುಗಳಲ್ಲಿ ಒಂದೇ ಒಂದು ಮತಪದ್ಧತಿಯು ಕಂಡುಬರುವದು ' ಎಂಬ ಮುಂತಾದ ಅಭಿಪ್ರಾಯಗಳು ತೀವ್ರವಾಗಿ ನಿರ್ನಾಮವಾಗುವವು. ಉಪನಿಷತ್ತುಗಳ ಅರ್ಥವನ್ನು ಹುಡುಕಲು ಹೋಗಿ ತಮ್ಮ ತಮ್ಮ ಮತವನ್ನೆ ಅವುಗಳಲ್ಲಿ ಹುಡುಕಿಕೊಳ್ಳುವ ಭಾಷ್ಯಕಾರರ ರೀತಿಯು ಈಗ ಬಹುದಿವಸಗಳಿಂದಿದೆ, ಇದಿನ್ನು ಸಾಕು. ಉಗನಿಷತ್ತುಗಳಿಂದ ಅನೇಕ ಮತಗಳು ಪ್ರವಹಿಸಿ ಮುಂದೆ ಬೆಳೆದು ಸಮಗ್ರ ಸ್ವಯಂಪೂರ್ಣವಾದ ಪ್ರತ್ಯೇಕ ದರ್ಶನಗಳಾಗಿ ಹೇಗೆ ಪರಿಣಮಿಸಿದವೆಂಬುದನ್ನು ನಾವು ತೋರಿಸಿಕೊಡುವೆವು. ಇದು ನಮ್ಮ ರೀತಿಯು.

**೨. ಉಪನಿಷತ್ತುಗಳೂ ಬುದ್ಧದರ್ಶನವೂ**— ಮೊದಲು, ಉಪನಿಷತ್ತುಗಳಲ್ಲಿ ಬುದ್ಧಧರ್ಮದ ಉಗಮವು ಹೇಗಿದೆ ಎಂಬದನ್ನು ನೋಡುವ. ಉಪನಿಷತ್ಕಾಲವು ಮುಗಿಯಲಿಕ್ಕೂ ಬುದ್ಧಧರ್ಮದ ಕಾಲವು ಪ್ರಾರಂಭವಾಗಲಿಕ್ಕೂ ಗಂಟು ಬಿದ್ದಿತು ಎಂಬುದೆಲ್ಲರಿಗೂ ಗೊತ್ತಿರಬಹುದು. ' ತದ್ಧ ಏಕ ಆಹುರಸದೇವೇದಮಗ್ರ ಆಸೀತ್ ' ಎಂದು ಛಾಂದೋಗ್ಯೋಪನಿಷತ್ತಿನಲ್ಲಿದೆ ( ಛಾಂ, ಅ೬, ಬಂ೨, ಮಂ೧ ). ' ಮೊದಲು 'ಅಸತ್' ಅಷ್ಟೆ ಇತ್ತಂತೆ, ಅದರಿಂದ 'ಸತ್' ಉಂಟಾಯಿತು ' ಎಂಬ ಮಾತಿನಲ್ಲಿ ಬೌದ್ಧಮತೋಚ್ಚಾರವಿದೆ. ಈ ಮತವೇ ಮುಂದೆ ಬಳೆದು ಬಲಿತು ' ಸರ್ವಂ ಶೂನ್ಯಂ ಶೂನ್ಯಂ ' ಎಂಬ ಶೂನ್ಯವಾದವಾಯಿತು. ಶಂಕರಾಚಾರ್ಯರೂ ಈ ಶ್ರುತಿಗೆ ಅರ್ಥಬರೆಯುವಾಗ ' ಸದಭಾವವೇ ' ಮೊದಲಿತ್ತೆನ್ನುವ ಬೌದ್ಧಮತವು ಇದರಿಂದ ಸೂಚಿತವಾಗುವದೆಂದು ಅಂದದ್ದು ಯಥಾಯೋಗ್ಯವಾಗಿದೆ. ಅಧ್ಯಾತ್ಮಶಾಸ್ತ್ರದಲ್ಲಿ 'ಅಸತ್' ವಾದವನ್ನು ಹೂಡುವವರು ಮಾನಸಶಾಸ್ತ್ರದಲ್ಲಿ 'ಅನಾತ್ಮ' ವಾದವನ್ನು ಹೂಡತಕ್ಕವರೇ ! ಕಠೋಪನಿಷತ್ತಿನಲ್ಲಿ 'ಮನುಷ್ಯನು ತೀರಿಕೊಂಡಬಳಿಕೂ ಆತ್ಮನಿರುವನೆಂದು ಕೆಲವರನ್ನುವರು. ಕೆಲವರು ಇಲ್ಲೆಂದೆನ್ನುವರು ' ( ಕಠ, ಅ೧, ವಲ್ಲಿ ೧, ಮಂ೨೦ ) ಎಂದು ಹೇಳುವ ಕಾಲಕ್ಕೆ ಬೌದ್ಧರ 'ಅನತ್ತಾವಾದ' ವೇ ( ಅನಾತ್ಮವಾದ ) ಆ ಋಷಿಯ ಲಕ್ಷದಲ್ಲಿರಲಿಕ್ಕೆಬೇಕು. ಚಾರ್ವಾಕರ ಮತವಾದರೂ ಇದೇ ಪ್ರಕಾರದ್ದಿತ್ತು. ಇದಲ್ಲದೆ ' ಇಲ್ಲಿಯದೆಲ್ಲವೂ ಈಗಿದೆ ನಾಳೆ ಇಲ್ಲ; ಇಷ್ಟು ಅಸ್ಥಿರ. ಭೋಗಿಸಿದಂತೆ ಇಂದ್ರಿಯದ ತೇಜವು ಕುಂದುವದು. ಎಷ್ಟಾದರೂ ಜೀವಿ

ತವು ಅಲ್ಪವೇ! ಅಂದಮೇಲೆ, ಗಾಯನನರ್ತನಾದಿಗಳಲ್ಲಿ ತೊಡಗಿಸಿ ದೀರ್ಘಾಯುಷ್ಯ ವನ್ನು ಭೋಗಿಸುವ ಮನಸ್ಸಾದರೂ ಆಗುವದು ಹೇಗೆ! ' (ಕಠ, ಅ೧, ವಲ್ಲಿ೧, ಮಂ೨೬,೨೮) ಎಂದು ನಚಿಕೇತನು ಕೂಗಿಕೊಂಡಾಗ, ' ಸರ್ವಂ ಕ್ಷಣಿಕಂ ಕ್ಷಣಿಕಂ, ' ' ಸರ್ವಂ ದುಃಖಂ ದುಃಖಂ, ' ಇವೇ ಮೊದಲಾದ ಬೌದ್ಧ ತತ್ವಗಳನ್ನೆ ಆಡಿಕೊಂಡನೆಂದೆನ್ನಬಹುದು. ಇಷ್ಟು ಹೋಲಿಕೆ ಇದೆ ಇವೆರಡೂ ವಿಚಾರಗಳಲ್ಲಿ. ' ಪುತ್ರೈಷಣೆ, ವಿತ್ತೈಷಣೆ, ಲೋಕೈಷಣೆ ( ಅಂದರೆ ಹೆಣ್ಣು, ಹೊನ್ನು, ಮಣ್ಣು ) ಇವುಗಳನ್ನು ತೊರೆದು ಆತ್ಮಜಿಜ್ಞಾಸುವು ಭಿಕ್ಷಾಚಾರಿಯಾಗುವನು ' ( ಬೃ, ಅ೪, ಬ್ರಾ೪, ಮಂ೨೨ ) ಎಂದು ಹೇಳಿದುದರಲ್ಲಿ ಬೌದ್ಧ-ಜಿನಧರ್ಮಗಳಲ್ಲಿಯ ಭಿಕ್ಷು-ಶ್ರಮಣರಕ ಹಾದಿಯ ಭವಿಷ್ಯಸೂಚನೆಯೇ ಇದೆ. ' ಈ ಪಂಚಮಹಾಭೂತಗಳೂ, ಅಂಡಜ, ಜಾರುಜ, ಸ್ವೇದಜ, ಉದ್ಭಿಜ್ಜ ಸೃಷ್ಟಿಯೆಲ್ಲ– ಉಸುರಾಡುವ, ಓಡಾಡುವ, ಹಾರಾಡುವ, ನಿಂತಿರುವದೆಲ್ಲ– ಪ್ರಜ್ಞೆಯಿಂದಲೇ ತಿಳಿಯಲ್ಪಡುವುದು, ಪ್ರಜ್ಞೆಯಲ್ಲಿಯೇ ಅವುಗಳ ಪ್ರತಿಷ್ಠೆ ' ( ಐ, ಅ೩, ಮಂ೩ ) ಎಂದು ಐತರೇಯದಲ್ಲಿ ಹೇಳಿದೆ. ಇದರಲ್ಲಿ ವಿಜ್ಞಾನವಾದಿಗಳ ಅಧ್ಯಾತ್ಮವಾದವೆಲ್ಲ ಮೂಲರೂಪದಿಂದ ಅಡಕವಾಗಿದೆ. ವಿಜ್ಞಾನವಾದಿಗಳು ಪ್ರಜ್ಞಾನದ ಬದಲಾಗಿ ವಿಜ್ಞಾನವೆನ್ನುವರು. ಆದರೆ 'ಪ್ರಜ್ಞಾನ'ಶಬ್ದವು 'ವಿಜ್ಞಾನ'ವಾಗುವದು ಅತಿಸುಲಭ. ಕಟ್ಟಕಡೆಯ ಮಾತೆಂದರೆ, ಕರ್ಮದ ಲಕ್ಷಣದ ಬಗ್ಗೆ. ಯಾಜ್ಞವಲ್ಕ್ಯ ಮತ್ತು ಜರತ್ಕಾರವ ಇವರ ಏಕಾಂತದಲ್ಲಾದ ಸಂವಾದದಲ್ಲಿ ' ಪುಣ್ಯಕರ್ಮಗಳಿಂದ ಮನುಷ್ಯನು ಪುಣ್ಯವಂತನಾಗುವನೆಂದೂ, ಪಾಪಕರ್ಮಗಳಿಂತ ಪಾಪಿಷ್ಠನಾಗುವನೆಂದೂ' ( ಬೃ, ಅ೩, ಬ್ರಾ೨, ಮಂ೧೩ ) ಗೊತ್ತಾಯಿತು. ಈ ವಿಚಾರವೆ ಕಠೋಪನಿಷತ್ತಿನಲ್ಲಿ ಮತ್ತೊಮ್ಮೆ ಮೂಡಿದೆ. ಅದು ಹೀಗೆ, ' ಕೆಲವರು ತಮ್ಮ ಕರ್ಮ ವತ್ತು ಜ್ಞಾನಾನುಸಾರ ದೇಹಗಳಾಗಿಯೂ ಕೆಲವರು ಸ್ಥಾಣು ( ಕಲ್ಲು ಮುಂತಾದ್ದು ) ಗಳಾಗಿಯೂ ಹುಟ್ಟುವರು ' (ಕಠ, ಅ೨, ವಲ್ಲಿ ೫, ಮಂ ೭ ). ಬೌದ್ಧರ ಕರ್ಮವಾದದ ಉಗಮವನ್ನು ನಾವು ಅಲ್ಲಿ ಕಾಣಬಹುದು. ಈ ಕರ್ಮವಾದವೆ ಬೇರೆ ಭಾರತೀಯ ಮತಗಳಲ್ಲಿಯೂ ಇದೆ. ಆದರೆ ಬೌದ್ಧಧರ್ಮದಲ್ಲಿ ಅದಕ್ಕಿರುವಷ್ಟು ನೈತಿಕ ಮಹತ್ವವು ಬೇರೆ ಯಾವ ಮತದಲ್ಲಿಯೂ ಇಲ್ಲ. ಅಂತೂ ಉಪನಿಷತ್ತುಗಳ ಗರ್ಭದಲ್ಲಿ ಬಿಂದುರೂಪವಾಗಿ ಬೌದ್ಧ ದರ್ಶನದ ಮೂಲತತ್ವಗಳೆಲ್ಲವೂ ಇವೆ : ಆ ಅಸದ್ವಾದ, ಆ ಅನಾತ್ಮವಾದ, ಆ ಕ್ಷಣಿಕವಾದ, ಆ ದುಃಖವಾದ, ಆ ವಿಜ್ಞಾನವಾದ, ಆ ಭಿಕ್ಷುಪಂಥ, ಕೊನೆಗೆ ಆ ಕರ್ಮವಾದ. ಅಂತೂ ಈ ಮೂಲತತ್ವಗಳ ತಳಹದಿಯಮೇಲೆ ಬೇರೊಂದು ತೀರ ಪ್ರತ್ಯೇಕವಾದ ದರ್ಶನಮಂದಿರವನ್ನು ಬೌದ್ಧಧರ್ಮವು ಕಟ್ಟಿಕೊಂಡಿದ್ದರೂ ಅದರ ಉಗಮವು ಮಾತ್ರ ಉಪನಿಷತ್ತುಗಳಲ್ಲಿಯೇ ಇದೆ ಎಂಬುದು ಮಾತ್ರ ಸುಸ್ಪಷ್ಟವು.

**೩. ಛಾಂದೋಗ್ಯ, ಕಠ, ಪ್ರಶ್ನ, ಉಪನಿಷತ್ತುಗಳಲ್ಲಿರುವ ಸಾಂಖ್ಯ ತತ್ವಗಳು—** ಬೌದ್ಧದರ್ಶನದಂತೆಯೆ ಸಾಂಖ್ಯದರ್ಶನವಾದರೂ ಉಪನಿಷತ್ತುಗಳ ಪೂರ್ವದಲ್ಲಿರದಿದ್ದರೂ ಉಪನಿಷತ್ತುಗಳಲ್ಲಂತೂ ಅದರ ಬೀಜವನ್ನು ಕಾಣಬರುವುದು. ಸಾಂಖ್ಯವೂ ಅದರ ಜೊತೆಯ ಯೋಗದರ್ಶನವೂ ತೀರ ಇತ್ತೀಚಿನ ಶ್ವೇತಾಶ್ವತರ ಉಪನಿಷತ್ತಿನಲ್ಲಿ (ಶ್ವೇ. ಅ೬. ಮಂ೧೩) ಹೆಸರುಗೊಂಡು ಹೇಳಲ್ಪಟ್ಟಿವೆ ಎಂಬುದೇನೋ ನಿಜ; ಆದರೆ ಸಾಂಖ್ಯದರ್ಶನದ ಬೀಜಭೂತ ತತ್ವಗಳು ಎಷ್ಟೋ ಮುಂಚಿನ ಉಪನಿಷತ್ತುಗಳಲ್ಲಿ ಕಂಡುಬರುವವು. ಛಾಂದೋಗ್ಯದಲ್ಲಿ 'ಎಲ್ಲ ಭೂತಗಳ ಮೂಲದಲ್ಲಿ ಮೂರು ಆದಿವರ್ಣಗಳಿವೆ; ಅವು ಕೆಂಪದು, ಬಿಳಿದು, ಕರಿದು. ಈ ಮೂರು ವರ್ಣಗಳೇ ನಿಜ; ಉಳಿದವೆಲ್ಲ ಇವುಗಳಿಂದ ಉಂಟಾದವುಗಳು, ಬರಿಯಮಾತು, ವಿಕಾರ, ಹೆಸರು' (ಛಾಂ, ಅ೬, ಖಂ೪, ಮಂ೧) ಈ ಪ್ರಕಾರ ಹೇಳಿದೆ. ಇದನ್ನೆ ಬಳಸಿಕೊಂಡು ಶ್ವೇತಾಶ್ವತರದಲ್ಲಿ 'ಮೂಲಪ್ರಕೃತಿಯು ಕೆಂಪದು, ಬಿಳಿದು, ಕರಿದು, ಈ ಮೂರು ವರ್ಣದವಳು' (ಶ್ವೇ, ಅ೪, ಮಂ೫) ಎಂದು ವರ್ಣಿಸಿದೆ. ಇದೆಂದರೆ ಸಾಂಖ್ಯದರ್ಶನದೊಳಗಿನ ಮೂರು ಗುಣಗಳ ತತ್ವದ ಬೀಜವೇ ಅಹುದು. ಸಾಂಖ್ಯದೊಳಗಿನ ಮೂರು ಗುಣಗಳ ಉಗಮವು ಛಾಂದೋಗ್ಯ ಶ್ವೇತಾಶ್ವತರಗಳಲ್ಲಿಯ ಈ ಮೂರು ಮೂಲವರ್ಣಗಳಲ್ಲಿದೆ ಎಂಬುದನ್ನು ನಾವು ನೆನಪಿನಲ್ಲಿರಿಸಬೇಕು. ಕಠೋಪನಿಷತ್ತಿನ ಕಾಲಕ್ಕೆ ಇನ್ನೂ ಸಾಂಖ್ಯದರ್ಶನವು ಗರ್ಭಾವಸ್ಥೆಯಲ್ಲಿತ್ತೆಂಬುದು ಕೆಲವು ಮಂತ್ರಭಾಗಗಳಿಂದ ಕಂಡುಬರುವಂತಿದೆ. 'ಮನದ ಮೇಲೆ ಬುದ್ಧಿಯೂ ಬುದ್ಧಿಯದಾಟೆ ಮಹದಾತ್ಮವೂ, ಮಹದಾತ್ಮದ ತರುವಾಯು ಅವ್ಯಕ್ತಾತ್ಮವೂ, ಅವ್ಯಕ್ತಾತ್ಮದ ಆಚೆಗೆ ಪುರುಷನೂ ಇರುವನು; ಆದರೆ ಅವನಾಚೆಗೆ ಏನೂ ಇಲ್ಲ' (ಕಠ, ಅ೧, ವ೩, ಮಂ೧೦,೧೧) ಎಂದೂ ಮುಂದೆ ಕೆಲವು ಮಂತ್ರಗಳಾದಮೇಲೆ 'ಮನವನ್ನು ಜ್ಞಾನಾತ್ಮದಲ್ಲಿ, ಜ್ಞಾನಾತ್ಮವನ್ನು ಮಹದಾತ್ಮದಲ್ಲಿ, ಮಹದಾತ್ಮವನ್ನು ಶಾಂತಾತ್ಮದಲ್ಲಿ ಲಯಗೊಳಿಸಬೇಕು' (ಕಠ, ಅ೧, ವ೩, ಮಂ೧೩) ಎಂದೂ ಹೇಳಿದ್ದಾಗಿದೆ. ಇನ್ನು ಈ ಎರಡು ಮಂತ್ರಗಳಲ್ಲಿ, ಬುದ್ಧಿಗೆ ಜ್ಞಾನಾತ್ಮವು ಸಾಟಿ, ಮಹದಾತ್ಮಕ್ಕೆ ಮಹದಾತ್ಮವು, ಪುರುಷನಿಗೆ ಶಾಂತಾತ್ಮವು; ಇನ್ನು ಉಳಿಯಿತು ಒಂದು ಅವ್ಯಕ್ತಾತ್ಮವು; ಅದನ್ನು ಲಯಾನುಕ್ರಮದ ಅನುಕೂಲತೆಗಾಗಿಯಾಗಲಿ, ಛಂದಸ್ಸಿನ ಅನುಕೂಲತೆಗಾಗಲಿ, ಬಿಟ್ಟಿರುವ ಸಂಭವವಿದೆ. ಏನೆ ಆಗಲಿ, ಸಾಂಖ್ಯದರ್ಶನದೊಳಗಿನ ಕೆಲ ಮುಖ್ಯತತ್ವಗಳಾದ ಮನ, ಬುದ್ಧಿ, ಮಹತ್ತು, ಅವ್ಯಕ್ತ, ಪುರುಷ ಇವುಗಳು ಮೇಲಿನ ಮಂತ್ರಗಳಲ್ಲಿ ನಿರ್ದಿಷ್ಟವಾಗಿವೆ ಎಂದು ಅನ್ನುವದು ಸಮಂಜಸ ತೋರದಿರಲಾರದು. ಮತ್ತೆ, ಷೋಡಶಕಲಾಯುಕ್ತನಾದ ಪುರುಷನನ್ನು ಆಗಾಗ್ಗೆ ವರ್ಣಿಸುವ ಪ್ರಶ್ನೋಪನಿಷತ್ತಿನಲ್ಲಿ ಸಾಂಖ್ಯದರ್ಶನದೊಳಗಿನ 'ಲಿಂಗಶರೀರ' ದ ಕಲ್ಪನೆಯು

ಛಾಯೆ ಮೂಡಿದೆ ಎಂದು ಹೇಳಬಹುದು. 'ಈ ದೇಹದಲ್ಲಿ ಷೋಡಶಕಲಾಯುಕ್ತನಾದ ಪುರುಷನಿರುವನು' (ಪ್ರ, ಅ೬, ಮಂ೨) ಎಂದು ಒಂದು ಮಂತ್ರವು ಬಣ್ಣಿಸಿದ್ದರೆ, ಇನ್ನೊಂದು ಆ ಪುರುಷನ ಷೋಡಶಕಲೆಗಳು, 'ಪ್ರಾಣ, ಶ್ರದ್ಧೆ, ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿ, ಇಂದ್ರಿಯಗಳು, ಮನ, ಅನ್ನ, ವೀರ್ಯ, ತಪ, ಮಂತ್ರ, ಕರ್ಮ, ಲೋಕಗಳು, ನಾಮವು, (ಪ್ರ, ಅ೬, ಮಂ೪) ಎಂದು ಎಣಿಸಿ ಹೇಳುತ್ತದೆ. ಇನ್ನು, ಆ ಪುರುಷನ ಈ ಷೋಡಶ ಕಲೆಗಳು ಬರಿಯ ಕಾಲ್ಪನಿಕವೆಂದು ಯಾರಾದರೂ ಅನ್ನಬಹುದು; ಆದರೆ ನಮಗೆ ಇಲ್ಲಿ ಬೇಕಾಗಿದ್ದುದು ಈ ಕಲ್ಪನೆಯೂ ಸಾಂಖ್ಯದರ್ಶನದೊಳಗಿನ ಕಲ್ಪನೆಯೂ ಸಮಾನವಾಗಿವೆ ಎಂದು ಹೇಳುವುದೇ ಹೊರ್ತು, ಷೋಡಶಕಲೆಗಳು ಇವೋ ಇನ್ನೂ ಬೇರೆಯವುಗಳೋ ಎಂದು ಹೇಳುವುದಲ್ಲ. ಸಾಂಖ್ಯದರ್ಶನದಲ್ಲಿ ಲಿಂಗಶರೀರವು ಹದಿನೇಳು ತತ್ವಗಳಿಂದ ಕೂಡಿದ್ದಾಗಿದೆ ಎಂದು ಹೇಳಿರುವರು; ಇಷ್ಟೇಅಲ್ಲ, ಇವಕ್ಕೂ ಉಪನಿಷತ್ತಿನೊಳಗಿನ ಕಲೆಗಳಿಗೂ ಬಹಳ ಬಿಡುತ್ತದೆ ಎಂಬುದೂ ನಿಜವು. ಇಷ್ಟಾಗಿಯೂ ಪ್ರಶ್ನೋಪನಿಷತ್ತಿನಲ್ಲಿ ಪ್ರಾಣ, ಪಂಚಮಹಾಭೂತಗಳು, ಇಂದ್ರಿಯಗಳು, ಮನವು ಎಂದು ಪುರುಷನ ಹದಿನಾರು ಭಾಗಗಳನ್ನು ಹೇಳಿದ್ದಾಗಿದೆ; ಅದನ್ನೆ ಹಿಗ್ಗಿಸಿ, ಐದು ಪ್ರಾಣಗಳು, ಐದು ಮಹಾಭೂತಗಳು, ಐದು ಇಂದ್ರಿಯಗಳು, ಮನವು ಹೀಗೆ ಲಿಂಗಶರೀರದ ಭಾಗಗಳೆಂದು ಸಾಂಖ್ಯದರ್ಶನದಲ್ಲಿಯೂ ಹೇಳಿ, ಬುದ್ಧಿ ಅಥವಾ ಮಹತ್ ಇದೊಂದು ಹೆಚ್ಚಿನ ತತ್ವವು ಕೂಡಿಸಲ್ಪಟ್ಟಿದೆ ಎಂಬುದನ್ನು ಮರೆಯಲಾಗದು. ಇದಲ್ಲದೆ, ಪುರುಷನಿಗೂ ಅವನ ಕಲೆಗಳಿಗೂ ಹೇಳಿದ ಸಂಬಂಧವು ಮನ್ನಿಸಬೇಕಾದ ವಿಷಯವು. 'ಕಲೆಗಳು ಹೊಳೆಗಳಂತೆ, ಪುರುಷನು ಕಡಲಿನಂತೆ; ಹೊಳೆಗಳೆಲ್ಲ ಹರಿದು ಕಡಲನ್ನು ಕೂಡಿ ಕಡಲೇ ಆಗಿ ಬಿಡುವಂತೆ ಕಲೆಗಳು ಪುರುಷನಲ್ಲಿ ಬೆರೆತು ತದಾಕಾರವಾಗಿ ಹೋಗುವವು' (ಪ್ರ, ಅ೬, ಮಂ೫) ಎಂದು ಪ್ರಶ್ನೋಪನಿಷತ್ತು ಹೇಳುತ್ತದೆ. ಮತ್ತೊಂದು ರೂಪಕದಲ್ಲಿ; ಕಲೆಗಳು ಗಾಲಿಯ ಹಲ್ಲುಗಳಂತೆಯೂ ಪುರುಷನು ತುಂಬಿನಂತೆಯೂ ಇರುವನೆಂದು (ಪ್ರ, ಅ೬, ಮಂ೬) ಅಲ್ಲಿಯೆ ಹೇಳಿದೆ. ಅಂತೂ ಏನು? ಪ್ರಶ್ನೋಪನಿಷತ್ತಿನ ಷೋಡಶಕಲಾತ್ಮಕ ಪುರುಷನ ಕಲ್ಪನೆಯೇ ಮುಂದೆ ಸಾಂಖ್ಯದರ್ಶನದಲ್ಲಿ 'ಲಿಂಗಶರೀರ'ದ ಕಲ್ಪನೆಯಾಗಿ ಪರಿಣಮಿಸಿತು, ಇದನ್ನೆ ವೇದಾಂತವೂ ಬಳಸಿಕೊಂಡಿತು ಎಂದು ಹೇಳಬಹುದು.

೪. **ಶ್ವೇತಾಶ್ವತರವೂ ಸಾಂಖ್ಯದರ್ಶನವೂ**—ಇದುವರೆಗೆ ಛಾಂದೋಗ್ಯ-ಕಠ-ಪ್ರಶ್ನೋಪನಿಷತ್ತುಗಳಲ್ಲಿ ಸಾಂಖ್ಯದ ಬೀಜಗಳನ್ನು ಹುಡುಕಿದ್ದಾಯಿತು. ಆದರೆ ಶ್ವೇತಾಶ್ವತರೋಪನಿಷತ್ತಿನಲ್ಲಿ ಆ ಕಾಲಕ್ಕೆ ಸಾಂಖ್ಯಮಾರ್ಗವು ಪ್ರಚಲಿತವಿದ್ದ ರೀತಿಯಲ್ಲಿ, ಅದರ ತತ್ವಜ್ಞಾನವು ಹೆಚ್ಚು ವಿಸ್ತಾರವಾಗಿಯೂ ವಿವರವಾಗಿಯೂ ಹೇಳಲ್ಪಟ್ಟಿದೆ, ಮತ್ತು

ಈ ಉಪನಿಷತ್ತು ಸಾಂಖ್ಯ ದರ್ಶನಕ್ಕೆ ಜನ್ಮಸ್ಥಾನವೆಂದರೂ ಸಲ್ಲುವದು. ಮೊದಲಿನ ಮಾತೇನೆಂದರೆ ಶ್ವೇತಾಶ್ವತರೋಪನಿಷತ್ತಿನ ಕಾಲಕ್ಕೆ ವೇದಾಂತ, ಸಾಂಖ್ಯ, ಯೋಗಗಳು ಇನ್ನೂ ಕಲೆಬೆರೆತುಕೊಂಡು ಇದ್ದವು. ಶ್ವೇತಾಶ್ವತರವು ದ್ವೈತನಿಷ್ಠವೋ ಬರಿಯ ಸೇಶ್ವರವೋ ಎಂಬುದನ್ನು ಸ್ಪಷ್ಟವಾಗಿ ಹೇಳಲು ಬರುವಂತಿಲ್ಲ; ಈ ಹೊಯ್ದಾಟವೂ ಅದರಲ್ಲಿ ಕಂಡುಬರುವದು. ಒಂದೆಡೆಗೆ, ಸ್ವಭಾವವನ್ನು (ಪ್ರಕೃತಿ) ಪರಿಪಾಕಗೊಳಿಸಿ, ಅವುಗಳ ಪರಿಪಾಕಕ್ಕನುಸಾರವಾಗಿ ಗುಣಗಳ ಯೋಜನೆಯನ್ನು ಮಾಡುತ್ತ ದೇವನು ಇರುವನು (ಶ್ವೇ, ಅ ೬, ಮಂ ೫) ಎಂದು ಹೇಳಿದೆ. ಅವನು ಪ್ರಧಾನದ (ಪ್ರಕೃತಿ) ಮತ್ತು ಜೀವಗಳ ಪತಿಯಾಗಿಯೂ ಗುಣಗಳ ಈಶನಾಗಿಯೂ ಇರುವನೆಂದೂ (೬, ಮಂ ೧೬) ಹೇಳಿದೆ. ಜೇಡಹುಳವು ತನ್ನಲ್ಲಿದ್ದ ಪ್ರಕೃತಿಜನ್ಯವಾದ ಎಳೆಗಳಿಂದ ತನ್ನನ್ನು ಹೊರಪಡಿಸಿಕೊಳ್ಳುವಂತೆ ದೇವನು ಮಾಡುವನು ಎಂದು ಒಮ್ಮೆ (೬ ಮಂ ೧೬) ಹೇಳಿದೆ. ಮತ್ತೊಂದೆಡೆಗೆ, 'ಮಾಯಿಯಾದ ಮಹೇಶ್ವರನು ತನ್ನ ಮಾಯಾಶಕ್ತಿಯಿಂದ ಜಗತ್ತನ್ನುಂಟುಮಾಡುವನು, ಜೀವವು ಈ ಮಾಯೆಯಲ್ಲಿ ಬದ್ಧವಾಗಿದೆ' (ಶ್ವೇ, ಅ೬, ಮ೯೦) ಎಂದು ಹೇಳಿದೆ. ಇಂತು, ನಿರ್ಮಾಣ-ನಿರ್ವಹಣ-ಶಕ್ತಿವಂತನಾಗಿ ದೇವನು ಈಶ್ವರಪ್ರಾಯನಾಗಿ ವರ್ಣಿಸಲ್ಪಟ್ಟಿದ್ದಾನೆ; ಆದರೆ ಮತ್ತೆ ಬೇರೆ ಕಡೆಗೆ, ಪ್ರಕೃತಿಯ ಮಗ್ಗುಲಲ್ಲಿ ಜೀವವು ಅಜ್ಞಾನಾಂಧವಾಗಿ ಅವಳ ಭೋಗದ ಬಲೆಯಲ್ಲಿ ಬಿದ್ದುಕೊಂಡಿರುವದೆಂದೂ, ದೇವನು ಮಾತ್ರ ಅವಳ ಸಂಪರ್ಕವಿಲ್ಲದೆ ನಿರ್ಮುಕ್ತನಾಗಿರುವನೆಂದೂ ವರ್ಣಿಸಿದ್ದಾಗಿದೆ. ದೇವನು ಕೇವಲ ನಿರ್ಗುಣನೂ ಕರ್ಮಾಧ್ಯಕ್ಷನೂ ಸಾಕ್ಷಿಸ್ವರೂಪನೂ (ಶ್ವೇ, ಅ೬, ಮಂ೧) ಎಂಬ ಈಶ್ವರನಿಷ್ಠೆಯಿಂದ ಈ ವರ್ಣನೆ ಮಾಡಲ್ಪಟ್ಟಿದೆ. ಪ್ರಕೃತಿ ಪುರುಷರ ಹಸುಗೆಯೆಂತು, ಬೆಸುಗೆಯೆಲ್ಲಿ, ಎಂಬುದರ ಅಚ್ಚುಕಟ್ಟಾದ ಕಲ್ಪನೆಯು ಶ್ವೇತಾಶ್ವತರದಲ್ಲಿಲ್ಲ. ಅಂತೆಯೇ ನಾವು ಮತ್ತೆ ಮತ್ತೆ ಅನ್ನುವದೇನಂದರೆ ಶ್ವೇತಾಶ್ವರದ ಕಾಲಕ್ಕೆ ವಿಚಾರವೃಕ್ಷಕ್ಕೆ ವೇದಾಂತ-ಸಾಂಖ್ಯ-ಯೋಗಗಳೆಂಬ ಕವಲುಗಳು ಪ್ರಕಟವಾಗಿ ಇನ್ನೂ ಒಡೆದಿದ್ದಿಲ್ಲವೆಂದು. ಇನ್ನು ಶ್ವೇತಾಶ್ವತರ ಉಪನಿಷತ್ತಿನ ಕಾಲಕ್ಕೆ ಸಾಂಖ್ಯ-ವೇದಾಂತಗಳೆರಡೂ ಒಂದರಲ್ಲೊಂದು ತೊಡಕುಕೊಂಡಿದ್ದವೆಂಬುದಕ್ಕೆ, ಕಲೆಬೆರೆತುಕೊಂಡಿದ್ದವೆಂಬುದಕ್ಕೆ 'ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್' (ಶ್ವೇ, ಅ ೫, ಮಂ ೧) ಎಂಬೀ ಶ್ವೇತಾಶ್ವತರ ಉಪನಿಷತ್ತಿನ ಮಂತ್ರವೆ ಸಾಕ್ಷಿಯಾಗಿದೆ. ಈ ಮಂತ್ರಗಳೊಳಗಿನ 'ಕಪಿಲ' ಶಬ್ದದ ಅರ್ಥವೇನೆಂಬದರ ಬಗ್ಗೆ ಬಹಳೇ ವಾದವಿವಾದವಾಗಿದೆ. ಕೆಲವು ಮತದವರು ಸಾಂಖ್ಯದರ್ಶನದ ಋಷಿಯಾದ ಕಪಿಲನೇ ಇವನೆಂದು ವಾದಿಸುವದೂ ಉಂಟು. ಈ ಉಪನಿಷತ್ಕಾರರಿಗೆ ಸಾಂಖ್ಯದರ್ಶನದ ಋಷಿಯಾದ ಕಪಿಲನ ಅಸ್ತಿತ್ವದ ಬಗ್ಗೆ ಏನೂ ಸುದ್ದಿಯೆ

ಗೊತ್ತಿರಲಿಲ್ಲವೆಂದು ಅನ್ನಲು ಬರದಿದ್ದರೂ ಇದೇ ಉಪನಿಷತ್ತಿನೊಳಗಿನ ಮತ್ತೆರಡು ವಚನಗಳ ಮೇಲಿಂದ, ಕಪಿಲನೆಂಬುದು ಹಿರಣ್ಯಗರ್ಭನಿಗೆ ಪರ್ಯಾಯಶಬ್ದವಾಗಿದೆ ಎಂಬುದು ಸ್ಪಷ್ಟವಿದೆ. ಹಿರಣ್ಯಗರ್ಭನನ್ನು ಮೊದಲು ಹುಟ್ಟಿಸುವಂಥವನಾದವನು (ಶ್ವೇ ಅ ೩, ಮಂ ೪) ಅವನು ಶುಭಬುದ್ಧಿಯುಕ್ತನಾದವನು (ಶ್ವೇ, ಅ ೪, ಮಂ ೧೨) ಇವೇ ಆ ವಚನಗಳು. ಇನ್ನೂ ಕಪಿಲ ಶಬ್ದದ ವೇದಾಂತಾರ್ಥಪ್ರತಿಪಾದನದ ಬಗ್ಗೆ ಏನಾದರೂ ಅಲ್ಪಸ್ವಲ್ಪ ಸಂಶಯವು ಉಳಿದಿದ್ದರೆ ಶ್ವೇತಾಶ್ವತರದ ಕಡೆಯ ವಚನದ ಮೇಲಿಂದ ಅದು ನಿರಸ್ತವಾಗುದಂತಿದೆ. ತನಗೂ ಸೃಷ್ಟಿಗೂ ಮಧ್ಯಸ್ಥ ಪುರುಷನನ್ನಾಗಿ 'ಬ್ರಹ್ಮನನ್ನು ಮೊದಲು ಹುಟ್ಟಿಸುವಂಥವನಾದವನು' (ಶ್ವೇ, ಅ ೬, ಮಂ ೧೮) ಎಂಬ ಈ ವಚನವು ಶ್ವೇ, ಅ ೫, ಮಂ ೨ ರಲ್ಲಿಯ ಕಪಿಲ ಋಷಿಯೂ ಶ್ವೇ, ಅ ೩, ಮಂ ೪, ಮತ್ತು ಅ ೪, ಮಂ ೧೨ ರಲ್ಲಿಯ ಹಿರಣ್ಯಗರ್ಭನೂ ಶ್ವೇ, ಅ ೬, ಮಂ ೧೮ ರಲ್ಲಿಯ ಸೃಷ್ಟಿಕರ್ತನಾದ ಬ್ರಹ್ಮನೂ ಒಂದೇ ಎಂಬುದನ್ನು ನಿಸ್ಸಂಶಯವಾಗಿ ಸಿದ್ಧಮಾಡುವದು.

**೫. ಉಪನಿಷತ್ತುಗಳೂ ಯೋಗವೂ**—ಇನ್ನು ಯೋಗದರ್ಶನದ ಮೂಲವನ್ನು ಕಾಣಬೇಕಾದರೆ ಶ್ವೇತಾಶ್ವತರದ ಎರಡನೇ ಅಧ್ಯಾಯದಲ್ಲಿ ವಿಶೇಷಮಹತ್ವದ ಒಂದು ವಚನವಿದೆ. ಅದನ್ನು ನೋಡಬೇಕು. ಅದರಲ್ಲಿ ಮುಂದೆ ರೂಪುಗೊಂಡ ಯೋಗದರ್ಶನದ ತತ್ವದ ಮತ್ತು ಅನುಷ್ಠಾನದ ಪ್ರಾರಂಭದ ರೂಪವು ಕಂಡುಬರುವದು. ಯೋಗಾನುಷ್ಠಾನ ಮಾಡುವಾಗ ನಮ್ಮ ದೇಹವು ಯಾವ ರೀತಿಯಲ್ಲಿರಬೇಕು ಎಂಬುದನ್ನು ಅದು ಒತ್ತಿಹೇಳುವದು. ಭಗವದ್ಗೀತೆಯ ಮಹತ್ವವನ್ನು ಮುಂಗಂಡೋ ಏನೋ ಅದು ಧ್ಯಾನಸಮಯದಲ್ಲಿ ಕಾಯವೂ ಶಿರವೂ ಗ್ರೀವವೂ ಸಮವಾಗಿ ನೇರವಾಗಿರಬೇಕು ಎಂದು ಹೇಳುತ್ತದೆ. ಅನೇಕಾನೇಕ ಆಸನಗಳ ಸಂಭಾರವೂ ಅಲ್ಲಿ ಇಲ್ಲ. ಆದರೆ ಮುಂದೆ ರಾಜಯೋಗ ಹಠಯೋಗಗಳನ್ನು ಏಕವರ್ಗದಲ್ಲಿ ತರುವ ಹೊಸ ಉಪನಿಷತ್ತುಗಳಲ್ಲಿ ಮಾತ್ರ ಆಸನಗಳ ಚರ್ಚೆಯು ಒಂದು ಪ್ರಮುಖಾಂಗವಾಯಿತು. ಇನ್ನು ಎರಡನೇ ಮಾತೆಂದರೆ ಯೋಗಾಂಗಗಳಲ್ಲೊಂದಾದ ಪ್ರತ್ಯಾಹಾರಕ್ಕೆ ಸಮಾನಾರ್ಥವಾಗಿ ನಾವು ಇಂದ್ರಿಯಗಳನ್ನು ಮನದಿಂದ ಅಂಕೆಯಲ್ಲಿಟ್ಟುಕೊಳ್ಳಬೇಕೆಂದು ಅದು ಹೇಳುವದು. ಶ್ವಾಸನಿಯಮನವಾಗಬೇಕೆಂದು ಹೇಳಿದುದು ಮೂರನೆಯ ಮಾತು. ಮುಂದೆ ಯೋಗದಲ್ಲಿ ಇದಕ್ಕೆ ಪ್ರಾಣಾಯಾಮವೆಂಬ ಹೆಸರು ಬಂದಿತು. ನಾಲ್ಕನೆಯ ಮಾತೇನಂದರೆ, ನಾವು ಯೋಗಾನುಷ್ಠಾನಕ್ಕೆ ಕೂಡಬೇಕಾದ ಸ್ಥಳವು ಶುದ್ಧವಾಗಿಯೂ ಉಸುಕೂ ಬೆಂಕಿಯೂ ಇಲ್ಲದ್ದೂ ಹತ್ತಿರ ಜಲಾಶಯವೂ ಮತ್ತು ಬೇರೆ ವಿಧಗಳ ಸಪ್ಪಳಗಳು ಇಲ್ಲದ್ದೂ ಇರಬೇಕು; ಗುಹೆಯಾದರೆ ಬಹಳ ಒಳಿತು. ಐದನೆಯ ಮಾತೆಂದರೆ, ಅಧ್ಯಾತ್ಮಪ್ರಕಾಶವು ಉದಯಿಸುವ ಪೂರ್ವ

ಚಿಹ್ನಗಳು ಮಂಜು, ಧೂಮ, ಉರಿ, ಸೂರ್ಯ ಮೊದಲಾದವುಗಳು ಎಂದು ಹೇಳಿದುದು. ಈ ಚಿಹ್ನಗಳ ಬಗ್ಗೆ ಈ ಗ್ರಂಥದ ಕಡೆಯ ಅಧ್ಯಾಯದಲ್ಲಿ ಸಾಕಷ್ಟು ಚರ್ಚೆಮಾಡಿದ್ದಾಗಿದೆ. ಅಲ್ಲಿ ಹೇಳಿದ ಆರನೆಯ ಮಾತೆಂದರೆ, ಯೋಗಾಗ್ನಿಯಿಂದ ನಮ್ಮ ಸರ್ವಶರೀರದ ಮೇಲೆ ಆಗುವ ಪರಿಣಾಮಗಳು. ಯೋಗಿಯು ಮುಪ್ಪಿಲ್ಲದವನು, ಮರಣವಿಲ್ಲದವನು; ಅವನ ದೇಹವು ಅರಳೆಯಂತೆ ಹಗುರು, ಆರೋಗ್ಯದ ಸಾಕ್ಷಾತ್ ಮೂರ್ತಿಯು ಅವನು, ಇಂತು ಮುಂತಾಗಿ ಆ ವರ್ಣನೆ ಇದೆ. ಕಟ್ಟಕಡೆಯದೆಂದರೆ, ಯೋಗಾನುಷ್ಠಾನದಿಂದ ಸಮಾಧಿ ಸಿದ್ಧಿಯಾಗಿ ಆ ಸಮಾಧಿಯಲ್ಲಿ ಆತ್ಮವು ಬ್ರಹ್ಮವನ್ನು ಕಂಡು ಸರ್ವಪಾಶಗಳಿಂದ ಮುಕ್ತ ವಾಗಿ ದೇವನಲ್ಲಿ ಒಂದಾಗುವದು ( ಶ್ವೇ, ಅ ೨, ಮಂ ೮–೧೫. ) ಎಂಬವರ್ಣನೆಯು. ಈ ಕಡೆಯ ಮಾತೇ ಮುಂದೆ ಯೋಗಸೂತ್ರಗಳಲ್ಲಿ 'ತದಾದ್ರಷ್ಟುಃ ಸ್ವರೂಪೇ ಅವಸ್ಥಾನಂ' ಎಂಬ ಈ ಮಾತಿನಲ್ಲಿ ಕಾಣುವದು. ಸಮಾಧಿಯ ಪೂರ್ವದಲ್ಲಿ ಧ್ಯಾನ-ಧಾರಣೆಗಳ ವಿವೇ ಚನೆಯು ಈ ಉಪನಿಷತ್ತಿನಲ್ಲಿ ಬಂದಿಲ್ಲ. ಅವು ಸಮಾಧಿಯಲ್ಲಿ ಅಂತರ್ಗತವಾಗುವವೆಂದು ಬಿಟ್ಟಿರಲಿಕ್ಕೆ ಸಾಕು. ಕಠೋಪನಿಷತ್ತು ಮಾತ್ರ ' ಧಾರಣೆ 'ಯನ್ನು ಕುರಿತು, 'ಇಂದ್ರಿಯ ಗಳೂ ಮನಸೂ ಬುದ್ಧಿಯೂ ಅವಿಚಲಿತವಾಗಿರುವದೇ ಪರಮಗತಿಯು; ಈ ಸ್ಥಿರ ಇಂದ್ರಿಯ ಧಾರಣೆಯೆ ಶ್ರೇಷ್ಠಯೋಗಸ್ಥಿತಿಯೆಂದು ತಿಳಿಯುವರು' ( ಕಠ, ಅ ೨, ವ ೬, ಮಂ ೧೦–೧೧ ) ಎಂದು ಹೇಳುವದು ಧ್ಯಾನವನ್ನು ಕುರಿತು ( ಶ್ವೇ, ಅ ೧, ಮಂ ೧೪) ಈ ವಚನದಲ್ಲಿ ' ಧ್ಯಾನನಿರ್ಮಥನಾಭ್ಯಾಸ'ದಿಂದ ಹೃದಯದಲ್ಲಡಗಿದ ದೇವನನ್ನು ಕಾಣ ಬೇಕೆಂದು ಹೇಳಿದ್ದಾಗಿದೆ. ಅಂತೂ ಏನು, ಮುಂದೆ ಯೋಗದರ್ಶನದಲ್ಲಿ ಹೇಳಿರುವ ಯಮ-ನಿಯಮಗಳನ್ನು ಈ ಉಪನಿಷತ್ತುಗಳಲ್ಲಿ ಹೇಳಿರುವ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ-ಧ್ಯಾನಸಮಾಧಿಗಳಿಗೆ ಕೂಡಿಸಿದರೆ ಸಮಗ್ರ ಅಷ್ಟಾಂಗ ಯೋಗ ಶಾಸ್ತ್ರವು ಸಿದ್ಧವೇ ಆಗುವದು. ಇದಲ್ಲದೆ ಯೋಗಸೂತ್ರಗಳಲ್ಲಿ ಪ್ರತಿಪಾದಿತವಾಗಿರುವ 'ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷ ಈಶ್ವರಃ' ಎಂಬ ದೇವವಿಷ ಯಕ ಆಸ್ತಿಕ್ಯಭಾವವು ಉಪನಿಷತ್ತುಗಳಲ್ಲಿಯೂ ಕಂಡುಬರುವದು. ಯಾಕಂದರೆ ಮುಂಡ ಕದಲ್ಲಿ 'ಒಂದು ಅತ್ತೀಹಣ್ಣನ್ನು ರುಚಿಮಾಡಿ ತಿನ್ನುತ್ತಿದೆ, ಇನ್ನೊಂದು ಬರಿಯ ನೋಡುತ್ತ ಸಾಕ್ಷಿಯಾಗಿ ಕುಳಿತಿದೆ, ( ಮುಂ ೩, ಖಂ ೧, ಮಂ ೧ ) ಎಂಬ ವಚನವಿದೆ. ಕಠೋಪನಿಷ ತ್ತಿನಲ್ಲಿ ( ಕಠ, ಅ ೨, ದ ೫, ಮು ೧೧ ) 'ಜಗತ್ತಿನ ಕಣ್ಣಾದ ಸೂರ್ಯನನ್ನು ನಮ್ಮೆ ಲ್ಲರ ಕಣ್ಣಿನ ದೋಷಗಳು ಹೇಗೆ ತಟ್ಟಲರಿಯವೋ ಹಾಗೆಯೆ ಸರ್ವಭೂತಾಂತರಾತ್ಮ ನಾದವನನ್ನು ಲೋಕದುಃಖಗಳು ಮುಟ್ಟಲರಿಯವು' ಎಂದೂ ಅವನ ಅಲಿಪ್ತತೆಯನ್ನು ಸಾರಿದ್ದಾಗಿದೆ. ಇನ್ನು ಯೋಗಶಾಸ್ತ್ರಕ್ಕೆ ಸಂಬಂಧಿಸಿದ ಶರೀರವಿಜ್ಞಾನವಾದರೂ ಕೌಷೀ

ತಕಿ ಮತ್ತು ಮೈತ್ರಿ ಉಪನಿಷತ್ತುಗಳ ಕಾಲಗಳಲ್ಲಿ ಚರ್ಚಿಸಲ್ಪಡುತ್ತಿತ್ತೆಂದು ತೋರುವದು. ಆ ಉಪನಿಷತ್ತುಗಳ ಕಾಲವಲ್ಲಿ ಶರೀರವಿಜ್ಞಾನಕ್ಕೆ ಪ್ರಚೋದನವು ದೊರೆತಿರಬೇಕು. ಈ ವಿಚಾರಗಳೇ ಮುಂದೆ ಬಲಿತು ಗರ್ಭೋಪನಿಷತ್ತಿನಲ್ಲಿ ಗರ್ಭೋತ್ಪತ್ತಿ ಮೊದಲಾದವುಗಳ ಚರ್ಚೆಯಾಗಿ, ಚರಕ ಅಗ್ನಿವೇಶ ಮೊದಲಾದವರ ವೈದ್ಯಕಶಾಸ್ತ್ರದಲ್ಲಿಯು ಶಾರೀರವಿಚಾರಕ್ಕೆ ತಳಹದಿಯಾದುವು. ಮೈತ್ರಿ ಉಪನಿಷತ್ತಿನಲ್ಲಿ ಅಸ್ಥಿ, ಚರ್ಮ, ಸ್ನಾಯು, ಮಜ್ಜಾ, ಮಾಂಸ, ಶುಕ್ರ, ಶೋಣಿತ ಈ ಸಪ್ತಧಾತುಗಳೂ ಜೊಲ್ಲು, ಕಣ್ಣೀರು, ಮಲ, ಮೂತ್ರ ಈ ನಾಲ್ಕು ಮಲಗಳೂ ವಾತ ಪಿತ್ತ ಕಫ ಈ ಮೂರು ದೋಷಗಳೂ ( ಮೈ; ಅ ೧, ಮಂ ೨ ) ಹೇಳಲ್ಪಟ್ಟವೆ. ಕೌಷೀತಕಿ ಉಪನಿಷತ್ತಿನಲ್ಲಿ ಹೃದಯದಿಂದ ಪುರೀತತ್‌ದ ವರೆಗೆ ಹೋಗಿರುವ ನಾಡಿಗಳು ಒಂದು ಕೂದಲೆಳೆಯ ಸಹಸ್ರಾಂಶದಷ್ಟು ಸೂಕ್ಷ್ಮವಾಗಿರುವ ವೆಂದು ಹೇಳಿದೆ. ಅವು ಬೆಳ್ಳಗಾಗಿಯೂ, ಕಪ್ಪಾಗಿಯೂ, ಹಳದಿಯಾಗಿಯೂ, ಕೆಂಪಾ ಗಿಯೂ ಇರುವವೆಂದು ಹೇಳಿದೆ ( ಕೌ, ಅ೪, ಮಂ ೧೯ ). ಈ ವಿಚಾರವೆ ಸ್ವಲ್ಪ ಹೆಚ್ಚು ಕಡಿಮೆಯಾಗಿ ಇದಕ್ಕೂ ಪೂರ್ವದ ಛಾಂದೋಗ್ಯವಲ್ಲಿಯೂ ಬಂದಿದೆ ಬೃಹದಾರಣ್ಯಕದ ಲ್ಲಿಯೂ ಬಂದಿದೆ. ಇವುಗಳಲ್ಲಿ ಅದಕ್ಕೂ ಹೆಚ್ಚಿನ ಮಾತು ಎಂದರೆ ಪಿಂಗಲವರ್ಣದ ನಾಡಿ ಗಳದು. ಛಾಂದೋಗ್ಯವಲ್ಲಿ ( ಛಾಂ, ಅ ೮, ಖಂ ೬, ಮಂ ೧ ) ಅವು ಬಿಳಿಯವು, ನೀಲ, ಹಳದಿ ಮತ್ತು ಕೆಂಪು ಎಂದೂ ಇದಕ್ಕೂ ಸ್ವಲ್ಪ ಬದಲಾಗಿ ಬೃಹದಾರಣ್ಯಕದಲ್ಲಿ ( ಬೃ, ಅ ೪, ಬ್ರಾ ೩, ಮಂ ೨೦ ) ಬಿಳಿಯ, ನೀಲ, ಪಿಂಗಲ, ಹಸುರು ಇರುವವೆಂದು ವರ್ಣನೆ ಇದೆ. ಬಿಳಿಯ ಮತ್ತು ಅರಿಸಿಣ ಬಣ್ಣದ ರಕ್ತವಾಹಿನಿಗಳ ಬಗ್ಗೆ ಇಂದಿನವರು ಏನೇ ಅಂದರೂ ಉಪನಿಷತ್ತಿನ ಋಷಿಗಳಿಗೆ ನೀಲಿ ಮತ್ತು ಕೆಂಪು ರಕ್ತವಾಹಿನಿಗಳ ಬಗ್ಗೆ ಗೊತ್ತಿ ತ್ತೆಂಬುವದು ಸ್ಪಷ್ಟವಿದೆ; ಮತ್ತು ಈ ಜ್ಞಾನವು ಶರೀರವಿಜ್ಞಾನದಲ್ಲಿ ಬಹಳ ಮಹತ್ವದ ಮಾತಾಗಿದೆ ಎಂಬುದು ಈಗ ಎಲ್ಲರಿಗೂ ಗೊತ್ತಿದೆ. ಯೋಗಾಭ್ಯಾಸದಿಂದಲೆ ಶಾರೀರವಿಜ್ಞಾ ನದ ಬೆಳವಣಿಗೆಯಾಯಿತು. ಈ ಶಾರೀರವಿಜ್ಞಾನವೇ ಮುಂದೆ ನಮ್ಮ ವೈದ್ಯಕಶಾಸ್ತ್ರಕ್ಕೆ ಆಧಾರವಾಯಿತು.

**೬. ಉಪನಿಷತ್ತು ಮತ್ತು ನ್ಯಾಯ-ವೈಶೇಷಿಕ ದರ್ಶನಗಳು—** ಈ ರಕ್ತವಾಹಿನಿಗಳ ಮತ್ತು ಪುರೀತತ್ತಿನ ಮಾತಿನಿಂದ ಸಹಜವಾಗಿಯೆ ಉಪನಿಷತ್ತು ಗಳಲ್ಲಿ ನ್ಯಾಯ-ವೈಶೇಷಿಕ ದರ್ಶನಗಳ ಅದಾವ ಮತಗಳು ಕಂಡುಬರುವವು ಎಂಬ ವಿಚಾರವು ತಲೆದೋರುವದು. ಒಂದು ಬಗೆಯಿಂದ ನೋಡಲಾಗಿ ಉಪನಿಷತ್ತುಗಳು ತಮ್ಮ ಅಭಿಪ್ರಾಯದಲ್ಲಿಯೂ, ತರ್ಕಪದ್ಧತಿಯಲ್ಲಿಯೂ, ನ್ಯಾಯ-ವೈಶೇಷಿಕಗಳಿಂದ ತೀರ ಬೇರೆಯಾಗಿವೆ ಎಂಬದು ಮೇಲೆಯೆ ಕಾಣುವದು. ವೈಶೇಷಿಕವು ಪ್ರಕೃತಿಯಲ್ಲಿ ಕಂಡು

ಬರುವ ಮೂಲ ಫದಾರ್ಥಗಳ ಪಟ್ಟಿಯನ್ನು ಸಿದ್ಧಪಡಿಸುವದನ್ನು ತನ್ನ ಕೆಲಸವನ್ನಾಗಿ ಇಟ್ಟುಕೊಂಡಿದೆ, ನ್ಯಾಯವು ನಿಜವಾದ ತರ್ಕಪದ್ಧತಿಯಾವುದು ಯಾವುದಲ್ಲವೆಂಬುದನ್ನು ಚರ್ಚಿಸುತ್ತದೆ; ಉಪನಿಷತ್ತುಗಳು ಆತ್ಮವನ್ನು ಕುರಿತು ಆದಷ್ಟು ಸುಲಭವಾಗಿ ವೇದಾಂತ ವಿಚಾರಗಳನ್ನಿಡಲು ಬಗೆಯುತ್ತಿದೆ. ನ್ಯಾಯ-ವೈಶೇಷಿಕಗಳಿಗೂ ಉಪನಿಷತ್ತುಗಳಿಗೂ ಸಾಮಾನ್ಯವಾದ ಒಂದೇ ಒಂದು ವಿಚಾರವೆಂದರೆ 'ಮೋಕ್ಷ'ವು ; ನ್ಯಾಯ-ವೈಶೇಷಿಕಗಳು ಈ ಮೋಕ್ಷವಿಚಾರವನ್ನು ಉಪನಿಷತ್ತುಗಳಿಂದೆತ್ತಿಕೊಂಡಿವೆ. ಮೇಲಾಗಿ, ನ್ಯಾಯ–ವೈಶೇಷಿಕ ದರ್ಶನಗಳಲ್ಲಿ ಜ್ಞೇಯಕ್ಕಿಂತಲೂ ತತ್ಸಾಧನವಾದ ಜ್ಞಾನಪದ್ಧತಿಗೆ ಹೆಚ್ಚು ಮಹತ್ವ ಕೊಡುವ ತರ್ಕಶಾಸ್ತ್ರದ ಪರಿಣತಾವಸ್ಥೆಯು ಕಂಡುಬರುವದು. ಅಂತೆಯೇ ಉಪನಿಷತ್ತುಗಳಲ್ಲಿ ನ್ಯಾಯ–ವೈಶೇಷಿಕದ ಬೀಜಭೂತ ಕಲ್ಪನೆಗಳು ಅಷ್ಟೇನು ಕಂಡುಬರುವದಿಲ್ಲ. ಆದರೆ ಪುರೀತತ್ತಿನ ವಿಚಾರವನ್ನು ನ್ಯಾಯವೂ ವೈಶೇಷಿಕವೂ ಇಡಿಗೆ ಇಡಿಯಾಗಿ ಉಪನಿಷತ್ತುಗಳಿಂದ ತೆಗೆದುಕೊಂಡು ಒಂದಿಷ್ಟು ಅವರಲ್ಲಿ ಸುಧಾರಣೆಯನ್ನು ಮಾಡಿವೆ. ನಿದ್ರೆಯ ಕಾಲಕ್ಕೆ ಆತ್ಮನು ನಾಡಿಗಳ ಮುಖಾಂತರವಾಗಿ ಪುರೀತತ್ತನ್ನು ಸೇರುವದೆಂದೂ ಇದರಿಂದಲೆ ದೇಹಕ್ಕೆ ನಿದ್ರೆಯೆಂಬುದುಂಟಾಗುವದೆಂದೂ ಉಪನಿಷತ್–ವಿಚಾರದ ಚರಿತ್ರೆಯಲ್ಲಿ ಕದಾಚಿತ್ ಮೊಟ್ಟಮೊದಲು ಬೃಹದಾರಣ್ಯಕವು ಹೇಳುವುದು ( ಬೃ, ಅ ೨, ಬ್ರಾ ೧, ಮಂ ೧೯ . ಈ ಮಾತನ್ನೆ ಎತ್ತಿ ನ್ಯಾಯದರ್ಶನವು 'ಆತ್ಮ' ಎಂಬದರ ಬದಲಾಗಿ ಮನಸ್ಸು ಎಂದು ಹಾಕಿ, ಮನಸ್ಸೇ ನಾಡಿಗಳ ಮುಖಾಂತರ ಪುರೀತತ್ತನ್ನು ಸೇರುವದೆಂದೂ ಅದರಿಂದಲೆ ನಿದ್ರೆಯುಂಟಾಗುವದೆಂದೂ ಹೇಳುವುದು. ಅಖಂಡ ಎಚ್ಚರವುಳ್ಳ ಆತ್ಮಕ್ಕೆ ನಿದ್ರೆಬರುವುದು ಎಂದು ಹೇಳುವುದು ಅಷ್ಟು ಸಮಂಜಸವಾಗಿ ತೋರುವದಿಲ್ಲ, ಮನಸ್ಸಿಗೆ ನಿದ್ರೆಬರುವುದು ಎಂದರೆ ಒಪ್ಪುವದು ಎಂಬ ವಿಚಾರದಿಂದಲೆ ನ್ಯಾಯದರ್ಶನವು ಈ ಬದಲನ್ನು ಮಾಡಿದಂತೆ ತೋರುತ್ತದೆ. ಇನ್ನು ಎರಡನೆ ಮಾತೆಂದರೆ, ವೈಶೇಷಿಕವು ದ್ರವ್ಯಗಳ ಎಣಿಕೆಯಲ್ಲಿ ಪಂಚಮಹಾಭೂತಗಳನ್ನೂ ( ದಿಕ್ಕು ಆಕಾಶದಲ್ಲಿ ಅಡಕವಾಗುವದು ) ಕಾಲ, ಮನಸ್ಸು, ಆತ್ಮಗಳನ್ನೂ ಹೇಳುವದು. ಇದಕ್ಕೆ ಪ್ರಮಾಣವಚನಗಳು ಉಪನಿಷತ್ತುಗಳಲ್ಲಿ ಅನೇಕಾನೇಕವಾಗಿ ದೊರೆಯುವವು. ಶ್ವೇತಾಶ್ವತರದಲ್ಲಿ, ಆತ್ಮನು ಕಾಲಕಾಲನೆಂದೂ, ಪೃಥ್ವಿ, ಆಪ್, ತೇಜ, ವಾಯು, ಆಕಾಶಗಳು ಅವನ ಕರ್ಮವೆಂದೂ ( ಶ್ವೇ ಅ ೬ ಮಂ ೨) ಹೇಳಿದೆ. ನ್ಯಾಯದರ್ಶನವು ಆಕಾಶವೇ ಧ್ವನಿವಾಹಕವೆಂದು ಹೇಳುವದು. ಈ ವಿಚಾರವಾದರೂ ಛಾಂದೋಗ್ಯದಲ್ಲಿ, 'ಆಕಾಶದ ಮೂಲಕವಾಗಿಯೆ ಕರೆಯಬಲ್ಲೆವು, ಆಕಾಶದ ಮೂಲಕವಾಗಿಯೆ ಕೇಳಬಲ್ಲೆವು, ಆಕಾಶದ ಮೂಲಕ ಪ್ರತಿಧ್ವನಿಯಾಗುವುದು' ( ಛಾಂ, ಅ ೭, ಖಂ ೧೨, ಮಂ ೧ ) ಎಂದು ಹೇಳಿದ್ದಾಗಿದೆ. ಆದರೆ ನ್ಯಾಯ–ಉಪನಿಷ

ತ್ತುಗಳಿಗಿಂತ ಮೀಮಾಂಸಾದರ್ಶನವೆ ಧ್ವನಿವಾಹನವಿಚಾರದಲ್ಲಿ ಸತ್ಯವಾಗಿದೆಯೆಂದು ನಾವು ಹೇಳಬಹುದು ; ಯಾಕಂದರೆ ಧ್ವನಿವಾಹಕವು ಆಕಾಶವಲ್ಲ ವಾಯುವೆಂದು ಅದರ ಮತವು. ಈಗಿನ ವೈಜ್ಞಾನಿಕರ ಮತವಾದರೂ ಇದೇ ಇರುವುದು.

೭. **ಉಪನಿಷತ್ತೂ ಮೀಮಾಂಸೆಯೂ** — ಯಜ್ಞಯಾಗಾದಿಗಳ ವಿಧಿವಿಧಾನೌಚಿತ್ಯವನ್ನು ನಿರ್ಣಯಿಸುವ ಮೀಮಾಂಸಾದರ್ಶನಕ್ಕೂ ಪರಾತ್ಪರದ ಲಕ್ಷಣವನ್ನು ಆಲೋಚಿಸುವ ಉಪನಿಷತ್ತಿನ ತತ್ವಜ್ಞಾನಮಾರ್ಗಕ್ಕೂ ಸಹಜವಾಗಿಯೆ ಬಹಳ ಮಟ್ಟಿಗೆ ಕೂಡುವದಿಲ್ಲ. ಆದರೆ ಮೀಮಾಂಸಕರ ಒಂದು ಸಿದ್ಧಾಂತವನ್ನು ಮಾತ್ರ ಈಶವೂ ಪ್ರತಿಪಾದಿಸುವುದು. 'ಅವಿದ್ಯೆಯ ಉಪಾಸಕರು ಕಗ್ಗತ್ತಲೆಯನ್ನು ಸೇರುವರು. ವಿದ್ಯೆಯಿಂದ ಸಾಧಿಸುವದೊಂದು ಅವಿದ್ಯೆಯಿಂದ ಬೇರೊಂದು; ಹೀಗೆ ಕೇಳಿರುವೆವು ನಮಗೆ ತಿಳಿ ಹೇಳಿದ ಧೀರರ ಬಾಯಿಂದ. ಯಾರು ವಿದ್ಯೆ ಅವಿದ್ಯೆಗಳೆರಡನ್ನೂ ತಿಳಿಯುವರೋ ಅವರು ಅವಿದ್ಯೆಯಿಂದ ಮೃತ್ಯುವನ್ನು ದಾಟಿ ವಿದ್ಯೆಯಿಂದ ಅಮೃತವನ್ನು ಪಡೆಯುವರು' ( ಈಶ ಮಂ ೯–೧೧ ) ಎಂದು ಈಶವು ಹೇಳುವದು. ಈ ಮಂತ್ರವು ಕರ್ಮ ಮತ್ತು ಜ್ಞಾನ ಮಾರ್ಗಗಳ ವಿರೋಧವನ್ನು ಕಳೆದು ಅವೆರಡನ್ನೂ ಸಮನ್ವಯಿಸುವ ಹಾದಿಯನ್ನು ಬೋಧಿಸುವದು. ಇತ್ತ ಕರ್ಮವೂ ಸಾಕಾಗದು, ಅತ್ತ ಜ್ಞಾನವೂ ಸಾಕಾಗದು. ಪೂರ್ವ ಮೀಮಾಂಸೆಯು ಮೊದಲನೆಯದನ್ನೂ ಉತ್ತರಮೀಮಾಂಸೆಯು ಎರಡನೆಯದನ್ನೂ ಎತ್ತಿ ಹಿಡಿದು ವಾದಿಸುವವು; ಎರಡೂ ಅರ್ಧಮಾರ್ಗಗಳೇ. ಆದರೆ ಈಶಾವಾಸ್ಯವು ಮಾತ್ರ ಎರಡನ್ನೂ ಸರಿಪಡಿಸಿ ಒಂದಿಸಿಕೊಂಡರೆ ಎರಡೂ ಮಾರ್ಗಗಳ ದೋಷದ ಬಾಧೆಯು ತಟ್ಟದೆ, ಎರಡೂ ಮಾರ್ಗಗಳ ಸ್ವಾಭಾವಿಕ ಆನುಕೂಲ್ಯದ ನೆರವು ದೊರೆತು ಎರಡನ್ನೂ ಮಿಕ್ಕಿ ಮನುಷ್ಯನು ಅಮೃತವನ್ನು ಪಡೆಯಬಹುದೆಂದು ಹೇಳುವುದು. ಮುಂದೆ ಈ ಕರ್ಮ ಜ್ಞಾನಗಳ ತೊಡಕಿನ ಮೂಲಕವೆ ಪ್ರಭಾಕರ, ಕುಮಾರಿಲ, ಶಂಕರ ಮೊದಲಾದವರಲ್ಲುಂಟಾದ ಭೇದಗಳು ಪ್ರಸಿದ್ಧವಾಗಿವೆ. ಪ್ರಭಾಕರನು ಕರ್ಮದಿಂದಲೆ ಮುಕ್ತಿಯೆಂದೂ ಜಾನವೊಂದು ಕರ್ಮವೆಂದೂ ಪ್ರತಿಪಾದಿಸುವನು. ಕುಮಾರಿಲನು ಕರ್ಮಜ್ಞಾನಗಳೆರಡರ ಸಂಯೋಗದಿಂದ ಮುಕ್ತಿಯೆಂದೂ, ಶಂಕರನು ಜ್ಞಾನದಿಂದಲೆ ಮುಕ್ತಿಯೆಂದೂ ಪ್ರತಿಪಾದಿಸುವರು. ಈಶವು ಪ್ರಭಾಕರನ ಪಕ್ಷವನ್ನು ಅನುಮತಿಸದು; ಶಂಕರನ ಪಕ್ಷವನ್ನೂ ಕಟ್ಟದು; ಕುಮಾರಿಲನ ಪಕ್ಷಕ್ಕೇ ಒಂದಿಷ್ಟು ಒಲಿಯುವದು. 'ಒಂದಿಷ್ಟು' ಎಂದೆನ್ನುವ ಕಾರಣವೇನಂದರೆ, ಈಶವು ಕುಮಾರಿಲನನ್ನೂ ಮೀರಿ ಪರಮಾನುಭವದಲ್ಲಿ ಕರ್ಮಜ್ಞಾನಗಳೆರಡನ್ನೂ ಮಾನವನು ಮೀರುವನೆಂದು ಹೇಳುತ್ತಿದೆ. ಎರಡು ರೆಕ್ಕೆಗಳಿಂದಲ್ಲದೆ ಒಂದೇ ರೆಕ್ಕೆಯಿಂದ ಹಕ್ಕಿಯು ಹೇಗೆ ಹಾರಲರಿಯದೋ ಹಾಗೆ ಅನಂತದಲ್ಲಿ ವಿಹಾರಮಾಡುವವ

ನಿಗೆ ಎರಡೂ ಬೇಕು ಎಂದು ಕುಮಾರೀಸನ್ನುವಂತೆ ಈಶವು ಹೇಳುವದಲ್ಲದೆ ಎರಡೂ ರೆಕ್ಕೆಗಳಿಂದ ಸಮತೂಕ ಸಾಧಿಸುವಷ್ಟೆ ಅಲ್ಲದೆ ತೂಕಹಿಡಿದು ಹಾರುವದು ಹೇಗೆ ಮಿಗಿಲೋ ಹಾಗೆ ಕರ್ಮಜ್ಞಾನಗಳೆರಡನ್ನೂ ದಾಟಲು ಹೇಳುವುದು. ಅತ್ತ ಅತಿ–ಮೀಮಾಂಸಕರ ಆ ತುದಿಗೂ ಹೋಗದೆ ಇತ್ತ ಅತಿ–ವೇದಾಂತಿಗಳ ಈ ತುದಿಗೂ ಹೋಗದೆ ಮಧ್ಯಮರಿರುವ ಮೀಮಾಂಸಕರು ಮುಂದೆ ಈಶಾವಾಸ್ಯದ ಈ ಸಮನ್ವಯಮಾರ್ಗವನ್ನು ರಾಜಮಾರ್ಗವನ್ನಾಗಿ ಸ್ವೀಕರಿಸಿ ಅದರ ಮೇಲೆ ತಮ್ಮ ತತ್ವಜ್ಞಾನವನ್ನು ರಚಿಸಿದರು.

೮. **ಉಪನಿಷತ್ತೂ ಶೈವಮತವೂ** – ಶೈವಮತದ ಬೀಜಗಳನ್ನಾದರೂ ನಾವು ಶ್ವೇತಾಶ್ವತರದಲ್ಲಿಯೆ ಹುಡುಕಬೇಕಾಗುತ್ತಿದೆ. ಕಠದಂಥ ಪುರಾತನ ಉಪನಿಷತ್ತಿನಲ್ಲಿ ದಿವ್ಯಸ್ತ್ರೀಯಾದ ಉಮಾದೇವಿಯ ಉಲ್ಲೇಖವಿದ್ದರೂ ಅದರಲ್ಲಿ ಶೈವಮತದ ಸಿದ್ಧಾಂತಗಳು ಹೇಳಲ್ಪಟ್ಟಿಲ್ಲ. ಶೈವತತ್ವಜ್ಞಾನದ ವ್ಯವಸ್ಥಿತ ಸ್ವರೂಪವನ್ನು ನಾವು ಶ್ವೇತಾಶ್ವತರದಲ್ಲಿಯೆ ನೋಡಬೇಕಾಗುವದು. ಋಗ್ವೇದ ಅಥರ್ವವೇದಗಳ ಕಾಲದಿಂದಲೆ ರುದ್ರ–ಶಿವರ ಕಲ್ಪನೆಯು ಬೆಳೆಯುತ್ತ ನಡೆದಿರುವದನ್ನು ನಾವು ನೋಡಬಹುದು. ಆದರೆ ಶೈವಮತದ ತಾತ್ವಿಕ ತಳಹದಿಯು ಶ್ವೇತಾಶ್ವತರದಲ್ಲಿಯೆ ಮೊಟ್ಟಮೊದಲು ಹಾಕಲ್ಪಟ್ಟಿತೆನ್ನಬೇಕಾಗುವದು. ಈ ಉಪನಿಷತ್ತಿನಲ್ಲಿ ( ಶ್ವೇ, ಅ ೧, ಮಂ ೮ ) ' ಈ ಕ್ಷರಾಕ್ಷರ ಮತ್ತು ವ್ಯಕ್ತಾವ್ಯಕ್ತ ವಿಶ್ವಕ್ಕೆ ಈಶನೆ ಆಧಾರನು. ಅನೀಶನಾದ ಆತ್ಮನು ಭೋಕ್ತೃವಾದುದರಿಂದ ಬದ್ಧನು. ಈಶನ ಜ್ಞಾನವನ್ನು ಪಡೆದು ಆತ್ಮನು ಸರ್ವಪಾಶಗಳಿಂದ ಮುಕ್ತನಾಗಬಲ್ಲನು ' ಎಂಬ ವಚನವಿರುವದು. ಮುಂದೆ ಶೈವಾಗಮಗಳಲ್ಲಿ ವ್ಯಕ್ತವಾಗಿ ಕಂಡುಬರುವ ಪಶು–ಪತಿ–ಪಾಶಗಳ ಸಿದ್ಧಾಂತವು ಇಲ್ಲಿ ಬೀಜರೂಪವಾಗಿ ದೃಗ್ಗೋಚರವಾಗುವದು. ' ರುದ್ರನೊರ್ವನೆ ಈಶನು, ಎರಡನೆಯನಾವನೂ ಈಶನಲ್ಲ. ಎಲ್ಲ ಜನರ ಎದುರು ನಿಂತು ಆತನು ತನ್ನ ಸಾಮರ್ಥ್ಯದಿಂದ ಈ ವಿಶ್ವವನ್ನು ಆಳುತ್ತಿರುವನು. ಪ್ರಲಯಕಾಲದಲ್ಲಿ ಅವನೇ ತನ್ನ ಕೋಪದಿಂದ ವಿಶ್ವವನ್ನು ನಷ್ಟಪಡಿಸುವನು. ಪುನಃ ವಿಶ್ವವನ್ನು ಹುಟ್ಟಿಸಿ ಕಾಪಾಡುವನು ' (ಶ್ವೇ, ಅ ೩, ಮಂ ೨ ), ' ತುಪ್ಪದ ಮೇಲಿನ ತಿಳಲಿನಂತೆ ಸರ್ವಭೂತಗಳಲ್ಲಿಯೂ ಗೂಢವಾಗಿರುವನು. ಈ ವಿಶ್ವವನ್ನೆಲ್ಲ ಪರಿವೇಷ್ಟಿಸಿದವನವನೊರ್ವನೆ. ಹೀಗಿರುವ ಈ ಈಶನ ಜ್ಞಾನದಿಂದ ನರನು ಸರ್ವಪಾಶಗಳನ್ನು ಕಡಿದು ಮುಕ್ತನಾಗುವನು ' ( ಶ್ವೇ, ಅ ೪, ಮಂ ೧೬ ), ' ಈ ದೇವರು ತನ್ನ ಕೈಯಲ್ಲಿಯ ಜಾಲವನ್ನು ಸುತ್ತಲೂ ಹರುಹಿ ವಿಶ್ವದಲ್ಲಿ ಸಂಚರಿಸುವನು. ವಿಶ್ವಗಳನ್ನು ಪುನಃ ಪುನಃ ಸೃಜಿಸಿ ತನ್ನ ಸರ್ವಾಧಿಪತ್ಯವನ್ನು ನಡೆಸುವನು ' ( ಶ್ವೇ, ಅ ೫, ಮಂ ೩ ), ಹೀಗೆ ಬಗೆಬಗೆಯ ವಚನಗಳಿರುವವು. ಈ ರೀತಿ ರುದ್ರನೆಂದರೆ ಶಿವನೂ ಅಹುದು ಈಶನೂ ಅಹುದು. ಶ್ವೇತಾಶ್ವತರ

ದಲ್ಲಿ ಅವನೇ ಮಹಾದೇವನು, ಆತ್ಮನ ಆತ್ಮನವನು, ವಿಶ್ವಾಧಿಪತಿಯು. ಅಜ್ಞಾನಪಾಶಕ್ಕೆ ಒಳಗಾದ ಜೀವನು ಆ ಪರಶಿವನ ಜ್ಞಾನದಿಂದಲೆ ನಿರ್ಮುಕ್ತನಾಗಿ ಪರಮಪದವನ್ನು ಪಡೆಯುವನು. ಈ ಉಪನಿಷತ್ತಿನಲ್ಲಿಯ ಮೇಲಿನ ವಚನಗಳ ಆಧಾರದಿಂದಲೆ ಮುಂದೆ ಶೈವ ಮತವು ವಿಕಾಸಗೊಂಡಿತು. ತ್ರಿಪುಟಿಯ ಐಕ್ಯವಿರುವದೆಂಬ ತತ್ವದಿಂದೊಡಗೂಡಿದ ಏಕ ದೇವ ಮಹಾತ್ಮ್ಯವನ್ನು ಬೆಳೆಸುವ ಕಾಶ್ಮೀರ ಮತ್ತು ದಕ್ಷಿಣದೇಶದ ಶೈವಮತಗಳ ಮೂಲಗಳು ಈ ಉಪನಿಷತ್ತಿನಲ್ಲಿಯೆ ಇರುವವು.

**೯. ಉಪನಿಷತ್ತಿನಲ್ಲಿಯೂ ಭಗವದ್ಗೀತೆಯಲ್ಲಿಯೂ ಕಂಡುಬರುವ ವಚನಗಳ ಮತ್ತು ಕಲ್ಪನೆಗಳ ಏಕರೂಪತೆಯು**— ಇನ್ನು ಈ ಉಪನಿಷತ್ತುಗಳಿಗೂ ಭಗವದ್ಗೀತೆಗೂ ಇರುವ ಸಂಬಂಧವನ್ನು ಕುರಿತು ವಿಚಾರಿಸುವ ಮೊದಲು ಈ ವಿಚಾರವನ್ನು ಇಲ್ಲಿ ಸಮಗ್ರವಾಗಿ ಚರ್ಚಿಸಲು ಅವಕಾಶವಿಲ್ಲೆಂದು ಸ್ಪಷ್ಟ ಹೇಳುವದೊಳಿತು. ಈ ಪ್ರಶ್ನೆಯು ಕುತೂಹಲಜನಕವಿದ್ದಷ್ಟೆ ವಿಸ್ತೃತವೂ ಆಗಿದೆ; ಆದರೆ ನಾವು ಮಾತ್ರ ಈ ಮಾತನ್ನು ಸಂಕ್ಷೇಪದಲ್ಲಿಯೆ ಹೇಳಬೇಕಾಗಿದೆ. ಹಾಗೆ ಆ ಮಾತಿನ ಪೂರ್ಣ ಚರ್ಚೆಮಾಡುವದಾದರೆ ಒಂದು ಪ್ರತ್ಯೇಕ ನಿಬಂಧವೇ ಬೇಕು. ಆದರೂ ಉಪನಿಷತ್ತುಗಳಿಗೂ ಭಗವದ್ಗೀತೆಗೂ ಇರುವ ಪ್ರಮುಖ ಸಂಬಂಧದ ದಿಗ್ದರ್ಶನವನ್ನು ಮಾತ್ರ ಇಲ್ಲಿ ಮಾಡಿಯೆ ತೀರಬೇಕಾಗಿದೆ. ‘ ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ॥ ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥ ’ ಎಂಬೀ ಗೀತಾಧ್ಯಾನದೊಳಗಿನ ಶ್ಲೋಕವು ಬಹಳಮಟ್ಟಿಗೆ ಯಥಾರ್ಥವಾಗಿದೆ. ಭಗವದ್ಗೀತೆಯು ಉಪನಿಷತ್ತುಗಳಿಂದ ವಿಚಾರಗಳನ್ನೂ ವಾಕ್ಯಖಂಡಗಳನ್ನೂ ಒಮ್ಮೊಮ್ಮೆ ಇಡೀ ವಾಕ್ಯಕ್ಕೆ ವಾಕ್ಯವನ್ನೂ ಹೇಗೆ ಎತ್ತಿಕೊಳ್ಳುವದೆಂಬುದನ್ನು ಉದಾಹರಿಸಲು ಕಠೋಪನಿಷತ್ತಿನೊಳಗಿನ ‘ ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ॥ ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥ ( ಕಠ, ಅ ೧, ವಲ್ಲಿ ೨, ಮಂ ೧೮ ) ಈ ವಚನವು ಭಗವದ್ಗೀತೆಯ ಅಧ್ಯಾಯ ೨ ರಲ್ಲಿ ೨೦ ನೆಯ ಶ್ಲೋಕವಾಗಿ ಬಂದಿದೆ ಮತ್ತು ಇದೇ ಅಧ್ಯಾಯದೊಳಗಿನ ೧೯ ನೆಯ ಶ್ಲೋಕವಾದರೂ ಕಠದೊಳಗಿನ ಮೇಲಿನ ವಚನದ ಮುಂದಿನ ವಚನವಾಗಿದೆ; ಆ ವಚನ ವಿಂತು, ‘ ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಂ ॥ ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ’ ( ಕಠ, ಅ ೧, ವಲ್ಲಿ ೨, ಮಂ ೧೯ ). ಅದೇ ಅಧ್ಯಾಯದೊಳಗಿನ ೨೯ ನೆಯ ಶ್ಲೋಕವು ‘ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ। ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ॥ ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ।

ಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ' (ಕಠ, ಅ ೧, ವಲ್ಲಿ ೨, ಮಂ ೭ ) ಇದರ ಅನುವಾದ ವಾಗಿದೆ. ಇದೇ ಉಪನಿಷತ್ತಿನೊಳಗಿನ ( ಕಠ, ಅ ೧. ವಲ್ಲಿ ೨, ಮಂ ೧೫ ) ವಚನವು ' ಸರ್ವೇ ವೇದಾ ಯತ್ಪದಮಾಮನಂತಿ। ತಪಾಂಸಿ ಸರ್ವಾಣಿ ಚ ಯದ್ವದಂತಿ ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ। ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್॥ ಹೀಗಿದ್ದು ಗೀತೆಯ ೭ ನೆಯ ಅಧ್ಯಾಯದ ೧೩ ನೆಯ ಶ್ಲೋಕದಲ್ಲಿ ಅದು ಸ್ವಲ್ಪ ವ್ಯತ್ಯಾಸಹೊಂದಿ ಕಂಡುಬರುವದು. ಇನ್ನು ದೇವಯಾನ ಪಿತೃಯಾನಗಳ ಕಲ್ಪನೆಯನ್ನು ವೇದಗಳಿಂದ ಉಪನಿಷತ್ತುಗಳು ಪಡೆದವು. ಉಪನಿಷತ್ತುಗಳಿಂದ ಗೀತೆ ಪಡೆದಿತು. ಛಾಂದೋಗ್ಯದಲ್ಲಿ ( ಛಾಂ, ಅ ೫, ಖಂ ೧೦, ಮಂ ೧-೫ ) ಬಂದ ಮಾತೇ ಗೀತೆಯ ೮ ನೆಯ ಅಧ್ಯಾಯದ ೨೪-೨೫ ರಲ್ಲಿ ಬಂದಿದೆ. ದೇವಯಾನದಿಂದ ಹೋದವನು ಬ್ರಹ್ಮನ ಕಡೆಗೆ ಹೋಗುವನು, ಪಿತೃಯಾನದ ಹಾದೀ ಹಿಡಿದವನು ಅದೇ ಹಾದಿಯಿಂದ ಮರಳಿ ಬರುವನು ಎಂಬುದೆ ಎರಡೂ ಕಡೆಗೂ ಇದ್ದ ಕಲ್ಪನೆಯು.

**೧೦. ಉಪನಿಷತ್ತುಗಳ ಮುಂದಾದ ಭಗವದ್ಗೀತೆಯ ವಿಚಾರ ಪ್ರಗತಿಯು**— ಇಲ್ಲಿಯವರೆಗೆ ಭಗವದ್ಗೀತೆಗೂ ಉಪನಿಷತ್ತುಗಳಿಗೂ ವಿಚಾರದಲ್ಲಿ ಅಥವಾ ವಚನಗಳಲ್ಲಿ ಹೇಗೆ ಏಕರೂಪತೆಯಿದೆ ಎಂಬುದು ದಿಗ್ದರ್ಶಿತವಾಯಿತು. ಇನ್ನು ಉಪನಿಷತ್ತುಗಳಿಂದ ವಚನಗಳನ್ನೂ ವಿಚಾರಗಳನ್ನೂ ಎತ್ತಿ, ತಿದ್ದಿ, ಹಿಗ್ಗಿಸಿ ತನ್ನ ಹೊಸ ಸಿದ್ಧಾಂತಕ್ಕೆ ಹವಣಿಯಾಗುವಂತೆ ಮಾಡಿಕೊಳ್ಳುವ ಭಗವದ್ಗೀತೆಯ ಹದವನ್ನಷ್ಟು ನೋಡೋಣ. ' ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ। ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ( ಈಶ, ಮಂ ೨, ) 'ಇಲ್ಲಿ ಕರ್ಮ ಗಳನ್ನು ಮಾಡಿಯೆ ನೂರು ವರುಷ ಬಾಳು. ಹೀಗೆ ಆದರೇ ಕರ್ಮಲೇಪವಾಗುವದಿಲ್ಲ ' ಎಂಬೀ ವಿರೋಧಾಭಾಸಾಲಂಕೃತ ಈಶದ ವಚನವು ಪ್ರತ್ಯೇಕವಾದ ಕರ್ಮಯೋಗದ ದರ್ಶ ನವನ್ನೇ ಕಟ್ಟಲು ಭಗವದ್ಗೀತೆಗೆ ತಳಹದಿಯಂತೆ ಉಪಯೋಗವಾಯಿತು. ಮುಂದೆ ' ಉಪ ನಿಷತ್ತುಗಳ ನೀತಿಶಾಸ್ತ್ರ ' ವೆಂಬ ಅಧ್ಯಾಯದಲ್ಲಿ, ಈ ವಚನವೆ ಸಚ್ಚಾರಿತ್ರ್ಯದ ಸಾಧನ ವನ್ನೂ ಸಾಧ್ಯವನ್ನೂ ಹೇಳಿಯೂ ನಡುವಿನ ಮೆಟ್ಟಲುಗಳನ್ನು ಮಾತ್ರ ಹೇಗೆ ಹೇಳದೆ ಬಿಟ್ಟಿರುವದೆಂಬುದನ್ನು ತೋರಿಸುವವರಿದ್ದೇವೆ. ಕರ್ಮಫಲದ ಬಗ್ಗೆ ಔದಾಸಿನ್ಯ ಮತ್ತು ಅನಾಸಕ್ತಿ ಇವುಗಳ ಮೂಲಕ ಉಂಟಾಗುವ ನೈಷ್ಕರ್ಮ್ಯಸಿದ್ಧಿಯನ್ನು ಪಡೆದು ಸತತ ಕರ್ಮಯೋಗವನ್ನಾಚರಿಸುತ್ತಿರುವದೆ ಜೀವನದ ರೀತಿಯೆಂಬುದನ್ನು ಹೇಳುವುದೆ ಭಗವ ದ್ಗೀತೆಯ ಪ್ರಧಾನ ವಿಷಯವು ಎಂಬುದನ್ನು ನಮ್ಮ ಮುಂದಿನ ಬರಹದಲ್ಲಿ ಕಂಡುಕೊಳ್ಳಬ ಹುದು. ಎರಡನೆಯ ಮಾತೆಂದರೆ, ಭಗವದ್ಗೀತೆಯ ೧೧ನೆಯ ಅಧ್ಯಾಯದ ವಿಷಯವಾದ

ದಿವ್ಯಸ್ವರೂಪವನ್ನು ಧಾರಣಮಾಡಿದ" ಶ್ರೀಕೃಷ್ಣನ ವಿಶ್ವರೂಪದ ಕಲ್ಪನೆಯ ಉಗಮವು ನಿಃಸಂಶಯವಾಗಿ, 'ಅಗ್ನಿಯೆ ತಲೆ, ವಾಯುವು ಪ್ರಾಣವು, ವಿಶ್ವವೆ ಹೃದಯವು, ಪೃಥ್ವಿಯೆ ಕಾಲುಗಳು ' ( ಮುಂ ೨, ಖಂ ೧, ಮಂ ೪ ) ಎಂಬ ಮುಂಡಕದ ಸರ್ವಭೂತಾಂತ ರಾತ್ಮನ ವರ್ಣನೆಯಲ್ಲಿ ಇದೆ. ಕದಾಚಿತ್ ಮುಂಡಕವು ಪುರುಷಸೂಕ್ತದ ಛಾಯೆಯನ್ನು ಈ ವರ್ಣನೆಯಲ್ಲಿ ತಂದಿರಬಹುದೆಂಬುದೂ ನಿಜವಿರಬಹುದು ; ಆದರೆ ಭಗವದ್ಗೀತೆಯು ಈ ಕಲ್ಪನೆಯನ್ನು ಜಗ್ಗಿ, ಹಿಗ್ಗಿಸಿ ಯಾವನು ಸರ್ವವ್ಯಾಪಿಯೊ ಸರ್ವಶಕ್ತನೊ ಯಾವನಿಗೆ ಭೂತ ಭವಿಷ್ಯವೆಲ್ಲವೂ ಶಾಶ್ವತವಾದ ವರ್ತಮಾನಮಾತ್ರವಾಯಿತೊ ಯಾವನಿಗೆ ಸರ್ವ ಭಾವದಿಂದ ಶರಣುಹೋಗುವದರಿಂದ ಪರಾಶಾಂತಿಯೂ ಶಾಶ್ವತಸ್ಥಾನವೂ ದೊರೆಯುವದೊ ಅಂಥ ಈಶ್ವರನನ್ನು ಕಲ್ಪಿಸಲು ಆಧಾರವಾಯಿತೆಂಬದೂ ಅಷ್ಟೇ ನಿಜವಾಗಿದೆ. ಇನ್ನು ಮೂರನೆಯ ಮಾತೆಂದರೆ, ' ಇಂದ್ರಿಯಗಳಿಗಿಂತ ಇಂದ್ರಿಯಾರ್ಥಗಳು ಹೆಚ್ಚು, ಅವುಗಳಿ ಗಿಂತ ಮನವು ಹೆಚ್ಚು, ಅದಕ್ಕಿಂತ ಬುದ್ಧಿ ಹೆಚ್ಚು, ಬುದ್ಧಿಗಿಂತ ಮಹತ್ತು ಹೆಚ್ಚಿನದು, ಅದಕ್ಕಿಂ ತಲೂ ಅವ್ಯಕ್ತವು ಹೆಚ್ಚು, ಅದಕ್ಕಿಂತ ಪುರುಷನು ಹೆಚ್ಚು, ಅವನಿಗಿಂತ ಹೆಚ್ಚಿನದೇನೂ ಇಲ್ಲ, ಅಲ್ಲಿ ಪರಾಕಾಷ್ಠೆಯಾಯಿತು ' ( ಕಠ, ಅ ೧, ವ ೩, ಮಂ ೧೦–೧೧ ) ಎಂಬಲ್ಲಿ ಮಾನಸ ಮತ್ತು ಅಧ್ಯಾತ್ಮಶಾಸ್ತ್ರದ ಪರಿಭಾಷೆಯನ್ನು ಕಲೆಬೆರಿಸಿ ಕಠವು ಪುರುಷನನ್ನು ವರ್ಣಿಸಿರು ವದು. ಆದರೆ ಭಗವದ್ಗೀತೆಯು ಅಲ್ಲಿ ಅಧ್ಯಾತ್ಮವರ್ಣನೆಯು ಅಪ್ರಸ್ತುತವೆಂದು ಬಿಟ್ಟು ೩ನೆಯ ಅಧ್ಯಾಯದ ೪೨ನೆಯ ಶ್ಲೋಕದಲ್ಲಿ ' ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ। ಮನಸಸ್ತು ಪರಾಬುದ್ಧಿರ್ಯೋಬುದ್ಧೇಃ ಪರತಸ್ತು ಸಃ॥ ' ಎಂದು ಮಾನಸ ಶಾಸ್ತ್ರಕ್ಕೆ ಸರಿಹೋಗುವಂತೆ ಅಚ್ಚುಕಟ್ಟಾಗಿ ವರ್ಣಿಸಿರುವದು. ಇನ್ನು ಕೊನೆಯ ಮಾತೇ ನೆಂದರೆ, ಛಾಂದೋಗ್ಯದಲ್ಲಿ ( ಛಾಂ, ಅ ೭, ಖಂ ೧ ) ' ಗುರುವೇ, ನಾನು ಮಂತ್ರವಿದ ನಿರುವೆ, ಆತ್ಮವಿದನಿಲ್ಲ; ತಮ್ಮಂಥವರಿಂದ ಆತ್ಮವೇತ್ತನಾಗಿ ನರನು ಶೋಕವ ದಾಟುವನೆಂದು ಕೇಳಿದ್ದೇನೆ. ನಾನು ಶೋಕಾಕುಲನು, ಗುರುವೇ ನನ್ನನ್ನು ಶೋಕದಾಚೆಗೆ ಒಯ್ಯಬೇಕು ' ಎಂದು ಗುರುಭಕ್ತಿಸದ್ಗದಿತನಾಗಿ ನಾರದನು ಸನತ್ಕುಮಾರನನ್ನು ಬೇಡಿಕೊಳ್ಳುವನು. ಮೈತ್ರಿ ಉಪನಿಷತ್ತಿನಲ್ಲಿ ( ಮೈ, ಅ ೧, ಮಂ ೭ ) ' ಕೆಸರಗುಂಡಿಯೊಳಗಣ ಕಪ್ಪೆಯಂ ತಿರುವೆನೀ ಸಂಸಾರದಲ್ಲಿ. ಹೊರಕ್ಕೆತ್ತಯ್ಯಾ ಗುರುವೇ ! ನೀನೇ ಗತಿ! ನೀನೇ ಗತಿ ! ' ಎಂದು ಬೃಹದ್ರಥನು ಶಾಕ್ಯಾಯನನಿಗೆ ಭಕ್ತಿಭಾವೋದ್ರೇಕಸಿಕ್ತನಾಗಿ ಮೊರೆ ಹೊಗುವನು. ಈ ಒಂದೆರಡು ಸಂದರ್ಭಗಳು ಉಪನಿಷತ್ತುಗಳ ನೀರಸ ತರ್ಕಯುಕ್ತ ಪ್ರಜ್ಞಾವಾದ, ಅಳತೆ ಮೀರಿದ ಕಲ್ಪನಾಪರಂಪರೆ ಇವುಗಳ ಮಳಲಬಯಲಿನಲ್ಲಿ ನೀರಿನ ನಿರ್ಝರಗಳಂತೆ ಕಂಗೊ ಳಿಸುವವು. ಆದರೆ ಅದೇ ಶ್ವೇತಾಶ್ವತರದ ' ತಂ ವಿಶ್ವರೂಪಂ ಭವಭೂತಮೀಡ್ಯಂ ದೇವಂ

ಸ್ವಚಿತ್ತಸ್ಥಮುಪಾಸ್ಯ ಪೂರ್ವಂ' (ಶ್ವೇ, ಅ ೬, ಮಂ ೨) 'ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ' (ಶ್ವೇ. ಅ ೬, ಮಂ ೨೩) ಈ ವಚನಗಳಲ್ಲಿ ಮೊದಲಿನ ಬರಿಯ ಬೌದ್ಧಿಕ ಕಲ್ಪನೆಗಳ ಚಲ್ಲಾಟವಡಗಿ ಸತ್ಯಸಾಕ್ಷಾತ್ಕಾರವನ್ನು ಸಂಪಾದಿಸಿ ಕೊಡುವ ಭಕ್ತ್ಯುಪಾಸನೆಗಳ ಉಕ್ಕಿನಿಂದ ತುಂಬಿದ ಅನುಭಾವಮಾರ್ಗದ ಕಾವ್ಯರಸವೂ ತತ್ವಪ್ರಕಾಶವೂ ಸ್ಪಷ್ಟವಾಗಿ ತೋರುತ್ತಿರುವವು.

**೧೧. ಉಪನಿಷತ್ತಿನೊಳಗಿನ ಅಶ್ವತ್ಥವೂ ಭಗವದ್ಗೀತೆಯ ಅಶ್ವತ್ಥವೂ—** ಒಂದು ಮಹತ್ವದ ಸಂದರ್ಭದಲ್ಲಿ ಮಾತ್ರ ಉಪನಿಷತ್ತುಗಳಿಗೆ ತೀರ ವಿರುದ್ಧವಾದ ಮಾರ್ಗವನ್ನು ಭಗವದ್ಗೀತೆಯು ಸ್ವೀಕರಿಸುವದು. ಕಠದಲ್ಲಿ (ಕಠ, ಅ ೨, ವ ೬, ಮಂ ೧) 'ಈ ಸನಾತನ ಅಶ್ವತ್ಥವೃಕ್ಷದ ಬೇರು ಮೇಲಿದೆ, ಮತ್ತು ಕವಲು ಕೆಳಗಿವೆ. ಈ ವೃಕ್ಷದ ಬೇರುಗಳೆ ಶುದ್ಧಬ್ರಹ್ಮವು, ಅದೇ ಅಮೃತವು. ಅದರಲ್ಲಿಯೆ ಎಲ್ಲ ಲೋಕಗಳಿವೆ ಅದನ್ನು ಮಿಕ್ಕಿ ಏನೂ ಇಲ್ಲ' ಎಂದು ಹೇಳಿದೆ. ಆದರೆ ಗೀತೆಯ ೧೫ನೆಯ ಅಧ್ಯಾಯದಲ್ಲಿ 'ಯಾತರ ಬೇರು ಮೇಲಿದೆಯೊ, ಕವಲು ಕೆಳಗಿದೆಯೊ, ಅಂಥ ಅವ್ಯಯವೆಂದೆನಿಸಿಕೊಳ್ಳುವ ಅಶ್ವತ್ಥಕ್ಕೆ ವೇದಗಳೆ ಎಲೆಗಳು. ಇದನ್ನು ಬಲ್ಲವನೆ ವೇದವೇತ್ತನು. ಗುಣದಿಂದ ಬೆಳೆಯುವ ಅದರ ಶಾಖೋಪಶಾಖೆಗಳು ಕೆಳಗೂ ಮೇಲೂ ಹಬ್ಬಿವೆ. ವಿಷಯಗಳೆ ಅದರ ಚಿಗುರು. ಕರ್ಮಾನುಬಂಧಿಯಾದ ಅದರ ಬೇರುಗಳು ಮನುಷ್ಯಲೋಕದಲ್ಲಿ ಹರುಹಿಕೊಂಡಿವೆ. ಅದಕ್ಕೆ ಮೊದಲಿಲ್ಲ ತುದಿಯಿಲ್ಲ, ಆಧಾರವೂ ಇಲ್ಲ. ಅದರ ನಿಜಸ್ವರೂಪವು ಹಾಗೆ ತೋರದು. ಚನ್ನಾಗಿ ಬೇರುನಾಟಿದ ಈ ಅಶ್ವತ್ಥವನ್ನು ಧೃಡವಾದ ಅಸಂಗಶಸ್ತ್ರದಿಂದ ಕಡಿದು ಆ ಮೇಲೆ, ಯಾವನಿಂದ ಮೊಟ್ಟಮೊದಲು ಸೃಷ್ಟಿನಿರ್ಮಾಣವಾಯಿತೊ ಆ ಪುರುಷನನ್ನು, ಯಾವುದನ್ನು ಮುಟ್ಟಿದಮೇಲೆ ಪುನರ್ಜನ್ಮವಿಲ್ಲವೊ ಆ ಪದವನ್ನು, ಹುಡುಕಲು ಬೇಕು' ಹೀಗೆ ಹೇಳಿದೆ. ಆದರೂ ಈ ಅಶ್ವತ್ಥದ ಗುಣಾವಗುಣಗಳನ್ನು ವಿಮರ್ಶಿಸುವದು ಪ್ರಕೃತವಲ್ಲ; ಈ ವರ್ಣನೆಯಲ್ಲಿ ಪರಸ್ಪರವಿರೋಧವನ್ನು ಕುರಿತು ಚರ್ಚಿಸುವದೂ ಪ್ರಸ್ತುತವಲ್ಲ. ಕಠದೊಳಗಿನ ವರ್ಣನೆಗೂ ಇದಕ್ಕೂ ಸರಿಬರುವದೆಷ್ಟು ಬಿಡುವದೆಷ್ಟು ಇದನ್ನು ವಿವೇಚಿಸುವದೆ ಇಲ್ಲಿ ನಮ್ಮ ಉದ್ದೇಶವಾಗಿದೆ. ಬೇರು ಮೇಲೆ ಕವಲು ಕೆಳಗೆ ಎಂಬ ಮಾತಿನಲ್ಲಿ ಎರಡೂ ವರ್ಣನೆಗಳಲ್ಲಿ ಸಾಮ್ಯವಿದೆ ಎಂಬುದು ಸ್ಪಷ್ಟವೇ ಸರಿ. ಅಶ್ವತ್ಥವು ಬ್ರಹ್ಮವೆಂದೂ ಅಮೃತವೆಂದೂ ಆದರೆ ಕಡಿಯಲು ಅಸಾಧ್ಯವೆಂದೂ ಉಪನಿಷತ್ತು ಹೇಳುವದು. ಅದೇ, ಗೀತೆಯು ಅಶ್ವತ್ಥವನ್ನು ಪ್ರಪಂಚಕ್ಕೆ ಸರಿಗೊಳಿಸಿ ಅಸಂಗಶಸ್ತ್ರದಿಂದ ಅದನ್ನು ಕಡಿದುಹಾಕಲು ಬೇಕೆಂದು ಉಪದೇಶಿಸುವದು. ಎರಡೂ ವರ್ಣನೆಗಳು ಸೆಡ್ಡು ಹೊಡೆದು ನಿಂತ ಜಟ್ಟಿಗಳಂತೆ ಇದಿರಾಡುತ್ತವೆ. ಇನ್ನು ವಿವಿಧಪುರಾಣಕಥಾಸಾಮ್ಯವೈಷಮ್ಯ

ಗಳ ಅಧ್ಯಯನ ಮಾಡುವವರಿಗೆ ಈ ಅಶ್ವತ ದೊಡನೆ ಸ್ಕ್ಯಾಂಡಿನೇವ್ಹಿಯಾದ ಪುರಾಣಗಳೊಳ ಗಿನ ಇಗ್ಡ್ರಾಸಿಲ್ ವೃಕ್ಷದ ನೆನಪಾಗದಿರದು. ಉಪನಿಷತ್ತುಗಳಲ್ಲಿಯಂತೆ ಈ ಇಗ್ಡ್ರಾಸಿಲ್ ಆದರೂ ನೈಜವಾದುದು ; ಆದರೆ ಭಗವದ್ಗೀತೆಯಲ್ಲಿಯಂತೆ ಕರ್ಮಗಳೂ ಹೇತುಗಳೂ ಮಾನವಚರಿತವೆಲ್ಲವೂ ಇದರ ಟೊಂಗೆಟಿಸಳಿಗಳಾಗಿವೆ. ಕಾರ್ಲಾಯಿಲನು ಮಾಡಿದ ಈ ವೃಕ್ಷದ ವರ್ಣನೆಯನ್ನು ಇಲ್ಲಿ ಕೊಡುವದೊಳಿತು:– ' ಅಖಂಡ ಜೀವನವನ್ನು ಒಂದು ಮಹಾರಾಯನಂಥ ಮರವನ್ನಾಗಿ ರೂಪಿಸಿದ್ದಾರೆ. ಇಗ್ಡ್ರಾಸಿಲ್ ಎಂಬೀ ಪ್ರಪಂಚ ವೃಕ್ಷರಾಜನ ಬೇರುಗಳು ರಸಾತಳದಲ್ಲಿವೆ; ಬೊಡ್ಡೆಯು ಸ್ವರ್ಗದೆತ್ತರವಾಗಿದ್ದು ಸಂಸಾರದ ಗದ್ದಲದಲ್ಲೆಲ್ಲ ಇದರ ಟೊಂಗೆಗಳೇ ಟೊಂಗೆಗಳು; ಇಂಥದೀ ವಿಶ್ವವೃಕ್ಷವು. ರಸಾತಳದ ಅದರಡಿಯಲ್ಲಿ ಮೂವರು ದೈವಕನ್ನಿಕೆಯರು–ಭೂತ-ಭವಿಷ್ಯ-ವರ್ತಮಾನರೆಂಬುವರು– ಅದರ ಬೇರುಗಳಿಗೆ ದಿವ್ಯವಾಪಿಯ ನೀರನ್ನೆರಚುತ್ತಾ ಕುಳಿತಿರುವರು. ಅದರ ಟೊಂಗೆಗಳ ಮುಗುಳು ಚಿಗುರುಗಳಾದ ಸಂಗತಿಗಳು, ಕಷ್ಟಗಳು, ಕರ್ಮಗಳು, ಅನುವುಆಪತ್ತುಗಳು, ನಿಖಿಲ ದಿಕ್ಕಾಲಗಳನ್ನು ವ್ಯಾಪಿಸಿರುವವು. ಅದರ ಪ್ರತಿಪರ್ಣವೊಂದು ಚರಿತವಾಗಿಯೂ ಒಂದೊಂದು ನಾರೆಳೆಯು ಒಂದು ನಡೆಯಾಗಲಿ ನುಡಿಯಾಗಲಿ ಇರುವದಲ್ಲದೆ ಅದರ ಟೊಂಗೆಗಳು ಜಾತಿಜನಾಂಗಗಳ ಇತಿಹಾಸಗಳೂ ಇರುವುವು. ಪುರಾತನಕಾಲದಿಂದ ಬಂದ ಮಾನವಪ್ರಪಂಚದ ಘೋಷಣೆಯೆ ಆ ಮರದ ಮರ್ಮರಧ್ವನಿಯು. ಮಾನವ ಭಾವಸಂ ವೇಗದಿಂದುಂಟಾದ ಈ ಮರ್ಮರಧ್ವನಿಯು ಬೆಳೆಯುತ್ತ ಬೆಳೆಯುತ್ತ ಅಲ್ಲೋಲಕಲ್ಲೋಲ ವೆದ್ದು ದೇವತೆಗಳ ಬಳಗವೆಲ್ಲ ಕೂಗಿಡುವಂತೆ ಬಿರುಗಾಳಿಯಾಗಿ ಬೀಸುವದು. ಇದು ಆ ಇಗ್ಡ್ರಾಸಿಲ್ ಪ್ರಪಂಚ ವೃಕ್ಷ. ಭೂತ, ಭವಿಷ್ಯ, ವರ್ತಮಾನ; ಮಾಡಿದುದು, ಮಾಡು ತ್ತಲಿರುವದು, ಮಾಡುವದು; ಇದು ಮಾಡು ಧಾತುವಿನ ಅನಂತಕ್ರಿಯಾಮಾಲೆ. ' ಸ್ಕ್ಯಾಂಡಿ ನೇವ್ಹಿಯದ ಪೌರಾಣಿಕವರ್ಣನೆಯಲ್ಲಿ ಇಗ್ಡ್ರಾಸಿಲ್ಲದ ಬೇರುಗಳು ರಸಾತಳದಿಂದ ಬಂದಿ ವೆಯೆಂದು ಬಣ್ಣಿಸಿದುದು ದುರ್ದೈವವೇ ಸೈ ; ಬೊಡ್ಡಿಯ ತುದಿಯೇನೋ ಸ್ವರ್ಗವನ್ನು ವ್ಯಾಪಿಸಿದೆಯೆಂದು ವರ್ಣಿಸಿದುದು ವಿಹಿತವು. ಆದರೆ ಅಮೃತದಿಂದ ಬೇರುಗಳು ಬಂದ ವೆಂದು ವರ್ಣಿಸಿದ್ದರೆ ಒಳಿತಾಗುತ್ತಿತ್ತು. ಈ ಮಾತಿನಲ್ಲಿ ಉಪನಿಷತ್ತು, ಭಗವದ್ಗೀತೆ ಇವೆ ರಡೂ ಸ್ಕ್ಯಾಂಡಿನೇವ್ಹಿಯಾದ ಪುರಾಣಗಳಿಗಿಂತ ಮೇಲಾಗಿವೆ.

**೧೨. ಛಾಂದೋಗ್ಯದೊಳಗಿನ ಕೃಷ್ಣನೂ ಭಗವದ್ಗೀತೆಯೊಳಗಿನ ಕೃಷ್ಣನೂ**— ಇನ್ನು ಉಪನಿಷತ್ತು ಮತ್ತು ಭಗವದ್ಗೀತೆಗಳ ಅರ್ವಾಚೀನ ಭಾಷ್ಯಕಾರ ರಲ್ಲಿ ಕೆಲವರು ಒಂದು ಮಾತಿನ ಬಗ್ಗೆ ಸುಮ್ಮನೆ ಹುಡಿಯೆಬ್ಬಿಸಿ 'ಅಯ್ಯೋ, ಏನೂ ಕಾಣ ದಾಯಿತಲ್ಲ ! ' ಎಂದು ಗೋಳಾಡುತ್ತಿರುವರಾದ್ದರಿಂದ ಅದನ್ನಷ್ಟು ನಾವು ವಿಮರ್ಶಿಸದೆ

ಮುಂದೆ ಸಾಗಬಾರದಾಗಿದೆಯಷ್ಟೆ. ಛಾಂದೋಗ್ಯದಲ್ಲಿ ದೇವಕಿಯ ಮಗನಾದ ಒಬ್ಬ ಕೃಷ್ಣನ ಹೆಸರು ಬಂದಿದೆ. ಆಯಿತು, ಮಹಾಭಾರತದ ದಿವ್ಯ ಕಥಾನಾಯಕನಾದ ಕೃಷ್ಣನೆ ಇವನೆಂದು ಅಸಿಮೀಸಿ ನೋಡದೆ ಇವರು ಹಗುರಾಗಿ ಚಾಚಿ ಬಿಡುವರು. ಇದೆಷ್ಟು ಜೊಳ್ಳುಪೊಳ್ಳಾಗಿದೆ ಎಂಬವನ್ನು ನೋಡುವ. ಮೊದಲು ಇವನ ಹೆಸರು ಬಂದಲ್ಲಿಯ ವಚನದ ಅರ್ಥವಾವರೂ ಏನೆಂಬುದನ್ನು ನಿರ್ಧರಿಸುವ. ಛಾಂದೋಗ್ಯದಲ್ಲಿ ಮನುಷ್ಯನನ್ನು ಯಜಮಾನನಿಗೆ ಹೋಲಿಸಿ, ಮಾನವನ ಜೀವನವು ದೀಕ್ಷಿತನಾದ ಯಜಮಾನನ ಆಚರಣೆಗೆ ಸಮಾನವಿರುವದೆಂದು ತೋರಿಸಿದ್ದಾಗಿದೆ. ಅದು ಹೇಗೆ ? ಯಜ್ಞಸಂಕಲ್ಪಮಾಡಿದ ಮೇಲೆ, ದೀಕ್ಷೆಹೊಂದುವ ಪೂರ್ವದಲ್ಲಿ, ಇವನು ಉಣ್ಣಲು, ಕುಡಿಯಲು, ಭೋಗಿಸಲು ಬಾರದೆಂದು ಕಟ್ಟುಮಾಡಿರುತ್ತಾರೆ, ಇದು ಮೊದಲನೆಯ ಸಮಾನತೆ. ಇದು ಅವನ ದೀಕ್ಷೆ. ' ಉಪಸದ ' ಎಂಬ ವಿಧಿಗಳಲ್ಲಿ ಇವನಿಗೆ ಉಣ್ಣಗೊಡುವರು, ಕುಡಿಯಗೊಡುವರು, ಭೋಗಿಸಗೊಡುವರು, ಇದು ಎರಡನೆಯದು. ದೀಕ್ಷಿತನಿರುವಾಗಲೂ ನಗುವದಾಗಲಿ, ಉಣ್ಣುವದಾಗಲಿ, ಸಂಭೋಗಿಸುವುದೂ ಆಗಲಿ ' ಸ್ತುತಶಸ್ತ್ರ ' ಎಂಬ ಸೂಕ್ತಗಳನ್ನು ಹಾಡಿ ಹಾಗೆ ಮಾಡಲು ಬರುವುದೆಂದು ಹೇಳಿದೆ, ಇದು ಮೂರನೆಯದು. ತನ್ನ ಯಜ್ಞವನ್ನು ಮಾಡಿಸುತ್ತಿರುವವರಿಗಾಗಿ ಅಧ್ವರ್ಯುಗಳಿಗೆ ದಕ್ಷಿಣೆಕಾಣಿಕೆಗಳನ್ನು ಕೊಡಬೇಕಾಗುವದು, ಇದು ನಾಲ್ಕನೆಯದು. ಪುನರ್ಜನ್ಮಸೂಚಕವಾಗಿ ಅವನು ಸೋಮವನ್ನು ಆಹುತಿಯೆಂದು ಸುರುಹುವನು, ಇದು ಐದನೆಯದು. ಕಟ್ಟಕಡೆಗೆ ಅವಭೃತಸ್ನಾನಾಂತರ ಯಜ್ಞವು ಸಾಂಗವಾಗಿ ಸಮಾಪ್ತವಾಗುವುದು. ಇದಾಯಿತು ದೀಕ್ಷಿತನಾದ ಯಜಮಾನನ ಜೀವನಕ್ರಮವು. ದೇವಕೀಪುತ್ರ ಕೃಷ್ಣನ ಗುರುವಾದ ಘೋರಆಂಗಿರಸನು ಮಾನವನ ಜೀವನಕ್ರಮಕ್ಕೂ ಯಜಮಾನನ ಜೀವನಕ್ರಮಕ್ಕೂ ಹೋಲಿಸಿ ಹೀಗೆ ಹೇಳಿದ್ದಾನೆ: ' ಮೊಟ್ಟಮೊದಲು ಜಿಜ್ಞಾಸುಸ್ಥಿತಿಯಲ್ಲಿ ಮನುಷ್ಯನೂ ಉಣ್ಣದೆ, ಕುಡಿಯದೆ, ಸಂಭೋಗಿಸದೆ, ಕಟ್ಟಿನಲ್ಲಿರಬೇಕಾಗುವದು. ಎರಡನೆಯ ಸ್ಥಿತಿಯಲ್ಲಿ ಅವನು ಉಣ್ಣಬಹುದು, ಕುಡಿಯಬಹುದು, ಆಡಬಹುದು. ಸ್ವಲ್ಪ ಹಿರಿಯನಾದಮೇಲೆ ಮೂರನೆಯ ಸ್ಥಿತಿಯಲ್ಲಿ ಅವನು ನಗಬಹುದು, ಕುಡಿಯಬಹುದು, ಸಂಭೋಗಿಸಬಹುದು. ನಾಲ್ಕನೆಯ ಸ್ಥಿತಿಯಲ್ಲಿ ಅವನು ತನ್ನ ಶುದ್ಧಜೀವನಕ್ಕಾಗಿ ತಪ, ದಾನ, ಆರ್ಜವ, ಅಹಿಂಸೆ, ಸತ್ಯವಚನ ಈ ವ್ರತಗಳ ಆಚರಣೆಯೆಂಬ ದಕ್ಷಿಣೆಯನ್ನು ಕೊಡಲು ಬೇಕು. ಐದನೆಯ ಅವಸ್ಥೆಯಲ್ಲಿ ಅವನಿಗೆ ಸಂತತಿಯಾಯಿತೆಂದರೆ ಅವನು ಪುನರ್ಜನ್ಮಹೊಂದಿದಂತಾಯಿತು. ಕೊನೆಯ ಅವಸ್ಥೆಯಲ್ಲಿ ಮರಣಾಸನ್ನನಾದನೆಂದರೆ ಜೀವಿತವೆಂಬ ನಾಟಕದ ಹಿರಿತೆರೆಯಃ ಇಳಿದು ಜೀವನದ ಉಪಸಂಹಾರವಾಗುವದು. ಇಂಥ ಆಸನ್ನಮರಣಾವಸ್ಥೆಯಲ್ಲಿ, ' ನೀನು ಅಕ್ಷಿ

ತನಿರುವಿ, ಅವಿನಾಶಿಯಿರುವಿ, ನೀನು ಅಚ್ಯುತನಿರುವಿ, ನೀನು ಪ್ರಾಣಸಂಶಿತನಿರುವಿ, ಪ್ರಾಣದ ಪ್ರತ್ಯಕ್ಷ ಮೊನೆ ಇರುವಿ ' ( ಛಾಂ, ಅ ೩, ಖಂ ೧೭, ಮಂ ೧-೬) ಎಂದು ಚಿಂತಿಸಬೇಕು. ಈ ಜ್ಞಾನದಿಂದ ದೇವಕಿಯ ಮಗನಾದ ಕೃಷ್ಣನ ಅರಿವಿನ ನೀರಡಿಕೆಯು ಹಿಂಗಿತಂತೆ. ಈ ವಚನವನ್ನು ಆಧಾರವಾಗಿಟ್ಟುಕೊಂಡು ಎಷ್ಟೋ ಅರ್ವಾಚೀನ ಲೇಖಕರು ವಿವಾದಿಸುವದೇನೆಂದರೆ, ಮಹಾಭಾರತದ ನಾಯಕನಾದ ವಸುದೇವನ ಮಗ ಕೃಷ್ಣನೂ ಛಾಂದೋಗ್ಯದೊಳಗಿನ ದೇವಕಿಯ ಮಗ ಕೃಷ್ಣನೂ ಒಂದೇ, ಇತಿಸಿದ್ಧಂ. 'ಧರ್ಮ-ನೀತಿಗಳ ವಿಶ್ವಕೋಶ' ದಲ್ಲಿ ಗ್ರಿಯರ್ಸನ್ ಪಂಡಿತನು ಇದೊಂದು ಸರ್ವಸಮ್ಮತ ನಿಃಸಂಶಯ ಸಂಗತಿಯಿದ್ದಂತೆ 'ವಾಸುದೇವ ಕೃಷ್ಣನು ಹೊಸ ಏಕೇಶ್ವರ ಪಂಥದ ಸಂಸ್ಥಾಪಕನಾಗಿದ್ದು ಇವನ ಗುರುವಾದ ಘೋರಆಂಗಿರಸನು ಇವನಿಗೆ ಜ್ಞಾನತೃಷ್ಣೆ ಆರುವಂತೆ ವಿದ್ಯೆಗಲಿಸಿದನು ' ಎಂದು ಜಡಿದು ವಿಧಾನಮಾಡಿ ಬಿಟ್ಟಿರುವನು. ಇಂಥ ಪ್ರಮಾಣವಿರಹಿತ ಖಂಡತುಂಡು ಮಾತುಗಳಿಗೆ ಏನನ್ನಬೇಕೋ ತಿಳಿಯದು. ಘೋರಆಂಗಿರಸನ ಶಿಷ್ಯನಾದ ಕೃಷ್ಣನು ದೇವಕಿಯ ಮಗನೆಂದು ಉಲ್ಲೇಖಿಸಲ್ಪಟ್ಟ ಮಾತ್ರಕ್ಕೆ ಅವನು ಮಹಾಭಾರತದೊಳಗಿನ ವಾಸುದೇವ ಕೃಷ್ಣನು ಹೇಗಾಗುವನೋ ? ಮಹಾಭಾರತದಲ್ಲಿ ಕೃಷ್ಣನ ಈ ಗುರುವಿನ ಸುದ್ದಿಯಿಲ್ಲ. ಮಹಾಭಾರತವು ಇಂಥ ಮಹತ್ವದ ಸುದ್ದಿಯನ್ನು ಬಿಟ್ಟೀತೇ ? ಬರಿ ನಾಮಸಾದೃಶ್ಯದಿಂದ ಛಾಂದೋಗ್ಯದ ಕೃಷ್ಣನಿಗೂ ಮಹಾಭಾರತದ ಕೃಷ್ಣನಿಗೂ ಗಂಟುಹಾಕುವದಾದರೆ, ಐತರೇಯಬ್ರಾಹ್ಮಣದೊಳಗಿನ ನೂರು ಹೆಂಡರುಳ್ಳ ಹರಿಶ್ಚಂದ್ರನೂ ಪುರಾಣದೊಳಗಿನ ಏಕಪತ್ನಿಯಾದ ಹರಿಶ್ಚಂದ್ರನೂ ಒಂದೇಯೆಂದೇಕೆ ಕಟ್ಟಿಬಿಡಬಾರದು ? ಬರಿ ನಾಮಸಾದೃಶ್ಯದಿಂದ ಏನೂ ಸಿದ್ಧವಾಗದು. ವೇದದೊಳಗಿನ ವಿಷ್ಣುದೇವತೆ, ವಿಶ್ವದೇವತೆಯಾದ ನಾರಯಣ, ಘೋರಆಂಗಿರಸನ ಶಿಷ್ಯನಾದ ಕೃಷ್ಣ, ಸಾತ್ವತ ಧರ್ಮದ ಏಕಾಂತಿಕ ಮತಸ್ಥಾಪಕನಾದ ವಾಸುದೇವ, ಇವರೆಲ್ಲರ ಒಂದೇ ಗಂಟನ್ನು ಸ್ವಕಪೋಲಕಲ್ಪಿತ ಸಾದೃಶ್ಯಗಳಿಂದ ಕಟ್ಟಿ ಭಗವದ್ಗೀತೆಯ ಉಪದೇಶದ ಉಗಮವು ಘೋರಆಂಗಿರಸನ ಉಪದೇಶದಲ್ಲಿದೆ ಎಂದು ಸಿದ್ಧಪಡಿಸಲೆತ್ನಿಸುವದನ್ನು ನೋಡಿದರೆ ಈ ಹೊಸ ಮಹಾನ್ ಮಹಾನ್ ಪಂಡಿತರು ಕೆಲ ಹಳೆಯ ದಡ್ಡ ಬ್ರಾಹ್ಮಣರಂತೆ ಇದೇನು ನಡೆಸಿರುವರೆಂದು ವಿಸ್ಮಯವಾಗುವದು ! ಇನ್ನು ಭಗವದ್ಗೀತೆಯ ೧೬ನೆಯ ಅಧ್ಯಾಯದ ಮೊದಲಿನೆರಡು ಶ್ಲೋಕಗಳಲ್ಲಿ ಹೇಳಿದ ಗುಣಾವಲಿಗೂ ಈ ವಚನದಲ್ಲಿ ಹೇಳಿದ ತಪ, ದಾನ, ಆರ್ಜವ, ಅಹಿಂಸೆ, ಸತ್ಯವಚನ, ಎಂಬ ಗುಣಾವಲಿಗೂ ಕೂಡುವದರಿಂದ ಇಬ್ಬರೂ ಕೃಷ್ಣರು ಒಂದೇ ಎಂದೆನ್ನುವ ಮಾತಿನಲ್ಲಿ ಏನೋ ಸ್ವಲ್ಪ ಸಾಮಂಜಸ್ಯವಿದೆಯೆನ್ನುವ. ಆದರೆ ಇದರಿಂದಾದರೂ ಸಿದ್ಧವಾಗುವದೇನು ? ಉಪನಿಷತ್ತಿನೊಳಗಿನ ಎಷ್ಟೋ ಪದಗಳನ್ನೂ

ವಾಕ್ಯಗಳನ್ನೂ ವಿಚಾರಗಳನ್ನೂ ಇದ್ದಕ್ಕಿದ್ದಂತೆ ಭಗವದ್ಗೀತೆಯು ಎತ್ತಿಕೊಂಡು ತನ್ನ ಹುಟ್ಟನ್ನು ಕಟ್ಟಿರುವುದೆಂದು ಮೊದಲೆ ತೋರಿಸಿರುವೆವಾದ್ದರಿಂದ ಈ ಪ್ರಮಾಣಕ್ಕೂ ಮಹತ್ವವಿಲ್ಲ. ಹಡಗುಗಳು ಒಡೆದ ಮೇಲೆ ಸಾಗರಮಧ್ಯದೊಳಗಿಂದ ದೈವವಶಾತ್ ಉಳಿದು ಬಂದ ಅನೇಕ ಭಕ್ತರು ಗ್ರೀಸದೇಶದ ಡೆಲ್ಫಿ ಎಂಬ ಒಡನುಡಿಯುವ ದೇವಸ್ಥಾನದಲ್ಲಿ ತಮ್ಮ ಸಂರಕ್ಷಣೆಯ ಸ್ಮರಣಾರ್ಥ ಹರಕೆ ಕಟ್ಟಿರುವರು. ಅವುಗಳನ್ನು ನೋಡಿ ಒಬ್ಬ ತತ್ವಜ್ಞಾನಿಯು 'ಇದೆಲ್ಲ ಆಯಿತು! ಮುಳುಗಿದವರ ಲೆಕ್ಕವೆಲ್ಲಿದೆ?' ಎಂದು ಕೇಳಿದನಂತೆ! ಹಾಗೆ ಆ ಗುಣಾವಲಿ ಈ ಗುಣಾವಲಿ ಎಷ್ಟೋ ಮಟ್ಟಿಗೆ ಒಂದು ಆಗಿದೆ, ಇಂತು ಮುಂತಾದ ಮಾತುಗಳಿರಲಿ; ಮರಣಕಾಲಕ್ಕೆ 'ನೀನು ಅಕ್ಷಿತನಾಗಿರುವಿ; ಅವಿನಾಶಿಯಿರುವಿ; ನೀನು ಚ್ಯುತಿ ಹೊಂದದವನಿರುವಿ; ನೀನು ಪ್ರಾಣಸಂಶಿತನಿರುವಿ' ಎಂದು ಚಿಂತಿಸಬೇಕೆಂದು ಹೇಳಿದ ಘೋರಆಂಗಿರಸನ ಮುಖ್ಯ ಮಂತ್ರೋಪದೇಶವೆ ಭಗವದ್ಗೀತೆಯಲ್ಲಿ ಸಂಗ್ರಹೀತವಾಗಿಲ್ಲವಲ್ಲ! ಅದರ ಗತಿಯೇನು, ಎಂದು ನಾವೂ ಕೇಳಬಹುದು. ಅಕ್ಷಿತ, ಅಚ್ಯುತ, ಪ್ರಾಣಸಂಶಿತ ಎಂಬ ಪದಗಳ ಯೋಗ್ಯ ಉಪಯೋಗವಾದರೂ ಭಗವದ್ಗೀತೆಯಲ್ಲಿರಬಾರದೆ? ಕಡೆಗಾಲಕ್ಕೆ ಓಂ ಎಂದು ದೇವರನ್ನು ನೆನೆಯಬೇಕೆಂದಿಷ್ಟೇ ಭಗವದ್ಗೀತೆಯು ಏಕೆ ಹೇಳುವನು? ಇಷ್ಟಾಗಿ 'ಹಾಗಿಲ್ಲ, ನಮ್ಮದು ನಿಜವಿದೆ' ಎಂದರೆ 'ಸ್ವಾಮೀ ಸಿದ್ಧ ಮಾಡಿ ತೋರಿಸುವ ಭಾರವು ತಮ್ಮದು. ಈಗಿನವರೆಗೆ ಮುಂದೆ ತಂದ ಪ್ರಮಾಣಗಳಲ್ಲೇನೂ ಹುರುಳಿಲ್ಲ. ಇಷ್ಟು ನಿಜ' ಎಂದು ನಾವು ಹೇಳುವೆವು.

**೧೩. ಉಪನಿಷತ್ತುಗಳೂ ವೇದಾಂತ ಮಾರ್ಗಗಳೂ** — ಉಪನಿಷತ್ತು ಮತ್ತು ಭವದ್ಗೀತೆಯ ಸಂಬಂಧದಷ್ಟೆ ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳ ಸಂಭಂಧವು ಹೃದಯಂಗಮವಾಗಿದೆ. ಉಪನಿಷತ್ತು, ಬ್ರಹ್ಮ ಸೂತ್ರ, ಮತ್ತು ಭಗವದ್ಗೀತೆ ಈ ಪ್ರಸ್ಥಾನತ್ರಯವು ಪ್ರಮಾಣವೆಂದು ಎಲ್ಲ ವೇದಾಂತಮಾರ್ಗಗಳೂ ಒಪ್ಪಿಕೊಂಡಿರುವವಾದ್ದರಿಂದ ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳ ಪರಸ್ಪರ ಸಂಬಂಧವು ಒಂದು ಮಹತ್ವದ ಪ್ರಶ್ನೆಯೆ ಆಗಿದೆ. ಬ್ರಹ್ಮಸೂತ್ರಗಳ ಕರ್ತೃವಾದ ಬಾದರಾಯಣನು ಉಪನಿಷತ್ತುಗಳಿಂದ ತನ್ನ ಸೂತ್ರಗಳನ್ನು ಹೆಣೆಯಲು ಎಷ್ಟೋ ಎಳೆಗಳನ್ನು ಎತ್ತಿಕೊಂಡಿರುವದರಿಂದ ಆ ಸೂತ್ರಗಳನ್ನು ತಿಳಿದುಕೊಳ್ಳುವದಕ್ಕೂ ಅವುಗಳಿಗೆ ಭಾಷ್ಯಬರೆಯುವದಕ್ಕೂ ಉಪನಿಷತ್ತುಗಳಲ್ಲಿ ಮೇಲಿಂದ ಮೇಲೆ ಹಣಿಕಿ ಹಾಕದ ಹೊರ್ತು ಗತಿಯಿಲ್ಲದಾಗುವದು. ಇಷ್ಟು ನಿಕಟ ಸಂಬಂಧವಿದೆ ಅವೆರಡಕ್ಕೂ. ಬ್ರಹ್ಮಸೂತ್ರಗಳಲ್ಲಿ ಅದ್ವೈತವು ಪ್ರತಿಪಾದಿತವಾಗಿದೆಯೋ ಏನು ವಿಶಿಷ್ಟಾದ್ವೈತವೋ ಏನು ದ್ವೈತವೋ ಇದನ್ನು ನಿರ್ಣಯಿಸುವದು ಅದೀಗ ನಮ್ಮ ಕೆಲಸವಲ್ಲ; ಆದರೂ ಮಧ್ವ, ರಾಮಾನುಜ, ಶಂಕರ ಈ ಮೂರು

ವೇದಾಂತಪ್ರವರ್ತಕ ಆಚಾರ್ಯರು ಉಪನಿಷತ್ತುಗಳಿಗೂ ಬ್ರಹ್ಮಸೂತ್ರಗಳಿಗೂ ಅದೇ ಪ್ರಕಾರ ಭಗವದ್ಗೀತೆಗೂ ಭಾಷ್ಯಬರೆದಿದ್ದಾರೆ ಎಂಬುದನ್ನು ನಾವು ಮರೆಯಕೂಡದು. ಶುದ್ಧಾದ್ವೈತ, ದ್ವೈತಾದ್ವೈತ ಮೊದಲಾದ ಬೇರೆ ವೇದಾಂತಭಾಷ್ಯಗಳು ಈ ಮೂರರ ವಿವಿಧ ಸಂಮಿಶ್ರಣದಿಂದುಂಟಾದವುಗಳು. ಆದುದರಿಂದ, ದ್ವೈತ, ವಿಶಿಷ್ಟಾದ್ವೈತ, ಮತ್ತು ಅದ್ವೈತ ಈ ಮತಭೇದಗಳಿಗೆ ಉಪನಿಷತ್ತುಗಳೆಷ್ಟು ಮನ್ನಣೆ ಕೊಡುವವೆಂಬದನ್ನಷ್ಟೆ ಇಲ್ಲಿ ಚರ್ಚಿಸಿದರೆ ಅದರಲ್ಲಿಯೆ ಉಳಿದ ಪ್ರಶ್ನೆಗಳ ಪರಾಮರ್ಶವೂ ಬಂದುಹೋಗುವದು. ಇನ್ನು ಈ ಮೂರು ಮತಗಳ ಚರ್ಚೆಮಾಡುವಾಗ ಕೂಡ ಕೆಲಕೆಲವು ಮೂಲಸಿದ್ಧಾಂತಗಳ ಮಾತು ಬಂದು ಅವುಗಳ ಪ್ರಸ್ತಾಪವನ್ನೆತ್ತುವ ಭಿನ್ನಭಿನ್ನ ರೀತಿಗಳ ಮೂಲಕವಾಗಿಯೆ ಆಯಾ ಮತಗಳಲ್ಲಿಯ ಭೇದಗಳುಂಟಾಗುವವೆಂಬುದು ಕಂಡುಬರುವುದು. ಈ ಮೂರು ಮತಸ್ಥಾಪಕರು ಉತ್ತರಕೊಡಬೇಕಾಗಿಟ್ಟುಕೊಂಡ ಪ್ರಶ್ನೆಗಳೆಂದರೆ, ಈಶ್ವರನ ಸ್ವಭಾವವೇನು? ಅವನು ಬ್ರಹ್ಮನಲ್ಲಿಯೆ ಇರುವನೊ ಅವನಿಂದ ಭಿನ್ನನೋ, ಅವರೀರ್ವರೂ ಏಕರೂಪರೊ? ಬೇರೆ ಮಾತಿನಲ್ಲಿ ಇದನ್ನೆ ಹೇಳುವದಾದರೆ, ಈಶ್ವರನ ಕಲ್ಪನೆಯೂ ತಾತ್ವಿಕ ಬ್ರಹ್ಮನ ಕಲ್ಪನೆಯೂ ಒಂದೆಯೋ ? ಜೀವಾತ್ಮನಿಗೂ ಪರಮಾತ್ಮನಿಗೂ ಸಂಬಂಧವೇನು ? ಈ ಮತಗಳು ಜಗತ್ತು ಸತ್ಯವೆಂದು ಒಪ್ಪುವವೋ ಏನು ಮಿಥ್ಯೆಯೆಂದು, ಮಾಯೆಯೆಂದು ಹೇಳುವವೋ ? ಈ ಮೂರು ಮತಗಳ ಪ್ರಕಾರ ' ಮುಕ್ತಿ ' ಎಂದರೇನು ? ಈಶ್ವರನ ಜಗದ್ಧರಿತತ್ವವನ್ನು ಕುರಿತು, ಅತ್ಯತಿಷ್ಠತ್ವವನ್ನು ಕುರಿತು ಈ ಮತಗಳ ಅಭಿಪ್ರಾಯವಾದರೂ ಏನು? ಬ್ರಹ್ಮದ ವ್ಯಾಖ್ಯೆಯನ್ನು 'ಇತಿ' ಎಂದು ಮಾಡುವವೋ, 'ಇತಿ ನೇತಿ' ಗಳೆರಡರಿಂದಲೂ ಮಾಡುವವೋ ಏನು ಎರಡೂ ಉಪಯೋಗಿಸುವದಿಲ್ಲವೋ ? ಈ ಮತ್ತು ಈ ಬಗೆಯ ಪ್ರಶ್ನೆಗಳಿಗೆ ಕೊಡುವ ಉತ್ತರಗಳ ಭೇದವೆ ಈ ಮತಗಳೊಳಗಿನ ಭೇದವೂ ಆಗಿದೆ. ಈ ಮೂರು ವೇದಾಂತಮಾರ್ಗಗಳು ತಮತಮಗೆ ಹೊಳೆದಂತೆ ಯಾವ್ಯಾವ ಉತ್ತರಗಳನ್ನೀಯುವವೊ ಅದನ್ನಿಷ್ಟು ಇನ್ನು ನೋಡುವ.

**೧೪. ಉಪನಿಷತ್ತುಗಳಲ್ಲಿ ಮಧ್ವಮತವು** – ಆನಂದತೀರ್ಥರಿಂದ ಆರಂಭಿಸಲ್ಪಟ್ಟ ದ್ವೈತ ವೇದಾಂತವು ಜೀವ ಈಶ್ವರರಲ್ಲಿಯ ಆತ್ಯಂತಿಕ ಭೇಧವನ್ನು ಕಠದಲ್ಲಿಯ ( ಕಠ ೧, ವ ೩, ಮಂ ೧ ) ' ತನ್ನ ಕರ್ಮದ ಫಲವನ್ನುಣ್ಣುವವರಿಬ್ಬರು ನಮ್ಮ ಹೃದಯದ ಗುಹೆಯಲ್ಲಿದ್ದಾರೆ; ಅವರು ನೆರಳು ಬಿಸಿಲಿನಂತೆ ಭಿನ್ನರು ಎಂದು ಬ್ರಹ್ಮವಿದರು ಹೇಳುವರು ' ಈ ಬಗೆಯ ವಚನದಿಂದಲೂ ಮುಂದೆ ಮುಂಡಕೋಪನಿಷತ್ತಿನಲ್ಲಿಯ ( ಮುಂ ೩, ಖಂ ೧, ಮಂ ೧ ) ' ಒಂದೇ ಗಿಡದ ಮೇಲೆ ಜೋಡಿಯ ಗೆಳೆಯರಾದ ಎರಡು ಹಕ್ಕಿಗಳಿವೆ; ಅದರಲ್ಲೊಂದು ಪಿಪ್ಪಲದ ಹಣ್ಣಿನ ರುಚಿನೋಡುವದು ಇನ್ನೊಂದು ಅದನ್ನು

ನೋಡುತ್ತಾ ಬರಿ ಸಾಕ್ಷಿಯಾಗಿರುವದು ' ಎಂಬೀ ವಚನದಿಂದಲೂ ಪ್ರಮಾಣಿಸುವು ದುಂಟು. ಕಠದ ವಚನವಲ್ಲಿಯ ತೊಡಕೇನೆಂದರೆ ಪರಮಾತ್ಮನು ಕರ್ಮಫಲವನ್ನು ಭೋಗಿಸುವದು ಹೇಗೆ ? ಜೀವವು ಭೋಗಿಸುವದೆನ್ನಬಹುದು, ಆದರೆ ಪರಮಾತ್ಮನು ಅದನ್ನು ಮೀಕ್ಕಿದವನು, ಮೀರಿದವನು. ಅಂತೆಯೆ ಮುಂಡಕವು ಕರ್ಮಫಲಭೋಗದಿಂದ ಪರಮಾತ್ಮನನ್ನು ಬಿಡಿಸಿ ಆ ಭೋಗವನ್ನು ಜೀವದ ಕೊರಳಿನಲ್ಲಿ ಕಟ್ಟಿತು. ಅದೇನೇ ಇರಲಿ, ಮೇಲಿನ ಎರಡೂ ವಚನಗಳಲ್ಲಿಯೂ ಆತ್ಮವು ಪರಮಾತ್ಮನಿಂದ ತೀರ ಭಿನ್ನವಾಗಿದೆಯೆಂದೂ ಬಹುತರ ಅದು ಅವನನ್ನು ಅವಲಂಬಿಸಿಕೊಂಡಿದೆಯೆಂದೂ ಸ್ಪಷ್ಟವಾಗಿ ಹೇಳಿದೆ ಅದೇ ಪ್ರಕಾರ ಭಗವದ್ಗೀತೆಯಲ್ಲಿಯೂ ' ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ॥ ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ (ಅ ೧೫, ಮಂ ೧೬) ಎಂಬೀ ಶ್ಲೋಕದಲ್ಲಿ ಜೀವ ಪರಮಾತ್ಮರ ಅತ್ಯಂತ ಭೇದವು ಹೇಳಿದೆಯೆಂದು ಮಧ್ವಮತಾನುಯಾಯಿಗಳು ಸಮರ್ಥಿಸುವದುಂಟು. ದೇವರ ದೇವನಾದ ಪುರುಷೋತ್ತಮನೊಬ್ಬನುಂಟೆಂದೂ ಅವನು ಸೃಷ್ಟಿಸ್ಥಿತಿಲಯಕಾರಣನೆಂದೂ ಅವನು ಸಗುಣನೂ ಸಾಕಾರನೂ ಎಂದೂ ಅವನು ಎಲ್ಲ ಜೀವರ ಸ್ವಾಮಿ ಎಂದೂ ಎಲ್ಲ ಜೀವರು ಅವನ ದಾಸರೆಂದೂ ಹೇಳುವ ಮಧ್ವಮತಕ್ಕೆ ಪ್ರಮಾಣವಚನಗಳಾಗಿ ಶ್ವೇತಾಶ್ವತರದಲ್ಲಿ ' ಎಲ್ಲ ಭೂತಜಾತಗಳ ಅಂತರಾತ್ಮನಾಗಿಯೂ ಎಲ್ಲರಲ್ಲಿ ವ್ಯಾಪಿಸಿಯೂ ಎಲ್ಲರಲ್ಲಿ ಗೂಢವಾಗಿಯೂ ಒಬ್ಬ ದೇವನಿದ್ದಾನೆ ' (ಶ್ವೇ, ಅ ೬, ಮಂ ೧೧) ಎಂದೂ ' ಯಾವನಿಗಿಂತ ಹೆಚ್ಚಿನದೇನೇನು ಇಲ್ಲ. ಚಿಕ್ಕದಿಲ್ಲ ದೊಡ್ಡದಿಲ್ಲ, ಅಂಥ ಪುರುಷನೊಬ್ಬನು ಗಿಡದಂತೆ ಸ್ಥಬ್ಧನಾಗಿ ಆಕಾಶದಲ್ಲಿ ನಿಂತುಕೊಂಡಿದ್ದಾನೆ; ಅವನಿಂದಲೆ ಎಲ್ಲವೂ ತುಂಬಿಕೊಂಡಿದೆ ' (ಶ್ವೇ, ಅ ೩, ಮಂ ೯,) ಎಂದೂ ' ಏಕನಾದ ದೇವನು ವಿಶ್ವತಶ್ಚಕ್ಷುವಾಗಿಯೂ ವಿಶ್ವತೋಮುಖನಾಗಿಯೂ ವಿಶ್ವತೋಬಾಹುವಾಗಿಯೂ ವಿಶ್ವತಸ್ಪಾದನಾಗಿಯೂ ಭೂಮಿಯನ್ನೂ ಆಕಾಶವನ್ನೂ ಹುಟ್ಟಿಸಿದನು, ಹಕ್ಕಿಪಕ್ಕಿಗಳನ್ನು ಹುಟ್ಟಿಸಿದನು ' (ಶ್ವೇ, ಅ ೩, ಮಂ ೩) ಎಂದೂ ಮಂತ್ರಗಳಿವೆ. ಇಂತು ಚಿದಚಿತ್ತುಸೃಷ್ಟಿಗೆಲ್ಲ ಅಧೀಶ್ವರನಾದ ಒಬ್ಬ ಪರಮೇಶ್ವರನಿರುವನೆಂಬ ಪ್ರಮೇಯದಿಂದ ಸೃಷ್ಟಿಯ ಬಗ್ಗೆ ಒಂದು ವಾಸ್ತವವಾದವು, ಸೃಷ್ಟಿಯು ಸತ್ಯವು ಎಂಬ ವಾದವು ಉಂಟಾಗುವದು ಸಹಜವಾಗಿದೆ. ' ಎಲ್ಲಿಂದ ಈ ಭೂತಗಳು ಹುಟ್ಟಿಬರುವವೊ ಏತರಿಂದ ಹುಟ್ಟಿದವುಗಳೆಲ್ಲ ಬಾಳುವವೊ ಏತರಲ್ಲಿ ಎಲ್ಲವೂ ಕೂಡಿ ಹೋಗುವವೊ ಅದನ್ನು ಬ್ರಹ್ಮವೆಂದು ತಿಳಿ ' (ತೈ, ವ ೩, ಅನು ೧), ' ಈ ಆತ್ಮನಿಂದ ಮೊಟ್ಟಮೊದಲು ಆಕಾಶವು ಉಂಟಾಯಿತು, ಆಕಾಶದಿಂದ ವಾಯುವು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಅಪ್ಪು ( ನೀರು ), ಅಪ್ಪಿನಿಂದ ಪೃಥ್ವಿಯು,

ಪೃಥಿವಿಯಿಂದ ಔಷಧಿಗಳು, ಔಷಧಿಯಿಂದ ಅನ್ನವು ' ( ತೈ, ವ ೩, ಅ ೧ ) ಈ ಎರಡು ವಚನಗಳು ಆ ಮತದ ಪ್ರತಿಪಾದಕಗಳಾಗಿವೆ. ಸೃಷ್ಟಿಯು ಮಾಯೆಯೆಂದಾಗಲಿ, ಆಭಾಸವೆಂದಾಗಲಿ ಯಾರು ಪ್ರತಿಪಾದಿಸುವರೊ ಅವರಿಗೆ ಈ ವಚನಗಳು ಒಳ್ಳೆ ಕಾಲ್ತೊಡಕುಗಳಾಗಿ ಪರಿಣಮಿಸಿರುವವೆಂದು ನಾವು ಈ ಮೊದಲೆ ಜಗದುತ್ಪತ್ತಿವಿಷಯಕ ಮತಗಳನ್ನು ಚರ್ಚಿಸುವಾಗ ಹೇಳಿದ್ದೇವೆ. ಈ ವಚನಗಳು ಮಧ್ವಮತವನ್ನು ಎತ್ತಿಹಿಡಿಯುವಂತೆ ಮತ್ತೆ ಬೇರೆ ಮತಗಳನ್ನು ಸಮರ್ಥಿಸುವದಿಲ್ಲ. ಇನ್ನೇನು, ಶಂಕರಾಚಾರ್ಯರು ' ಯತೋವಾ ' ' ತಸ್ಮಾದ್ವಾ ' ಎಂಬೀ ಪದಗಳಲ್ಲಿಯ ಪಂಚಮಿಯನ್ನು ಅಧಿಷ್ಠಾನಪಂಚಮಿ ಎಂದೂ ರಾಮಾನುಜಾಚಾರ್ಯರು ಉಪಾದಾನಪಂಚಮಿಯೆಂದೂ ಹೇಳಲು ಯತ್ನಿಸಿರುವರು. ಆದರೆ ಮಧ್ವಾಚಾರ್ಯರು ಮಾತ್ರ ನಿಜವಾಗಿ ಅದನ್ನು ನಿಮಿತ್ತಪಂಚಮಿ ಎಂದು ಹೇಳಿದ್ದಾರೆ. ಇದರಿಂದ ಶಂಕರಾಚಾರ್ಯರ ಮತದಲ್ಲಿ ಸೃಷ್ಟಿಯ ಆಭಾಸಕ್ಕೆ ಅಧಿಷ್ಠಾನಮಾತ್ರವಾಗಿ ಪರಮಾತ್ಮನಿರುವನೆಂದೂ ರಾಮಾನುಜಾಚಾರ್ಯರ ಮತದಲ್ಲಿ ಮಣ್ಣಿನಿಂದ ಮಡಿಕೆಯಾಗುವಂತೆಯೂ, ಬಂಗಾರದಿಂದ ಒಡವೆಗಳಾಗುವಂತೆಯೂ ಪರಮಾತ್ಮವಸ್ತುವಿನಿಂದಲೆ ಸೃಷ್ಟಿಯೆಲ್ಲ ಆಗಿದೆ ಎಂದೂ ಮಧ್ವಾಚಾರ್ಯರ ಮತದಲ್ಲಿ ಪರಮಾತ್ಮನು ಸೃಷ್ಟಿಗೆ ನಿಮಿತ್ತಕಾರಣನೆಂದೂ ವಿಶದವಾಗುತ್ತದೆ. ಛಾಂದೋಗ್ಯದೊಳಗಿನ (ಛಾಂ, ಅ ೨, ಖಂ ೨೦, ಮಂ ೩ ) ' ಯಾವ ದೇವತೆಯನ್ನು ಭಕ್ತನು ತನ್ನ ಜೀವಮಾನದಲ್ಲಿ ಉಪಾಸಿಸಿರುವನೊ ಆ ದೇವತೆಯ ಕೂಡ ಸಲೋಕತೆ, ಸಾರ್ಷ್ಟಿತೆ, ಸಾಮುಜ್ಯತೆಯನ್ನು ಪಡೆಯುವನು ' ಎಂಬ ಮುಂತಾದ ವಚನಗಳಿಂದ, ಜೀವಾತ್ಮನು ಪರಮಾತ್ಮನಲ್ಲಿ ಲಯಹೊಂದದೆ ಅವನು ಸಲೋಕತೆ ಸರೂಪತೆಗಳನ್ನು ಪಡೆಯುವನು ಎಂಬ ಮಧ್ವಮತದ ಮುಕ್ತಿಯ ಕಲ್ಪನೆಗೆ ಬೆಂಬಲವು ದೊರೆಯುವದು. ಈ ಪ್ರತಿಪಾದನವು ಉಪಾಸ್ಯದೈವತ ಮತ್ತು ಉಪಾಸಕ ಇವರೀರ್ವರು ಕೊನೆಗೆ ಎಲ್ಲಕ್ಕೂ ಹೆಚ್ಚಿನ ಮುಕ್ತಿಯನ್ನು ಪಡೆಯುವರು ಎಂಬ ' ಕರ್ಮಮುಕ್ತಿ ' ಯ ತತ್ವಪದ್ಧತಿಯಂತೆ ಇರುವದು.

**೧೫. ರಾಮಾನುಜಾಚಾರ್ಯರ ತ್ರಿವಿಧ ಬ್ರಹ್ಮವು**—ಜೀವಾತ್ಮಗಳು ಪರಮಾತ್ಮನಿಂದ ಪೂರ್ಣ ಭಿನ್ನವಿರುವವು, ಈ ಸೃಷ್ಟಿಯು ಸತ್ಯವಿರುವದು, ಮತ್ತು ಜೀವಾತ್ಮನು ಪರಮಾತ್ಮನಲ್ಲಿ ಎಂದೂ ಲಯಹೊಂದನು ಎಂಬ ಮೂರು ಪ್ರಮೇಯಗಳು ಮಧ್ವಾಚಾರ್ಯರಿಗೂ ರಾಮಾನುಜಾಚಾರ್ಯರಿಗೂ ಸಾಮಾನ್ಯವಾದವುಗಳು. ಆದರೆ ಜೀವ, ಜಗತ್ತು, ಈಶ್ವರ ಈ ಮೂರು ಒಂದು ವಿಧದ ತಾತ್ವಿಕ ಐಕ್ಯದಿಂದ ಪರಮಾತ್ಮನಲ್ಲಿರುವವು ಎಂಬ ತ್ರೈತಾದ್ವೈತ ತತ್ವವನ್ನು ರಾಮಾನುಜಾಚಾರ್ಯರು ಪ್ರತಿಪಾದಿಸುವದರಿಂದ ಅವರ ಮತವು ಮಧ್ವಾಚಾರ್ಯರಿಂದ ಭಿನ್ನವೆಂಬದು ಸ್ಪಷ್ಟವಿದೆ. ಜೀವ, ಜಗತ್ತು, ಈಶ್ವರ, ಈ

ಮೂರು ಕಾಲುಗಳ ಮೇಲೆ ನಿಂತದ್ದೆ ತ್ರಿವಿಧಬ್ರಹ್ಮವು, ಪರಮಾತ್ಮವು ಎಂದು ರಾಮಾನುಜ ತತ್ವದಲ್ಲಿ ಪ್ರತಿಪಾದನೆ ಇರುವದು. ಜೀವೇಶ್ವರ ಸಂಬಂಧದ ಬಗ್ಗೆಯೂ ಈ ಎರಡು ಮತಗಳಲ್ಲಿ ಸ್ವಲ್ಪಭೇದವಿದೆ. ಅನೇಕ ಜೀವಗಳಿವೆ ಮತ್ತು ಅವು ಭಿನ್ನವಿವೆ ಎಂದು ಒಪ್ಪಿದರೂ ಜೀವವು ತತ್ವತಃ ಪರಮಾತ್ಮನ ಗುಣಗಳಿಂದಲೆ ಯುಕ್ತವಿರುವದು ಎಂದು ರಾಮಾನುಜೀಯರ ಮತವಿರುವದು. ಈ ಬಗೆಯ ತತ್ವಗಳಿಗೆ ಶ್ವೇತಾಶ್ವತರದ ( ಶ್ವೇ, ಅ ೧, ಮಂ ೯ ) ' ಮೂರು ಅನಾದಿ ತತ್ವಗಳಿರುವವು. ಅಜ್ಞನೂ ಅನೀಶನೂ ಆದ ಆತ್ಮನು, ಜ್ಞಾನಿಯೂ ಈಶನೂ ಆದ ಪರಮಾತ್ಮನು, ಭೋಕ್ತೃವಿಗೆ ಭೋಗಕೊಡಲು ಸಮರ್ಥವಿರುವ ಅನಾದಿ ಪ್ರಕೃತಿಯು. ಈ ಮೂರು ಕೂಡಿ ಬ್ರಹ್ಮವು' ಎಂಬ ವಚನದಲ್ಲಿಯೂ ಅದೇ ಉಪನಿಷತ್ತಿನ ( ಶ್ವೇ, ಅ ೧, ಮಂ ೧೨ ) ' ಭೋಕ್ತಾ, ಭೋಗ್ಯ ಮತ್ತು ಪ್ರೇರಿತಾ ಎಂಬ ತ್ರಿವಿಧ ಬ್ರಹ್ಮವನ್ನು ತಿಳಿದವನು ಎಲ್ಲವನ್ನೂ ತಿಳಿದುಕೊಂಡಂತಾಯಿತು, ಆತ್ಮಸಂಸ್ಥವಾದ ಈ ತತ್ವವನ್ನೆ ತಿಳಿಯುತಕ್ಕದ್ದು, ಅಂದರೆ ಅರಿವಿನ ಮೇರೆ ಮುಟ್ಟಿದಂತಾಯಿತು ' ಎಂಬ ವಚನದಲ್ಲಿಯೂ ಆಧಾರಗಳಿರುವವು. ಈ ಬಗೆಯಾಗಿ ರಾಮಾನುಜೀಯರ ಬ್ರಹ್ಮನ ಕಲ್ಪನೆಯು ಜೀವ, ಜಗತ್ತು, ಈಶ್ವರ ಎಂಬ ತ್ರಿವಿಧ ತತ್ವಗಳಿಂದ ಕೂಡಿರುವದು. ಇಲ್ಲಿ ನಿಜವಾಗಿ ಈಶ್ವರನೆ ಬ್ರಹ್ಮನು. ಆದರೆ ಉಪಾಸನಾದೃಷ್ಟಿಯಿಂದ ಅವನು ಈಶ್ವರನು, ತತ್ವಜ್ಞಾನದ ದೃಷ್ಟಿಯಿಂದ ಅವನೆ ಬ್ರಹ್ಮನು ಎಂದು ನಾವು ಅನ್ನಬೇಕಾಗುವದು. ಹೀಗೆ ನೋಡಲಾಗಿ ಈಶ್ವರನು ಜಗತ್ತಿನ ಆತ್ಮನಿದ್ದಂತೆ ಜೀವಗಳ ಆತ್ಮನೂ ಇರುವನು. ಅವನೆ ಎಲ್ಲರ ಅಂತರ್ಯಾಮಿಯು. ರಾಮಾನುಜಮತದ ಮುಖ್ಯ ತತ್ವಗಳು ಇವೇ. ಇನ್ನು ಉಪನಿಷತ್ತುಗಳಲ್ಲಿ ಇವುಗಳಿಗೆ ಎಷ್ಟರ ಮಟ್ಟಿಗೆ ಆಧಾರವಿದೆ ನೋಡಬೇಕು.

**೧೬. ಬ್ರಹ್ಮನು ವಿಶ್ವಾತ್ಮನು**— ಬ್ರಹ್ಮನು ವಿಶ್ವದ ಆತ್ಮನು ಎಂಬುದು ಹೇಗೆ ? ಇದಕ್ಕೆ ಆಧಾರವೇನು ? ಬೃಹದಾರಣ್ಯಕದಲ್ಲಿ ಒಂದೆಡೆಗೆ ಬ್ರಹ್ಮನು ವಿಶ್ವದ ಅಂತರ್ಯಾಮಿಯು ಎಂಬ ವಚನವಿದೆ. ಬ್ರಹ್ಮನು ವಿಶ್ವಾಂತರದಲ್ಲಿದ್ದು ಅವನ್ನು ನಿಯಮಿಸುವನು ಎಂಬ ಮಂತ್ರವು ಬ್ರಹ್ಮನ ಅಂತರ್ಯಾಮಿತ್ವವನ್ನು ಸ್ಪಷ್ಟವಾಗಿ ಪ್ರತಿಪಾದಿಸುವದು. ಉದ್ದಾಲಕ ಆರುಣಿಗೂ ಯಾಜ್ಞವಲ್ಕ್ಯನಿಗೂ ಆದ ಸಂಭಾಷಣದಲ್ಲಿ ಈ ವಿಷಯವು ಬಂದಿದೆ ಮತ್ತು ರಾಮಾನುಜಾಚಾರ್ಯರು ಅದನ್ನೆ ಆಧಾರವಾಗಿಟ್ಟುಕೊಂಡಿದ್ದಾರೆ. ಉದ್ದಾಲಕ ಆರುಣಿಯು ' ಈ ಲೋಕ ಮತ್ತು ಪರಲೋಕ ಇವು ಯಾವ ಸೂತ್ರದಿಂದ ಧರಿಸಲ್ಪಟ್ಟಿವೆ ? ಈ ಲೋಕ ಮತ್ತು ಪರಲೋಕ ಇವುಗಳ ಸೂತ್ರಧಾರಿಯಾರು, ಒಳಗಿದ್ದು ಇವುಗಳನ್ನು ನಿಯಮಿಸುವವರಾರು ? ' ಎಂಬ ಎರಡು ಪ್ರಶ್ನೆಗಳನ್ನು ಯಾಜ್ಞವಲ್ಕ್ಯನಿಗೆ ಕೇಳಿದನು. ಸೂತ್ರವಾವುದು ಮತ್ತು ಸೂತ್ರಧಾರಿಯಾರು ಎಂಬವೆ ಇಲ್ಲಿ

ಮುಖ್ಯ ಪ್ರಶ್ನೆಗಳು. ವಾಯುವೆ ಆ ಸೂತ್ರವಿರಬಹುದು, ಅದೇ ಈ ಲೋಕಪರಲೋಕಗಳನ್ನು ಮತ್ತು ಅವುಗಳಲ್ಲಿದ್ದ ಎಲ್ಲವನ್ನು ಧಾರಣಮಾಡುವದು ಎಂದು ಹೇಳಿ ಯಾಜ್ಞವಲ್ಕ್ಯನು ಅಂದದ್ದೇನಂದರೆ, ‘ ಒಳಗೆ ಇರುವವನೆ ಅಂತರ್ಯಾಮಿಯು. ಅವನು ಪೃಥ್ವಿಯಲ್ಲಿರುವನು, ಪೃಥ್ವಿಯು ಒಳಗೆ ಇರುವನು. ಪೃಥ್ವಿಗೆ ಈ ಮಾತು ಗೊತ್ತಿಲ್ಲ. ಪೃಥ್ವಿಯು ಅವನ ದೇಹವು. ಅವನೆ ಒಳಗಣಿಂದ ಪೃಥ್ವಿಯನ್ನು ನಿಯಮಿಸುವನು. ಆತನೆ ನಿನ್ನಾತ್ಮನು, ಅಂತರ್ಯಾಮಿಯು, ಅಮೃತನು. ಪೃಥ್ವಿಯಲ್ಲಿದ್ದಂತೆ ಅಪ್ಪುವಿನಲ್ಲಿಯೂ ಇರುವನು. ಒಳಗಿದ್ದು ನಿಯಮಿಸುವನು. ಅವನೆ ನಿನ್ನಾತ್ಮನು, ಅಮೃತನು, ಅಂತರ್ಯಾಮಿಯು. ಅವನೆ ಅಗ್ನಿ, ಅಂತರಿಕ್ಷ, ವಾಯು, ಸ್ವರ್ಗ, ಸೂರ್ಯ, ದಿಕ್ಕು, ಚಂದ್ರ, ಚಿಕ್ಕಿ, ಆಕಾಶ, ಕತ್ತಲೆ, ಬೆಳಕು, ಎಲ್ಲ ಭೂತಗಳು, ಪ್ರಾಣ, ವಾಣಿ, ಕಣ್ಣು, ಕಿವಿ, ಮನಸು, ಚರ್ಮ, ವಿಜ್ಞಾನ ರೇತಸ್ಸು, ಇವೆಲ್ಲವುಗಳಲ್ಲಿಯೂ ಒಳಗೆ ಇರುವನು. ಅವನೆ ಅಂತರ್ಯಾಮಿಯು, ಅವನೆ ನಿನ್ನಾತ್ಮನು, ಅಮೃತನು. ಅವನೆ ತಾನು ಕಾಣದೆ ನೋಡುವವನು, ತಾನು ಕೇಳಿಸದೆ ಕೇಳುವವನು, ತಾನು ಅನ್ಯರ ವಿಚಾರಕ್ಕೆ ಒಳಗಾಗದೆ ಎಲ್ಲವನ್ನು ವಿಚಾರಿಸುವವನು, ತಾನು ಅನ್ಯರಿಗೆ ತಿಳಿಯದೆ ಎಲ್ಲವನ್ನು ತಿಳಿದುಕೊಳ್ಳುವವನು. ಅವನನ್ನುಳಿದು ನೋಡುವವರಿಲ್ಲ, ಕೇಳುವವರಿಲ್ಲ, ವಿಚಾರಿಸುವವರಿಲ್ಲ. ಅವನೆ ನಿನ್ನಾತ್ಮನು, ಅಂತರ್ಯಾಮಿಯು, ಅಮೃತನು. ಅವನನ್ನುಳಿದು ಮಿಕ್ಕದೆಲ್ಲ ಶೂನ್ಯವು ’ ( ಬೃ, ಅ ೩, ಬ್ರಾ ೭ ). ಈ ಬಗೆಯ ಸ್ಪಷ್ಟ ವಚನಗಳಿಂದ ಬ್ರಹ್ಮನ ವಿಶ್ವವ್ಯಾಪಕತ್ವವನ್ನೂ ಅವನ ಅಂತರ್ಯಾಮಿತ್ವವನ್ನೂ ಯಾಜ್ಞವಲ್ಕ್ಯಋಷಿಯು ಸಾರುವನು. ತೈತ್ತಿರೀಯದ ( ತೈ, ವ ೨, ಮಂ ೬ ) ‘ ವಿಶ್ವವನ್ನು ಸೃಜಿಸಿ ಅದನ್ನೆ ಬ್ರಹ್ಮನು ಪ್ರವೇಶಿಸಿದನು. ಪ್ರವೇಶಿಸಿ ಅವನು ಇದು ಅದು ಎರಡೂ ಆದನು. ನಿರುಕ್ತ ಅನಿರುಕ್ತ, ಆಧಾರವಿದ್ದುದು ಆಧಾರವಿಲ್ಲದ್ದು, ವಿಜ್ಞಾನ ಅವಿಜ್ಞಾನ, ಸತ್ಯ ಅನೃತ ಹೀಗೆ ತಾನೆ ಎರಡೂ ಆದನು. ಅವನು ಸತ್ಯನಾದನು. ಆದುದರಿಂದ ಇದಕ್ಕೆಲ್ಲ ಸತ್ಯವೆಂದೆನ್ನುವರು ’ ಎಂಬ ವಚನವೂ ಮೇಲಿನ ಸತ್ಯವನ್ನೆ ಉಸುರುವದು. ಪರಸ್ಪರ ವಿರೋಧಿಯಾದ ದ್ವಂದ್ವಗಳಲ್ಲಿ ಸಹ ಅವನು ವ್ಯಾಪ್ತನು, ಈ ಬಗೆಯಿಂದ ಇರುವದೆಲ್ಲ, ಆದುದೆಲ್ಲ ಸತ್ಯವು ಎಂಬು ಈ ಮಂತ್ರದ ಅರ್ಥವಿರುವದು. ಪರಮಾತ್ಮನಿರ್ಮಿತ ಈ ವಿಶ್ವವೆಲ್ಲ, ಪರಮಾತ್ಮನ ಈ ಹೊದಿಕೆಯೆಲ್ಲ ಪರಮಾತ್ಮವ್ಯಾಪ್ತವು, ಪರಮಾತ್ಮಪ್ರೇರಿತವು. ಅವನೆ ಈ ವಿಶ್ವದ ಆತ್ಮನು, ಅಂತರ್ಯಾಮಿಯು, ಒಳಗಿದ್ದು ನಿಯಮಿಸುವವನು.

**೧೭. ಬ್ರಹ್ಮನು ಜೀವಗಳ ಆತ್ಮನು** – ಬ್ರಹ್ಮನು ವಿಶ್ವಾತ್ಮನು ಎಂದು ಹೇಳಿದ್ದಾಯಿತು. ಇನ್ನು ಬ್ರಹ್ಮನು ಸರ್ವಜೀವಾತ್ಮಗಳ ಅಂತರ್ಯಾಮಿಯು ಎಂಬುದು

ಹೇಗೆ ? ಉಪನಿಷತ್ತುಗಳಲ್ಲಿ ಆಗಾಗ್ಗೆ ಉದಹರಿಸಲ್ಪಡುವ ಒಂದು ರೂಪಕದಿಂದ ಈ ವಿಷಯವನ್ನು ಬೃಹದಾರಣ್ಯಕವು ವಿಶದೀಕರಿಸುವದು. 'ರಥಚಕ್ರದ ತುಂಬಿನಲ್ಲಿಯೂ ಹಳಿಯಲ್ಲಿಯೂ ಗಾಲಿಯ ಅರಿಗಳು ಕೇಂದ್ರೀಭೂತವಾಗಿ ಹಿಡಿಯಲ್ಪಟ್ಟಿರುವಂತೆ ಎಲ್ಲ ಭೂತಗಳು, ದೇವತೆಗಳು, ಲೋಕಗಳು, ಜೀವಾತ್ಮಗಳು ಆ ಪರಮಾತ್ಮನಲ್ಲಿ, ಎಲ್ಲವುಗಳ ಅರಸನಾದ ಆ ಆತ್ಮನಲ್ಲಿ ಕೇಂದ್ರೀಭೂತವಾಗಿರುವವು' (ಬೃ, ಅ ೨, ಬ್ರಾ ೫, ಮಂ ೧೫) ಎಂದು ಬೃಹದಾರಣ್ಯಕವು ಹೇಳುವದು. ಅದೇ ಉಪನಿಷತ್ತು ಇನ್ನೊಂದು ರೂಪಕದಿಂದ ಹೇಳುವುದೇನಂದರೆ, 'ಕಿಚ್ಚಿನಿಂದ ಕಿಡಿಗಳು ಸಿಡಿಯುವಂತೆ ಈ ಆತ್ಮನಿಂದ ಎಲ್ಲ ಪ್ರಾಣಗಳು, ಲೋಕಗಳು, ಭೂತಗಳು, ದೇವತೆಗಳು ಹೊರಬೀಳುವವು. ಆತ್ಮವೆ ಸತ್ಯದ ಸತ್ಯವು ಎಂಬುದೆ ಉಪನಿಷತ್ತು, ಅನುಭಾವಜ್ಞಾನವು. ಪ್ರಾಣ, ಲೋಕ, ಮುಂತಾದವುಗಳು ಸತ್ಯವಾದವುಗಳು, ಆದರೆ ಆತ್ಮನು ಪರಾತ್ಪರ ಸತ್ಯನು' (ಬೃ, ಅ ೨, ಬ್ರಾ ೧, ಮಂ ೨೦). ಪರಮಾತ್ಮನು ಸರ್ವಾತ್ಮನಿರುವನೆಂಬುದು ಇಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದಲ್ಲದೆ ಅವನು ಎಲ್ಲ ಆತ್ಮಗಳ ಆತ್ಮನೆಂದೂ ಸತ್ಯಗಳಲ್ಲಿ ಪರಮಸತ್ಯನೆಂದೂ ಜೀವಜಗತ್ತುಗಳು ಸತ್ಯವಿದ್ದರೂ ಅವೆಲ್ಲವುಗಳಿಗಿಂತ ಆತ್ಮನು ಹೆಚ್ಚಿನ ಸತ್ಯನೆಂದೂ ಪ್ರತಿಪಾದಿಸಲ್ಪಟ್ಟಿರುವದು. ಇದೇ ಮಾತು ಬೃಹದಾರಣ್ಯಕದಲ್ಲಿ ಇನ್ನೊಂದೆಡೆಗೆ (ಬೃ, ಅ ೨, ಬ್ರಾ ೩, ಮಂ ೧–೬) 'ಮೂರ್ತವು ಅಮೂರ್ತವು, ಮರ್ತ್ಯವು ಅಮೃತವು, ಸ್ಥಿರವು ಚರವು, ಇದು ಅದು, ಎಲ್ಲವೂ ಬ್ರಹ್ಮನ ಎರಡು ರೂಪಗಳು. ಇವೆಲ್ಲ ಸತ್ಯದ ಬೇರೆಬೇರೆ ಹೆಸರುಗಳು. ಆತ್ಮನು ಸತ್ಯದ ಸತ್ಯನು, ಪರಾತ್ಪರ ಸತ್ಯನು' ಹೀಗೆ ಬಂದಿರುವುದು. ಈ ಬಗೆಯಾಗಿ ಚರಾಚರ ಸೃಷ್ಟಿಯಲ್ಲಿಯ ವಸ್ತುಗಳೆಲ್ಲ ಬ್ರಹ್ಮಸ್ವರೂಪಗಳೆ. ಚಿದಚಿತ್ತುಗಳ ಆತ್ಮನು ಅವನೆ ಇರುವನು. ಅವನು ಜೀವಗಳನ್ನೂ ಜಗತ್ತನ್ನೂ ತುಂಬಿಕೊಂಡಿದ್ದು ಅಂತರ್ಯಾಮಿಯಾಗಿ ಅವುಗಳನ್ನು ಸದೈವ ನಿಯಮಿಸುತ್ತಿರುವನು.

೧೯. **ರಾಮಾನುಜಾಚಾರ್ಯರ ಮುಕ್ತಿಯ ಕಲ್ಪನೆ—** ಇನ್ನು ಮೇಲಿನ ತತ್ವಜ್ಞಾನಕ್ಕನುಗುಣವಾದ ಮುಕ್ತಿಕಲ್ಪನೆಯಾವುದು ? ಈ ವಿಷಯದಲ್ಲಿ 'ಜ್ಞಾನಿಯಾದ ಭಕ್ತನು ಹೊಂಬಣ್ಣದ ಹೊಳಪುಳ್ಳ ವಿಶ್ವಕರ್ತನನ್ನು, ಸರ್ವೇಶನನ್ನು, ಬ್ರಹ್ಮನಪಿತನನ್ನು, ನೋಡಿದೊಡನೆ ಪಾಪಪುಣ್ಯಗಳ ಬಂಧನದಿಂದ ಮುಕ್ತನಾಗಿ, ಪರಿಶುದ್ಧನಾಗಿ ಪರಮ ಸಾಮ್ಯವನ್ನು ಹೊಂದುವನು' ಎಂಬ ಮುಂಡಕದೊಳಗಿನ (ಮುಂ ೩, ಖಂ ೧, ಮಂ ೩) ವಚನವನ್ನೆ ರಾಮಾನುಜಾಚಾರ್ಯರು ಆಧಾರವಾಗಿಟ್ಟುಕೊಂಡಿರುವರು. ಶಂಕರಾಚಾರ್ಯ ಮಧ್ವಾಚಾರ್ಯರ ಮುಕ್ತಿಯ ಕಲ್ಪನೆಯ ಕೂಡ ಇದು ಎಷ್ಟರಮಟ್ಟಿಗೆ ಹೋಲುತ್ತಿದೆ ಎಂಬುದನ್ನು ಈ ಮೊದಲೆ ಹೋದ ಪ್ರಕರಣದ ಕೊನೆಯಲ್ಲಿ ನಾವು ನೋಡಿ

ದ್ದೇವೆ. ಪರಮಾತ್ಮಲೋಕದಲ್ಲಿ ಪರಮಾತ್ಮನ ಸನ್ನಿಧಾನವನ್ನು ಹೊಂದುವುದೆ ಮಾಧ್ವರ ಮುಕ್ತಿಯು. ಪರಮಾತ್ಮನಿಂದ ಭಿನ್ನವಿದ್ದರೂ ಪರಮಸಾಮ್ಯವನ್ನು ಹೊಂದುವುದೆ ರಾಮಾನುಜೀಯರ ಮುಕ್ತಿಯು. ವ್ಯಕ್ತಿತ್ವದ ಅವಶೇಷವುಳಿಯದಂತೆ ಪರಮಾತ್ಮನಲ್ಲಿ ಒಂದುವುದೆ ಶಂಕರ ಮತಾನುಯಾಯಿಗಳ ಮುಕ್ತಿಯು. ಮುಕ್ತಿಯ ಈ ಕಲ್ಪನೆಗಳು ಆಚಾರ್ಯತ್ರಯರ ತತ್ವಜ್ಞಾನಗಳ ಸ್ವಾಭಾವಿಕ ಪರಿಣತಿಗಳೆ ಇರುವವು. ಒಮ್ಮೆ ಆ ತತ್ವಜ್ಞಾನವನ್ನು ಸ್ವೀಕರಿಸಿದ ಮೇಲೆ ಮುಕ್ತಿಯ ಈ ಕಲ್ಪನೆಗಳನ್ನು ಸ್ವೀಕರಿಸುವದು ಅನಿವಾರ್ಯವು. ಈ ಕಲ್ಪನೆಗಳಲ್ಲಿ ತತ್ವಜ್ಞಾನದೃಷ್ಟ್ಯಾ ಯಾವುದು ಶುದ್ಧವು, ಏನು ಎಂಬುದನ್ನು ಇಲ್ಲಿ ನಾವು ಚರ್ಚಿಸುತ್ತ ಕೂಡುವದಿಲ್ಲ. ಆದರೆ ಉಪನಿಷತ್ತುಗಳಲ್ಲಿಯ ಯಾವ ವಚನಗಳ ಆಧಾರದಿಂದ ಮೂವರೂ ತಮ್ಮ ತಮ್ಮ ಕಲ್ಪನೆಗಳನ್ನು ಪ್ರತಿಪಾದಿಸಿರುವರೆಂಬುದನ್ನು ತೋರಿಸುವದೆ ನಮ್ಮ ಉದ್ದೇಶವಾಗಿತ್ತು. ಇನ್ನೊಂದು ವಿಷಯದಲ್ಲಿ ಮಾಧ್ವರಿಗೂ ರಾಮಾನುಜೀಯರಿಗೂ ಏಕಮತವಿರುವದು ಮತ್ತು ಅವರಿಬ್ಬರಮತವು ಆ ವಿಷಯದಲ್ಲಿ ಶಾಂಕರಮತದಿಂದ ಭಿನ್ನವಿರುವದು. ಮುಂಡಕದಲ್ಲಿ ( ಮುಂ ೩, ಖಂ ೨, ಮಂ ೬ ) 'ವೇದಾಂತದ ಸಂಪೂರ್ಣಜ್ಞಾನವನ್ನು ಪಡೆದು ಸತ್ಯವನ್ನು ಮನಗಂಡು ಸನ್ಯಾಸಯೋಗದಿಂದ ಶುದ್ಧಸತ್ವರಾದ ಯತಿಗಳು ಬ್ರಹ್ಮಲೋಕಕ್ಕೆ ಹೋಗುವರು ಮತ್ತು ಕೊನೆಯ ಕಾಲಕ್ಕೆ ಬ್ರಹ್ಮನಕೂಡ ಅಮೃತಪದವಿಯನ್ನು ಪಡೆಯುವರು' ಎಂಬ ವಚನವಿರುವದು. ಪರಮಾತ್ಮನಲ್ಲಿ ಲಯಹೊಂದದೆ ಜೀವಾತ್ಮಗಳು ಭಿನ್ನವಾಗಿ ಉಳಿಯುವವು ಎಂಬ ಧ್ವನಿಯು ಈ ವಚನದಲ್ಲಿ ಹೊರಡುವದು. ಈ ಬಗೆಯ 'ಕರ್ಮಮುಕ್ತಿಯು' ಅದ್ವೈತ ತತ್ವಜ್ಞಾನಕ್ಕೆ ವಿಸಂಗತವು; ಯಾಕಂದರೆ ಅದ್ವೈತದ ಪ್ರಕಾರ ಜೀವಾತ್ಮನು 'ಜೀವನ್ಮುಕ್ತ' ನಾಗಬಲ್ಲನು. ಈ ಜೀವಮಾನದಲ್ಲಿಯೆ,ಸದೇಹನಿರುವಾಗಲೆ ಜೀವಾತ್ಮನು ಜೀವನ್ಮುಕ್ತನಾಗಲಮ್ಮನು ಎಂದು ಅದ್ವೈತಮತವು ಪ್ರತಿಪಾದಿಸುವದು. ಅಂದಮೇಲೆ ದೇಹಪತನವಾದ ಮೇಲಂತೂ ಜೀವಶಿವರ ಐಕ್ಯವಾಗುವದೆಂದು ಬೇರೆ ಹೇಳಲಿಕ್ಕೆಯೆ ಬೇಡ. ಪರಮಾತ್ಮಸಾಕ್ಷಾತ್ಕಾರವಾಯಿತೆಂದರೆ ಆಯಿತು, ಜೀವನು ಪರಮಾತ್ಮನಲ್ಲಿ ಐಕ್ಯನಾಗುವನು ಎಂದು ಅದ್ವೈತಿಯ ಮತವಿರುವದು. ಆಮೇಲೆ ಅವನಿಗೆ ಯಾವ ಮಹಾದೇವತೆಯ ಸಹಾಯವೂ ಬೇಡ, ತನ್ನೊಡನೆ ಮುಕ್ತಿಗೊಯ್ಯಬೇಕೆಂದು ಅವನು ಯಾವ ದೇವತೆಯ ಆರಾಧನೆಯನ್ನೂ ಮಾಡುವದವಶ್ಯವಿಲ್ಲ.

೧೯. **ಶಂಕರಾದ್ವೈತಮತದ ಅಡಿಗಲ್ಲುಗಳು**— ಶಂಕರಾಚಾರ್ಯರ ತತ್ವಜ್ಞಾನವು ಈ ಬಗೆಯ ಮುಕ್ತಿಯ ಕಲ್ಪನೆಯನ್ನು ಯಾವರೀತಿಯಿಂದ ಮಾಡುವದು ಮತ್ತು ಈ ಕಲ್ಪನೆಗೆ ಮೂಲಾಧಾರಗಳಾದ ಪ್ರಮೇಯಗಳಾವುವು ? ಜೀವನು ಕೊನೆಗೆ ಶಿವನಲ್ಲಿ ಒಂದುವನು ಎಂಬ ಸಿದ್ಧಾಂತವನ್ನು ಈ ಶಂಕರಾದ್ವೈತವು ಯಾವ ಅಡಿಗಲ್ಲಿನ ಮೇಲೆ

ಕಟ್ಟಿರುವದು ? ಮಧ್ವಾಚಾರ್ಯರೂ ರಾಮಾನುಜಾಚಾರ್ಯರೂ ಎತ್ತಿದ ಪ್ರಶ್ನೆಗಳಿಗೆ ಅದ್ವೈತವು ಯಾವ ಉತ್ತರಗಳನ್ನು ಕೊಡುವುದು ? ಈ ಮುಂತಾದ ಪ್ರಶ್ನೆಗಳು ಬಹಳೇ ಮಹತ್ವವುಳ್ಳವುಗಳಿದ್ದರೂ ಅವೆಲ್ಲವುಗಳಿಗೆ ಇಲ್ಲಿ ಸಂಪೂರ್ಣ ಉತ್ತರಕೊಡುವದು ಅಸಾಧ್ಯವು. ಈ ಎಲ್ಲ ಪ್ರಶ್ನೆಗಳಿಗೆ ಅದ್ವೈತವು ಯಾವ ಬಗೆಯ ಉತ್ತರಗಳನ್ನು ಕೊಡುವದೆಂಬುದನ್ನು ಸ್ವಲ್ಪದರಲ್ಲಿ ಸೂಚಿಸಿ ಉಪನಿಷತ್ತುಗಳ ಆಧಾರದಿಂದಲೆ ಈ ಮತವು ತನ್ನ ಸಿದ್ಧಾಂತವನ್ನು ಹೇಗೆ ಸಮರ್ಥಿಸುವದೆಂಬುವನ್ನು ಮಾತ್ರ ಇಲ್ಲಿ ದಿಗ್ದರ್ಶಿಸುವೆವು. ಪಾರಮಾರ್ಥಿಕ ದೃಷ್ಟಿಯಿಂದ ಜೀವ, ಜಗತ್ತು, ಈಶ್ವರ, ಇವುಗಳೆಲ್ಲ ಕೇವಲ ಆಭಾಸಗಳು, ಆದರೆ ವ್ಯಾವಹಾರಿಕ ದೃಷ್ಟಿಯಿಂದ ಅವೆಲ್ಲವುಗಳಿಗೆ ಅಸ್ತಿತ್ವವಿದೆ ಎಂದು ಹೇಳಿ, ಜರ್ಮನ್ ಧ್ಯೇಯವಾದಿಯಾದ ( idealist ) ಕಾಂಟನಂತೆ, ವ್ಯಾವಹಾರಿಕ ಸತ್ತೆ ಮತ್ತು ಪಾರಮಾರ್ಥಿಕ ಸತ್ತೆ ಎಂಬ ಎರಡು ಭಿನ್ನ ಬಗೆಯ ಸತ್ತೆಯನ್ನು ಶಂಕರಾಚಾರ್ಯರು ಪ್ರತಿಪಾದಿಸುವರು. ವ್ಯಾವಹಾರಿಕ ದೃಷ್ಟಿಯಿಂದ ಜೀವಾತ್ಮಗಳು ಅನೇಕವಿದ್ದು ಪರಮಾತ್ಮನಿಂದ ಭಿನ್ನವಿರುವವು, ನಾನಾವಿಧ ವಿಶ್ವವು ಅಸ್ತಿತ್ವದಲ್ಲಿರುವದು, ಈಶ್ವರನು ಈ ಜಗತ್ತನ್ನು ನಿರ್ಮಿಸುವನು; ಆದರೆ ಪಾರಮಾರ್ಥಿಕ ದೃಷ್ಟಿಯಿಂದ ಕೇವಲ ಪರಮಾತ್ಮನೊಬ್ಬನೆ ಇರುವನು ಮತ್ತು ಜೀವ-ಜಗತ್ತು-ಈಶ್ವರ ಎಂಬ ತ್ರಿಪುಟಿಯು ಆ ಪರಮಾತ್ಮನಲ್ಲಿ ಲಯಹೊಂದಿರುವದು. ಎಲ್ಲೆಡೆಯಲ್ಲಿಯೂ ಆತ್ಮನನ್ನೆ ನೋಡುವವನಿಗೆ ಭೇದವೆಲ್ಲಿಯದುಳಿಯಬೇಕೆಂದು ಅದ್ವೈತಿಯು ಕೇಳುವನು. ಎಲ್ಲ ಭೇದವೂ ಭಿನ್ನಭಾವವೂ ಮಾಯವಾಗಿ ಏಕರಸಮಯ ಆತ್ಮವೊಂದೆ ಪ್ರತೀತವಾಗುವದು ಎಂದು ಅದ್ವೈತಿಯು ಹೇಳುವನು. ' ಭಿನ್ನಭಿನ್ನಮತದವರು ಬೇಕಾದಷ್ಟು ವಾದಿಸುವರು, ಆದರೆ ಅದ್ವೈತಿಯು ವಾದವನ್ನೆ ದಾಟಿ ಮೌನಿಯಾಗಿರುತ್ತಾನೆ ' ಎಂದು ಅದ್ವೈತಿಯು ಅನ್ನುವನು. ಈ ಬಗೆಯಾಗಿ ದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳ ಒಂದುಬಗೆಯ ಸಮನ್ವಯವು ಅದ್ವೈತದಲ್ಲಿ ಕಂಡುಬರುವದು. ಈ ತಮ್ಮ ಮತವನ್ನು ಶಂಕರಾಚಾರ್ಯರು ಉಪನಿಷದ್ವಾಕ್ಯಗಳಿಂದ ಹೇಗೆ ಪುಷ್ಟೀಕರಿಸಿರುವರೆಂಬುದನ್ನು ನೋಡುವ.

**೨೦. ಬ್ರಹ್ಮಸತ್ಯಂ ಜಗನ್ಮಿಥ್ಯಾ**—ವಿಶ್ವವೆಲ್ಲವೊಂದೇ ಇರುವದು, ಒಳಹೊರಗೆ ಎಲ್ಲೆಲ್ಲಿಯೂ ಭೇದವೆಂಬುದಿಲ್ಲ, ಇದೆಲ್ಲ ಬ್ರಹ್ಮವೇ ಇರುವದು, ಇದೇ ಶಂಕರಾದ್ವೈತದ ಮುಖ್ಯ ಸಿದ್ಧಾಂತವು. ' ಇಲ್ಲಿ ನಾನಾತ್ವವನ್ನು ನೋಡುವವನಿಗೆ ಜನ್ಮಮರಣವು ತಪ್ಪದು. ಇದೆಲ್ಲ ಒಂದೇ ಇರುವದೆಂಬುವನ್ನು ತೀಕ್ಷ್ಣಬುದ್ಧಿಯುಳ್ಳವನೆ ತಿಳಿಯಬಲ್ಲನು ' ಎಂದು ಕಠದಲ್ಲಿ ( ಕಠ, ಅ ೨, ವ ೪, ಮಂ ೧೧ ) ವಚನವಿರುವದು. ಬ್ರಹ್ಮನು ಸಮರಸನು, ಅವನ ಯಾವ ಅಂಗದ ಜ್ಞಾನವಾದರೂ ಇಡೀ ಬ್ರಹ್ಮನ ಜ್ಞಾನವಾದಂತೆಯೆ, ಎಂಬ ಬಗ್ಗೆ

ಆರುಣಿಯ ವಚನವು ನೋಡುವಂತಿದೆ. ತಾನು ಜ್ಞಾನಿಯು, ಪಂಡಿತನು ಎಂಬ ಗರ್ವದಿಂದ ಶ್ವೇತಕೇತುವು ಗುರುಗ್ರಹದಿಂದ ಮನೆಗೆ ಬಂದ ಕೂಡಲೆ 'ಯಾವುದನ್ನು ಕೇಳಿದ ಕೂಡಲೆ ಕೇಳದೆ ಇದ್ದುದೆಲ್ಲ ಕೇಳಿಸುವದೊ ಯಾವುದನ್ನು ವಿಚಾರಿಸಿದ ಕೂಡಲೆ ವಿಚಾರಿಸದೆ ಇದ್ದುದೆಲ್ಲ ವಿಚಾರಕ್ಕೆ ಒಳಗಾಗುವದೊ ಯಾವುದನ್ನರಿತ ಕೂಡಲೆ ತಿಳಿಯದಿದ್ದುದೆಲ್ಲ ತಿಳಿಯುವದೊ ಆ ಪರಾತ್ಪರ ಸತ್ಯವನ್ನರಿತಿರುವಿಯೇನು,' ಎಂದು ತಂದೆಯು ಪ್ರಶ್ನೆ ಮಾಡಿದನು. ಶ್ವೇತಕೇತುವು ತೆರೆಮನದಿಂದ ತನ್ನ ಅಜ್ಞಾನವನ್ನು ಒಪ್ಪಿಕೊಂಡು ಶ್ರೇಷ್ಠ ಜ್ಞಾನವನ್ನು ಹೇಳಬೇಕೆಂದು ಬೇಡಿಕೊಂಡನು. ಆಗ ಅವನ ತಂದೆಯಾದ ಆರುಣಿಯು ಅವನಿಗೆ ಹೇಳಿದುದೇನಂದರೆ, 'ಒಂದು ಮಣ್ಣು ಹೆಂಟೆಯ, ಒಂದು ಮೃತ್ಪಿಂಡದ ಜ್ಞಾನವಾಯಿತೆಂದರೆ ಮಣ್ಣಿನ ಎಲ್ಲ ಪದಾರ್ಥಗಳ ಜ್ಞಾನವೂ ಆಗುವದು; ಯಾಕಂದರೆ ಅವೆಲ್ಲ ಬರಿ ಶಬ್ದಗಳು, ವಿಕಾರಗಳು ಮಾತ್ರ, ಕೇವಲ ಹೆಸರುಗಳು, ಮಾತಿನ ಮೊಟ್ಟೆಗಳು; ಮಣ್ಣು ಎಂಬುದೆ ಸತ್ಯವು. ಒಂದು ಲೋಹದ ತುಣುಕಿನ ಜ್ಞಾನವಾಯಿತೆಂದರೆ ಲೋಹಮಯವಾದ ಎಲ್ಲ ವಸ್ತುಗಳ ಜ್ಞಾನವೂ ಆಗುವದು; ಯಾಕಂದರೆ ಅವೆಲ್ಲ ಬರಿ ಶಬ್ದಗಳು, ವಿಕಾರಗಳು ಮಾತ್ರ, ಕೇವಲ ಹೆಸರುಗಳು, ಮಾತಿನ ಮೊಟ್ಟೆಗಳು; ಲೋಹವೆಂಬುದೆ ಸತ್ಯವು. ಒಂದು ಉಗುರುಗತ್ತಿಯ ಜ್ಞಾನವಾಯಿತೆಂದರೆ ಉಕ್ಕಿನ ಎಲ್ಲ ವಸ್ತುಗಳ ಜ್ಞಾನವಾಗುವದು; ಯಾಕಂದರೆ ಅವೆಲ್ಲ ಬರಿ ಶಬ್ದಗಳು, ವಿಕಾರಗಳು ಮಾತ್ರ, ಕೇವಲ ಹೆಸರುಗಳು, ಮಾತಿನ ಮೊಟ್ಟೆಗಳು; ಉಕ್ಕೆಂಬುದೆ ಸತ್ಯವು' (ಛಾಂ ಅ ೬, ಖಂ ೧, ಮಂ ೨–೬). ಈ ಬಗೆಯಾಗಿ ಬ್ರಹ್ಮನ ಯಾವುದೊಂದು ಅಂಗದ ಪೂರ್ಣ ಜ್ಞಾನವಾದರೆ ಸಾಕು; ಯಾಕಂದರೆ ಅದರಿಂದ ಬ್ರಹ್ಮನ ಸಮಗ್ರ ಮತ್ತು ಸಂಶಯರಹಿತ ಜ್ಞಾನವಾಗಲಿಕ್ಕೆ ತಡವಿಲ್ಲ. ಬ್ರಹ್ಮನೆ ಆದಿಸತ್ಯನು, ಅವನು ಸ್ವಯಂಭುವು, ಸ್ವಯಂವೇದ್ಯನು, ಇದ್ದುದೆಲ್ಲ ಬ್ರಹ್ಮವೆ ಇರುವದು, ಎಂಬುದೆ ಈ ವಚನದ ಭಾವಾರ್ಥವಿರುವದು. ಮೈತ್ರೇಯಿ ಯಾಜ್ಞವಲ್ಕ್ಯರ ಸಂಭಾಷಣದಲ್ಲಿ ಈ ವಿಧಾನವನ್ನೆ ಪುಷ್ಟೀಕರಿಸುವ ವಿಚಾರಗಳು ವ್ಯಕ್ತವಾಗಿವೆ. 'ಹೇ ಮೈತ್ರೇಯಿ, ಈ ಬ್ರಹ್ಮಕುಲವು, ಈ ಕ್ಷಾತ್ರಕುಲವು, ಈ ಲೋಕಗಳು, ದೇವತೆಗಳು, ಭೂತಗಳು, ಇದ್ದುದೆಲ್ಲವು ಆತ್ಮವೆ. ಭೇರಿಯನ್ನು ಹೊಡೆಯುವಾಗ ಭೇರಿಯ ಸಪ್ಪಳವನ್ನು ಗ್ರಹಿಸುವದು ಅಸಾಧ್ಯವು; ಆದರೆ ಆ ಭೇರಿಯನ್ನೆ ಇಲ್ಲವೆ ಆ ಭೇರಿ ಹೊಡೆಯುವನನ್ನೆ ಹಿಡಿದರೆ ಆ ಸಪ್ಪಳವನ್ನೆ ಗ್ರಹಿಸಿದಂತಾಗುವದು. ಶಂಖವನ್ನೂದುವಾಗ ಶಂಖಧ್ವನಿಯನ್ನು ಗ್ರಹಿಸುವದು ಅಸಾಧ್ಯವು; ಆದರೆ ಆ ಶಂಖವನ್ನೆ ಇಲ್ಲವೆ ಆ ಶಂಖ ಊದುವವನನ್ನೆ ಹಿಡಿದರೆ ಶಂಖಧ್ವನಿಯನ್ನೆ ಗ್ರಹಿಸಿದಂತಾಗುವದು. ವೀಣೆಯನ್ನು ಬಾರಿಸುವಾಗ ವೀಣಾನಾದವನ್ನು ಗ್ರಹಿಸುವದು ಅಸಾಧ್ಯವು; ಆದರೆ ಆ ವೀಣೆಯನ್ನೆ ಇಲ್ಲವೆ ಅದನ್ನು

ಬಾರಿಸುವವನನ್ನೆ ಹಿಡಿದರೆ ವೀಣಾನಾದವನ್ನೆ ಗ್ರಹಿಸಿದಂತಾಗುವದು (ಬೃ, ಅ ೩, ಬ್ರಾ ೪, ಮಂ ೬-೯). ಇದ್ದಕ್ಕಿದ್ದ ಹಾಗೆ ಈ ಬಾಹ್ಯ ವಿಶ್ವದ ಜ್ಞಾನವಾಗುವದು ಅಸಾಧ್ಯವು; ಆದರೆ ಚಿತ್ತದ ಅಥವಾ ಆತ್ಮನ ಜ್ಞಾನವಾಯಿತೆಂದರೆ ಈ ಎಲ್ಲ ವಿಶ್ವದ ಜ್ಞಾನವು ತನ್ನಿಂದ ತಾನೆ ಆಗುವದು, ಎಂಬ ಅರ್ಥವು ಮೇಲಿನ ವಚನದಲ್ಲಿ ಗರ್ಭಿತವಿರುವದು. ಈ ರೂಪಕದಲ್ಲಿ ಆತ್ಮನೆ ವೀಣೆಯನ್ನು ಬಾರಿಸುವವನು, ಶಂಖವನ್ನೂದುವವನು, ಭೇರಿಯನ್ನು ಹೊಡೆಯುವವನು; ಯಾವ ಸಾಧನದಿಂದ ಆತ್ಮವು ಈ ವಿಶ್ವವನ್ನು ತಿಳಿದುಕೊಳ್ಳುವದೊ ಆ ಚಿತ್ತವೆ ವೀಣೆಯು, ಶಂಖವು, ಭೇರಿಯು; ಈ ವಿಶ್ವವೆ ವೀಣೆಯ ನಾದವು, ಶಂಖದ ಧ್ವನಿಯು, ಭೇರಿಯ ಸಪ್ಪಳವು. ಕ್ರಿಯಾವಂತನಾದ ಆತ್ಮನು ಚಿತ್ತವೆಂಬ ಸಾಧನದಿಂದ ತನ್ನ ಅನಂತ ಕ್ರಿಯೆಗಳನ್ನು ನಡೆಸಿರುವನೆಂಬಂತೆ ಇಲ್ಲಿ ಉಲ್ಲೇಖವಿದೆ. ಅದೇ ಉಪನಿಷತ್ತಿನಲ್ಲಿ ಇನ್ನೊಂದೆಡೆಗೆ ಆತ್ಮನೊರ್ವನೆ ಜ್ಞಾನಿಯು, ಅವನನ್ನು ಅವನೇ ಅರಿಯಬೇಕು, ಇನ್ನಾರೂ ಅರಿಯಲಮ್ಮರು, ಎಂದು ಯಾಜ್ಞವಲ್ಕ್ಯನು ಮೈತ್ರೇಯಿಗೆ ಹೇಳಿರುವನು. 'ದ್ವೈತವಿದ್ದಲ್ಲಿ ಒಬ್ಬರು ಇನ್ನೊಬ್ಬರನ್ನು ಮೂಸಿಸುವರು, ನೋಡುವರು, ಕೇಳುವರು, ಮಾತಾಡಿಸುವರು, ಇನ್ನೊಬ್ಬರನ್ನು ಕುರಿತು ವಿಚಾರ ಮಾಡುವರು; ಆದರೆ ಆತ್ಮನೊರ್ವನೆ ಇರುವಲ್ಲಿ ಯಾರು ಯಾರನ್ನು ಯಾತರಿಂದ ಮೂಸಿಸಬೇಕು, ನೋಡಬೇಕು ಕೇಳಬೇಕು, ಮಾತಾಡಬೇಕು, ವಿಚಾರಿಸಬೇಕು ? ಯಾವನು ಇದನ್ನೆಲ್ಲ ಅರಿಯುವನೊ ಆ ಆತ್ಮನನ್ನು ಯಾವ ಸಾಧನದಿಂದ ಅರಿತುಕೊಳ್ಳಬೇಕು ? ಅವನು ಅನಾದಿ ಜ್ಞಾನಿಯು, ಅವನ ಜ್ಞಾನವು ಯಾತರಿಂದಾಗಬೇಕು ?' (ಬೃ, ಅ ೩, ಬ್ರಾ ೪, ಮಂ ೧೩, ೧೪). ಮೇಲೆ ಮೇಲೆ ನೋಡುವವರಿಗೆ ಯಾಜ್ಞವಲ್ಕ್ಯನು ಈ ಬಗೆಯ ವಿಧಾನಗಳಿಂದ ಒಂದು ಪೊಳ್ಳು ತರ್ಕಜಾಲವನ್ನು ಪಸರಿಸುವಂತೆ ತೋರಿದರೂ ಮುಂದೆ ಜನಕನ ಕೂಡ ಮಾಡುವ ಸಂಭಾಷಣದಲ್ಲಿ ಅವನು ತನ್ನ ಅದ್ವೈತ ತತ್ವವನ್ನು ಬಹಳೇ ವಿಶದವಾಗಿ ಪ್ರತಿಪಾದಿಸಿದುದನ್ನು ನೋಡಬಹುದು. 'ಇಂತಹ ಜ್ಞಾನಿಯು 'ನೋಡುವದಿಲ್ಲ' ಇದರ ಅರ್ಥವು, ನೋಡುವದೆ ಇಲ್ಲವೆಂದಲ್ಲ, ಆದರೆ ನೋಡಿಯೂ ನೋಡುವದಿಲ್ಲ ಎಂದು ಅರ್ಥವು. ಯಾಕೆಂದರೆ ನೋಡುವವನ ದೃಷ್ಟಿಯು ಎಂದಿಗೂ ಲೋಪಹೊಂದುವದಿಲ್ಲ, ಅದು ಅವಿನಾಶಿಯು. ಆತ್ಮನನ್ನುಳಿದು, ಅವನ ಹೊರಗೆ, ಅವನಿಂದ ಭಿನ್ನವಾದುದು, ನೋಡುವಂಥ ವಸ್ತುವೆ ಉಳಿಯುವದಿಲ್ಲ. ಅಂದಮೇಲೆ ಅವನು ಏನು ನೋಡಬೇಕು ? ಅವನು ಮೂಸಿಸುವದಿಲ್ಲ, ರುಚಿನೋಡುವದಿಲ್ಲ, ಮಾತಾಡುವದಿಲ್ಲ, ಕೇಳುವದಿಲ್ಲ, ವಿಚಾರ ಮಾಡುವದಿಲ್ಲ, ಸ್ಪರ್ಶಿಸುವದಿಲ್ಲ, ತಿಳಿದುಕೊಳ್ಳುವದಿಲ್ಲ ಎಂಬ ವಾಕ್ಯಗಳ ಅರ್ಥವನ್ನು ಮೇಲಿನಂತೆಯೆ ಹಚ್ಚಬೇಕು. ಈ ಕ್ರಿಯೆಗಳನ್ನು ಮಾಡಿಯೂ ಮಾಡದಂತಿರುವನವನು. ಯಾಕೆಂದರೆ

ಈ ಅವನ ಶಕ್ತಿಗಳು ನಷ್ಟವಾಗುವದೆ ಇಲ್ಲ. ಅವು ಅವಿನಾಶಿಯಾಗಿರುವವು ' ( ಬೃ. ಅ ೪, ಬ್ರಾ ೩, ಮಂ ೨೩-೩೧ ) ಎಂಬ ವಿವೇಚನೆಯಿಂದ ಯಾಜ್ಞವಲ್ಕ್ಯನು ತನ್ನ ಅದ್ವೈತ ತತ್ವವನ್ನು ಸ್ಪಷ್ಟೀಕರಿಸಿರುವನು. ಈ ಎಲ್ಲ ವಚನಗಳ ಸಾರಾಂಶವೇನಂದರೆ, ಅದ್ವೈತಿಗೆ ಈ ವಿಶ್ವವೆಲ್ಲವು ಆತ್ಮಮಯವು; ಆತ್ಮನನ್ನುಳಿದು ಆತ್ಮನ ಹೊರಗೆ ಯಾವುದೂ ಇಲ್ಲ, ಏನೂ ಇಲ್ಲ; ಆತ್ಮನ ಯಾವುದೊಂದಂಗವನ್ನರಿತರೂ ಇಡೀ ಆತ್ಮವನ್ನರಿತಂತೆಯೆ ಸೈ, ಎಲ್ಲ ಕಾರ್ಯಗಳ ಆದಿಕಾರಣನು ಅವನೇ ಇರುವನು; ಮಿಕ್ಕದ್ದೆಲ್ಲ ಆಭಾಸವು, ತೋರಿಕೆಯು; ಅವನೆ ಪೂರ್ಣ ಜ್ಞಾನಿಯು; ಈ ವ್ಯವಹಾರದಲ್ಲಿ ಸೇರಿದಾಗ ಮಾತ್ರ ಅವನು ನೋಡುವನು, ಕೇಳುವನು, ಆದರೆ ತತ್ವತಃ ಅವನು ನೋಡುವದೂ ಇಲ್ಲ ಕೇಳುವದೂ ಇಲ್ಲ; ಆತ್ಮವು, ಬ್ರಹ್ಮವು ಒಂದೇ ಸತ್ಯವು, ಮಿಕ್ಕದೆಲ್ಲ ಮಿಥ್ಯೆ. ' ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎಂಬುದೆ ಸಿದ್ಧಾಂತವು.

೨೧. **ಪರಬ್ರಹ್ಮದ ಇತಿ-ನೇತಿ ಲಕ್ಷಣವು**—ವೇದಾಂತದಲ್ಲಿ ಪರಬ್ರಹ್ಮದ ಇಷ್ಟೊಂದು ಕೇವಲ ಶುದ್ಧ ಕಲ್ಪನೆಯು ಬೇಕಾಗಿದ್ದರೂ, ಮತಧರ್ಮಕ್ಕಾಗಿಯೂ ಸೃಷ್ಟಿ ಕ್ರಮವನ್ನು ತಿಳಿಮಾಡಿ ಹೇಳುವದರ ಸಲುವಾಗಿಯೂ ಮಾಂಡೂಕ್ಯೋಪನಿಷತ್ತಿನ ರೀತ್ಯಾನುಸಾರವಾಗಿ ಸರ್ವಶಕ್ತನೂ ಸರ್ವಶರಣ್ಯನೂ ಸರ್ವಾಂತರ್ಯಾಮಿಯೂ ಸರ್ವಯೋನಿಯೂ ಆದ ಈಶ್ವರನೊಬ್ಬನನ್ನೂ ಕಲ್ಪಿಸಬೇಕಾಗುವದು. ಇಂಥ ಈಶ್ವರನ ಕಲ್ಪನೆಯನ್ನು ಅದ್ವೈತವು ಅಲ್ಲಗಳೆಯುವದಿಲ್ಲ. ಮೇಲೆ ಹೇಳಿದ ಉದ್ದೇಶಕ್ಕಾಗಿಯೆ ಅದ್ವೈತ ವೇದಾಂತಕ್ಕೂ ಈಶ್ವರನು ಬೇಕು; ಆದರೆ ತತ್ವದೃಷ್ಟಿಯಿಂದ ಪರಬ್ರಹ್ಮಕಲ್ಪನೆಯು ಈಶ್ವರ ಕಲ್ಪನೆಯಕಿಂತ ಮೇಲಿನದೆಂದು ಅದು ತಿಳಿಯುವದು. ಪರಬ್ರಹ್ಮದ ಸಗುಣರೂಪವೆ ಈಶ್ವರ, ಈಶ್ವರನ ನಿರ್ಗುಣರೂಪವೆ ಪರಬ್ರಹ್ಮ, ಎಂದು ಅದ್ವೈತಿಯ ವಾದವು. ಈ ತಾರತಮ್ಯವನ್ನರಿತೇ ಮಾಂಡೂಕ್ಯವು ಪರಬ್ರಹ್ಮವನ್ನು ಈಶ್ವರನಿಂದ ವಿಂಗಡಿಸಿದೆ ಮತ್ತು ಮೊದಲನೆಯದು ಎರಡನೆಯದರಕಿಂತ ಹೆಚ್ಚಿನದೆಂದೂ ಹೇಳಿದೆ. ' ಪರಬ್ರಹ್ಮಕ್ಕೆ ಅಂತಃಪ್ರಜ್ಞೆಯಿಲ್ಲ, ಬಹಿಃಪ್ರಜ್ಞೆಯಿಲ್ಲ, ಉಭಯ ಪ್ರಜ್ಞೆಯೂ ಇಲ್ಲ; ಅದು ಪ್ರಜ್ಞಾನಮಯವೂ ಅಲ್ಲ ; ಪ್ರಜ್ಞವಲ್ಲ ಅಪ್ರಜ್ಞವಲ್ಲ ; ಕಾಣದುದೂ ಅವ್ಯವಹಾರ್ಯವೂ ಹಿಡಿಯಲು ಬರದುದೂ ಲಕ್ಷಣವಿಲ್ಲದುದೂ ಅಚಿಂತ್ಯವೂ ಇಂಥದೆಂದು ತೋರಿಸಲು ಬರದುದೂ ಅದಾಗಿದೆ; ಅದು ಏಕಾತ್ಮಪ್ರತ್ಯಯದ ಸಾರಸರ್ವಸ್ವವಾಗಿದೆ. ಅಲ್ಲಿ ಪ್ರಪಂಚವು ಲಯಹೊಂದುವದು. ಅದು ಶಾಂತವೂ ಶುಭವೂ ಅದ್ವೈತವೂ ಆಗಿದೆ' (ಮಾಂ, ಮಂ ೬-೭). ಮೇಲಿನ ಮಂತ್ರದಲ್ಲಿ ಪರಬ್ರಹ್ಮದ ಇತಿಲಕ್ಷಣಗಳು ತೀರ ಕಡಿಮೆಯೆಂಬುದು ನಿಜ ; ಅದರ ಸಾಮಾನ್ಯ ವರ್ಣನೆಯು ಇಲ್ಲಿ ನೇತಿ ಲಕ್ಷಣಾತ್ಮಕವೆ ಆಗಿದೆ ಎಂಬುದು ಮೇಲೆಯೆ ಕಾಣುವದು. ಅದು

' ಇತಿ ' ಎಂದು ಹೇಳಿ ಅದೇಕಾಲಕ್ಕೆ ಬ್ರಹ್ಮವು ಆ ಇತಿಯನ್ನು ಮಿಕ್ಕಿಲ್ಲ ಎಂದು ಹೇಳು ವುದು ಯಾವ ನಿರುಪಾಧಿಕ ಬ್ರಹ್ಮವಾದಕ್ಕೂ ಶಕ್ಯವಿಲ್ಲ. ಅದೇ ರೀತಿಯಲ್ಲಿ ಎಂಥ ಕೇವ ಲಾದ್ವೈತವಾದದಲ್ಲಿಯೂ ಪರಬ್ರಹ್ಮದ ನೇತಿ ಲಕ್ಷಣವೂ ಒಂದಿಷ್ಟು ಇತಿಲಕ್ಷಣವನ್ನು ಸೂಚಿಸದೆ ಹೋಗಲಾರದು. ಉಪನಿಷತ್ತಿನ ಬ್ರಹ್ಮದ ಗತಿಯಾದರೂ ಇದೇ ಆಗಿದೆ. ಬೃಹದಾರಣ್ಯಕವು ಹೇಳುವುದೇನಂದರೆ, ' ದೊಡ್ಡದಲ್ಲ, ಚಿಕ್ಕದಲ್ಲ ; ಕಿರಿದಲ್ಲ, ಹಿರಿದಲ್ಲ ; ಬೆಳಗುವದಲ್ಲ, ಮಸಕಲ್ಲ, ಕಪ್ಪಲ್ಲ ; ಸಂಗವಿಲ್ಲದುದು ; ರಸವಿಲ್ಲ, ಗಂಧವಿಲ್ಲ, ಕಣ್ಣಿಲ್ಲ, ಕಿವಿಯಿಲ್ಲ, ಮಾತಿಲ್ಲ, ಮನವಿಲ್ಲ, ಪ್ರಾಣವಿಲ್ಲ, ಬಾಯಿಯಿಲ್ಲ ; ಹೊರಗಿನದಲ್ಲ, ಒಳಗಿನ ದಲ್ಲ ; ಅದು ಏನನ್ನೂ ತಿನ್ನದು, ಅದನ್ನೂ ಯಾವದೂ ತಿನ್ನದು ' ( ಬೃ, ಅ ೩, ಬ್ರಾ ೮, ಮಂ ೮ ). ಇದು ಬೃಹದಾರಣ್ಯಕದೊಳಗಿನ ನೇತಿಲಕ್ಷಣಾನ್ವಿತ ಬಣ್ಣನೆಯು. ಮುಂಡ ಕೋಪನಿಷತ್ತಿನಂತೆ ಕಠವೂ ಇತಿನೇತಿಲಕ್ಷಣಗಳನ್ನು ಬೆರಿಸಿ ಬಿಟ್ಟಿದೆ, ' ಶಬ್ದವಿಲ್ಲ, ಸ್ಪರ್ಶ ವಿಲ್ಲ, ರೂಪವಿಲ್ಲ, ರಸವಿಲ್ಲ, ಗಂಧವಿಲ್ಲ ; ವ್ಯಯವಿಲ್ಲ, ಮೊದಲಿಲ್ಲ, ಕೊನೆಯಿಲ್ಲ ; ದೊಡ್ಡ ದಕ್ಕಿಂತ ದೊಡ್ಡದೂ ನಿತ್ಯವೂ ಇದೆ ; ಅದನ್ನು ದೊರಕಿಸಿದವನು ಸಾವಿನಬಾಯಿಗೆ ಬೀಳನು ' ( ಕ, ಅ ೧, ವ ೩, ಮಂ ೧೫ ). ಮುಂಡಕವು ಬ್ರಹ್ಮವನ್ನು ಕುರಿತು ಹೇಳು ವುದೇನಂದರೆ, ' ತೋರಿಸಲೂ ಬರದು, ಹಿಡಿಯಲೂ ಬರದು, ವರ್ಣವಿಲ್ಲ, ಗೋತ್ರವಿಲ್ಲ; ಕಣ್ಣಿಲ್ಲ, ಕಿವಿಯಿಲ್ಲ ; ಕೈಯಿಲ್ಲ, ಕಾಲಿಲ್ಲ ; ಅದು ನಿತ್ಯವೂ ಸರ್ವವ್ಯಾಪಿಯೂ ತೀರ ಸೂಕ್ಷ್ಮವೂ ವ್ಯಯವಿಲ್ಲದುದೂ ಎಲ್ಲದರ ಹುಟ್ಟೂ ಇರುವದು' (ಮುಂ ೧, ಅ ೧, ಮಂ ೬). ಬ್ರಹ್ಮದ ನಕಾರಲಕ್ಷಣಯುಕ್ತ ವರ್ಣನೆಯು ಪ್ರಸಿದ್ಧಸೂತ್ರವಾದ ' ನೇತಿ ನೇತಿ ' ಎಂಬು ದನ್ನೂ ವಿಧ್ಯಾತ್ಮಕವಾಗಿಯೂ ನಿಷೇಧಾತ್ಮಕವಾಗಿಯೂ ಟೀಕಿಸುವರೆಂಬುದನ್ನು ನಾವೀಗಲೆ ತೋರಿಸಿಕೊಡುವೆವು. ಈ ಪದಪ್ರಯೋಗವುಳ್ಳ ಬೃಹದಾರಣ್ಯಕದೊಳಗಿನ ಎಷ್ಟೋ ಮಂತ್ರಗಳ ಅಭಿಪ್ರಾಯದಲ್ಲಿ ಬ್ರಹ್ಮವು ಅವ್ಯಾಖ್ಯೇಯವೆಂದೂ ಲಕ್ಷಣಪರಿಮಿತವಿಲ್ಲ ದ್ದೆಂದೂ ಮಾತ್ರ ಹೇಳಿದ್ದಾಗಿದೆ. ' ಈ ನೇತಿ ನೇತಿ ಆತ್ಮವು ಅಗ್ರಾಹ್ಯವು, ಯಾಕಂದರೆ ಹಿಡಿಯಲು ಬರದು ; ಅಶೀರ್ಯವು ಯಾಕಂದರೆ ನಾಶಗೊಳಿಸಲು ಬರದು ; ಅಸಂಗವು ಯಾಕಂದರೆ ಯಾತಕ್ಕೂ ಅಂಟಿಕೊಂಡಿಲ್ಲ, ಬದ್ಧವಿಲ್ಲ, ಚಡಪಡಿಸುವದಿಲ್ಲ, ಗಾಯವಡೆ ಯದು........ ಕೇವಲ ಅಮರವು, ಹೀಗೆ ಮೈತ್ರೇಯಿಗೆ ಹೇಳಿ ಯಾಜ್ಞವಲ್ಕ್ಯನು ಚತು ರ್ಥಾಶ್ರಮಿಯಾದನು ' ( ಬೃ, ಅ ೪, ಬ್ರಾ ೫, ಮಂ ೧೫ ). ಈ ವಚನವನ್ನು ಬೃಹ ದಾರಣ್ಯಕದ ೩, ೯, ೨೬ ; ೪, ೨, ೪ ; ೪, ೪, ೨೨, ಈ ಮಂತ್ರಗಳಕೂಡ ಹೋಲಿಸಿ ನೋಡಬೇಕು. ಬೃಹದಾರಣ್ಯಕದ ಒಂದು ವಚನದಲ್ಲಂತೂ ' ನೇತಿ ನೇತಿ ' ಗೆ ವಿಧಾ ಯಾತ್ಮಕವಾದ ಅರ್ಥವನ್ನು ಹೇಳಲು ಹವಣಿಸಿದ್ದಾಗಿದೆ. ' ಅಂತೆಯೆ ಬ್ರಹ್ಮವನ್ನು

ನೇತಿ ನೇತಿ ಎಂದು ಹೇಳಿದುದು. ಇದನ್ನು ಮಿಕ್ಕಿ ಯಾವುದೂ ಇಲ್ಲ ; ಇದ್ದುದೆಲ್ಲ ಇದರೊಳಗೇ ಇದೆ ' ( ಬೃ, ಅ ೨, ಬ್ರಾ ೩, ಮಂ ೬ ). ಸರ್ವಗ್ರಾಸಿಯಾದ ಈ ಬ್ರಹ್ಮದ ಲಕ್ಷಣದ ಮೂಲಕ ಬೃಹದಾರಣ್ಯಕದಲ್ಲಿ ಇನ್ನೊಂದೆಡೆಗೆ ' ಅತಿವಾದ ' ಕ್ಕೆ ( Transcendentalism ) ಎಡೆಯಾಗಿದೆ ; ಹೇಗೆಂದರೆ, ಬ್ರಹ್ಮವು ' ತೇಜೋಮಯವೂ ಅತೇಜೋಮಯವೂ ಕಾಮಮಯವೂ ಅಕಾಮಮಯವೂ ; ಕ್ರೋಧಮಯವೂ ಅಕ್ರೋಧಮಯವೂ ; ಧರ್ಮಮಯವೂ ಅಧರ್ಮಮಯವೂ ; ಇದನ್ನು ಅದನ್ನು ಎಲ್ಲವನ್ನೂ ತುಂಬಿಕೊಂಡಿದ್ದಾಗಿದೆ ' ( ಬೃ, ಅ ೪, ಬ್ರಾ ೪, ಮಂ ೫ ). ಅಂತೂ ಬ್ರಹ್ಮವನ್ನು ವರ್ಣಿಸುವಾಗ ಉಪನಿಷತ್ತುಗಳು ಹಾಗೂ ಅಲ್ಲ ಹೀಗೂ ಅಲ್ಲ ಎನ್ನುತ್ತ ನಿಷೇಧವನ್ನು ದಾಟಿ ಹಾಗೂ ಸೈ ಹೀಗೂ ಸೈ ಎಂದು ಎಲ್ಲವನ್ನು ಒಳಕೊಳ್ಳುವ ವಿಧಿಯನ್ನು ಸೇರಿ ಹಾಗಾಗಲಿ ಹೀಗಾಗಲಿ ಎಂಬ ಅತಿವಾದದ ಮೆಟ್ಟನ್ನು ಮುಟ್ಟಿವೆ.

**೨೨. ಅದ್ವೈತ, ಸೃಷ್ಟಿ, ಅಮೃತತ್ವ ಇವುಗಳ ಬಗ್ಗೆ ಶಂಕರಮತದ ಸಿದ್ಧಾಂತಗಳು** - ಬ್ರಹ್ಮ ಮತ್ತು ಜೀವದ ಸಂಬಂಧದ ಬಗ್ಗೆ ಅದ್ವೈತದ ಮತವಾದರೂ ಏನು ? ಪರಮಾರ್ಥತಃ ಬ್ರಹ್ಮವೊಂದೇ ಸತ್ಯವು ಇದೇನೋ ನಿಜವು. ಆದರೆ ವ್ಯಾವಹಾರಿಕ ಅನುಭವದಿಂದ 'ಜೀವ' ಎಂದು ಕರೆಯಿಸಿ ಕೊಳ್ಳುವದರ ಸತ್ಯತೆ ಎಷ್ಟೇನು ? ಜೀವವು ವ್ಯವಹಾರತಃ ಸತ್ಯವು ಆದರೆ ಪರಮಾರ್ಥತಃ ಕಲ್ಪಿತವು ಎಂದು ಅದ್ವೈತಿಯ ಮತವು. ತೋರಿಕೆಗೆ ಜೀವವು ಪ್ರತ್ಯೇಕವಾಗಿದೆ, ಪರಮಾರ್ಥತಃ ಅದೂ ಬ್ರಹ್ಮವೂ ಒಂದೇ. ಅದ್ವೈತಿಯ ಈ ಮತವನ್ನು ಎತ್ತಿಹಿಡಿಯುವ ವಚನಗಳೆಷ್ಟೋ ಉಪನಿಷತ್ತಿನಲ್ಲಿವೆ. ಛಾಂದೋಗ್ಯದಲ್ಲಿ ' ಈ ದೇಹದಲ್ಲಿರುವ ಆತ್ಮವು ಬ್ರಹ್ಮವೆ; ದೇಹತೊರೆದು ಅಲ್ಲಿಯೆ ಲೀನವಾಗುವದು ' ( ಛಾಂ, ಅ ೩, ಖಂ ೧೪, ಮಂ ೪ ) ಎಂದು ಹೇಳಿದೆ. ' ಈ ಬ್ರಹ್ಮಚಕ್ರದಲ್ಲಿ ಜೀವಾತ್ಮವು ಹಂಸನಂತೆ ಆಡುವುದು ತಾನು ಬೇರೆ ಪ್ರೇರಕನು ಬೇರೆಯೆಂದು ತಿಳಿದುಕೊಂಡು. ಪ್ರೇರಕನನ್ನು ಕೂಡಿದ ಮೇಲೆಯೆ ಅದು ಅಮೃತತ್ವವನ್ನು ಹೊಂದುವದು ' ಎಂದು ಶ್ವೇತಾಶ್ವತರವು( ಶ್ವೇ, ಅ ೧, ಮಂ ೬ ) ಉಸಿರುವುದು. ಬ್ರಹದಾರಣ್ಯಕದ ಹೇಳಿಕೆಯು 'ತನ್ನಿಂದ ಭಿನ್ನವೆಂದು ದೇವತೆಯ ಉಪಾಸನೆ ಮಾಡುವವನು ದೇವರ ಪಶುವು ಮಾತ್ರ ' (ಬೃ, ಅ ೧, ಬ್ರಾ ೪, ಮಂ ೧೦ ) ಹೀಗಿದೆ. ' ಮನುಷ್ಯನಲ್ಲಿರುವ ಪುರುಷನೂ ಆದಿತ್ಯನಲ್ಲಿಯ ಪುರುಷನೂ ಒಬ್ಬನೇ ' ಎಂದು ತೈತ್ತಿರೀಯವು ( ತೈ, ವ ೨, ಅನು ೮ ) ಅನ್ನುವದು. ' ಹೃದಯದ ಗವಿಯಲ್ಲಿ ಈ ಪುರುಷನಿರುವನೆಂದು ಬಲ್ಲವನು ಅವಿದ್ಯಾಗ್ರಂಥಿಯನ್ನು ಬಿಚ್ಚುವನು. ಈ ವಿಶ್ವವೂ ಆ ಪುರುಷನೇ ' ಎಂದು ಮುಂಡಕದ ( ಮುಂ ೨, ಖಂ ೧, ಮಂ ೧೦ ) ವಚನವು. ಇವೆಲ್ಲವುಗಳ ಶಿರೋಮಣಿಯಂತೆ ಶ್ವೇತಕೇತುವಿಗೆ ಆರುಣಿಯು ಪುನಃಪುನಃ

ಮಾಡಿದ ಉಪದೇಶದೊಳಗಿನ ಮಹಾವಾಕ್ಯವು, 'ಸ ಯ ಏಷೋಽಣಿಮಾ ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ವಮಸಿ ಶ್ವೇತಕೇತೋ' (ಛಾಂ, ಅ ೬, ಖಂ ೮, ಮಂ ೭) ಅದ್ವೈತವನ್ನು ದೃಢವಾಗಿ ಪ್ರತಿಷ್ಠಾಪಿಸುವದು. ಈ ವಾಕ್ಯಗಳು ಅದ್ವೈತೇತರ ಭಾಷ್ಯಕಾರರಿಗೆ ಒಳ್ಳೆ ಇಕ್ಕಳದಲ್ಲಿ ಹಿಡಿಯುವವು. ಇನ್ನು ಸೃಷ್ಟಿಯ ವಿಷಯವಾಗಿ ಅದ್ವೈತದ ಅಭಿಪ್ರಾಯವೇನು ? ಮುಂಡಕದ ವಚನಗಳೆ ಅದ್ವೈತದ ಉತ್ತರಗಳು. 'ಜೇಡಹುಳವು ತನ್ನ ಹೊಟ್ಟೆಯೊಳಗಿಂದ ನೂಲನ್ನು ಹೊರಗೆಹಾಕಿ ಮತ್ತೆ ಒಳಗೆ ತಕ್ಕೊಳ್ಳುವಂತೆ, ಪೃಥ್ವಿಯಲ್ಲಿ ವನಸ್ಪತಿಗಳ ಸೃಷ್ಟಿ ಮತ್ತು ಲಯವಿದ್ದಂತೆ, ಜೀವಂತ ಮನುಷ್ಯನ ದೇಹದಲ್ಲಿ ನವಿರು ಕೂದಲುಗಳ ಸೃಷ್ಟಿ ಹೇಗೋ ಹಾಗೆ, ಅಕ್ಷರಬ್ರಹ್ಮನಿಂದ ಈ ವಿಶ್ವಸೃಷ್ಟಿಯು' (ಮುಂ ೧, ಖಂ ೧, ಮಂ ೭) ಮತ್ತು 'ಚನ್ನಾಗಿ ಹೊತ್ತಿದ ಬೆಂಕಿಯಿಂದ ಸಾವಿರಾರು ರೂಪುಗೊಂಡ ಕಿಡಿಗಳು ಉಂಟಾಗಿ ಅದರಲ್ಲಿ ಲೀನವಾಗುವವಷ್ಟೇ. ಅದರಂತೆಯೆ ಕಂದಾ, ಅಕ್ಷರಬ್ರಹ್ಮನಿಂದ ವಿವಿಧಭಾವಗಳುಂಟಾಗಿ ಮತ್ತೆ ಅಲ್ಲಿಯೆ ಲಯವಾಗುವವು' (ಮುಂ ೨, ಖಂ ೧, ಮಂ ೧). ಜೀವಗಳು ಏಕಬ್ರಹ್ಮನಲ್ಲಿ ಸಮರಸವಾಗಿ ಲೀನವಾಗುವದೆ ಮುಕ್ತಿಯೆಂದು ಶಂಕರಮತವು ಸಾರುವದು. 'ತಮ್ಮ ನಾಮರೂಪಾದಿ ಭೇದಗಳನ್ನುಳಿದು ಹೊಳೆಗಳು ಕಡಲಿನಲ್ಲಿ ಬೆರೆಯುವಂತೆ ಬಲ್ಲವನು ನಾಮರೂಪಾದಿಭೇದ ತೊರೆದು ದಿವ್ಯನಾದ ಪರಾತ್ಪರ ಪುರುಷನನ್ನು ಕೂಡುವನು' (ಮುಂ ೩, ಖಂ ೨, ಮಂ೮); 'ಅವನ ಪ್ರಾಣವು ಹೋಗದು, ಪರೆಯುಚ್ಚಿದ ಹಾವಿನಂತೆ ದೇಹವನ್ನು ತೊರೆದ ಪ್ರಾಣವು ಬ್ರಹ್ಮವೆ ಇದ್ದ ಮೂಲಕ ಬ್ರಹ್ಮನಲ್ಲಿಯೆ ಲೀನವಾಗುವದು' (ಬೃ, ಅ೪, ಖಂ ೪, ಮಂ೬–೭). ಮೇಲಿನ ಮಂತ್ರದಲ್ಲಿ 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ವಾಕ್ಯವು ಜೀವನ್ಮುಕ್ತಿಯನ್ನು ಸೂಚಿಸಿ ಅವನು ದೇಹಪಾತದನಂತರ ಮುಕ್ತಿಯನ್ನು ಪಡೆಯುವನೆಂದು ಹೇಳುವದು.

**೨೩. ಮಾಯಾವಾದದ ಉಗಮದ ವಿಷಯವಾಗಿ ಮೂರು ಮತಗಳು—** ಮಾಯಾವಾದಕ್ಕೆ ಆಧಾರವೇನೆಂಬ ಪ್ರಶ್ನೆಯ ಬಗ್ಗೆ ವೇದಾಂತದ ಭಾಷ್ಯಕಾರರಲ್ಲಿ ಭಿನ್ನಾಭಿಪ್ರಾಯಗಳಿವೆ. ಆ ಪ್ರಶ್ನೆಯನ್ನಷ್ಟು ಚರ್ಚಿಸುವ. ಶಂಕರಾಚಾರ್ಯರಲ್ಲಿಯೂ ಅವರ ಪರಂಪರೆಯೊಳಗಿನ ವೇದಾಂತಗಳಲ್ಲಿಯೂ ಕಂಡುಬರುವ ಮಾಯಾವಾದದ ಉಗಮವನ್ನು ಗೊತ್ತುಹಚ್ಚುವ ಮೂರು ತರ್ಕಗಳು ಮೂರು ಹಾದಿಯನ್ನು ಹಿಡಿದಿವೆ. ಒಂದನೆಯದರ ಪ್ರಕಾರ, ಮಾಯಾವಾದವು ಶಂಕರಾಚಾರ್ಯರೆ ಕಲ್ಪಿಸಿ ಕಟ್ಟಿದ ಗಾಳಿಗೋಪುರವು ; ಎರಡನೆಯದರ ಪ್ರಕಾರ, ಮಾಯಾವಾದವು ಬೌದ್ಧರ ಶೂನ್ಯವಾದದ ಮರಿಯು ; ಮೂರನೆಯದರ ಪ್ರಕಾರ, ಮಾಯಾವಾದವು ಸಮಗ್ರವಾಗಿ ಉಪನಿಷತ್ತುಗಳ

ಲ್ಲಿಯೆ ಅಡಗಿದೆ ; ಅದನ್ನು ಶಂಕರಾಚಾರ್ಯರು ಬೆಳಕಿಗೆ ತಂದವರು. ಮಾಯಾವಾದವು ಆಚಾರ್ಯರು ಕಟ್ಟಿದ ಗಾಳಿಗೋಪುರವಾದರೆ ಅದರ ಸಂಪರ್ಕವೂ ಉಪನಿಷತ್ತುಗಳಿಗಾಗಿಲ್ಲ ವೆಂದು ಹೇಳಿದಂತಾದೀತು ; ಮಾಯಾವಾದವು ಶೂನ್ಯವಾದದ ಮರಿಯೆಂದರೆ ಶಂಕರಾ ದ್ವೈತದ ಮೇಲೆ ಅದಕ್ಕೆ ಸಲ್ಲದ ನಕಾರಮಯ ನಾಸ್ತಿಕವಾದಾಧ್ಯಾರೋಪವಾದೀತು ; ಮಾಯಾವಾದವು ಉಪನಿಷತ್ತುಗಳಲ್ಲಿಯೆ ಸಮಗ್ರವಾಗಿತ್ತು ಎಂಪರೆ ಆಚಾರ್ಯರ ಮೇಧಾ ಶಕ್ತಿಯ ಗೌರವವೆಲ್ಲುಳಿಯಿತು ? ಆದರೆ ಉಪನಿಷತ್ತುಗಳಲ್ಲಿ ಮಾಯಾವಾದವನ್ನೆತ್ತಿ ಹಿಡಿ ಯುವ ಸಾಕಷ್ಟು ಪ್ರಮಾಣವಾಕ್ಯಗಳು ಕಂಡುಬಂದರೆ ಮತ್ತು ಆಚಾರ್ಯರು ಆ ವಾದವನ್ನು ಪರಿಪಾಕಗೊಳಿಸಿರುವರೆಂದು ತೋರಿಸಿಕೊಟ್ಟರೆ ಮೇಲಿನ ಮೂರೂ ತರ್ಕಗಳಲ್ಲಿ ಹುರುಳಿಲ್ಲ ವೆಂದು ತಾನೇ ಸಿದ್ಧವಾಗುವದು. ಮಾಯಾವಾದವು ಉಪನಿಷತ್ತುಗಳಲ್ಲಿಯೂ ಇರುವ ದೆಂದು ಪ್ರಸ್ಥಾಪಿಸುವ ಒಂದು ಸಾಮಾನ್ಯ ರೀತಿಯೆಂದರೆ ' ಮಾಯಾ ' ಎಂಬ ಶಬ್ದವನ್ನು ' ಉಪನಿಷತ್ ಶಬ್ದಾನುಕ್ರಮಣಿಕಾ ' ಗ್ರಂಥದಿಂದ ಒತ್ತಟ್ಟಿಗೆ ಕೂಡಿಸಿ ಮಾಯಾವಾದವು ಸಿದ್ಧವಾಯಿತು ಎಂದು ವಾದಿಸುವದಾಗಿದೆ. ಇದು ನಗೆಗೀಡು. ನಮಗೆ ಬೇಕಾದುದು ' ಮಾಯೆ ' ಯ ಕಲ್ಪನೆಯೆ ಹೊರ್ತು ಶಬ್ದವಲ್ಲ. ಉಪನಿಷತ್ತಿನಲ್ಲಿ ಉಕ್ತವಾದ ವಿಚಾ ರಗಳಲ್ಲಿ ಮಾಯಾವಾದಕ್ಕೆ ಇಂಬಿದೆಯೋ ? ಇದನ್ನೆ ನಾವು ನಿರ್ಣಯಿಸಿಕೊಳ್ಳಬೇಕಾ ದುದು. ನಮ್ಮ ನಿರ್ಣಯವೇನಂದರೆ, ಹಾಗೆ ಇಂಬಿದೆ; ಮಾಯಾವಾದವು ಆಚಾರ್ಯರು ಹೊಸೆದ ಕಗ್ಗಲ್ಲ; ಬೌದ್ಧರ ಶೂನ್ಯವಾದದ ಪ್ರಚ್ಛನ್ನಛಾಯೆಯೂ ಅಲ್ಲ; ಅವರು ಉಪನಿ ಷತ್ತಿನಲ್ಲಿ ಅಲ್ಲಲ್ಲಿ ಕಂಡುಬರುವ ಮಾಯಾವಿಚಾರವನ್ನು ಪರಿಷ್ಕಾರಗೊಳಿಸಿ ನಿಜವಾದ ತತ್ವಜ್ಞಾನಿಯಂತೆಯೂ ದಾರ್ಶನಿಕರಂತೆಯೂ ಅದನ್ನೊಂದು ಸಿದ್ಧಾಂತಸ್ವರೂಪಕ್ಕೆ ತಂದರು. ಈ ಅಧ್ಯಾಯದ ಕೊನೆಯಲ್ಲಿ ಆ ಉಪನಿಷದಾಧಾರಗಳನ್ನೂ ತೋರಿಸಲಾಗುವದು. ಅಂತೂ ಏನು? ಶಂಕರಾಚಾರ್ಯರು ತಮ್ಮ ವೇದಾಂತಪಟದಲ್ಲಿ ಅದ್ವೈತದ ಹಾಸಿನೊಡನೆ ಉಪನಿಷ ತ್ತಿನ ಮಾಯಾವಾದವನ್ನು ನೆಯ್ದರೆಂಬುದೆ ನಿಜವು.

**೨೪. ಉಪನಿಷತ್ತುಗಳಲ್ಲಿ ಮಾಯಾಸಿದ್ಧಾಂತವು**—ಇನ್ನು ನಾವು ಮೇಲೆ ಹೇಳಿದಂತೆ ಶಬ್ದಾಭ್ಯಾಸಕ್ಕಿಂತ ಅರ್ಥದ ಕಡೆಗೆ ಆಲೋಚನಾಪೂರ್ವಕವಾಗಿ ನೋಡಿದರೆ ಮಾಯಾಸಿದ್ಧಾಂತದ ಕುರುಹುಗಳು ಉಪನಿಷತ್ತುಗಳಲ್ಲಿ ದೊರೆಯಲಾರವೋ ನೋಡುವ. ' ಹಿರಣ್ಮಯ ಪಾತ್ರದಿಂದ ಸತ್ಯದ ಮುಖವು ಮುಚ್ಚಲ್ಪಟ್ಟಿದೆ. ದೇವಾ, ಆ ಮುಸುಕು ತೆರೆ, ಅಂದರೆ ಸತ್ಯಧರ್ಮ ಕಂಡೀತು ' ಎಂದು ಈಶವೆನ್ನುವದು ( ಈ, ೧೫ ). ಸತ್ಯವನ್ನು ಕಾಣದಂತೆ ಮಾಡುವ ಮುಸುಕು ಬಂಗಾರದ್ದಾಗಿದೆಯಂತೆ. ಮುಸುಕಿನ ಕಡಗೇ ಕಣ್ಣನ್ನು ಕೀಲಿಸಿಬಿಟ್ಟರೆ ಮುಸುಕಿನೊಳಗಿನ ಗುಟ್ಟನ್ನು ನೋಡುವ ಬಗೆ ಹೇಗೆ ?

ಹೊಳೆಯುವದೆಲ್ಲ ಹೊನ್ನಲ್ಲ. ಈ ಹೊಳಪಿನ ಮುಸುಕನ್ನು ಬದಿಗೆ ಸರಿಸಿದರೆ ಸತ್ಯದ ದರ್ಶನವಾಗುವದೆಂದು ಈಶದ ಹೇಳಿಕೆ. ಈ ಉಪನಿಷತ್ತಿನ ಪ್ರಕಾರ ಸತ್ಯವು ಬಯಲಿಗಿಲ್ಲ ಮುಸುಕಿನಲ್ಲಿದೆ ಎಂದಂತಾಯಿತು. ‘ ವಿದ್ಯೆಯ ಹಾದಿಯ ಬಿಟ್ಟು ಅವಿದ್ಯೆಯ ಹಾದಿಗೆ ಬಿದ್ದು ತಾವೇ ಧೀರರು ತಾವೇ ಪಂಡಿತರು ಎಂದು ತಿಳಿದುಕೊಂಡು ಕುರುಡರ ಬೆನ್ನುಹತ್ತಿದ ಕುರುಡರಂತೆ ಹತ್ತುಹಾದಿಗೆ ಹರಿದಾಡಿ ಎಲ್ಲೆಲ್ಲಿಯೋ ಸುತ್ತಾಡುವರು ’ ಎಂಬೀ ಕಠದೊಳಗಿನ ಕುರುಡರ ದೃಷ್ಟಾಂತವಾದರೂ ಸತ್ಯದರ್ಶನದಿಂದ ನಮ್ಮೆಲ್ಲರನ್ನಗಲಿಸುವ ಕುರುಡುತನವೊಂದಿದೆ ಎಂದೆನ್ನುವದು ( ಕಠ, ಅ ೧, ವ ೨, ಮಂ ೪, ೫ ). ಮುಂಡಕದಲ್ಲಿ ‘ ಪುರುಷನೆ ವಿಶ್ವವು ; ಅವನೆ ಹೃದಯದ ಗವಿಯಲ್ಲಿರುವನೆಂದು ಬಲ್ಲವರು ಅವಿದ್ಯಾಗ್ರಂಥಿಯನ್ನು ಬಿಚ್ಚುವರು ’ ( ಮುಂ ೨, ಖಂ ೧, ಮಂ ೧೦ ) ಎಂದು ಬಂದಿದೆ. ಛಾಂದೋಗ್ಯವು ‘ ವಿದ್ಯೆಯಿಂದಾದದ್ದೆ ವೀರ್ಯವತ್ತರವು ; ಅವಿದ್ಯೆಯದು ವೀರ್ಯಹೀನವು ’ ( ಛಾಂ, ಅ ೧, ಖಂ ೧, ಮಂ ೧೦ ) ಎನ್ನುವದು. ಸಂಸಾರದಲ್ಲಿ ಆತ್ಮಜ್ಞಾನವಿಲ್ಲದೆ ಅಡಿಗಡಿಗೆ ತಡಬಡಿಸುವ ನಮ್ಮ ದೌರ್ಬಲ್ಯವನ್ನೇನು ನಾವೇ ಹೇಳಿಕೊಡಬೇಕೇ ? ಆತ್ಮಜ್ಞಾನವಾಗುವವರೆಗೆ ನಾವು ನಿಜವಾದ ವೀರ್ಯವಂತರಲ್ಲ. ಕೊನೆಗೆ ‘ ಅಸತೋ ಮಾ ಸದ್ಗಮಯ । ತಮಸೋ ಮಾ ಜ್ಯೋತಿರ್ಗಮಯ । ಮೃತ್ಯೋರ್ಮಾ ಅಮೃತಂ ಗಮಯ ’ ಎಂಬ ಬೃಹದಾರಣ್ಯಕದೊಳಗಿನ ( ಬೃ, ಅ ೧, ಬ್ರಾ ೩, ಮಂ ೨೮ ) ಪ್ರಾರ್ಥನೆಯಲ್ಲಿ ‘ ಸತ್ತು–ಜ್ಯೋತಿ–ಅಮೃತ ’ ಗಳಿಂದ ತನ್ನನ್ನು ಅಗಲಿಸಿರುವ ‘ ಅಸತ್ತು–ತಮಸ್ಸು–ಮೃತ್ಯು ’ ಗಳನ್ನು ತನ್ನಿಂದ ದೂರಮಾಡು ಎಂದು ದೇವನಿಗೆ ಬೇಡಿಕೊಂಡದ್ದಾಗಿದೆ. ಇವೆಲ್ಲ ಅವಿದ್ಯೆಯ ರೂಪಗಳೇ. ‘ ಅಮೃತತ್ವವನ್ನು ಬಲ್ಲ ಧೀರರು ಸ್ಥಿರವಿಲ್ಲದವುಗಳಲ್ಲಿ ಧ್ರುವವಾದುದನ್ನು, ಸತ್ಯವಾದುದನ್ನು ಅರಸಲೆಣಿಸುವದಿಲ್ಲ ’ ( ಕಠ, ಅ ೨, ವ ೪, ಮಂ ೨ ) ಎಂದೆನ್ನುವ ಕಠವು ‘ ಮಾಯೆ ’ ಯನ್ನು ‘ ಅಧ್ರುವ ’ ಎಂಬ ಶಬ್ದದಿಂದ ವ್ಯಕ್ತಪಡಿಸುವದು. ಮತ್ತೆ ಛಾಂದೋಗ್ಯದಲ್ಲಿ ಹೇಳಿದ್ದೇನಂದರೆ, ‘ ಸತ್ಯಕಾಮಗಳನ್ನು ಅನೃತವು, ಅಸತ್ಯವು ಮುಸುಕಿದೆ. ನೆಲದಲ್ಲಿ ಹೂಳಿದ ಹಣದಂತೆ ಸತ್ಯದ ಸ್ಥಿತಿಯಿದೆ. ಅಸತ್ಯವೆಂಬ ನೆಲದಮೇಲೆ ಎಷ್ಟು ಅಡ್ಡಾಡಿದರೇನು ? ಹೂಳಿರುವ ಸತ್ಯಧನವು ಕಾಣದು. ಆತ್ಮಜ್ಞಾನವಿಲ್ಲದವರ ಗತಿ ಇಂತಹದು. ಆದರೆ ತಮ್ಮ ಹೃದಯದಲ್ಲಿ ಆತ್ಮನನ್ನು ಕಂಡವರು ದಿನಾಲು ಸ್ವರ್ಗವನ್ನು ಕಾಣುವರು ’ ( ಛಾಂ, ಅ ೮, ಖಂ ೩, ಮಂ ೧–೩ ). ಈ ಮಂತ್ರಗಳಲ್ಲಿ ‘ ಅನೃತ ’ ಶಬ್ದದಿಂದ ಮಾಯೆಯ ಕಲ್ಪನೆ ವ್ಯಕ್ತವಾಗಿದೆ. ನಾವು ನಮ್ಮೊಳಗಿನ ಕೌಟಿಲ್ಯವನ್ನೂ ಅನೃತತ್ವವನ್ನೂ ಮಾಯೆಯನ್ನೂ ಹೊರದೂಡದೆ ವಿರಜ ಬ್ರಹ್ಮವನ್ನು ಕಾಣಲಾರೆವು ಎಂದು ಪ್ರಶ್ನೋಪನಿಷತ್ತು ( ಪ್ರ ೧, ಮಂ ೧೬ ) ಹೇಳುವದು. ಇಲ್ಲಿ ‘ ಮಾಯೆ’

ಎಂಬ ಶಬ್ದವು ಬಹಳಮಟ್ಟಿಗೆ ಆಚಾರ್ಯರ ಅರ್ಥದಲ್ಲಿಯೆ ಪ್ರಯೋಜಿತವಾಗಿದೆ ಎಂದೆನ್ನ ಬಹುದು. ' ಅವನ ಧ್ಯಾನದಿಂದಲೂ, ಅವನಲ್ಲಿ ಐಕ್ಯದಿಂದಲೂ ತತ್ವಭಾವದಿಂದಲೂ ವಿಶ್ವಮಾಯಾನಿವೃತ್ತಿಯಾಗುವದು ' ( ಶ್ವೇ, ಅ ೧, ಮಂ ೧೦ ) ಎಂದು ಶ್ವೇತಾಶ್ವತರದ ಲ್ಲಿಯೂ ' ಮಾಯಾ ' ಶಬ್ದದ ಪ್ರಯೋಗವಿದೆ. ಇಲ್ಲಿಯಾದರೂ ಮಾಯೆಯ ಅರ್ಥವು ಭ್ರಮೆಯೆಂದೇ ಸೈ. ಇನ್ನು ' ಮಾಯಾ ' ಶಬ್ದದ ಮಟ್ಟಿಗೇ ನೋಡಿದರೆ ಅದು ಮೊಟ್ಟ ಮೊದಲು ಋಗ್ವೇದದಲ್ಲಿ ಕೂಡ ಕಂಡುಬರುವದು. ಆ ಸೂಕ್ತವನ್ನೆ ಬೃಹದಾರಣ್ಯಕದಲ್ಲಿ ಮತ್ತೆ ಉಚ್ಚರಿಸಿದ್ದಾಗಿದೆ. ಅದರಲ್ಲಿ ಇಂದ್ರನು ತನ್ನ ಮಾಯೆಯಿಂದ ಬಹುರೂಪಗಳನ್ನು ಧರಿಸಿದನು ಎಂದು ಹೇಳಿದ್ದಾಗಿದೆ ( ಬೃ, ಅ ೨, ಬ್ರಾ ೫, ಮಂ ೧೯ ಹೋಲಿಸಿ ನೋಡಿ ಋ ೬, ಸೂ ೪೭, ಮಂ ೧೮ ). ಈ ಸೂಕ್ತದಲ್ಲಿ ' ಮಾಯೆ ' ಯ ಅರ್ಥವು ಬಲ ವೆಂದಾಗುವದೇ ಹೊರ್ತು ಭ್ರಾಂತಿಯೆಂದಲ್ಲ. ಇದೇ ಅರ್ಥದಲ್ಲಿ ಶ್ವೇತಾಶ್ವತರದಲ್ಲಿಯೂ ' ಮಾಯಾ ' ಶಬ್ದದ ಪ್ರಯೋಗವಿದೆ. ' ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್ ॥ ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ ॥ ( ಶ್ವೇ, ಅ ೪, ಮಂ ೯ ) ಎಂಬೀ ವಚನ ದಲ್ಲಿ ದೇವನಿಗೆ ' ಮಾಯಿ ' ಅಂದರೆ ಮೋಡಿಕಾರನೆಂದದ್ದಾಗಿದೆ. ತನ್ನ ಮೋಡಿಯಿಂದ ಅವನು ವಿಶ್ವವನ್ನುಂಟು ಮಾಡುವನಂತೆ. ಇನ್ನು ಈ ಮಂತ್ರದಲ್ಲಿ ಮುಂದೆ ವೇದಾಂತ ತತ್ವ ಜ್ಞಾನದಲ್ಲಿ ಈಶ್ವರನನ್ನು ಪರಿವೇಷ್ಟಿಸಿರುವ ಮಾಯೆಗೂ ಜೀವನನ್ನು ಮುಸುಕಿರುವ ಅವಿ ದ್ಯೆಗೂ ಭೇದವನ್ನು ಕಲ್ಪಿಸಿರುವಂತೆ ಮಾತ್ರ ಕಾಣುವದಿಲ್ಲ. ' ಮಾಯಾ ' ಈ ಒಂದೇ ಶಬ್ದವು ಆ ಎರಡಕ್ಕೂ ಕೂಡಿ ಪ್ರಯೋಗಿಸಲ್ಪಟ್ಟಿರುವದು. ಇಲ್ಲಿ ' ಮಾಯಾ ' ದ ಅರ್ಥವು ಶಕ್ತಿಯೆಂದೇ ಸರಿ. ಕುನೋ ಫಿಶ್ಚರ ಎಂಬ ವಿದ್ವಾಂಸನು ಸ್ಪಾಯನೋಝಾ ಎಂಬ ದಾರ್ಶನಿಕನ ' ಅಟ್ರಿಬ್ಯೂಟ್ಸ ' ಶಬ್ದಕ್ಕೆ ಹಚ್ಚಿದ ಅರ್ಥದ ಪರ್ಯಾಯವೆ ಇಲ್ಲಿಯ ' ಮಾಯಾ ' ಶಬ್ದವು. ಶ್ವೇತಾಶ್ವತರದಲ್ಲಿ ಮುಂದೆ ' ಮಾಯಾ ' ಕ್ಕೆಯೆ ' ಪ್ರಕೃತಿ' ಎಂಬ ರ್ಥವನ್ನು ಹೇಳಿದ್ದಾಗಿದೆ. ' ಮಾಯೆಯೆಂದರೆ ಪ್ರಕೃತಿ, ಮಾಯಿಯು ಮಹೇಶ್ವರನು ' ( ಶ್ವೇ, ಅ ೪, ಮಂ ೧೦ ). ಕೆಲಕಾಲದ ಮೇಲೆ ' ಮಾಯಾ ' ಶಬ್ದವು ' ಪ್ರಕೃತಿ ' ಯ ಪರ್ಯಾಯನಾಮವಾಗಿ ರೂಢವಾಗಿದ್ದುದು ' ಕುಸುಮಾಂಜಲಿ ' ಯ ಕರ್ತೃವಿನಂಥ ಆಸ್ತಿಕನ ಕೃತಿಯಲ್ಲಿಯೂ ಕಂಡುಬರುವದು. ಶ್ವೇತಾಶ್ವತರದಲ್ಲಿ ಮತ್ತೊಂದೆಡೆಗೆ ' ಈಶ್ವ ರನು ತನ್ನ ಜಾಲವನ್ನು ಹರುಹಿ ಅದರಲ್ಲಿ ಎಲ್ಲರನ್ನೂ ತೊಡಕಿಸಿ ಅವರನ್ನಾಳುವನು' (ಶ್ವೇ, ಅ ೩, ಮಂ ೧ ) ಎಂದು ಹೇಳುವಲ್ಲಿ ಈಶ್ವರನ ಜಾಲದ ಕಲ್ಪನೆ ಬಂದಿದೆ. ಈ ಮೊದಲೆ ನಾವು ಚರ್ಚಿಸಿದ ಬೃಹದಾರಣ್ಯಕದೊಳಗಿನ, ' ಎಲ್ಲಿ ದ್ವೈತದಂತಹದಿರುವದೊ ಅಲ್ಲಿ ಒಬ್ಬರು ಮತ್ತೊಬ್ಬರನ್ನು ನೋಡುವರು ' ( ಬೃ, ಅ ೨, ಬ್ರಾ ೪, ಮಂ ೧೪ ) ಎಂದು

ಹೇಳುವಲ್ಲಿ ‘ ದ್ವೈತದಂತಹದು ’ ಎಂಬದು ‘ ಮಾಯೆ ’ ಯ ತೋರಿಕೆಯ ಪರ್ಯಾಯ ವಾಗಿದೆ. ಕಟ್ಟಕಡೆಗೆ ಶ್ವೇತಕೇತು ಮತ್ತು ಆರುಣಿಯ ಪ್ರಖ್ಯಾತ ಸಂವಾದದಲ್ಲಿ (ಇದನ್ನು ಕುರಿತು ಈ ಮೊದಲೆ ಚರ್ಚಿಸಿದ್ದಾಗಿದೆ) ಆತ್ಮನನ್ನುಳಿದು ಎಲ್ಲವೂ ವಾಚಾರಂಭ ಣವು, ವಿಕಾರವು, ನಾಮಧೇಯವು, ( ಛಾಂ, ಅ ೬, ಖಂ ೧, ಮಂ ೪ ) ಎಂದು ಹೇಳಿದೆ. ಅಂತೂ ಏನು? ‘ ಮಾಯಾ’ ಶಬ್ದವು ಉಪನಿಷತ್ತುಗಳಲ್ಲಿ ಸಾಕಷ್ಟು ಇದೆ. ಗೌಡಪಾದರಲ್ಲಿ ಮತ್ತು ತದನಂತರ ಕಂಡುಬರುವ ‘ ಮಾಯೆ’ ಯ ಸಮಗ್ರ ಪರಿಣತ ತಾತ್ವಿಕ ಸ್ವರೂಪವು ಅಲ್ಲಿರದಿದ್ದರೂ ಆಚಾರ್ಯರು ‘ ಮಾಯಾ’ ಕಲ್ಪನೆಯನ್ನು ಹಿಂಜಿ ನೂತುಕೊಳ್ಳುವಷ್ಟು ಸಾಮುಗ್ರಿಯು ಅಲ್ಲಿತ್ತು. ಮುಸುಕು, ಕುರುಡುತನ, ಕಗ್ಗಂಟು, ಅವಿದ್ಯೆ, ಅಸತ್ತು, ತಮಸ್ಸು, ಮೃತ್ಯು, ಅಧ್ರುವ, ಅನೃತ, ಜಿಹ್ಮ , ಮಾಯೆ, ಶಕ್ತಿ, ಪ್ರಕೃತಿ, ಜಾಲ, ದ್ವೈತದ ತೋರಿಕೆ ಮತ್ತು ಕಟ್ಟಕಡೆಗೆ ವಾಚಾರಂಭಣ, ವಿಕಾರ, ನಾಮಧೇಯ ಇಷ್ಟೆಲ್ಲ ಕಲ್ಪನೆಗಳು ಉಪನಿಷತ್ತುಗಳಲ್ಲಿ ತುಂಬಿರಲಾಗಿ, ಉಪನಿಷತ್ತುಗಳಲ್ಲಿ ‘ ಮಾಯೆ ’ ಯ ಸುಳಿವಿಲ್ಲೆಂದು ಅದಾವನು ಎದೆತಟ್ಟಿ ಹೇಳಬಲ್ಲನು ?

**೨೫. ಮಾಯಾಕಲ್ಪನೆಯ ವಿಕಾಸದ ಚರಿತ್ರೆಯು**—ಉಪನಿಷತ್ತು ಗಳ ನಂತರ ಐತಿಹಾಸಿಕ ಕಾಲದಲ್ಲಿ ಮಾಯಾಕಲ್ಪನೆಯಲ್ಲಿ ಯಾವ ಹೆಚ್ಚುಕಡಿಮೆಗಳುಂಟಾ ದವು, ಗೌಡಪಾದರು ಮತ್ತು ಆಚಾರ್ಯರು ಅದರಲ್ಲಿ ಮಾಡಿದ ಮಾರ್ಪಾಡೇನು ಎಂಬುದರ ಸಂಕ್ಷಿಪ್ತ ಚರಿತ್ರೆಯನ್ನು ಇನ್ನು ನಾವು ಹೇಳುವುದು ಕ್ರಮಪ್ರಾಪ್ತವಾಗಿದೆ. ಇದರಿಂದ ಆಚಾರ್ಯರು ತಮ್ಮ ಮಾಯಾವಾದವನ್ನು ಹುರಿಗೊಳಿಸುವಾಗ ಉಪನಿಷತ್ತುಗಳಿಂದ ತಕ್ಕೊಂಡ ಎಳೆಗಳಾವವು, ತಮ್ಮ ಅಧ್ಯಾತ್ಮಗುರುಪರಂಪರೆಯಲ್ಲಿಯ ಗೌಡಪಾದರ ಕಾರಿಕೆ ಗಳಿಂದ ತಕ್ಕೊಂಡ ಎಳೆಗಳಾವವು ಎಂಬುದು ಚನ್ನಾಗಿ ತಿಳಿಯಾಗುವದು. ಉಪನಿಷತ್ತುಗಳ ನಂತರ ಭಗವದ್ಗೀತೆಯ ಕಾಲದಲ್ಲಿ ಇನ್ನೂ ಗೌಡಪಾದ-ಶಂಕರಾಚಾರ್ಯರು ಮಾಯೆಗೆ ಕೊಟ್ಟ ರೂಪವು ಬಂದಿರಲಿಲ್ಲ. ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥ (ಅ ೧೮,೬೧) ಈ ಗೀತಾ ಶ್ಲೋಕವಲ್ಲಿ ಈಶ್ವರನು ಇಂದ್ರಜಾಲಿಕನಂತೆ ‘ ಮಾಯೆ ’ ಯಿಂದ ವಿಶ್ವವನ್ನು ಆಡಿಸುವನು ಎಂದು ಇರುವದು. ಆದರೆ ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ( ಅ ೭,೧೫ ) ಎಂಬಲ್ಲಿ ಈಶ್ವರನ ಆವರಣಶಕ್ತಿಯೆಂದು ಅದರ ಅರ್ಥವು ಇರುವದು. ಆದಕಾರಣ ಭಗವದ್ಗೀತೆಯಲ್ಲಿ ಮತ್ತು ಅನ್ಯಗ್ರಂಥಗಳಲ್ಲಿ ಇರುವ ‘ ಮಾಯಾ ’ ಶಬ್ದದಿಂದ ವಾವು ಭ್ರಮಿತರಾಗದೆ ‘ ಮಾಯೆ ’ ಯ ಕಲ್ಪನೆಯು ಅಲ್ಲಲ್ಲಿ ಎಷ್ಟರಮಟ್ಟಿಗೆ ಇದೆ ಇದನ್ನು ಹುಡುಕಲುಬೇಕು. ಇದಲ್ಲದೆ ಭಗವದ್ಗೀತೆಯು ಉಪನಿಷತ್ತುಗಳ ಮಾನದಿಂದ

ಚಿಕ್ಕದು ಮತ್ತು ಅದರ ವಿಷಯವೂ ಆಸ್ತಿಕ ಅನುಭಾವವಾದವು, ಬ್ರಹ್ಮವಿದ್ಯಾಂತರ್ಗತ ಯೋಗಶಾಸ್ತ್ರವು ; ಅಂತೆಯೆ 'ಮಾಯಾ' ಕಲ್ಪನೆಯನ್ನು ತಾತ್ವಿಕರೀತಿಯಾಗಿ ಹಿಗ್ಗಿಸಿ ಹೇಳಲು ಅಲ್ಲಿ ಇಂಬಿಲ್ಲ. ಆದರೆ ಗೌಡಪಾದರ ಕಾರಿಕೆಗಳಲ್ಲಿ ಮಾಯಾವಾದವು ಒಳ್ಳೇ ಜೀಟುಗಾಲಿಟ್ಟು ಮುಂದೆ ಜಿಗಿದಿದೆ. ಗೌಡಪಾದರ ಪರಿಭಾಷೆಯು ಬುದ್ಧದರ್ಶನದ್ದಾದರೂ, ಅವರ ದರ್ಶನವು ಸ್ವತಂತ್ರವಾಗಿದೆ. ಕಾರಿಕೆಗಳಲ್ಲಿ ಆಮೂಲಾಗ್ರವಾದ ಒಂದು ಹೊಸಸಿದ್ಧಾಂತವು ಸುಪ್ರತಿಷ್ಠಾಪಿತವಾಗಿದೆ. ಭಗವದ್ಗೀತೆಯ ಮಾತು ಹಾಗಲ್ಲ. ಜನರ ಅಧ್ಯಾತ್ಮಪ್ರವೃತ್ತಿಯನ್ನು ಉನ್ಮುಖಮಾಡಿ ಅದನ್ನು ಹೆಚ್ಚಿಸುವದೆ ಅದರ ಕೆಲಸ. ಆದ್ದರಿಂದಲೆ ಗೌಡಪಾದರು ತಮ್ಮ ಕಾರಿಕೆಗಳಲ್ಲಿ ಮಾಯಾವಾದವನ್ನು ಸಮಗ್ರವಾಗಿ ಹೇಳುವದಲ್ಲದೆ ಜಗತ್ತು ಮಾಯೆಯೆಂಬ ನುಣುಪುನುಡಿಯನ್ನಾಡದೆ, ಜಗತ್ತು! ಎಲ್ಲಿದೆ ಜಗತ್ತು ? ಅದೆಂದು ಇತ್ತು ? ಎಂದು ಇದಿರು ಕೇಳುವರು. ಅವರದು ಮಾಯಾವಾದವಲ್ಲ, 'ಅಜಾತವಾದ'ವು. ಗೌಡಪಾದರು ಅನ್ನುವದೇನಂದರೆ 'ಪ್ರಪಂಚವಿದ್ದರಲ್ಲವೆ ನಿವರ್ತಗಿವರ್ತ ? ಪ್ರಪಂಚವಿಲ್ಲೇ ಇಲ್ಲ. ದ್ವೈತವು ಮಾಯೆ ; ಅದ್ವೈತವೆಂಬುದೊಂದೇ ಸತ್ಯವು' (ಕಾರಿಕೆ ೧-೧೭). ಜಗತ್ತನ್ನು ಕನಸೆಂದಾಗಲಿ ಮಾಯೆಯೆಂದಾಗಲಿ ತಿಳಿಯಬೇಕೊ ಇಲ್ಲವೊ ಎಂಬುದರ ಬಗ್ಗೆ ಭಗವಾನ್ ಗೌಡಪಾದರಲ್ಲಿ ನಿಶ್ಚಯವು ಕಂಡುಬರುವದಿಲ್ಲ. 'ವಿಶ್ವವನ್ನು ಸ್ವಪ್ನ, ಮಾಯೆ, ಗಂಧರ್ವನಗರಾದಿಗಳಂತೆ ಕಾಣುವವರು ವೇದಾಂತವಿಚಕ್ಷಣರು' ಎಂದು (ಕಾರಿಕಾ, ೨-೩೧) ಒಂದೆಡೆಗೆ ಅವರು ಹೇಳುವರು. ಇನ್ನೊಂದೆಡೆಗೆ 'ಕೆಲವರು ವಿಶ್ವವು ಈಶ್ವರನ ವಿಭೂತಿಯೆಂದೂ ಕೆಲವರು ಅದು ಅವನ ಪ್ರಸವವೆಂದೂ ಕೆಲವರು ಸ್ವಪ್ನವೆಂದೂ ಕೆಲವರು ಮಾಯೆಯೆಂದೂ ಕೆಲವರು ಪ್ರಭುವಿನ ಇಚ್ಛೆಯೆಂದೂ........ ...... ಕೆಲವರು ಇದು ಅವನ ಭೋಗವಿಷಯವೆಂದೂ ಇದು ಅವನ ಲೀಲೆಯೆಂದೂ ಮತ್ತೆ ಬೇರೆ ಕೆಲವರು ಇದು ದೇವನ ಸ್ವಭಾವವೆಂದೂ ಹೇಳುವರು' (ಕಾರಿಕಾ, ೧೭-೯) ಹೀಗೆ ಮಾಯಾವಾದವು ಅನ್ಯರ ಮತವೆಂದು ಹೇಳುವರು. ಅಂದರೆ ಗೌಡಪಾದರ ಪೂರ್ವದಲ್ಲಿಯೂ ಮಾಯಾವಾದಿಗಳಿದ್ದರು. ಭೂತಂ ನ ಜಾಯತೇ ಕಿಂಚಿದಭೂತಂ ನೈವ ಜಾಯತೇ ॥ ವಿಪದಂತೋದ್ವಯಾದ್ಯೇವಮಜಾತಿಂ ಖ್ಯಾಪಯಂತಿ ತೇ ॥ ೪ ॥ ಖ್ಯಾಪಮಾನಾಮಜಾತಿಂ ತೈರನುಮೋದಾಮಹೇ ವಯಂ । ವಿವದಾಮೋ ನ ತೈಃ ಸಾರ್ಧಮವಿವಾದಂ ನಿಬೋಧತ ॥ (ಕಾರಿಕಾ, ೪. ೪-೫). ಈ ಶ್ಲೋಕಗಳಲ್ಲಿ ತಾವು ಅಜಾತವಾದಿಯೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ 'ಹೆಚ್ಚಿನ ಸಮಾಧಿಯಲ್ಲಿ ಎಲ್ಲ ಮಾತು ನಿಂತು ಹೋಗುವವು, ಎಲ್ಲ ಚಿಂತೆಯಿಲ್ಲದಾಗುವದು. ಅಲ್ಲಿ ಒಳ್ಳೇ ಶಾಂತಿಯೂ ಸ್ಥಿರ ಜ್ಯೋತಿಯೂ ಅನುಭವಿಸಲ್ಪಡುವದು' (ಕಾರಿಕಾ, ೩-೩೭) ಎಂಬ ಮಾತುಗಳಿಂದ

ಅನುಷಂಗದಿಂದ ಚಿಂತಾಮಯವಾದ,ಮಾತಿನಿಂದ ತುಂಬಿದ,ಶಾಂತಿಯಿಲ್ಲದ ಜ್ಯೋತಿದೋರದ ಜಗತ್ತಿನ ಅಸ್ತಿತ್ವವನ್ನು ಒಪ್ಪಿಕೊಂಡಿದ್ದಾರೆ ; 'ಅಜಾತವಾದಕ್ಕೆ ಹೆದರುವ ಮತ್ತು ಜಗತ್ತು ಸತ್ಯವೆಂದು ತಿಳಿಯುವ ಜನರು ಆಚಾರವಂತರುಳಿಯಲೆಂದು ಬುದ್ಧಿವಂತರು ಜಾತವಾದವನ್ನೊಪ್ಪುವರು' ( ಕಾರಿಕಾ, ೪-೪೨ ) ಎಂಬ ಶ್ಲೋಕದಲ್ಲಿ 'ಸಮಾಚಾರ' ಎಂದರೆ ಕೆಲವರಿಗೆ ಒಳ್ಳೆಯ ನಡತೆಯನ್ನು ಹಚ್ಚುವದಕ್ಕಲ್ಲಿ, ಜಗತ್ತು ಇದೆ ಎಂಬುದರ ಉಪಯೋಗವಾಗುವದೆಂದೂ ಒಪ್ಪಿಕೊಂಡಿದ್ದಾರೆ. ಈ ಪ್ರಕಾರವಾಗಿ ಭಗವಾನ್ ಗೌಡಪಾದರೂ ಜಗತ್ತಿನ ಅಸ್ತಿತ್ವವನ್ನು ಅಲ್ಪಮಾತ್ರವಾಗಿಯಾದರೂ ಒಪ್ಪಿಕೊಳ್ಳುವರೆಂದಾಯಿತು. ಸಮಾಧಿಯ ಸವಿ ತೋರಿಸುವದಕ್ಕಿರಲಿ, ಒಳ್ಳೆನಡತೆ ಕಲಿಸುವದಕ್ಕೆಂದಿರಲಿ, ಎಂತಹದೋ ಜಗತ್ತು ಇದೆ ಇದು ಸ್ಪಷ್ಟವು. ಆಚಾರ್ಯರು ಗೌಡಪಾದರ ಮತ್ತು ಉಪನಿಷತ್ತಿನ ಮತಗಳ ಆದಷ್ಟು ಉಪಯೋಗಮಾಡಿಕೊಂಡು ತಮ್ಮ ಹೊಸ ಮಾಯಾವಾದವನ್ನು ಹುರಿಗೊಳಿಸಿರುವರು. ಆಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿಯೂ ಬೇರೆ ಕಡೆಗೂ ಮಾಯಾವಾದವನ್ನು ತಿಳಿಸಿ ಹೇಳುವಾಗ ಉಪಯೋಗಿಸುವ 'ಸದಸದನಿರ್ವಚನೀಯ ಸ್ವರೂಪತ್ವ' 'ಅತಸ್ಮಿನ್ ತದ್ಬುದ್ಧಿಃ' 'ರಜ್ಜುಸರ್ಪ ಮತ್ತು ಶುಕ್ತಿಕಾರಜತನ್ಯಾಯ' ಈ ಪದಗಳೂ ಮತ್ತು 'ಆಕಾಶೇ ತಲಮಲಿನತ್ವಾದಿ' 'ಖಪುಷ್ಪ' 'ಮೃಗತೃಷ್ಣಿಕಾ' 'ಇಂದ್ರಜಾಲಿಕ' 'ಶಶವಿಷಾಣ' 'ವಂಧ್ಯಾಪುತ್ರ' ಮೊದಲಾದ ವಾಕ್ಯಗಳೂ ದೃಷ್ಟಾಂತಗಳೂ ಜಗತ್ತನ್ನು ಕುರಿತು ಆಚಾರ್ಯರ ಮತವು ಮಾಯೆ ಮತ್ತು ಹೀನಸತ್ಯ ಅಥವಾ ವ್ಯಾವಹಾರಿಕ ಸತ್ಯ ಇವುಗಳ ಮಧ್ಯದಲ್ಲಿರುವದೆಂದು ಸೂಚಿಸುವವು. ಆಚಾರ್ಯರ ಮಾಯಾವಾದದ ಎಲ್ಲ ವಿವರನನ್ನು ಹೇಳಲು ಇಲ್ಲಿ ಅವಕಾಶವಿಲ್ಲ. ಆದರೂ ರಾಮಾನುಜರು ಪ್ರಶ್ನಿಸುವದೇನಂದರೆ 'ಮಾಯೆಯ ಸ್ಥಳವಾವುದು, ಆತ್ಮವೋ ಬ್ರಹ್ಮವೋ ? ಅಖಂಡ ಜ್ಯೋತಿಯಾದ ಬ್ರಹ್ಮವು ಮರೆಯಾಗುವದೆಂತು ? ಮಾಯೆಯು ಸತ್ಯವೋ ಅಸತ್ಯವೋ ? ಸತ್ಯವಿದ್ದರೆ ಭಾಸಭ್ರಮವಿರಲಾರದು, ಅಸತ್ಯವಿದ್ದರೆ ಅದು ಬ್ರಹ್ಮನ ಉಪಾಧಿ ಇರಲಾರದು. ಬ್ರಹ್ಮವು ಅವ್ಯಾಖ್ಯೇಯವೆಂಬುದೊಂದು ಬ್ರಹ್ಮನ ವ್ಯಾಖ್ಯೆಯೇ ಅಲ್ಲವೇ ? ಮಾಯೆಗೆ ಪ್ರಮಾಣವೇನು ? ನಿರ್ಗುಣ ಬ್ರಹ್ಮದ ಜ್ಞಾನದಿಂದ ಮಾಯೆ ಬಯಲಾಗುವದೆಂಬದು 'ವದತೋವ್ಯಾಘಾತವಲ್ಲವೇ ?' ಒಮ್ಮೆ ರೂಢಮೂಲವಾದ ಅವಿದ್ಯೆಯು ನಿರ್ಮೂಲವಾಗುವ ಬಗೆ ಹೇಗೆ ? ಮತ್ತೆ ಅವಿದ್ಯೆಯುಂಟಾಗುವ ಸಂಭವವಿದೆಯೆ ?' ಆದರೆ ಆಚಾರ್ಯರು 'ನಾಭಾವ ಉಪಲಬ್ಧೇಃ' ಎಂಬ ಬ್ರಹ್ಮಸೂತ್ರಕ್ಕೆ ಬರೆದ ತಮ್ಮ ಭಾಷ್ಯದಲ್ಲಿ, ಬೌದ್ಧರ ವಿಜ್ಞಾನವಾದವನ್ನೂ ಶೂನ್ಯವಾದವನ್ನೂ ಖಂಡಿಸಿದುದನ್ನು ನೋಡಿದರೆ ರಾಮಾನುಜರ ಮೇಲ್ಕಾಣಿಸಿದ ಪ್ರಶ್ನೆಗಳು ಅಪ್ರಸ್ತುತವಾಗಿವೆ ಎಂದು ಕಂಡುಬರು

ವವು. ಆಚಾರ್ಯರ ಮತದಲ್ಲಿ ಜಗತ್ತು ಸತ್ಯವು, ಆದರೆ ತೋರಿಕೆಗೆ ಮಾತ್ರ; ಪರಮಾರ್ಥತಃ ಅದು ಅಸತ್ಯವು. ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಸತ್ಯದಲ್ಲಿ ಆಚಾರ್ಯರು ತೋರಿಸುವ ಭೇದವನ್ನು ನಾವು ಲಕ್ಷ್ಯಕ್ಕೆ ತರದಿದ್ದರೆ ಅವರ ಮತದ ಬಗ್ಗೆ ತಪ್ಪುತಿಳುವಳಿಕೆಯಾಗುವದು. ಜರ್ಮನ್ ತತ್ವಜ್ಞನಾದ ಕಾಂಟನಾದರೂ ಶಂಕರಾಚಾರ್ಯರಂತೆಯೆ ಗೋಚರ ಸತ್ಯದಲ್ಲಿಯೂ ( Empirical reality ) ಅಗೋಚರ, ಅತೀಂದ್ರಿಯ ವಿಜ್ಞಾನದಲ್ಲಿಯೂ ( Transcendental ideality ) ಭೇದವನ್ನು ಕಲ್ಪಿಸಿರುವನು. ಶಂಕರಾಚಾರ್ಯರಂತೆ ಇವನ ಮೇಲಾದರೂ ವಿಜ್ಞಾನವಾದಿಯೆಂಬ ಆರೋಪವು ಬಂದಿರುವದು. ಶಂಕರಾಚಾರ್ಯರಂತೆ ಇವನಾದರೂ ವಿಜ್ಞಾನವಾದವನ್ನು ಖಂಡಿಸಿರುವನು. ಆದರೆ ಇಬ್ಬರ ಮೇಲೆಯೂ ಅದೇ ಆರೋಪವು, ಇಬ್ಬರ ಗತಿಯೂ ಅದೇ ! ಶಂಕರಾಚಾರ್ಯರ ಮಾಯಾವಾದವು, ಅದ್ವೈತವಾದವು ಪ್ರಚ್ಛನ್ನವಾಗಿ ವಿಜ್ಞಾನವಾದದ ಅಥವಾ ಶೂನ್ಯವಾದದ ಸಂತತಿಯೆಂದೇ ಕೆಲವರ ಆರೋಪವು ! ಅದಿರಲಿ. ಶಂಕರಾಚಾರ್ಯರಲ್ಲಿಯೆ ಕಂಡುಬರುವ ಸ್ವಾಪ್ನಿಕ ಮತ್ತು ಪ್ರಾತಿಭಾಸಿಕ ಸತ್ಯಗಳನ್ನು ವ್ಯಾವಹಾರಿಕ ಮತ್ತು ಪಾರಮಾರ್ಥಿಕ ಸತ್ಯಗಳಿಗೆ ಕೂಡಿಸಿದರೆ, ಒಂದು ಸತ್ಯತಾರತಮ್ಯದ ಸೋಪಾನವೆ ಸಿದ್ಧವಾಗುವದು. ಶಂಕರಾಚಾರ್ಯರ ಮತದಲ್ಲಿ ಈ ತಾರತಮ್ಯವು ಪ್ರಕಟವಾಗಿರದಿದ್ದರೂ ಅದರಲ್ಲಿ ಅಡಕವಾಗಿದೆ ಎಂಬುದು ಹೊಳೆಯದಿರದು. ಪ್ರಾತಿಭಾಸಿಕ ಸತ್ಯಕ್ಕಿಂತ ಸ್ವಾಪ್ನಿಕವು ಹೆಚ್ಚು, ಸ್ವಾಪ್ನಿಕಕ್ಕಿಂತ ವ್ಯಾವಹಾರಿಕವು ಹೆಚ್ಚು, ವ್ಯಾವಹಾರಿಕಕ್ಕಿಂತ ಆತ್ಮಿಕವು, ಬ್ರಾಹ್ಮಿಕವು, ಪಾರಮಾರ್ಥಿಕವು ಹೆಚ್ಚು ಸತ್ಯ; ಹೀಗೆ ಸಮಗ್ರ ಸತ್ಯದ ಸೋಪಾನವಿದೆ. ಪ್ರತಿಯೊಂದು ತತ್ವಜ್ಞಾನದಲ್ಲಿಯೂ ಯಾವದಾದರೊಂದು ಬಗೆಯ ತೋರಿಕೆಯನ್ನು ಒಪ್ಪಿಯೆ ಸಾಗಬೇಕಾಗುವದು. ಪಾರ್ಮೆನಾಯಡೀಸ, ಪ್ಲೇಟೋ ಮತ್ತು ಪ್ಲೋಟಿನಸರ ಕಾಲದಿಂದ ಬರ್ಕಲೇ, ಹೆಗೆಲ್, ಮತ್ತು ಬ್ರ್ಯಾಡ್‌ಲೇ ಇವರೀಕಾಲದವರೆಗೂ ಪ್ರಾತಿಭಾಸಿಕದ ಕೂಗು ಅಡಗಿಲ್ಲ. ಪ್ರತಿಭಾಸವಾದದಲ್ಲಿ ಸೂಚಿತವಾಗಿರುವ ಮಹತ್ವದ ನೈತಿಕಾರ್ಥವನ್ನು ಆ ವಾದದ ಟೀಕಾಕಾರರು ಪ್ರತಿಜ್ಞಾಪೂರ್ವಕವಾಗಿಯೆ ಮರೆಯುವಂತೆ ತೋರುತ್ತದೆ. ಇಗೋ ! ಕಾರ್ಲಾಯಿಲನ ವಚನವು, ' ದೇವದೇವನ ಪ್ರಕಟ ಗ್ರಂಥವಾದ ಜಗತ್ತಿನ ಸ್ಪಷ್ಟ ರಹಸ್ಯವನ್ನರಿಯುವ ಯೋಗಕುಶಲ ದೃಷ್ಟಿಯಾಗಲಿ ಶ್ರುತಿಯಾಗಲಿ ಅದೆಲ್ಲಿದೆ ? ನಾವು ಸೇರುವದೊಂದು ಅನಂತ ಸ್ವಪ್ನಕುಂಜ; ನೋಡುತ್ತಿರುವದೊಂದು ಕಡೆಯಿಲ್ಲದ ಕಿಳ್ಳಿಕೇತರಾಟ. ಆಕಾಶಗಂಗೆಯ ಗರ್ಭದೊಳಗಿನ ದೂರತರವಾದ ನಕ್ಷತ್ರಬಿಂದುವೂ ಆ ಅನಂತವನ್ನು ಬೆಳಗಲರಿಯದು; ಶತಮಾನಗಳ ಸಹಸ್ರಾವಧಿ ಶತಮಾನಗಳೂ ಆ ಅನಂತದ ಅಂಚನ್ನೂ ಮುಟ್ಟವು. ನಾದಗಳೂ ವರ್ಣ

ಗಳೂ ನಮ್ಮ ಇಂದ್ರಿಯಗಳಿಗೆ- ಗೋಚರಿಸಿ ಹಾರಿಹೋಗುವವು; ಆದರೆ ಕನಸಿಗನಾದ ಜೀವನೂ ಜಗತ್ತೆಂಬ ಕನಸೂ ಯಾವನ ಕೃತಿಗಳಾಗಿರುವವೋ ಆ ನಿದ್ದೆಹೋದ ಬ್ರಹ್ಮ ವನ್ನು ನಾವು ನೋಡಲರಿಯೆವು. ಅರಿವಿನ ಪರಿವೆಯುಂಟಾದ ಕೆಲವೊಂದು ನಿಮಿಷಗಳ ನ್ನುಳಿದರೆ, ಅವನ ವಿಚಾರದ ಗಾಳಿಯೂ ನಮ್ಮಲ್ಲಿ ಸುಳಿಯದು. ವೈಭವಸಂಪನ್ನವಾದ ಸುರಚಾಪವಂತೆ ಸೃಷ್ಟಿಯು ನಮ್ಮೆದಿರು ಕಂಗೊಳಿಸುವದೆಂದು ಒಬ್ಬನಂದಿರುವನು; ಆದರೆ ಆ ಸುರಚಾಪಕ್ಕೆ ಕಾರಣನಾದ ಸೂರ್ಯನು ಮಾತ್ರ ನಮ್ಮ ಕಣ್ಣಿಗೆ ಮರೆಯಾಗಿದ್ದಾನೆ. ಮತ್ತೆ, ಆ ಜಗತ್ತೆಂಬ ವಿಚಿತ್ರ ಸ್ವಪ್ನದಲ್ಲಿ ನೆರಳು ತಿರುಳೆಂದು ತೋರುವದು ನಮಗೆ. ಗಡದ್ದ ನಿದ್ರೆಯಲ್ಲಿ ಒಳ್ಳೆ ಎಚ್ಚರಿಕೆಯ ಭ್ರಮವು ಈ ಲೋಕಕ್ಕೆ ......ಎಲ್ಲಿದ್ದಾನೆ ಆ ಮ್ಯಾಸಿಡೋನದ ಆ ಅಲೆಕ್ಝಾಂಡರನು ? ಆ ನೆಪೋಲಿಯನ್ನನಾದರೂ ಅದೆಲ್ಲಿ ? ಅವನಾ ಮಾಸ್ಕೋದ ಪಲಾಯನ, ಅವನಾ ಆಸ್ಟರಲಿಟ್ಝದ ಸಂಗ್ರಾಮ ಸಮಯ ! ಅದೆಲ್ಲ ಕೊಳ್ಳಿ ದೆವ್ವನ ಬೇಟೆಯಲ್ಲದೆ ಮತ್ತೇನು?......ಅಗೋ ಆ ತೇಜಿಯನ್ನೇರಿದ ತರುಣವೀರ, ಕಣ್ಣುಗಳು ಕಿಡಿಯುಗುಳುತ್ತಿವೆ, ಬಲವು ಎದೆಯನ್ನೂ ತೋಳನ್ನೂ ತುಂಬಿಕೊಂಡಿದೆ... ಅಯ್ಯೋ ಆ ತೇಜಿಯೂ ಆ ತೇಜಸ್ವಿಯೂ ಎರಡೂ ತೋರಿಕೆಗಳು ! ವ್ಯಕ್ತವಾದ ಶಕ್ತಿಯ ರೂಪಮಾತ್ರ. ಸ್ಥಿರವೆಂದು ತಿಳಿದ ನೆಲದ ಮೇಲೆ ಹೇಗೆ ಬೆಡಗಿನ ನಡಿಗೆಯಿಂದ ಸಾಗಿ ರುವರೆಲ್ಲರು ! ಹುಚ್ಚೇ ! ಪೃಥ್ವಿ ಎಂಬದೊಂದು ಪರಮಾತ್ರ ! ಯಾವಾಗ್ಗೆ ಇಭ್ಭಾಗ ವಾಗಿ ಹರಿದೀತೋ, ಆ ತೇಜಿ ತೇಜಸ್ವಿಯೊರ್ವರೂ ನೆಲೆಯಿಲ್ಲದೆ ನುಲಿಗೂ ನಿಲುಕದಂತೆ ಗಳಂಗಪ್ಪಾಗಿ ಯಾವಾಗ್ಗೆ ಹೋಗುವರೋ ಯಾರು ಬಲ್ಲರು ! ಚಿಃ ! ಎಲ್ಲಿಯ ನೆಲೆ, ಎಲ್ಲಿಯ ನುಲಿ ! ಮನೋರಥವೂ ಅದನ್ನು ಬೆಂಬತ್ತಿ ಹೋಗಲರಿಯದು ! ಗಳಿಗೆಯ ಮೊದಲು ಅವರಿರಲಿಲ್ಲ, ಗಳಿಗೆಯ ಮೇಲೆ ಅವರಿರರು, ಅವರ ಬೂದಿಯೂ ದೊರೆ ಯದು .....ಇಂತು ಈಶನಿರ್ಮಿತ, ಪ್ರತಾಪವಿಸ್ಫುರಿತ, ಚೈತನ್ಯಪುಂಜಗಳಂತೆ ನಾವು ಶೂನ್ಯದಿಂದುದಯಿಸಿ, ವಿಸ್ಮಯ ವಿಸ್ಫಾರಿತನೇತ್ರೆಯಾದ ವಸುಂಧರೆಯು ನೋಡನೋಡು ವಷ್ಟರಲ್ಲಿ ಝುಂಝಾವಾತಸದೃಶ ವೇಗದಿಂದ ಮುಂದೆ ಸಾಗಿ ಮತ್ತೆ ಶೂನ್ಯದಲ್ಲಿ ದುಮ್ಮಿಕ್ಕು ವೆವು......ಆದರೆ ಎಲ್ಲಿಂದ ? ಅಯ್ಯೋ ಮಹಾದೇವ ಅದೆಲ್ಲಿಗೆ ? ಬುದ್ಧಿಗೆ ತಿಳಿಯದು, ಶ್ರದ್ಧೆಗೂ ಹೊಳೆಯದು; ಗೂಢದಿಂದ ಅತಿಗೂಢಕ್ಕೆ, ದೇವನಿಂದ ದೇವನಲ್ಲಿಗೆ, ಇಷ್ಟೇ ತಿಳಿಯುವದು, ಇಷ್ಟೇ ಹೊಳೆಯುವದು !'

---

## ಪ್ರಕರಣ ೫

# ಉಪನಿಷತ್ತುಗಳೂ ಪರಾತ್ಪರ ಸತ್ಯವೂ

೧. **ಪರಾತ್ಪರತತ್ವವು—** ಹೋದ ಪ್ರಕರಣದಲ್ಲಿ ಅನೇಕ ಆಧ್ಯಾತ್ಮಿಕ ವಿಷಯಗಳ ಚರ್ಚೆಯಾಯಿತು. ಆದರೆ ಉಪನಿಷತ್ತುಗಳ ತಿರುಳೇನು, ಅವುಗಳ ಗುಟ್ಟು ಗುರಿಗಳಾವು ಎಂಬ ಎಲ್ಲಕ್ಕೂ ಮಹತ್ವದ ಪ್ರಶ್ನೆಯು ಹಾಗೆಯೆ ಉಳಿಯಿತು. ಈ ವಿಶಾಲವಾದ ವಿಚಾರಸಾಗರದಲ್ಲಿ ವಿವಿಧ ತತ್ವಜ್ಞಾನಗಳ ತೆರೆಗಳ ಹೊಡೆತದಿಂದ ನಮ ಮನಸ್ಸು ಯಾವಾಗಲೂ ಅತ್ತಿತ್ತ ಅಲೆದಾಡುತ್ತಲೆ ಇರಬೇಕೋ ಅಥವಾ ನಮಗೇನಾದ ರೊಂದು ಆಧಾರವು ದೊರೆತು ನಾವು ಸುಖದಿಂದ ಈ ಸಾಗರವನ್ನು ದಾಟಬಹುದೋ ಎಂಬ ಪ್ರಶ್ನೆಯು ನಮಗೆ ಆಗಾಗ್ಗೆ ಎದುರಾಗುವದು. ಉಪನಿಷತ್ತುಗಳಲ್ಲಿ ಕಂಡುಬರುವ ದ್ವೈತ, ವಿಶಿಷ್ಟಾದ್ವೈತ, ಅದ್ವೈತ, ಅನೇಕತ್ವ ಮುಂತಾದ ವಾದಗಳ ಗೊಂದಲದಲ್ಲಿಯೆ ನಾವು ಕಡೆತನಕ ಒದ್ದಾಡಬೇಕೋ ಅಥವಾ ಆ ಪರಾತ್ಪರ ಆಧ್ಯಾತ್ಮಿಕ ತತ್ವವನ್ನು ತಿಳಿಯಲು ಉಪನಿಷತ್ತುಗಳು ಮಾಡಿದ ಎಲ್ಲ ಯತ್ನಗಳಲ್ಲಿಯ ಏಕಸೂತ್ರತೆಯನ್ನು ತೋರಿಸುವಂಥ ಯಾವುದಾದರೊಂದು ಮೂಲಸೂತ್ರವಿರುವದೋ ಎಂಬುದನ್ನು ನೋಡುವದು ಅವಶ್ಯವು. ಅರ್ಥಾತ್ ಪರಾತ್ಪರಸತ್ಯದ ಬಗ್ಗೆ ಉಪನಿಷತ್ಕಾರರ ಕಲ್ಪನೆಯು ಏನಿತ್ತು ಎಂಬುದನ್ನು ನಾವು ಮೊದಲು ಶೋಧಿಸಬೇಕೈಬೇಕು. ಮನುಷ್ಯನಲ್ಲಿ ' ಉಸುರಾಡಿಸುವ ತತ್ವ ' ವೆಂಬ ಮೂಲ ಅರ್ಥವಿದ್ದ ' ಆತ್ಮ ' ತತ್ವವೆ ವಿಶ್ವದ ಮೂಲವು ಎಂದು ಉಪನಿಷತ್ಕಾರರು ಮೇಲಿನ ಪ್ರಶ್ನೆಗೆ ಉತ್ತರವನ್ನಿತ್ತಿರುವರು. ಗ್ರೀಕ ತತ್ವಜ್ಞಾನವನ್ನು ಓದಿದವರಿಗೆ ಉಪನಿಷತ್ತಿನಲ್ಲಿರುವ ಈ ಕಲ್ಪನೆ ಮತ್ತು ಪ್ಲೇಟೋನ ತತ್ವಜ್ಞಾನದ ಕಲ್ಪನೆ ಇವುಗಳಲ್ಲಿಯ ಹೋಲಿಕೆಯು ಸಹಜವಾಗಿ ಹೊಳೆಯುವದು. ಆತ್ಮವೆ ಅಸ್ತಿತ್ವದ ಆದಿತತ್ವವೆಂದು ಉಪನಿಷತ್ಕಾರರ ಅಭಿಪ್ರಾಯವಿರುವದೆಂಬುದನ್ನು ಈ ಪ್ರಕರಣದಲ್ಲಿ ಮುಂದೆ ವಾಚಕರು ಕಾಣಬಹುದು. ಉಪನಿಷತ್ಕಾರರಿಗೆ ಈ ಕಲ್ಪನೆಯು ಹೇಗೆ ಬಂದಿತು ಮತ್ತು ತತ್ವವಿಚಾರದ ಮೂಲ ಪ್ರಶ್ನೆಯನ್ನು ಬಿಡಿಸುವದರಲ್ಲಿ ಈ ಕಲ್ಪನೆಯನ್ನು ಅವರು ಹೇಗೆ ಉಪಯೋಗಿಸಿದರು ಎಂಬುದೆ ಈ ಪ್ರಕರಣದ ವಿಷಯವು.

೨. **ಪರಮ ಸತ್ಯವನ್ನು ಕಂಡುಹಿಡಿಯುವ ಮೂರು ಬಗೆಗಳು—** ತತ್ವಜಾನದ ಇತಿಹಾಸವನ್ನು ತೆರೆದು ನೋಡಿದರೆ ಪರತತ್ವವನ್ನು ತಿಳಿದುಕೊಳ್ಳಲು ಜಿಜ್ಞಾಸು

ಗಳು ಬಗೆಬಗೆಯ ಯತ್ನಗಳನ್ನು ಮಾಡಿರುವರೆಂಬುದು ಕಂಡು ಬರುವುದು. ಆ ಯತ್ನಗಳನ್ನು ಆಧಿಭೌತಿಕ ಆದಿದೈವಿಕ ಆಧ್ಯಾತ್ಮಿಕ ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಈ ತ್ರಿವಿಧ ವಿಚಾರಗಳ ಸಹಾಯದಿಂದ ಪರತತ್ವವನ್ನು ಶೋಧಿಸುವ ಯತ್ನಗಳು ಆಗಿವೆ. ಮನುಷ್ಯಸ್ವಭಾವವು ಈಗಿರುವಂತೆಯೆ ಇರುವವರೆಗೆ ಈ ಮೂರು ವಿಚಾರಪದ್ಧತಿಗಳೆ ಅವನಿಗೆ ಶಕ್ಯವಿರುವವೆಂದು ಡಾ. ಕೇಯರ್ಡ ಇವನು ತನ್ನ 'ಧರ್ಮವಿಕಾಸ' ವೆಂಬ (Evolution of religion) ಪುಸ್ತಕದಲ್ಲಿ ಬರೆದಿರುವನು. ಆ ಪುಸ್ತಕದ ೧ನೆಯ ಪ್ರಕರಣದ ೭೭ ನೆಯ ಪುಟದಲ್ಲಿ 'ಮನುಷ್ಯನು ತನ್ನ ಸುತ್ತಲಿರುವ ಸೃಷ್ಟಿಯ ಕಡೆಗೆ ನೋಡಬಲ್ಲನು, ತನ್ನೊಳಗಿರುವ ಜೀವಾತ್ಮನನ್ನು ಕಾಣಬಲ್ಲನು, ಮತ್ತು ಈ ಅಂತರ್ಬಾಹ್ಯ ಸೃಷ್ಟಿಗಳನ್ನು ಜೋಡಿಸುವ ಹಾಗೂ ಇವೆರಡರಲ್ಲಿಯೂ ಆವಿರ್ಭವಿಸುವ ದೇವರನ್ನು ತಿಳಿದು ಕೊಳ್ಳಬಹುದು,' ಎಂದು ಅವನು ಹೇಳಿರುವನು. ಮೊದಲು ಬಾಹ್ಯಪದಾರ್ಥಗಳ ಜ್ಞಾನವು, ಆಮೇಲೆ ತನ್ನ ಸ್ವಂತದ ಎಚ್ಚರವು, ಆಮೇಲೆ ದೇವರ ಜ್ಞಾನವು, (Evolution of religion ii, 2) ಎಂದು ಅವನು ಜ್ಞಾನದ ಪರಿವಿಡಿಯನ್ನು ಹಚ್ಚಿರುವನು. ಮನುಷ್ಯನು ತನ್ನೊಳಗೆ ತಾನೆ ನೋಡುವದಕ್ಕೂ ಮೊದಲು ಹೊರಗಣ ವಸ್ತುಗಳನ್ನು, ದೇವರನ್ನು ನೋಡುವದಕ್ಕೂ ಮೊದಲು ತನ್ನನ್ನು, ನೋಡುವನೆಂದು ಅವನು ಪ್ರತಿಪಾದಿಸಿರುವನು. ಸತ್ಯದ ಜ್ಞಾನವು ಇದೇ ಕ್ರಮದಿಂದ ಆಗುವದೋ, ಎಂದು ಇಲ್ಲಿ ಪ್ರಶ್ನೆಮಾಡಬಹುದು. ತನ್ನರಿವು ತನಗಾಗುವದಕ್ಕೂ ಪೂರ್ವದಲ್ಲಿ ಮನುಷ್ಯನು ಬಾಹ್ಯ ವಸ್ತುಗಳನ್ನು ನೋಡಲಿಕ್ಕೇಬೇಕೋ ಹೇಗೆ, ದೇವರ ವಿಚಾರವು ಅವನಿಗೆ ಹೊಳೆಯುವ ಪೂರ್ವದಲ್ಲಿ ಅವನು ತನ್ನರಿವನ್ನು ಮಾಡಿಕೊಂಡಿರಲಿಕ್ಕೇಬೇಕೋ ಹೇಗೆ, ಎಂದು ಕೇಳಿದರೆ ತತ್ವಜ್ಞಾನದ ಇತಿಹಾಸವು ಏನು ಉತ್ತರಕೊಡುವುದು ? ಡಾ. ಕೇಯರ್ಡ ಇವರ ವಿಧಾನಕ್ಕೆ ಅನುಕೂಲವಾದ ಉತ್ತರವು ಯಾವಾಗಲೂ ದೊರೆತೀತೆಂದು ಹೇಳಲಿಕ್ಕಾಗದು. ಯಾಕಂದರೆ ಡೆಕಾರ್ಟ ಇವನು ತನ್ನ ತತ್ವಜ್ಞಾನವನ್ನು ಮೊದಲು ಬಾಹ್ಯಸೃಷ್ಟಿಯ ಸತ್ಯತ್ವವನ್ನು ಗ್ರಹಿಸಿ ಆರಂಭಿಸಿಲ್ಲ. ತನ್ನಾತ್ಮವೇ ಆದಿಸತ್ಯವು, ತನ್ನ ಎಚ್ಚರ ಅಥವಾ ಸ್ವಸಂವಿತ್ತೇ ಸೃಷ್ಟಿಯಲ್ಲಿಯ ಮೂಲ ಅಸ್ತಿತ್ವವು, ಮತ್ತು ಒಳಗಣ್ಣಿನಿಂದ ತನ್ನನ್ನು ತಾನು ನೋಡಲಾರಂಭಿಸುವದೆ ತತ್ವವಿಚಾರದ ಪ್ರಾರಂಭವೆಂದು ಅವನು ಪ್ರತಿಪಾದಿಸಿರುವನು. ಜೀವಾತ್ಮನ ವಿಚಾರವನ್ನು ಮಾಡುತ್ತಿರುವಾಗ ಅವನ ಆದಿಕಾರಣನೂ ಅವನಿಗಿಂತ ಪೂರ್ಣನೂ ಆದ ಪರಮಾತ್ಮನ ಕಲ್ಪನೆಯು ಬರುವದು ; ಆಮೇಲೆ ಯಾವ ಸೃಷ್ಟಿಯು ಇಲ್ಲವೆಂದು ಅಥವಾ ಯಾವುದನ್ನು ಒಂದು ದುಷ್ಟ ರಾಕ್ಷಸವು ಹುಟ್ಟಿಸಿತ್ತೆಂದು ಬಿಟ್ಟು ಬಿಟ್ಟದ್ದೆವೋ ಆ ಜಗತ್ತಿನ ಜ್ಞಾನವಾಗುವುದು ಎಂದು ಅವನ ಅಭಿಪ್ರಾಯವು. ಇದಕ್ಕೆ

ಪ್ರತಿಯಾಗಿ ಸ್ಪಾಯನೋಝಾ ಎಂಬ ಈಶಸಾಕ್ಷಾತ್ಕಾರದಿಂದ ಮೈಮರೆತ ತತ್ವಜ್ಞನಿಗೆ ಈ ಜಗತ್ತು ಅಥವಾ ಈ ಜೀವಾತ್ಮನು ಇವೆರಡೂ ಸತ್ಯಗಳಲ್ಲ. ಅವನಿಗೆ ಈಶ್ವರನೊಬ್ಬನೆ ಈ ವಿಶ್ವದ ಆದಿ ಅಂತನು, ಅವನೆ ಸಾರಸರ್ವಸ್ವನು. ಅವನ ತತ್ವಜ್ಞಾನವು ಪರಮಾತ್ಮ ನಲ್ಲಿ ಹುಟ್ಟಿ ಅವನಲ್ಲಿಯೆ ಲಯಹೊಂದುವುದು. ಉಪನಿಷತ್ಕಾರರ ವಿಚಾರಪದ್ಧತಿಯು ಡೆಕಾರ್ಟ ಮತ್ತು ಸ್ಪಾಯನೋಝಾ ಇವರೀರ್ವರ ಪದ್ಧತಿಗಳಿಗಿಂತಲೂ ಭಿನ್ನವಿರುವದು. ಆತ್ಮವೆ ಪರಮ ಸತ್ಯವಿದ್ದು ಜಗತ್ತು ಮತ್ತು ಈಶ್ವರ ಇವೆರಡೂ ಗೌಣವೆಂದು ಅವರ ಮತವು. ಜಗತ್ತು ಅಥವಾ ಈಶ್ವರನಿಗಿಂತ ಆತ್ಮವೆ ಅವರಿಗೆ ಹೆಚ್ಚು ಸತ್ಯವೆನಿಸುತ್ತಿತ್ತು. ಕೊನೆಗೆ ಮಾತ್ರ ಅವರು ಜೀವಾತ್ಮ ಪರಮಾತ್ಮರ ಐಕ್ಯವನ್ನು ಪ್ರತಿಪಾದಿಸಿ ಈ ಎರಡೂ ಬಗೆಯ ವಿಚಾರಪದ್ಧತಿಗಳ ನಡುವಿನ ಭೇದವನ್ನು ಅಳಿಸಿಬಿಡುವರು. ಈ ಬಾಹ್ಯ ಜಗ ತ್ತನ್ನು ನೋಡಿ ತಮ್ಮ ತತ್ವವಿಚಾರವನ್ನು ಆಧಿಭೌತಿಕರೀತಿಯಿಂದ ಅವರು ಆರಂಭಿಸಿ ದ್ದರೂ ಇದರಿಂದ ಪರತತ್ವದ ಬೋಧವಾಗಲಾರದೆಂಬದನ್ನು ಅವರು ಅರಿತಿದ್ದರು. ಆದುದ ರಿಂದ ಮನುಷ್ಯನ ಚಿತ್ತವನ್ನು ಕುರಿತು ವಿಚಾರಮಾಡಲಿಕ್ಕೆ ಬೇಕೆಂದು ಅವರು ಹೇಳಿರುವರು. ಇನ್ನೊಂದು ಪ್ರಯೋಗಮಾಡುವ, ಎಂದು ಆಧಿದೈವಿಕವೆನಿಸುವ ಈಶ್ವರವಿಚಾರವನ್ನೂ ಮಾಡಿನೋಡಿದರು. ಅದೂ ಬಗೆಹರಿಯಲಿಲ್ಲ. ಆಧ್ಯಾತ್ಮಿಕ ವಿಚಾರವೆ ಅವರನ್ನು ಪರತತ್ವದ ವರೆಗೆ ಒಯ್ದು ಮುಟ್ಟಿಸಿತು. ಈ ಪ್ರಕಾರವಾಗಿ ಉಪನಿಷತ್ಕಾರರು ಈ ಪರತತ್ವದ ಪ್ರಶ್ನೆ ಯನ್ನು ಆಧಿಭೌತಿಕ ಆಧಿದೈವಿಕ ಮತ್ತೂ ಆಧ್ಯಾತ್ಮಿಕ ಎಂಬ ಮೂರೂ ಬಗೆಗಳಿಂದ ವಿಚಾರಿಸಿರುವರು. ಆಧಿಭೌತಿಕ ಮತ್ತು ಆಧಿದೈವಿಕ ವಿಚಾರಗಳು ಬಗೆಹರಿಯದಂತೆ ತೋಚಿದ ಕೂಡಲೆ ಆಧ್ಯಾತ್ಮಿಕ ಮಾರ್ಗದಿಂದ ಆತ್ಮವಸ್ತುವನ್ನರಿತು ಉಪನಿಷತ್ಕಾರರು ಕೃತಕೃತ್ಯರಾದರು. ಆದಿಭೌತಿಕ ಮತ್ತು ಆದಿದೈವಿಕ ವಿಚಾರಸರಣಿಗಳು ಕೇವಲ ಗೌಣವೆಂದೂ ಆಧ್ಯಾತ್ಮಿಕ ತತ್ವಪದ್ಧತಿಯೆ ಸತ್ಯವನ್ನು ಸಾಕ್ಷಾತ್ಕರಿಸುವ ನಿಜವಾದ ಮಾರ್ಗವೆಂದೂ ಉಪನಿಷತ್ಕಾರರು ಮನಗಂಡಿದ್ದರೆಂಬುದನ್ನು ಸವಿಸ್ತಾರವಾಗಿ ತೋರಿಸು ವುದೆ ಈ ಪ್ರಕರಣದ ಉದ್ದೇಶವಿರುವುದು.

## ೧. ಆಧಿಭೌತಿಕ ವಿಚಾರಪದ್ಧತಿಯು

**೩. ಆಧಿಭೌತಿಕ ಪದ್ಧತಿಯಿಂದ ಆಧಿದೈವಿಕ ಪದ್ಧತಿಯ ಕಡೆಗೆ**— ಆಧಿಭೌತಿಕ ಪದ್ಧತಿಯೆಂದರೇನು ಮತ್ತು ಅದು ಹೇಗೆ ಸದೋಷವಿರುವದು ಇದನ್ನು ಮೊದಲು ನೋಡುವ. ನಿಸರ್ಗಶಕ್ತಿಗಳೆ ಆತ್ಯಂತಿಕ ಸತ್ಯಗಳೆಂದು ಸಾಮಾನ್ಯರು ತಿಳಿ ಯುವ ಸಂಭವವಿದೆ. ಆದರೆ ಸ್ವಲ್ಪಆಳವಾಗಿ ವಿಚಾರಿಸಿದರೆ ಅವು ಪರಮ ಸತ್ಯಗಳಲ್ಲ

ವೆಂಬುದನ್ನು ಮನಗಾಣಬಹುದು. ಈ ಸಂಗತಿಯು ಛಾಂದೋಗ್ಯದಲ್ಲಿಯ ಒಂದು ಕಥೆಯಿಂದ ಹೆಚ್ಚು ಸ್ಪಷ್ಟವಾಗುವುದು. ' ಉಪಕೋಸಲನು ಸತ್ಯಕಾಮ ಜಾಬಾಲನೆಂಬ ತನ್ನ ಗುರುವಿನ ಕಡೆಗೆ ಜ್ಞಾನಾರ್ಥವಾಗಿ ೧೨ ವರ್ಷಗಳವರೆಗೆ ಇದ್ದು ಏಕನಿಷ್ಠೆಯಿಂದ ಅವನ ಸೇವೆಮಾಡಿದನು. ೧೨ ವರ್ಷಗಳಾದರೂ ಗುರುವು ಅವನಿಗೆ ಅಪ್ಪಣೆಕೊಡಲಿಲ್ಲ. ಮಿಕ್ಕ ಶಿಷ್ಯರಿಗೆ ಅಪ್ಪಣೆಕೊಟ್ಟುಬಿಟ್ಟರೂ ಈತನಿಗೆ ಯಾಕೆ ಅಪ್ಪಣೆ ಕೊಡಲೊಲ್ಲಿರಿ ಎಂದು ಗುರುಪತ್ನಿಯು ಗಂಡನನ್ನು ಕೇಳಿದಳು. ಉಪಕೋಸಲನು ಕಾಡಿಗೆ ಹೋದಾಗ ಯಾವ ಮೂರು ಹೋಮಾಗ್ನಿಗಳನ್ನು ಅವನು ತನ್ನ ಸೇವೆಯಿಂದ ತೋಷಿಸಿದ್ದನೋ ಅವು ಅವನಿಗೆ ಪ್ರತ್ಯಕ್ಷವಾದವು. ಆತ್ಯಂತಿಕ ಸತ್ಯವು ಆದಿತ್ಯನಲ್ಲಿದೆ ಎಂದು ಗಾರ್ಹಪತ್ಯ ಅಗ್ನಿಯು ಅವನಿಗೆ ಹೇಳಿತು. ಆ ಸತ್ಯವು ಚಂದ್ರನಲ್ಲಿದೆ ಎಂದು ಅನ್ವಾಹಾರ್ಯಪಚನ ಅಗ್ನಿಯು ನುಡಿಯಿತು. ಪರಸತ್ಯವು ವಿದ್ಯುತ್ತಿನಲ್ಲಿರುವದೆಂದು ಆಹವನೀಯ ಅಗ್ನಿಯು ಉಪದೇಶಮಾಡಿತು. ಈ ಮಾತುಗಳನ್ನು ಕೇಳಿ ಉಪಕೋಸಲನಿಗೆ ಆ ಕಾಲದ ಪೂರ್ತಿ ಸಮಾಧಾನವೆನಿಸಿತು. ಮನೆಗೆ ಬಂದ ಕೂಡಲೆ, ಬ್ರಹ್ಮಜ್ಞಾನವಾದವರ ಮೋರೆಯಂತೆ ನಿನ್ನ ಮುಖವು ಮಿನುಗುವದು, ಎಂದು ಗುರುಗಳು ಅಂದರು. ' ನನಗೆ ಜ್ಞಾನವು ಆಗಿದ್ದು ನಿಜವಿದ್ದರೆ ಅದು ಆ ಮೂರು ಅಗ್ನಿಗಳಿಂದ ' ಎಂದು ಉಪಕೋಸಲನು ಉತ್ತರಕೊಟ್ಟನು. ' ಅಗ್ನಿಗಳು ನಿನಗೆ ಕೊಟ್ಟ ಜ್ಞಾನವು ಅಪೂರ್ಣವಿರುವುದು, ನಾನು ನಿಜವಾದ ಜ್ಞಾನವನ್ನು ಹೇಳುವೆನು ಕೇಳು. ಸೂರ್ಯ ಚಂದ್ರ ವಿದ್ಯುತ್ ಮುಂತಾದವುಗಳಲ್ಲಿ ಪರಾತ್ಪರಸತ್ಯವು ಅಡಗಿಲ್ಲ ; ಆದರೆ ಕಣ್ಣಿನಲ್ಲಿ ಕಾಣುವ ಮನುಷ್ಯನ ಪ್ರತಿಬಿಂಬವೆ ನಿಜವಸ್ತುವು. ಆ ಪುರುಷನೆ ಆತ್ಮನು, ಅವನೇ ಅಮೃತ, ಅಭಯ, ಬ್ರಹ್ಮನು. ಅವನೇ ಎಲ್ಲ ಸುಖಗಳನ್ನು ದೊರಕಿಸಿಕೊಡುವನು. ಸರ್ವಲೋಕಗಳಲ್ಲಿ ಅವನೇ ಎಲ್ಲಕ್ಕೂ ತೇಜಃಪುಂಜನು. ಇದನ್ನರಿತವನು ಎಲ್ಲರಿಗಿಂತಲೂ ತೇಜಸ್ವಿಯಾಗಿ ಹೊಳೆಯುವನು ' ( ಛಾಂ, ಅ ೪, ಖಂ ೧೦, ಮಂ ೧೫ )ಎಂದು ನುಡಿದನು. ಈ ಕಥೆಯು ಆಧಿಭೌತಿಕ ವಿಚಾರ ಪದ್ಧತಿಯನ್ನು ಹಿಮ್ಮೆಟ್ಟಿಸಿ ಶಾರೀರಿಕ ಆತ್ಮನನ್ನು ಮುಂದೆಚಾಚುವದು. ಆಧಿಭೌತಿಕ ಪದಾರ್ಥಗಳು ಬ್ರಹ್ಮವೆಂಬುದು ಸರಿದೋರದೆ ಇದ್ದುದರಿಂದ ಶರೀರಕ್ಕೆ ಸಂಬಂಧಿಸಿದ ಕಣ್ಣಿನಲ್ಲಿಯೆ ಪರತತ್ವವಿರುವದೆಂದು ಸತ್ಯಕಾಮನು ಪ್ರತಿಪಾದಿಸಿದನು. ಇದಾದರೂ ಗೌಣ ಸತ್ಯವೆ ಎಂಬುದು ಮುಂದೆ ಸಿದ್ಧವಾಗುವದು. ಆದರೆ ಬಾಹ್ಯಸೃಷ್ಟಿಯಿಂದ ನಮ್ಮ ದೃಷ್ಟಿಯನ್ನು ಶರೀರದ ಕಡೆಗೆ ತಿರುವುವ ಕಾರ್ಯವನ್ನು ಈ ಕಥೆಯು ಮಾಡುತ್ತಿದೆ. ಇನ್ನೊಂದೆಡೆಗೆ ಛಾಂದೋಗ್ಯದಲ್ಲಿ ( ಛಾಂ, ಅ ೩, ಖಂ ೧೩ ) ' ದಿವ್ಯವಾದ ಆಕಾಶದಲ್ಲಿ ಪ್ರಕಾಶಮಾನವಾಗಿರುವ ಜ್ಯೋತಿಯು ಅಂತಃಪುರುಷನಲ್ಲಿದ್ದ ಜ್ಯೋತಿಯೆ. ಶರೀರವನ್ನು ಮುಟ್ಟಿ

ದರೆ ಅದು ಬಿಸಿಹತ್ತುವದು, ಇದೇ ಮೇಲಿನ ಸತ್ಯದ ಪ್ರತ್ಯಕ್ಷಪ್ರಮಾಣವು. ಕಿವಿಗಳನ್ನು ಮುಚ್ಚಿದರೆ ಗುಡುಗು, ಹೋರಿಯ ಡುರುಕಿ, ಅಥವಾ ಬೆಂಕಿ ಸುಡುವ ಸಪ್ಪಳದಂತೆ ಕೇಳಿಸುವುದು. ಇದೇ ಮೇಲಿನ ಸತ್ಯದ ಪ್ರಮಾಣವು. ನಿಜವಸ್ತುವು ಈ ರೀತಿ ಮನುಷ್ಯಶರೀರದಲ್ಲಿರುವದೆಂಬುದನ್ನರಿತು ಯಾವನು ಧ್ಯಾನಿಸುವನೊ ಅವನು ಪ್ರಸಿದ್ಧನೂ ಕೀರ್ತಿವಂತನೂ ಆಗುವನು ' ಎಂದು ವರ್ಣನೆಯಿರುವದು. ಮೈತ್ರ್ಯುಪನಿಷತ್ತಿನಲ್ಲಿ ( ಮೈ, ಅ ೨, ಮಂ ೬ ) ಕಿವಿಮುಚ್ಚಿದಕೂಡಲೆ ಕೇಳಿಸುವ ಧ್ವನಿಯೆ ಬ್ರಹ್ಮವೆಂದು ಉಲ್ಲೇಖವಿರುವುದು. ಈ ಬಗೆಯಿಂದ ಮೇಲಿನ ಎಲ್ಲ ಉಲ್ಲೇಖಗಳಲ್ಲಿ ಬಾಹ್ಯವಸ್ತುಗಳನ್ನು ಬಿಟ್ಟು ಶರೀರದ ಯಾವದೊಂದು ಭಾಗದಲ್ಲಿ ಬ್ರಹ್ಮನಿರುವನೆಂದು ವರ್ಣನೆಗಳಿರುವವು. ಇಂದ್ರಿಯವಿಷಯಗಳಾದ ಬಾಹ್ಯ ಪದಾರ್ಥಗಳಲ್ಲಿ ಬ್ರಹ್ಮನಿಲ್ಲವೆಂದು ತಿಳಿದು ಉಪನಿಷತ್ಕಾರರು ಶರೀರದ ಕಡೆಗೆ ಹೊರಳಿದರು. ಆಧ್ಯಾತ್ಮಿಕ ವಿಚಾರಪದ್ಧತಿಯನ್ನನುಸರಿಸುವ ಪೂರ್ವದಲ್ಲಿ ನಡುವೆ ಇದೊಂದು ವಿಶ್ರಾಂತಿಯ ಮೆಟ್ಟು ಉಪನಿಷತ್ಕಾರರಿಗೆ ಬೇಕಾಗಿರುವಂತೆ ತೋರುವದು.

**೪. ಆಧಿಭೌತಿಕ ಮತ್ತು ಶಾರೀರಿಕ ವಿಚಾರಗಳಿಂದ ಆಧ್ಯಾತ್ಮಿಕ ವಿಚಾರಗಳಕಡೆಗೆ—** ಆದಿಭೌತಿಕ ಮತ್ತು ಶರೀರಕ್ಕೆ ಸಂಬಂಧಿಸಿದ ವಸ್ತುಗಳಲ್ಲಿ ಪರತತ್ವವು ದೊರೆಯದು, ಅದರ ಪ್ರಾಪ್ತಿಗಾಗಿ ನಾವು ಆಧ್ಯಾತ್ಮಿಕ ವಿಚಾರವನ್ನೆ ಮಾಡಲಿಕ್ಕೆಬೇಕೆಂದು ಬೃಹದಾರಣ್ಯಕ ( ಬೃ, ಅ ೨, ಬ್ರಾ ೧, ಮಂ ೧–೧೫ ) ಮತ್ತು ಕೌಷೀತಕಿ ( ಕೌ, ಅ ೪, ಮಂ ೧–೧೮ ) ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಉಲ್ಲೇಖವಿರುವದು. ಒಮ್ಮೆ ಗರ್ವಿಷ್ಠನಾದ ಬಾಲಾಕಿಯು ಕಾಶಿಯ ಅರಸನಾದ ಅಜಾತಶತ್ರುವಿನ ಕಡೆಗೆ ಹೋಗಿ ಶ್ರೇಷ್ಠವಾದ ಜ್ಞಾನವನ್ನು ಉಪದೇಶಿಸುವೆನೆಂದು ಜಂಭಬಡಿದನು. ಅರಸನು ಅವನಿಗೆ ಸ್ವಾಗತವನ್ನಿತ್ತು ಸತ್ಕರಿಸಿದನು. ಆದಿತ್ಯನೆ ಅನಾದಿ ಸತ್ಯವೆಂದು ಬಾಲಾಕಿಯು ಹೇಳಲಾರಂಭಿಸಿದನು. ಹೀಗೆ ಆರಂಭಿಸಿ ಬಾಲಾಕಿಯು ಚಂದ್ರ, ಮಿಂಚು, ಮೊಳಗು, ಗಾಳಿ, ಆಕಾಶ, ಅಗ್ನಿ, ನೀರು, ಕನ್ನಡಿ, ಛಾಯೆ, ಪ್ರತಿಧ್ವನಿ, ಧ್ವನಿ, ದೇಹ, ಎಡಗಣ್ಣು, ಬಲಗಣ್ಣು, ಮುಂತಾದವುಗಳಲ್ಲಿ ಪರಸತ್ಯವಿರುವದೆಂದು ಕ್ರಮವಾಗಿ ಹೇಳುತ್ತ ನಡೆದನು. ಕೊನೆಗೆ ಬಾಲಾಕಿಯ ಬಾಯಿಯು ನಿಂತಿತು. ಈ ಬಗೆಯ ತತ್ವವಿಚಾರವು ಸಾಗದಂತಾಯಿತು. ಬಾಲಾಕಿಯ ಆ ಅಸಹಾಯ ಸ್ಥಿತಿಯನ್ನು ನೋಡಿ ಅಜಾತಶತ್ರುವು ಅವನನ್ನು ಒರ್ವ ಮಲಗಿದ ಪುರುಷನೆಡೆಗೆ ಒಯ್ದು, ' ಎಲೈ ಮಹಾತ್ಮನೇ, ಬಿಳೀಬಟ್ಟೆಯನ್ನುಟ್ಟ ಸೋಮರಾಜನೇ ' ಎಂದು ಕೂಗಿದನು. ಆದರೆ ಮಲಗಿದವನು ಅದ್ದರಿಂದ ಎಚ್ಚರಾಗಲಿಲ್ಲ. ಅಜಾತಶತ್ರುವು ತನ್ನ ಬಡಿಗೆಯಿಂದ ಅವನಿಗೆ ಚುಚ್ಚಲು ಸೋಮರಸನು ಎದ್ದನು. ಆಗ ಮಲಗಿದವನಲ್ಲಿಯ ಸುಪ್ತ ಚೈತನ್ಯವೆ ನಿಜವಾದ ಸತ್ಯವೆಂದು ಅಜಾತಶತ್ರುವು ಬಾಲಾ

ಕಿಗೆ ತಿಳಿಹೇಳಿದನು. ಈ ಕಥೆಯಲ್ಲಿ ಆಧಿಭೌತಿಕ ಮತ್ತು ಶಾರೀರಿಕ ವಸ್ತುಗಳಲ್ಲಿ ಸತ್ಯಾತ್ಮನನ್ನು ಶೋಧಿಸುವದು ಸದೋಷವೆಂದು ಸಿದ್ಧಮಾಡಿ ಆಧ್ಯಾತ್ಮಿಕಭೂಮಿಯಲ್ಲಿಯೆ, ಸುಪ್ತ ಚೈತನ್ಯದಲ್ಲಿಯೆ ಬ್ರಹ್ಮನನ್ನು ಹುಡುಕಬೇಕೆಂದು ಪ್ರತಿಪಾದನವಿರುವದು. ಸತ್ಯಾತ್ಮನು ಯಾರು, ಎಂಬ ಪ್ರಶ್ನೆಗೆ ಇದಾವದರೂ ಸಂಪೂರ್ಣ ಸಮಾಧಾನಕಾರಕವಾದ ಉತ್ತರವಲ್ಲವೆಂಬುದನ್ನು ನಾವು ಮುಂದೆ ಮನಗಾಣಬಹುದು. ಆದುದರಿಂದ ಇಷ್ಟರಿಂದ ಸಂತುಷ್ಟರಾಗದೆ ನಾವು ಮುಂದೆ ಸಾಗುವ.

**೫. ದೇವರ ಅಸ್ತಿತ್ವದಬಗ್ಗೆ ಆಧಿಭೌತಿಕ ಪ್ರತಿಪಾದನವು—** ಪರಮಾತ್ಮನ ಅಸ್ತಿತ್ವವನ್ನರಿತುಕೊಳ್ಳುವ ವಿಷಯದಲ್ಲಿ ಆಧಿಭೌತಿಕ ವಿಚಾರವು ಸದೋಷವೂ ಅಪೂರ್ಣವೂ ಇದ್ದು ಶಾರೀರಿಕ ಅಥವಾ ಆಧ್ಯಾತ್ಮಿಕ ವಿಚಾರಪದ್ಧತಿಯೆ ಆ ವಿಷಯದಲ್ಲಿ ಸಮರ್ಥವೆಂದು ಕಂಡುಬಂದರೂ ಉಪನಿಷತ್ಕಾರರಿಗೆ ಆಧಿಭೌತಿಕ ಪದ್ಧತಿಯಿಂದ ಪರತತ್ವದ ಗುರುತೇ ಆಗಲಿಲ್ಲವೆಂದು ಹೇಳಲಿಕ್ಕಾಗದು. ಸ್ವಲ್ಪ ಸೂಕ್ಷ್ಮವಿಚಾರಮಾಡಿ ನೋಡಿದರೆ ಪರತತ್ವದ ಅಸ್ತಿತ್ವವನ್ನು ಕುರಿತು ಗ್ರೀಕ ತತ್ವಜ್ಞರಿಗೆ ಯಾವ ಆಧಿಭೌತಿಕ ಪ್ರಮಾಣಗಳು ಕಂಡು ಬಂದವೊ ಅವೇ ಉಪನಿಷತ್ಕಾರರಿಗಾವದರೂ ತೋರಿದವೆನ್ನಬಹುದು. ಈ ದೃಶ್ಯ ಸೃಷ್ಟಿಯ ಆಚೆಗೆ ಇದರ ಉತ್ಪತ್ತಿಸ್ಥಿತಿಲಯಕ್ಕೆ ಕಾರಣವಾಗಿರುವ ಒಂದು ಗೂಢ ತತ್ವವು ಇದ್ದೇ ಇರುವದೆಂದೂ ' ಯಾವುದರಿಂದ ಎಲ್ಲ ಭೂತಮಾತ್ರಗಳು ಹುಟ್ಟುವವೊ ಯಾವುದರ ಬಲದಿಂದ ಬಾಳುವವೊ ಯಾವುದರಲ್ಲಿ ಲಯಹೊಂದುವವೊ ಅದೇ ಸತ್ಯವು, ಅದನ್ನು ತಿಳಿದುಕೋ '. ಎಂದೂ ತೈತ್ತಿರೀಯದಲ್ಲಿ ( ತೈ, ವಲ್ಲಿ ೩, ಅ ೧ ) ಸ್ಪಷ್ಟವಾದ ಉಲ್ಲೇಖವಿರುವದು. ಈ ವಿಶ್ವವೆಲ್ಲ ಪರತತ್ವದಿಂದ ಹುಟ್ಟಿ ಅದರಲ್ಲಿಯೆ ವಾಸಿಸಿ ಅದರಲ್ಲಿಯೆ ಲಯಹೊಂದುವದು, ಇದನ್ನರಿತು ಶಾಂತನಾಗಿ ಆ ಪರಬ್ರಹ್ಮವನ್ನುಪಾಸಿಸು, ಎಂದು ಛಾಂದೋಗ್ಯೋಪನಿಷತ್ತು ( ಛಾಂ, ಅ ೩, ಖಂ ೧೪, ಮಂ ೧ ) ' ತಜ್ಜಲಾನ್ ' ಎಂಬ ಒಂದೇ ಒಂದು ಸೂತ್ರರೂಪವಾಗಿರುವ ಮಂತ್ರದಿಂದ ಉಪದೇಶಿಸುವದು. ಈ ವಿಶ್ವದ ಆಧಾರವಾಗಿರುವ ಒಂದು ಆತ್ಯಂತಿಕ ಸತ್ಯದ ಅಸ್ತಿತ್ವವನ್ನು ಕುರಿತು ಈ ಬಗೆಯ ಆಧಿಭೌತಿಕ ಪ್ರಮಾಣವು ತತ್ವಾಭ್ಯಾಸಿಗಳಾದ ಎಲ್ಲರಿಗೂ ಗೊತ್ತು. ಅದೇ ಸಂಗತಿಯು ಉಪನಿಷತ್ತುಗಳಲ್ಲಿಯೂ ಇದೆ. ಪರಂಪರಾಗತವಾದ ಈ ಕೋಟಿಕ್ರಮದ ವಿರುದ್ಧ ಕಾಂಟನು ಮಂಡಿಸಿದ ಆಕ್ಷೇಪಗಳನ್ನೆ ಉಪನಿಷತ್ಕಾರರ ವಿರುದ್ಧ ಇಲ್ಲಿಯಾದರೂ ಎತ್ತಬಹುದು. ಆದರೆ ಹಾಗೆ ಮಾಡಿದಾಕ್ಷಣಕ್ಕೆ ಉಪನಿಷತ್ತುಗಳಲ್ಲಿ ಈ ವಿಚಾರಸರಣಿಯು ಇರುವದೆಂಬ ಮಾತು ಸುಳ್ಳಾಗಲಾರದು. ಒಮ್ಮೆ ಆ ಪರತತ್ವದ ಅಸ್ತಿತ್ವವನ್ನು ನೀವು ಒಪ್ಪಿಕೊಂಡರೆ ಸಾಕು. ಆ ತತ್ವವು ಸರ್ವಶಕ್ತಿಮಾನ್ ಇದ್ದು ಈ ನಿಸರ್ಗಶಕ್ತಿಗಳು ಕೇವಲ ಅದರ

ಅಂಶಾವಿರ್ಭಾವಗಳೆಂದು ಉಪನಿಷತ್ಕಾರರು ಪ್ರತಿಪಾದಿಸಿ ಸಿದ್ಧ ಮಾಡುವರು. ಈ ಬಗ್ಗೆ ಕೇನೋಪನಿಷತ್ತಿನಲ್ಲಿ ( ಕೇ, ಖಂ ೩–೪ ) ಒಂದು ಮನೋರಂಜಕವಾದ ಕಥೆಯಿದೆ. ತತ್ವಜ್ಞಾನದ ಗ್ರಂಥಗಳಲ್ಲಿ ಕೊಟ್ಟ ಕಥೆಗಳೆಂದರೆ ತಾತ್ವಿಕ ಸತ್ಯವನ್ನು ರೂಪಕಗಳಿಂದ ಬಣ್ಣಿಸುವ ಪ್ರಯತ್ನಗಳೆ ಸೈ. ದರ್ಪಾಭಿಮಾನಗಳಿಂದ ತುಂಬಿದ ನಿಸರ್ಗದೇವತೆಗಳನ್ನು ಬ್ರಹ್ಮನು ಹೀಯಾಳಿಸಿದ ಕಥೆಯು ಇದೇ ಮಾದರಿಯದಿರುವುದು. ಆ ಕಥೆಯು ಹೀಗಿರುವದು: ‘ ಒಮ್ಮೆ ದೇವಾಸುರರ ನಡುವೆ ತುಮುಲ ಯುದ್ಧವಾಯಿತು. ಅದರಲ್ಲಿ ದೇವತೆಗಳಿಗೆ ಜಯವಾಯಿತು. ಸರ್ವಶಕ್ತಿಮಾನನಾದ ಬ್ರಹ್ಮನ ಅನುಗ್ರಹದಿಂದಲೆ ತಮಗೆ ಗೆಲವಾಯಿತೆಂಬುದನ್ನು ಮರೆತು ದೇವತೆಗಳು ದರ್ಪದಿಂದ ದುರಭಿಮಾನಿಗಳಾದರು. ಅದನ್ನು ತಿಳಿದು ಬ್ರಹ್ಮನು ಒಮ್ಮೆಲೆ ಅವರೆಲ್ಲರಿಗೆ ಎದುರಾದನು. ಅವನನ್ನು ನೋಡಿ ಎಲ್ಲರೂ ವಿಸ್ಮಿತರಾದರು. ಆ ಮಹಾ ಯಕ್ಷದ ( ವಿಲಕ್ಷಣವಸ್ತು ) ಸತ್ಯಸ್ವರೂಪವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಅವರು ತಮ್ಮಲ್ಲಿಯವನೊಬ್ಬನಾದ ಅಗ್ನಿದೇವತೆಯನ್ನು ಕಳುಹಿಸಿದರು. ಅವನು ಗರ್ವದಿಂದ ಬ್ರಹ್ಮನೆಡೆಗೆ ಹೋದನು. ನೀನು ಯಾರು, ಎಂದು ಬ್ರಹ್ಮನು ಕೇಳಲು, ನಾನು ಜಾತವೇದನು. ಮನಸ್ಸಿಗೆ ಬಂದರೆ ಈ ವಿಶ್ವವನ್ನೆಲ್ಲ ಸುಟ್ಟು ಬಿಡುವ ಸಾಮರ್ಥ್ಯವು ನನ್ನಲ್ಲಿರುವುದೆಂದು, ಅವನು ಹೇಳಿದನು. ಬ್ರಹ್ಮನು ಅವನೆದುರಿಗೆ ಒಂದು ಕಡ್ಡಿಯನ್ನು ಚಲ್ಲಿ, ಇದನ್ನು ಸುಡು, ಎಂದು ಅಪ್ಪಣೆಕೊಟ್ಟನು. ತನ್ನ ಶಕ್ತಿ ಸರ್ವಸ್ವವನ್ನು ಉಪಯೋಗಿಸಿದರೂ ಆ ಕಡ್ಡಿಯನ್ನು ಸುಡುವದು ಅಗ್ನಿಯಿಂದಾಗಲಿಲ್ಲ. ಆದುದರಿಂದ ನಿರಾಶನಾಗಿ ನಾಚಿ ಅವನು ಹಿಂತಿರುಗಿದನು. ಆಮೇಲೆ ದೇವತೆಗಳು ವಾಯುದೇವನನ್ನು ಕಳುಹಿಸಿದರು. ಬ್ರಹ್ಮನು ಅದೇ ಪ್ರಶ್ನೆಯನ್ನು ಕೇಳಲಾಗಿ, ನಾನು ಮಾತರಿಶ್ವನು, ಈ ವಿಶ್ವದಲ್ಲಿಯ ಬೇಕಾದ ವಸ್ತುವನ್ನು ನಾನು ಹಾರಿಸಿಬಿಡಬಲ್ಲೆನೆಂದು ವಾಯುವು ಹೇಳಿದನು. ಅದೇ ಕಡ್ಡಿಯನ್ನು ಬ್ರಹ್ಮನು ಅವನ ಮುಂದಿಟ್ಟನು. ಏನು ಮಾಡಿದರೂ ಅದನ್ನು ಅತಿತ್ತ ಸರಿಸುವದು ಸಹ ವಾಯುದೇವನಿಗಾಗಲಿಲ್ಲ. ಆ ಬ್ರಹ್ಮನನ್ನರಿಯದೆ ನಾಚಿ ವಾಯುವು ತಿರುಗಿಬಂದನು. ಆಗ ದೇವತೆಗಳು ಇಂದ್ರನನ್ನು ಕಳುಹಿಸಿದರು. ಅಗ್ನಿ ವಾಯುಗಳಿಗಿಂತ ಇಂದ್ರನು ಹೆಚ್ಚು ವಿನಯಸಂಪನ್ನನಿದ್ದನು. ಬ್ರಹ್ಮಸ್ವರೂಪವನ್ನರಿತುಕೊಳ್ಳುವದಕ್ಕಾಗಿ ಅವನು ಬ್ರಹ್ಮನೆಡೆಗೆ ಹೋದನು. ಕೂಡಲೆ ಬ್ರಹ್ಮನು ಅಂತರ್ಧಾನ ಹೊಂದಿದನು. ಇಂದ್ರನ ವಿನಯವೆ ಇದರ ಕಾರಣವು. ಬ್ರಹ್ಮನು ಅದೃಶ್ಯನಾದ ಸ್ಥಾನದಲ್ಲಿಯೆ ದಿವ್ಯ ಸುಂದರಿಯಾದ ಉಮಾದೇವಿಯು ಇಂದ್ರನಿಗೆ ಪ್ರತ್ಯಕ್ಷಳಾದಳು. ಆ ಮಹಾ ಯಕ್ಷವು ಯಾರು, ಎಂದು ಇಂದ್ರನು ಕೇಳಲಾಗಿ, ಅವನು ಬ್ರಹ್ಮನು, ಅವನ ಸಾಮರ್ಥ್ಯದಿಂದಲೆ ದೇವತೆಗಳು ಅಸುರರನ್ನು ಗೆದ್ದರೆಂದು ಆಕೆ ಹೇಳಿದಳು. ದೇವತೆಗಳ

ಶಕ್ತಿಯು ಆ ಬ್ರಹ್ಮನ ಶಕ್ತಿಯ ಅಂಶವೆಂಬುದನ್ನು ಬುದ್ಧಿವಂತನಾದ ಇಂದ್ರನು ಅರಿತುಕೊಂಡನು. ತನ್ನ ವಿನಯದ ಮೂಲಕವೆ ಅವನು ಎಲ್ಲರಿಗಿಂತಲೂ ಬ್ರಹ್ಮನ ಹತ್ತರ ಹೋಗಿ ಅವನನ್ನು ಸ್ಪರ್ಶಿಸಿದನು. ಆದುದರಿಂದಲೆ ಅವನು ಎಲ್ಲ ದೇವತೆಗಳಲ್ಲಿ ಶ್ರೇಷ್ಠನಾದನು. ಮಿಂಚಿನಲ್ಲಿ ಹೊಳೆದು ಅದೃಶ್ಯವಾಗುವ ಶಕ್ತಿಯು ಬ್ರಹ್ಮನದೇ. ಆ ಬ್ರಹ್ಮಶಕ್ತಿಯೆ ನಮ್ಮ ಮನಸಿನಲ್ಲಿ ಚೈತನ್ಯವನ್ನುಂಟುಮಾಡಿ ಸ್ವಸಾಮರ್ಥ್ಯದಿಂದ ಸಂಕಲ್ಪಗಳನ್ನು ಮಾಡುವದು.' ಈ ಕಥೆಯ ಗುಟ್ಟೇನು ? ಎಲ್ಲ ಶಾರೀರಿಕ, ಮಾನಸಿಕ, ಶಕ್ತಿಗಳು ಬ್ರಹ್ಮಶಕ್ತಿಯ ಆವಿರ್ಭಾವಗಳು ಎಂಬುದೆ ಈ ಕಥೆಯ ತಿರುಳು. ಆಧಿಭೌತಿಕ ವಿಚಾರಸರಣಿಯಿಂದಲೆ ಮುಂದೆ ಸಾಗಿ ಕೇನೋಪನಿಷತ್ತನ್ನು ಬರೆದ ಋಷಿಯು ಈ ನಿಸರ್ಗ ಮತ್ತು ಮನಸು ಇವುಗಳಾಚೆಗಿರುವ ಅವ್ಯಕ್ತ ಶಕ್ತಿಯನ್ನು ಕಂಡು ಹಿಡಿದಿರುವನು. ಆ ಶಕ್ತಿಯೆ ಪರತತ್ವವೆಂಬುದಂತೂ ಸ್ಪಷ್ಟವೆ ಇದೆ.

**೬. ಬ್ರಹ್ಮನು ಪರಂಜ್ಯೋತಿಯು**—ಜಗತ್ತಿನಲ್ಲಿ ದೃಗ್ಗೋಚರವಾಗುತ್ತಿರುವ ವ್ಯಕ್ತ ಶಕ್ತಿಯೊಂದೆ ಬ್ರಹ್ಮನದೆಂದು ಯಾರೂ ತಿಳಿಯುಕೂಡದು. ಯಾಕಂದರೆ ಅತ್ತಿತ್ತ ಕಾಣುವ ಬೆಳಕು ಮತ್ತು ಈ ಜಗತ್ತಿನಲ್ಲಿಯ ಎಲ್ಲ ಪ್ರಕಾಶವು ಆ ಪರಾತ್ಪರ ಬ್ರಹ್ಮನ ಅವ್ಯಕ್ತ ಜ್ಯೋತಿಯ ವ್ಯಕ್ತಸ್ವರೂಪಗಳೇ ಇರುವವು. ' ಸೂರ್ಯನು ತನ್ನ ಬೆಳಕಿನಿಂದ ಬೆಳಗುವನೇನು ? ಚಂದ್ರತಾರಕಗಳಿಗೆ ತಮ್ಮ ಸ್ವಂತದ ಬೆಳಕಿರುವದೇನು ? ಮಿಂಚು ಸ್ವಪ್ರಕಾಶದಿಂದ ಮಿನುಗುವದೇನು ? ' ಎಂದು ಪ್ರಶ್ನೆಮಾಡಿ ' ಛೇ, ಅವು ಸ್ವಯಂ ಪ್ರಕಾಶಿಗಳಲ್ಲ; ಸ್ವರ್ಗೀಯವಾದ ಅವುಗಳಿಗೆ ಸ್ವಪ್ರಕಾಶವಿಲ್ಲದ ಮೇಲೆ ಪಾರ್ಥಿವ ಅಗ್ನಿಗೆ ಅದೆಲ್ಲಿಂದ ಬರಬೇಕು ? ' ಎಂದು ಕಠೋಪನಿಷತ್ತು ಕೇಳುವುದು. ಈ ಪ್ರಕಾಶಮಾನವಾಗಿ ತೋರುವ ಅನೇಕ ಪದಾರ್ಥಗಳು ಸ್ವಪ್ರಕಾಶದಿಂದ ಬೆಳಗುವವೆನ್ನಬೇಕೋ ಅಥವಾ ಇವೆಲ್ಲವುಗಳಾಧಾರವಾಗಿರುವ ಪರಬ್ರಹ್ಮವಸ್ತುವಿನ ತೇಜದ ಸಹಾಯದಿಂದ ಇವು ಹೊಳೆಯುದವೆನ್ನಬೇಕೋ ? ' ಬ್ರಹ್ಮನಿಗಿಂತ ಮೊದಲು ಈ ಸೂರ್ಯನು ಪ್ರಕಾಶಿಸುವದಿಲ್ಲ, ಈ ಚಂದ್ರ ಚಿಕ್ಕಿ ಮುಂತಾದವುಗಳೂ ಬೆಳಗುವದಿಲ್ಲ. ಅಂದಮೇಲೆ ಈ ಪಾರ್ಥಿವ ಅಗ್ನಿಯ ಹೆಸರೇ ಬೇಡ. ಆ ಪರಬ್ರಹ್ಮನು ಪ್ರಕಾಶಿಸಿದ ಮೇಲೆ ಇವೆಲ್ಲ ಬೆಳಗಲಾರಂಭಿಸುವವು. ಅವನ ಬೆಳಕಿನಿಂದ ಅವು ಬೆಳಕುಳ್ಳವುಗಳಾಗುವವು ' ಎಂದು ಕಠೋಪನಿಷತ್ತಿನಲ್ಲಿ ( ಕಠ, ಅ ೨, ವಲ್ಲಿ ೫, ಮಂ ೧೫ ) ಆ ಪರಂಜ್ಯೋತಿ ಪರಬ್ರಹ್ಮನ ವರ್ಣನೆ ಇರುವದು.

**೭. ಪರಬ್ರಹ್ಮವು ಈ ವಿಶ್ವದ ಸೂಕ್ಷ್ಮಸಾರವು**— ಸಕಲ ಚರಾಚರ ಸೃಷ್ಟಿಯ ಉಗಮಸ್ಥಾನವಾದ ವಿಶ್ವದಲ್ಲಿಯ ಸರ್ವ ಶಕ್ತಿ ಮತ್ತು ಸರ್ವ ಪ್ರಕಾಶಗಳಿಗೆ

ಆದಿಕಾರಣನಾದ ಬ್ರಹ್ಮನೆ ಈ ದೃಗ್ಗೋಚರವಾಗಿರುವ ಸ್ಥೂಲ ಬಾಹ್ಯ ಜಗತ್ತಿನ ಸೂಕ್ಷ್ಮ ವಾದ ಸಾರಸರ್ವಸ್ವನಿರುವನೆಂದು ಉಪನಿಷತ್ಕಾರರು ಹೇಳುವರು. ಈ ವಿಷಯವನ್ನು ಕುರಿತು ಛಾಂದೋಗ್ಯದಲ್ಲಿ (ಛಾಂ, ಅ ೬, ಖಂ ೧೨) ಒಂದು ಗುರುಶಿಷ್ಯ ಸಂವಾದ ವಿರುವದು. ಸೃಷ್ಟಿಯ ಸಾರವು ಎಷ್ಟು ಸೂಕ್ಷ್ಮವಿರುವದೆಂಬದನ್ನು ತೋರಿಸುವಗೋಸುಗ ಗುರುವು ಶ್ವೇತಕೇತುವಿಗೆ ಆಲದ ಮರದ ಹಣ್ಣನ್ನು ತರಹೇಳಿ, ಅದನ್ನು ಸೀಳು ಎಂದು ಅಪ್ಪಣೆ ಕೊಟ್ಟನು. ಸೀಳಿದ ಮೇಲೆ ಅದರಲ್ಲೇನಿದೆ ನೋಡು, ಎಂದು ಹೇಳಿದನು. ಆಗ ಶಿಷ್ಯನು ಅದರಲ್ಲಿ ಅತಿಶಯ ಸೂಕ್ಷ್ಮವಾಗಿರುವ ಅನಂತ ಬೀಜಗಳನ್ನು ಕಂಡನು. ಆ ಬೀಜ ಗಳಲ್ಲಿ ಒಂದನ್ನು ಒಡೆದು ನೋಡು ಎಂದು ಗುರುಗಳು ಆಜ್ಞಾಪಿಸಲಾಗಿ ಒಂದು ಬೀಜ ವನ್ನು ಒಡೆದು ಅದರಲ್ಲಿ ಏನೂ ಇಲ್ಲವೆಂದು ಶಿಷ್ಯನಾದ ಶ್ವೇತಕೇತುವು ಹೇಳಿದನು. ಆಗ 'ಮಗುವೇ, ಯಾವುದು ನಿನಗೆ ಕಾಣಿಸುವದಿಲ್ಲವೊ ಆ ಸೂಕ್ಷ್ಮವಸ್ತುವೆ ಈ ಮರದ ಮೂಲವೆಂದು ತಿಳಿ. ಈ ಮಾತನ್ನು ನಂಬು' ಎಂದು ಗುರುವಾದ ಉದ್ದಾಲಕ ಆರುಣಿಯು ನುಡಿದನು. ಈ ವಿಶ್ವದ ಆದಿಕಾರಣವು ಸೂಕ್ಷ್ಮವೂ ಅವ್ಯಕ್ತವೂ ಇರುವುದೆಂದೂ ವ್ಯಕ್ತ ಸೃಷ್ಟಿಯು ವಿನಾಶಿಯೂ ಪರಿವರ್ತನಶೀಲವೂ ಇರುವದೆಂದೂ ಈ ಕಥೆಯು ನಮಗೆ ಸೂಚಿ ಸುವುದು. ಈ ರೂಪಕದಲ್ಲಿ ಇನ್ನೊಂದು ಸಂಗತಿಯು ಮಹತ್ವದ್ದಿರುವದು. ಅದೇನಂದರೆ 'ಆಲದ ಮರದ ಮೂಲವೆಂದು ಹೇಳಿದ ಅವ್ಯಕ್ತ ವಸ್ತುವೆ ಆತ್ಮವು ಮತ್ತು ನೀನು ಆ ವಸ್ತುವೆ ಇರುವಿ' ಎಂದು ಗುರುಗಳು ಶಿಷ್ಯನಿಗೆ ಹೇಳಿದ್ದು. ಇದರ ಮೇಲಿಂದ ಪರ ಬ್ರಹ್ಮನನ್ನು ಕಂಡು ಹಿಡಿಯಲಿಕ್ಕೆ ಆಧಿಭೌತಿಕ ವಿಚಾರಪದ್ಧತಿಯು ಸಾಕಾಗದೆಂಬದು ಇಲ್ಲಿ ಸ್ಪಷ್ಟವಾಗಿ ತೋರುವದು. ಇದೇ ರೀತಿ ವಿಶ್ವಾಧಾರವಾದ ವಸ್ತುವೂ ಮನುಷ್ಯನ ಮನಸ್ಸಿನ ಆಚೆಗಿದ್ದ ಆತ್ಮನೂ ಒಂದೇ ಎಂದು ಪ್ರತಿಪಾದಿಸುವ ಪೂರ್ವದಲ್ಲಿ ಆಧ್ಯಾತ್ಮಿಕ ವಿಚಾರದ ಸಹಾಯವನ್ನು ಪಡೆಯಲಿಕ್ಕೇ ಬೇಕೆಂಬುದೂ ಸ್ಪಷ್ಟವಾಗಿ ತೋರುವದು. ಈ ಬಾಹ್ಯ ಜಗತ್ತು ಮತ್ತು ಈ ನಮ್ಮ ಚಿತ್ತ ಇವೆರಡಕ್ಕೂ ಒಂದೆ ಬ್ರಹ್ಮವಸ್ತುವು ಆಧಾರವಾ ಗಿರುವದೆಂದು ತಿಳಿಯುವ ವರೆಗೆ ಈ ವಿಶ್ವವೆಲ್ಲ ಒಂದೇ ಇರುವದೆಂದು ಅನ್ನಲಾಗದು.

**೮. ಶಾರೀರಿಕ ಮತ್ತು ಆಧಿದೈವಿಕ ವಿಚಾರಪದ್ಧತಿಯು—** ಮಾನವೀ ವಿಚಾರವಿಕಾಸದ ಇತಿಹಾಸವನ್ನು ಪರಿಶೀಲಿಸಿದರೆ ಪರತತ್ವವನ್ನು ಶೋಧಿಸು ವಾಗ ಆಧಿಭೌತಿಕ ವಿಚಾರಪದ್ಧತಿಯು ಶಾರೀರಿಕ ಮತ್ತು ಆಧಿದೈವಿಕ ವಿಚಾರಪದ್ಧತಿಯ ಸಹಾಯವನ್ನು ತೆಗೆದುಕೊಳ್ಳುವದೆಂದು ಕಂಡು ಬರುತ್ತದೆ. ಉಪನಿಷತ್ತುಗಳಲ್ಲಿಯೂ ಇದೇ ಬಗೆಯ ವಿಚಾರವಿಕಾಸವು ಇರುವದು. ಬ್ರಹ್ಮನು ವಿಶಿಷ್ಟ ಉದ್ದೇಶವನ್ನಿಟ್ಟು ಕೊಂಡು ಮೊದಲು ಒಂದು ಪ್ರಬಂಧವನ್ನು ಕಲ್ಪಿಸಿ ಸೃಷ್ಟಿಯನ್ನು ಹುಟ್ಟಿಸಿದನೆಂದು ಕೆಲ

ವೆಡೆಗೆ, ಹಾಗೆ ಪೂರ್ವಸಂಕಲ್ಪಾದಿಗಳೇನೂ ಇಲ್ಲದೆ ಸೃಷ್ಟಿಯು ತನ್ನಿಂದ ತಾನೇ ಯಾವುದೋ ಒಂದು ಕ್ರಮದಿಂದ ವ್ಯಕ್ತವಾಗಲಾರಂಭಿಸಿತು ಎಂದು ಕೆಲವೆಡೆಗೆ, ವರ್ಣನೆಗಳಿರುವವು. ದೇವರು ಒರ್ವ ವ್ಯಕ್ತಿ ಇರುವನು, ಅವನು 'ಪುರುಷವಿಧನು' ಎಂದು ನಂಬುವವರು ಮೊದಲಿನ ವಿಧಾನದಲ್ಲಿಯೂ ಅವನು ನಿರ್ಗುಣ, ನಿರಾಕಾರ, ವ್ಯಕ್ತಿತ್ವರಹಿತ ವಸ್ತು ಎಂದು ನಂಬುವವರು ಎರಡನೆಯ ವಿಧಾನದಲ್ಲಿಯೂ ವಿಶ್ವಾಸವನ್ನಿಡುವರು. ಉಪನಿಷತ್ತುಗಳಲ್ಲಿ ಉಪಲಬ್ಧವಿರುವ ಸೃಷ್ಟಿಕ್ರಮದ ವರ್ಣನೆಗಳಲ್ಲಿ ಈ ಎರಡೂ ವಿಚಾರಗಳು ಬೆರೆತಿರುವದನ್ನು ನಾವು ನೋಡಬಹುದು. ಛಾಂದೋಗ್ಯದಲ್ಲಿ (ಛಾಂ, ಅ ೮, ಖಂ ೪, ಮಂ ೧) ವ್ಯಕ್ತಿತ್ವವಿಶಿಷ್ಟ ಆತ್ಮನು 'ವ್ಯಕ್ತಿತ್ವರಹಿತವಾದ ಒಂದು ವಿಶಾಲ ಒಡ್ಡಿನಂತಿದ್ದು ಈ ವಿಶ್ವದ ಪ್ರವಾಹವನ್ನು ಸರಿಯಾಗಿ ನಿಲ್ಲಿಸಿರುವನೆಂದೂ ಈ ಅನಾದಿ ಸೇತುವನ್ನು ಹಗಲಿರುಳುಗಳಾಗಲಿ ಮುಪ್ಪು ಸಾವುಗಳಾಗಲಿ ಸುಖದುಃಖಗಳಾಗಲಿ ಪುಣ್ಯಪಾಪಗಳಾಗಲಿ ಯಾವೂ ದಾಟಲಾರವೆಂದೂ' ಉಲ್ಲೇಖವಿರುವದು. 'ಈ ಅಕ್ಷರದ ಶಾಸನದಿಂದಲೆ ಸೂರ್ಯಚಂದ್ರರು ತಮ್ಮ ಸ್ಥಾನದಲ್ಲಿ ಸ್ಥಿರವಾಗಿರುವರು, ದ್ಯಾವಾಪೃಥಿವಿಗಳು ನೆಲೆಯಾಗಿ ನಿಂತಿರುವವು. ಈ ಅಕ್ಷರ ಬ್ರಹ್ಮದ ಅಪ್ಪಣೆಯಿಂದಲೆ ನಿಮಿಷ ಮುಹೂರ್ತ ದಿನ ರಾತ್ರಿ ಋತು ವರ್ಷ ಮುಂತಾದ ಕಾಲವಿಭಾಗಗಳು ಸರಿಯಾಗಿ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿರುವವು. ಈ ಶ್ವೇತಪರ್ವತ ಶ್ರೇಣಿಯಿಂದ ಕೆಲವು ನದಿಗಳು ಪೂರ್ವಕ್ಕೆ ಕೆಲವು ಪಶ್ಚಿಮಕ್ಕೆ ಹರಿಯುವದಾದರೂ ಅಕ್ಷರದ ಪ್ರಶಾಸನದಿಂದಲೆ' ಎಂದು ಬೃಹದಾರಣ್ಯಕದಲ್ಲಿ (ಬೃ, ಅ ೩, ಬ್ರಾ ೮, ಮಂ ೯) ಋಷಿಗಳು ಹೇಳಿರುವರು. ಮೇಲಿನ ಶಾರೀರಿಕ ಮತ್ತು ಆಧಿದೈವಿಕ ವಿಚಾರಸರಣಿಯಲ್ಲಿ ಬೆರೆತಿರುವ ಬ್ರಹ್ಮನ ಸಗುಣ ನಿರ್ಗುಣ ಅಥವಾ ವ್ಯಕ್ತಿತ್ವವಿಶಿಷ್ಟ ವ್ಯಕ್ತಿತ್ವವಿರಹಿತ ವರ್ಣನೆಗಳನ್ನು ನಾವು ಇಲ್ಲಿ ಬೇರ್ಪಡಿಸಲಿಚ್ಛಿಸುವದಿಲ್ಲ. ಸೃಷ್ಟಿಯು ಸಗುಣ ಈಶ್ವರನ ಸಂಕಲ್ಪದಿಂದ ಹುಟ್ಟಿತೋ ಅಥವಾ ತನ್ನಷ್ಟಕ್ಕೆ ತಾನೇ ನಿರ್ಗುಣ ಬ್ರಹ್ಮನಿಂದ ಕ್ರಮಬದ್ಧವಾಗಿ ಪಸರಿಸಿತೋ ಎಂಬುದನ್ನೂ ಇಲ್ಲಿ ವಿಮರ್ಶಿಸುವದಿಲ್ಲ. ಆದರೆ ಉಪನಿಷತ್ತುಗಳಲ್ಲಿಯೂ ಶಾರೀರಿಕ ಮತ್ತು ಆಧಿದೈವಿಕ ವಿಚಾರಪದ್ಧತಿಯು ಇದೆ, ಸ್ವೈರವಾಗಿ ಅತ್ತಿತ್ತ ಸರಿದಾಡದಂತೆ ಈ ವಿಶ್ವವನ್ನು ಒತ್ತಟ್ಟಿಗೆ ಸ್ಥಿರಗೊಳಿಸುವ ಬ್ರಹ್ಮಶಕ್ತಿಯ ಅಸ್ತಿತ್ವದ ಒಪ್ಪಿಗೆ ಇದೆ, ಎಂದು ಹೇಳುವದೇ ನಮ್ಮ ಉದ್ದೇಶವು.

## ೨. ಆಧಿದೈವಿಕ ವಿಚಾರಪದ್ಧತಿಯು

**೯. ಅನೇಕೇಶ್ವರವಾದದಿಂದ ಏಕೇಶ್ವರವಾದದ ಕಡೆಗೆ—** ಇನ್ನು ಉಪನಿಷತ್ಕಾರರು ಆಧಿದೈವಿಕ ವಿಚಾರಗಳ ಸಹಾಯದಿಂದ ಅನಾದಿ ಸತ್ಯವನ್ನು ಹೇಗೆ

ಕಂಡುಹಿಡಿದರೆಂಬುದನ್ನು ನೋಡುವ. ಈ ವಿಶ್ವದಲ್ಲಿ ಎಷ್ಟು ದೇವತೆಗಳಿರಬಹುದು ಎಂದು ಅವರು ಮೊದಲು ವಿಚಾರಮಾಡಲಾರಂಭಿಸಿದರು. ಆದರೆ ಈ ಸಕಲ ವಿಶ್ವವನ್ನು ನಿಯಮಿಸುವ ದೇವನೊಬ್ಬನೆ ಇರುವನೆಂಬ ಪ್ರಮೇಯವನ್ನು ಪ್ರಸ್ಥಾಪಿಸುವವರೆಗೆ ಅವರಿಗೆ ಸಮಾಧಾನವೆನಿಸಲಿಲ್ಲ. ಕೊನೆಗೆ ವಿಶ್ವನಿಯಾಮಕನಾದ ಆ ದೇವರೂ ಮನುಷ್ಯನಲ್ಲಿಯ ಅಂತರಾತ್ಮನೂ ಒಂದೇ ಎಂದು ಅವರು ಪ್ರತಿಪಾದಿಸಿದರು. ಈ ಬಗೆಯಿಂದ ಆಧ್ಯಾತ್ಮಿಕ ತತ್ವವೆ ಪ್ರಧಾನವಾಗಿ ಅವರ ಆಧಿದೈವಿಕ ವಿಚಾರಗಳು ತದಧೀನವಾದವು. ಈ ವಿಷಯವನ್ನು ಇಲ್ಲಿ ಸ್ವಲ್ಪ ವಿವರದಿಂದ ಪರಿಶೀಲಿಸುವೆವು. ಬೃಹದಾರಣ್ಯಕದಲ್ಲಿ (ಬೃ. ಅ ೩, ಬ್ರಾ ೯, ಮಂ ೧-೧೦) ವಿದಗ್ಧ ಶಾಕಲ್ಯನಿಗೂ ಯಾಜ್ಞವಲ್ಕ್ಯನಿಗೂ ಆದ ಸಂವಾದವಿದೆ. ಈ ವಿಶ್ವದಲ್ಲಿ ಎಷ್ಟು ದೇವತೆಗಳಿವೆ ಎಂದು ಶಾಕಲ್ಯನು ಕೇಳಲಾಗಿ ಮುನ್ನೂರಾ ಮೂರು ಎಂದು ಯಾಜ್ಞವಲ್ಕ್ಯನು ಹೇಳಿದನು. ಅಷ್ಟಕ್ಕೆ ನಿಲ್ಲದೆ ಮೂರುಸಾವಿರದಾ ಮೂರು ಎಂದು ಮುಂದೆ ಹೇಳಿದನು. ಶಾಕಲ್ಯನಿಗೆ ಈ ಉತ್ತರಗಳಿಂದ ಸಮಾಧಾನವಾಗಲಿಲ್ಲ. ಅವನು ಪುನಃ ಅದೇ ಪ್ರಶ್ನೆಯನ್ನು ಕೇಳಿದನು. ಅದಕ್ಕೆ ಮೂವತ್ತುಮೂರು ಎಂದು ಯಾಜ್ಞವಲ್ಕ್ಯನು ಉತ್ತರ ಕೊಟ್ಟನು. ಶಾಕಲ್ಯನು ಸಂತುಷ್ಟನಾಗದೆ ಪುನಃ ಅದೇ ಪ್ರಶ್ನೆಯನ್ನು ಮುಂದಿಟ್ಟನು. ಅದಕ್ಕೆ ಯಾಜ್ಞವಲ್ಕ್ಯನು ಆರು ಎಂದು ಉತ್ತರವನಿತ್ತನು. ಹೀಗೆಯೆ ಹೇಳುತ್ತ ಮೂವರು, ಇಬ್ಬರು, ಒಂದು ಅರ್ಧ(!), ಕೊನೆಗೆ ಏಕಮೇವಾದ್ವಿತೀಯನಾದ ಒಬ್ಬನೇ ದೇವರಿರುವನೆಂದು ಮುನಿಯು ಶಾಕಲ್ಯನಿಗೆ ಹೇಳಿದನು. ಶಾಕಲ್ಯನ ಜ್ಞಾನವನ್ನು ಪರೀಕ್ಷಿಸುವದರ ಸಲುವಾಗಿಯೆ ಯಾಜ್ಞವಲ್ಕ್ಯನು ಹಾಗೆ ಹೇಳಿದನು. ತಾನು ಕೊಟ್ಟ ಉತ್ತರಗಳಿಂದ ಶಾಕಲ್ಯನು ಸಂತುಷ್ಟನಾಗದೆ ಇರುವದನ್ನು ಕಂಡು ಕೊನೆಗೆ ಸತ್ಯವಾದುದನ್ನು ಮುನಿಯು ಅವನಿಗೆ ಹೇಳಿ ಬಿಟ್ಟನು. ಈ ವಿಶ್ವವೆ ಯಾವನ ನಿವಾಸಸ್ಥಾನವೋ ಅಗ್ನಿಯೆ ಯಾವನ ದೃಷ್ಟಿಯೋ ಜ್ಯೋತಿಯೆ ಯಾವನ ಮನಸೋ ಯಾವನು ಅಖಿಲ ಜೀವಾತ್ಮಗಳ ಆಶ್ರಯಸ್ಥಾನವೋ ಆ ವಿಶ್ವಸ್ವಾಮಿಯು ಒಬ್ಬನೇ ಇರುವನೆಂದು ಯಾಜ್ಞವಲ್ಕ್ಯಶಾಕಲ್ಯರಿಬ್ಬರೂ ಒಡಂಬಟ್ಟು ಸಂವಾದವನ್ನು ಮುಗಿಸಿದರು.

**೧೦. ಸಗುಣಪರಮಾತ್ಮನ ಕಲ್ಪನೆ ಮತ್ತು ಜೀವಶಿವರ ಐಕ್ಯ—** ಪರಮಾತ್ಮನು ಪುರುಷವಿಧನು, ಅವನು ವ್ಯಕ್ತಿತ್ವವಿಶಿಷ್ಟನು, ಸಗುಣನು, ಎಂಬ ಕಲ್ಪನೆಯನ್ನು ಶ್ವೇತಾಶ್ವತರವು ಪ್ರತಿಪಾದಿಸುತ್ತಿದೆ. ' ಏಕಮೇವಾದ್ವಿತೀಯನಾದ ರುದ್ರದೇವರು ತನ್ನ ಶಕ್ತಿಯಿಂದ ಈ ವಿಶ್ವವನ್ನಾಳುವನು, ಎಲ್ಲ ಜನರಿಗೆ ಅವನೆ ಆಧಾರನಾಗಿರುವನು, ಸರ್ವಲೋಕಗಳನ್ನು ನಿರ್ಮಿಸಿ ಪ್ರಲಯಕಾಲದಲ್ಲಿ ಅವುಗಳನ್ನು ಅವನೇ ಸಂಹರಿಸುವನು. ದಶದಿಕ್ಕುಗಳಲ್ಲಿಯೂ ಎತ್ತೆತ್ತಲೂ ಅವನ ಕಣ್ಣು, ಮೋರೆ, ಕೈಕಾಲುಗಳು ಪಸರಿಸಿರು

ವವು. ಆಕಾಶದಲ್ಲಿ ಹಕ್ಕಿಗಳನ್ನು ಹುಟ್ಟಿಸಿ ಅವುಗಳಿಗೆ ರೆಕ್ಕೆಗಳನ್ನು ಕಟ್ಟಿದವನು ಅವನೇ. ಭೂಲೋಕ ಸ್ವರ್ಲೋಕಗಳನ್ನು ನಿರ್ಮಿಸಿದ ದೇವರವನೊಬ್ಬನೇ' ಎಂದು ಶ್ವೇತಾಶ್ವತರದಲ್ಲಿ (ಶ್ವೇ, ಅ ೩, ಮಂ ೨-೩) ಆ ಪುರುಷೋತ್ತಮನ ವರ್ಣನೆಯಿರುವದು. ಅದೇ ಉಪನಿಷತ್ತಿನಲ್ಲಿ ಮುಂದೆ ಪರಮಾತ್ಮನ ಅನೇಕ ಗುಣಗಳ ಸವಿಸ್ತಾರವಾದ ಉಲ್ಲೇಖವಿರುವದು. ಅವನೊರ್ವನೆ ಈ ವಿಶ್ವದ ಸ್ವಾಮಿಯು, ಸೃಷ್ಟಿಕರ್ತನು, ರಕ್ಷಕನು, ಸಂಹಾರಕನು. ಈ ಪರಶಿವನಿಗೂ ಅಂತರ್ಯಾಮವಲ್ಲಿಯ ಜೀವನಿಗೂ ಐಕ್ಯವಿರುವದೆಂಬ ಭಾವನೆಯಿದ್ದವರಿಗಷ್ಟೆ ಅನಂತಸುಖವು ಲಭಿಸುವದೆಂದು ಈ ಉಪನಿಷತ್ತು ಸಾರುವದು. 'ಮೋಹಕ್ಕೆ ಒಳಗಾದ ಅನೇಕ ವಿದ್ವಾಂಸ ತತ್ವಜ್ಞರು ಸ್ವಭಾವವು-ನಿಸರ್ಗವು ಅಥವಾ ಕಾಲವು ಈ ವಿಶ್ವದ ಆದಿಕಾರಣವೆಂದು ಹೇಳುವರು. ಆದರೆ ಈ ಬ್ರಹ್ಮಚಕ್ರದ ಪ್ರೇರಕನು ಆ ಈಶ್ವರನೆಂಬುದನ್ನು ಅವರು ಅರಿಯರು. ಅವನೇ ಇದನ್ನೆಲ್ಲ ವ್ಯಾಪಿಸಿರುವನು. ಅವನೊರ್ವನೆ ಸರ್ವಜ್ಞನು. ಕಾಲನಿಗೆ ಅವನು ಕಾಲನು. ಅವನು ಸರ್ವಗುಣಿಯು, ಸರ್ವವಿದ್ಯನು. ಪೃಥಿವ್ಯಪ್ತೇಜಾದಿ ಪಂಚಭೂತಗಳೂ ಈ ವಿಶ್ವವೂ ಅವನಾಜ್ಞೆಯಿಂದಲೆ ವ್ಯಕ್ತವಾಗಿರುವವು. ಈ ವಿಶ್ವಕರ್ಮವು ನಡೆಯುವದು ಅವನಿಂದಲೆ. ಈ ವಿವಿಧ ಪದಾರ್ಥಗಳ ಸಂಯೋಗಗಳ ಆದಿ ಮತ್ತು ನಿಮಿತ್ತಹೇತುವು ಅವನೇ. ಅವನು ಕಾಲಾತೀತನು, ನಿಜವಾಗಿ ಕಲಾರಹಿತನು. ಹೀಗೆ ವಿಶ್ವವ್ಯಾಪಿಯಾದ ಪರಶಿವನು ಸ್ವಚಿತ್ತಸ್ಥನೆಂದು, ನಮ್ಮ ಅಂತರ್ಯಾಮಿಯೆಂದು ಧ್ಯಾನಿಸಬೇಕು. ಅವನು ಈಶ್ವರರಲ್ಲಿ ಪರಮೇಶ್ವರನು, ದೇವರಲ್ಲಿ ಮಹಾದೇವನು. ಅವನು ಸರ್ವಶ್ರೇಷ್ಠ ವಿಶ್ವಪತಿಯು, ವಿಶ್ವನಿಯಾಮಕನಾದ ಸರ್ವಪೂಜ್ಯ ಸರ್ವೇಶ್ವರನು, ಕಾರ್ಯಕಾರಣಗಳಿಂದ ಅವನು ಆಚೆಗಿರುವನು. ಅವನಿಗೆ ಸಮಾನರಾದವರು ಸಹ ಯಾರೂ ಇಲ್ಲ, ಅಂದಮೇಲೆ ಹೆಚ್ಚಿನವರೆಲ್ಲಿಂದ ಬರಬೇಕು ? ಅವನ ಪರಾಶಕ್ತಿಯು ವಿವಿಧ ವಿಸ್ತೃ ಜ್ಞಾನ ಮತ್ತು ಕ್ರಿಯಾರೂಪದಿಂದ ಅದು ಆವಿರ್ಭವಿಸುವದು. ಅವನನ್ನು ನಿಯಮಿಸುವವರು ವಿಶ್ವದಲ್ಲಿ ಯಾರೂ ಇಲ್ಲ, ಅವನ ನಿದರ್ಶಕವಾದ ಯಾವ ಚಿನ್ಹವೂ ಈ ವಿಶ್ವದಲ್ಲಿಲ್ಲ. ಅವನೇ ಆದಿಕಾರಣನು, ಇಂದ್ರಿಯಧಾರಿಗಳ ಈಶನು. ಅವನಿಗೆ ಜನಕರು ಅಥವಾ ಅಧಿಕರು ಯಾರೂ ಇಲ್ಲ. ಈ ನಿಷ್ಕ್ರಿಯ ವಿವಿಧಜಡಸೃಷ್ಟಿಯ ಸ್ವಯಂಶಾಸಕನು ಅವನೇ ಇರುವನು. ಒಂದೇ ಬೀಜವನ್ನು ಅನಂತವೃಕ್ಷಗಳನ್ನಾಗಿ ಮಾಡುವ ಸಾಮರ್ಥ್ಯವು ಅವನಲ್ಲಿಯೆ ಇದೆ. ಆ ಪರಮಾತ್ಮನು ಆತ್ಮಸ್ಥನಿರುವನು-ನಮ್ಮ ಆತ್ಮಗಳಲ್ಲಿ ವಾಸಿಸುವನು-ಎಂಬುದನ್ನರಿತವರಷ್ಟೆ ಶಾಶ್ವತ ಸುಖವನ್ನನುಭವಿಸುವರು. ಮಿಕ್ಕ ಮಾನವರಿಗೆ ಆ ಸುಖವು ದೊರೆಯುವದೇ ?' ಈ ಪ್ರಕಾರದ ಒಳ್ಳೇ ಹೃದಯಂಗಮವಾದ ವರ್ಣನೆಯು ಶ್ವೇತಾಶ್ವತರದಲ್ಲಿ (ಶ್ವೇ, ಅ ೬, ಮಂ ೧-೧೨) ಬಂದಿರುವದು. ಪರಮಾತ್ಮನ

ಈ ಸಗುಣ ವರ್ಣನೆಯಲ್ಲಿ ಅವನೇ ವಿಶ್ವದ ಆದಿಕಾರಣನೆಂದೂ ಅವನೇ ಜೀವಗಳಲ್ಲಿಯ ಅಂತರ್ಯಾಮಿಯೆಂದೂ ಉಪನಿಷತ್ಕಾರರು ಹೇಳಿರುವರು. ಇಲ್ಲಿ ಆಧಿದೈವಿಕ ವಿಚಾರ ಪದ್ಧತಿಯು ಆಧ್ಯಾತ್ಮಿಕ ವಿಚಾರಸರಣಿಯ ಸಹಾಯವನ್ನು ಸ್ವೀಕರಿಸಿ ತದಧೀನವಾಗುತ್ತಿದೆ. ಕೊನೆಗೆ ಉಪನಿಷತ್ಕಾರರು ಆಧ್ಯಾತ್ಮಿಕ ಸತ್ಯವೆ ಸತ್ಯವು ಎಂಬುದನ್ನು ಪ್ರತಿಪಾದಿಸಿರುವರು.

**೧೧. ಪರಮಾತ್ಮನು ಸರ್ವವ್ಯಾಪಕನು, ಅತೀಂದ್ರಿಯನು—** ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಪರಮಾತ್ಮನ ಸರ್ವವ್ಯಾಪಕತ್ವವೂ ಅತೀಂದ್ರಿಯತ್ವವೂ ವರ್ಣಿತವಾಗಿದೆ. ಕೆಲವೆಡೆಗೆ ಅವನು ಸರ್ವವ್ಯಾಪಕನೆಂದೂ ಕೆಲವೆಡೆಗೆ ಅನಿರ್ವಚನೀಯನೂ ಅತೀಂದ್ರಿಯನೂ ಎಂದೂ ವರ್ಣನೆಗಳಿರುವವು. ಒಮ್ಮೊಮ್ಮೆ ಈ ಎರಡೂ ತೆರದ ವರ್ಣನೆಗಳು ಒಂದರಲ್ಲಿ ಒಂದು ಬೆರೆತಂತೆಯೂ ಇರುವವು. 'ಈಶ್ವರನು ಬೆಂಕಿ ನೀರುಗಳಲ್ಲಿ, ಈ ವಿಶ್ವದಲ್ಲಿ, ಔಷಧಿಗಳಲ್ಲಿ ವನಸ್ಪತಿಗಳಲ್ಲಿ ಇರುವನು' ಎಂದು (ಶ್ವೆ, ಅ ೨, ಮಂ ೧೭) ಹೇಳಿದೆ. ಒರೆಯನ್ನು ವ್ಯಾಪಿಸಿರುವ ಕತ್ತಿಯಂತೆ ತನ್ನ ಗೂಡಿನಲ್ಲಿ ಹುದುಗಿರುವ ಹಕ್ಕಿಯಂತೆ ವಿಶ್ವಂಭರನು ಪಾದದಿಂದ ನೆತ್ತಿಯವರೆಗೆ ನಮ್ಮನ್ನು ವ್ಯಾಪಿಸಿರುವನೆಂದು ಬೃಹದಾರಣ್ಯಕದ (ಬೃ, ಅ ೧, ಬ್ರಾ ೪, ಮಂ ೭) ಋಷಿಗಳು ಹೇಳಿರುವರು. ಛಾಂದೋಗ್ಯದಲ್ಲಿ ಆತ್ಮನ ಸರ್ವವ್ಯಾಪಕತ್ವದ ಇದೇ ಬಗೆಯ ವರ್ಣನೆಯು (ಛಾಂ, ಅ ೬, ಖಂ ೧೩, ಮಂ ೧-೩) ಶ್ವೇತಕೇತು ಮತ್ತು ಆರುಣಿ ಇವರ ಕಥೆಯಲ್ಲಿ ಬಂದಿರುವದು. ಒಂದು ಉಪ್ಪಿನ ಹರಳನ್ನು ಸಾಯಂಕಾಲದಲ್ಲಿ ನೀರಲ್ಲಿ ಚಲ್ಲಿ ಬೆಳಿಗ್ಗೆ ನನ್ನೆಡೆಗೆ ಬಾ, ಎಂದು ಉದ್ದಾಲಕ ಆರುಣಿಯು ಶಿಷ್ಯನಾದ ಶ್ವೇತಕೇತುವಿಗೆ ಹೇಳಿದನು. ಶಿಷ್ಯನು ಹಾಗೆ ಮಾಡಿ ಬರಲಾಗಿ ಉಪ್ಪಿನಹರಳು ಎಲ್ಲಿದೆ, ಎಂದು ಗುರುವು ಕೇಳಿದನು. ಹರಳು ಕರಗಿದ್ದರಿಂದ ಶಿಷ್ಯನಿಗೆ ಅದು ನೀರಲ್ಲಿ ದೊರೆಯಲಿಲ್ಲ. ಆಗ ಆ ನೀರಿನ ಮೇಲ್ಭಾಗ, ಮಧ್ಯ, ತಳ ಇವುಗಳಲ್ಲಿಯ ಒಂದೊಂದು ಹನಿಯನ್ನು ನಾಲಿಗೆಯ ಮೇಲಿಟ್ಟು ನೋಡೆಂದು ಗುರುವಿನ ಅಪ್ಪಣೆಯಾಯಿತು. ಅವರ ರುಚಿಯು ಉಪ್ಪುಪ್ಪ ಇರುವದೆಂದು ಶಿಷ್ಯನು ಹೇಳಲಾಗಿ ಉಪ್ಪು ಇಲ್ಲದಂತಾಗಿದ್ದರೂ ಅದು ನೀರಲ್ಲಿ ಎಲ್ಲಕಡೆಗೂ ಬೆರೆತಿರುವದೆಂದು ಉದ್ದಾಲಕನು ಹೇಳಿದನು. ಇದೇ ಬಗೆಯಾಗಿ ಆತ್ಮನು ಕಣ್ಣಿಗೆ ಕಾಣದಿದ್ದರೂ ಕಿವಿಗೆ ಕೇಳಿಸದಿದ್ದರೂ ಈ ಸಕಲ ವಿಶ್ವದಲ್ಲಿ ವ್ಯಾಪ್ತನಿರುವನೆಂದು ನಂಬು, ಎಂಬ ಉಪದೇಶವನ್ನು ಉದ್ದಾಲಕನು ಮಾಡಿದನು. ಈ ಮೇಲಿನ ಎಲ್ಲ ಉಲ್ಲೇಖಗಳು ಪರಮಾತ್ಮನ ವಿಶ್ವವ್ಯಾಪಿತ್ವವನ್ನೂ ಅವನು ಎಲ್ಲೆಲ್ಲಿಯೂ ಬೆರೆತಿರುವನೆಂಬುದನ್ನೂ ಹೇಳುವವು. ಇನ್ನು ಇದೇ ರೀತಿ ಪರಮಾತ್ಮನ ಅತೀಂದ್ರಿಯತ್ವದ ವರ್ಣನೆಗಳಿರುವವು. ಈ ವಿಶ್ವದ ಕಣ್ಣಿನಂತಿರುವ ಸೂರ್ಯನು ನಮ್ಮ ಕಣ್ಣು

ಗಳಲ್ಲಿರುವ ದೋಷಗಳಿಂದ ಅಲಿಪ್ತನು, ಎಂಬ ಕಠದಲ್ಲಿಯ (ಕ, ಅ ೨, ವ ೫, ಮಂ–೧೧) ವರ್ಣನೆಯುನ್ನು ಓದಿದರೆ ಪ್ಲೇಟೋನು ತನ್ನ 'ರಿಪಬ್ಲಿಕ್' ಪುಸ್ತಕದಲ್ಲಿ ಮಾಡಿದ ಚಿತ್ಸೂರ್ಯನ ವರ್ಣನೆಯು ನೆನಪಾಗುತ್ತಿದೆ. ಇಲ್ಲಿ ಪರಮಾತ್ಮನ ಅತೀತತ್ವವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. 'ಈ ವಿಶ್ವವನ್ನು ವ್ಯಾಪಿಸಿ ಅವನು ದಶಾಂಗುಲ ಹೆಚ್ಚು ಉಳಿದಿರುವನು' (ಶ್ವೇ, ಅ ೩, ಮಂ ೧೪), 'ಅಗ್ನಿವಾಯುಗಳು ಸೃಷ್ಟಿಯಲ್ಲಿ ಅನೇಕ ರೂಪಗಳನ್ನು ಧರಿಸಿದರೂ ತಾವು ಅಲಿಪ್ತವಾಗಿಯೆ ಇರುವಂತೆ ಪರಮಾತ್ಮನು ವಿಶ್ವದ ಅಣುರೇಣುಗಳಲ್ಲಿ ತುಂಬಿದ್ದರೂ ಅಲಿಪ್ತನೆ ಇರುವನು' (ಕ, ಅ ೨, ವ ೫, ಮಂ ೯–೧೦), 'ಒಂಟಿಗನಾಗಿರುವ ಸ್ತಬ್ಧ ವೃಕ್ಷದಂತೆ ಪರಮಾತ್ಮನು ಸ್ವರ್ಲೋಕದಲ್ಲಿ ನಿಂತು ವಿಶ್ವವನ್ನು ವ್ಯಾಪಿಸಿರುವನು' (ಶ್ವೇ, ಅ ೩, ಮಂ ೯), ಎಂಬ ಮುಂತಾದ ವಿವಿಧ ವರ್ಣನೆಗಳಿರುವವು. ವಿಶ್ವದ ಸಂದಿಕೊಂಚಿಗಳನ್ನು ವ್ಯಾಪಿಸಿ ನಿಂತಿದ್ದರೂ ಪರಮಾತ್ಮನು ಇವೆಲ್ಲವುಗಳಾಚೆಗೆ ಅನಂತನಾಗಿಯೂ ಅತೀತನಾಗಿಯೂ ಇರುವನೆಂಬುದೆ ಈ ವರ್ಣನೆಗಳ ತಾತ್ಪರ್ಯವು. ಈ ಸರ್ವಭೂತಾಂತರಾತ್ಮನಾದ ಪರಮಾತ್ಮನು ಮತ್ತು ಅಂತರ್ಯಾಮಿಯಾದ ಜೀವಾತ್ಮನು ಇವೆರಡೂ ಒಂದೇ ಎಂಬ ಅರಿವೇ ಸತ್ಯಜ್ಞಾನದ ಕುರುಹು ಎಂದು ಉಪನಿಷತ್ಕಾರರ ಅಭಿಪ್ರಾಯವು.

## ೩. ಆಧ್ಯಾತ್ಮಿಕ ವಿಚಾರಪದ್ಧತಿಯು

**೧೨. ಶರೀರಮನಸ್ಸುಗಳ ಪ್ರಥಃಕರಣದಿಂದ ಆತ್ಮನ ಅರಿವು—** ಆಧ್ಯಾತ್ಮಿಕ ದೃಷ್ಟಿಯಿಂದ ವಿಚಾರಮಾಡುತ್ತ ಹೋಗುತ್ತಿರಲು ಉಪನಿಷತ್ಕಾರರು ಆತ್ಯಂತಿಕ ಸತ್ಯವನ್ನು ಹೇಗೆ ಅರಿತರೆಂಬುದನ್ನು ವಿಚಾರಿಸುವ. ಬೃಹದಾರಣ್ಯಕದಲ್ಲಿ ಒಂದೆಡೆಗೆ ಜನಕ ಯಾಜ್ಞವಲ್ಕ್ಯರ ಸಂವಾದವಿರುವದು. ಅದರಲ್ಲಿ, ಪರಮಸತ್ಯದ ಬಗ್ಗೆ ನೀನು ಯಾವ ಆಧ್ಯಾತ್ಮಿಕ ವಿಚಾರಗಳನ್ನು ಕೇಳಿರುವಿ, ಎಂದು ಯಾಜ್ಞವಲ್ಕ್ಯನು ಜನಕನಿಗೆ ಪ್ರಶ್ನೆಮಾಡುವನು. ಜನಕನು ಒಳ್ಳೇ ಜಿಜ್ಞಾಸುವೂ ತತ್ವಜ್ಞಾನದ ಪ್ರೀತಿಯುಳ್ಳವನೂ ಇರುವುದರಿಂದ ಅವನು ಈ ಬಗ್ಗೆ ಅನೇಕ ಋಷಿಮುನಿಗಳಿಂದ ವಿಧವಿಧದ ವಿಧಾನಗಳನ್ನು ತಿಳಿದುಕೊಂಡಿದ್ದನು. ಜನಕನು ಆಯಾ ಋಷಿಗಳ ಮತಗಳನ್ನು ಹೇಳತೊಡಗಿದನು. ವಾಣಿಯೇ ಪರಮಸತ್ಯವೆಂದು ಜಿತ್ವನ್ ಶೈಲಿನಿಯು ನನಗೆ ಹೇಳಿದನು' ಎಂದು ಜನಕನು ಅನ್ನಲಾಗಿ, ಇದು ಪೂರ್ಣ ಸತ್ಯವಲ್ಲ, ಎಂದು ಯಾಜ್ಞವಲ್ಕ್ಯನು ಹೇಳಿದನು. 'ಪ್ರಾಣವೇ ಬ್ರಹ್ಮವೆಂದು ಉದಂಕ ಶೌಲ್ಬಾಯಣನು ನನಗೆ ಹೇಳಿದನು' ಎಂದು ಜನಕನು ಅನ್ನಲಾಗಿ,

ಇದೂ ಪೂರ್ಣ ಸತ್ಯವಲ್ಲವೆಂದು ಯಾಜ್ಞವಲ್ಕ್ಯನು ಉತ್ತರ ಕೊಟ್ಟನು. 'ಚಕ್ಷುವೇ ಬ್ರಹ್ಮವೆಂದು ವರ್ಕು ವಾರ್ಷ್ಣಿಯು ನನಗೆ ಹೇಳಿದನು' ಎಂದು ಜನಕನು ಅನ್ನಲಾಗಿ, ಇದು ಪೂರ್ಣ ಸತ್ಯವಲ್ಲವೆಂದು ಯಾಜ್ಞವಲ್ಕ್ಯನು ಉತ್ತರ ಕೊಟ್ಟನು. ಆ ಮೇಲೆ ಶ್ರೋತ್ರವೇ ಬ್ರಹ್ಮವೆಂದು ಗರ್ದಭೀವಿಪೀತ ಭಾರದ್ವಾಜನೂ ಮನಸ್ಸೇ ಬ್ರಹ್ಮವೆಂದು ಸತ್ಯಕಾಮ ಜಾಬಾಲನೂ ಹೃದಯವೇ ಬ್ರಹ್ಮವೆಂದು ವಿದಗ್ಧಶಾಕಲ್ಯನೂ ಹೇಳಿದರೆಂದು ಜನಕನು ಅನ್ನಲಾಗಿ ಆ ಎಲ್ಲ ಮತಗಳು ಪೂರ್ಣ ಸತ್ಯವಲ್ಲ ಎಂದು ಯಾಜ್ಞವಲ್ಕ್ಯ ಮಹಾಮುನಿಯು ಉತ್ತರ ಕೊಟ್ಟನು ( ಬೃ, ಅ ೪, ಬ್ರಾ ೧, ಮಂ ೨-೭ ). ಈ ಬ್ರಹ್ಮಚರ್ಚೆಯಲ್ಲಿ ಅಡಕ ವಾಗಿರುವ ಪ್ರಶ್ನೋತ್ತರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಶಾರೀರಿಕ ಅಥವಾ ಮಾನ ಸಿಕ ವರ್ಗಗಳಲ್ಲಿ ( Categories )ನಮಗೆ ಬ್ರಹ್ಮನು ಕಾಣನು, ಅವನು ಆತ್ಮನಲ್ಲಿಯೆ ಗೋಚರನಾಗುವನು, ಎಂಬ ತತ್ವವು ಹೊಳೆಯುವದು; ಆತ್ಮನೇ ಸತ್ಯನು, ಮಿಕ್ಕ ಕಲೆ ಗಳೆಲ್ಲ ತಾತ್ಕಾಲಿಕವಾದ ಉಪಾಧಿಗಳು ಎಂಬುದು ಸ್ಪಷ್ಟವಾಗುವದು. ಕೇನೋಪನಿಷತ್ತಿ ನಲ್ಲಿ ಇದೇ ಕಲ್ಪನೆಯು ಚನ್ನಾಗಿ ಹೇಳಲ್ಪಟ್ಟಿದೆ. 'ಆತ್ಮನು ಶ್ರೋತ್ರದ ಶ್ರೋತ್ರನು, ಮನಸ್ಸಿನ ಮನಸ್ಸು, ವಾಣಿಯ ವಾಣಿಯು, ಪ್ರಾಣದ ಪ್ರಾಣನು, ಕಣ್ಣಿನ ಕಣ್ಣು. ಹೀಗೆ ಆತ್ಮನನ್ನರಿತ ಧೀರರು ಈ ಲೋಕದ ಬಂಧನಗಳಿಂದ ಮುಕ್ತರಾಗಿ ಅಮೃತರಾಗುತ್ತಾರೆ. ಯಾವುದನ್ನು ವಾಚೆಯು ವ್ಯಕ್ತಮಾಡಲಾರದೊ ಆದರೆ ಯಾವುದರ ಶಕ್ತಿಯಿಂದ ವಾಣಿಯೆ ಪ್ರಕಟವಾಗುವದೊ, ಅದೇ ಬ್ರಹ್ಮವೆಂದು ತಿಳಿ. ಯಾವುದನ್ನು ಜನರು ಈಗ ಬ್ರಹ್ಮ ವೆಂದು ಉಪಾಸಿಸುತ್ತಿರುವರೊ ಅದು ಬ್ರಹ್ಮವಲ್ಲ; ಯಾವುದನ್ನು ಮನಸ್ಸು ವಿಚಾರಿಸಲು ಸಮರ್ಥವಿಲ್ಲವೊ ಆದರೆ ಯಾವುದು ಮನಸ್ಸನ್ನೆ ವಿಚಾರಿಸುವದೊ ಅದೇ ಬ್ರಹ್ಮವೆಂದು ತಿಳಿ. ಯಾವುದನ್ನು ಕಣ್ಣು ನೋಡಲಾರದೊ ಆದರೆ ಯಾವುದು ಕಣ್ಣನ್ನೆ ನೋಡುವುದೊ ಅದೇ ಬ್ರಹ್ಮವೆಂದು ತಿಳಿ. ಯಾವುದು ಕಿವಿಗೆ ಕೇಳಿಸುವದಿಲ್ಲವೊ ಆದರೆ ಯಾವುದು ಕಿವಿ ಯನ್ನೆ ಕೇಳುವದೊ ಅದೇ ಬ್ರಹ್ಮವೆಂದು ತಿಳಿ. ಯಾವುದನ್ನು ಪ್ರಾಣವು ಉಸುರಾಡಿಸಲಾ ರದೊ ಆದರೆ ಯಾವುದು ಪ್ರಾಣವನ್ನೆ ಉಸುರಾಡಿಸುವದೊ ಅದೇ ಬ್ರಹ್ಮವೆಂದು ತಿಳಿ, ಅದೇ ಪರಮ ಸತ್ಯವೆಂದು ತಿಳಿ' (ಕೇನ, ಖಂ ೧, ಮಂ ೨-೮). ಆತ್ಮವೇ ಎಲ್ಲಕ್ಕೂ ಒಳ ಗಿನ ಸತ್ಯವು, ಆದಿ ಸತ್ಯವು; ಈ ಶಾರೀರಿಕ ಮಾನಸಿಕ ಪದಾರ್ಥಗಳೆಲ್ಲ ಅದರ ಹೊರಗಣ ಹೊದಿಕೆಗಳು ಎಂಬುದೇ ಈ ಮೇಲಿನ ಮಂತ್ರಗಳ ತಾತ್ಪರ್ಯವು.

೧೩. **ಚೈತನ್ಯದ ಅವಸ್ಥೆಗಳಾದ ಜಾಗೃತ್, ಸ್ವಪ್ನ, ಸುಷುಪ್ತಿ ಮತ್ತು ತುರೀಯ**—ತನ್ನನು ತಾನರಿಯುವ ಅಂತರ್ಯಾಮಿಯಾದ ಆತ್ಮನೆ ಪರಾ ತ್ಪರ ವಸ್ತುವು ಎಂದು ನಿಃಸಂದಿಗ್ಧವಾಗಿ ಪ್ರತಿಪಾದಿಸುವ ಒಂದು ಕಥೆಯು ಛಾಂದೋಗ್ಯ

ದಲ್ಲಿ ಬಂದಿದೆ. ಆದರಲ್ಲಿ ಉಪನಿಷತ್ಕಾರರು ನಮ್ಮ ಜೀವವಸ್ಥೆಗಳನ್ನು ಒಳ್ಳೆ ಕೌಶಲ್ಯದಿಂದ ಪ್ರಥಃಕರಿಸಿ, ಈ ಜಾಗೃತಾವಸ್ಥೆಯಲ್ಲಿಯುವನು ನಿಜವಾದ ಆತ್ಮನಲ್ಲ, ಈ ಸ್ವಪ್ನದ ಅವಸ್ಥೆಯಲ್ಲಿರುವ ಆತ್ಮನೂ ನಿಜವಾದ ಆತ್ಮನಲ್ಲ; ಅವನು ಸುಷುಪ್ತಾವಸ್ಥೆಯ ಆಚೆಗಿರುವನು, ಅವನು ಈ ಶಾರೀರಿಕ ಮಾನಸಿಕ ಬಂಧನಗಳಿಂದಾಚೆಗೆ ಇದ್ದು ಶುದ್ಧಾತ್ಮಸ್ಥಿತಿಯಲ್ಲಿ ತುರಿಯಾವಸ್ಥೆಯಲ್ಲಿರುವನು, ಎಂದು ವರ್ಣಿಸಿರುವರು. ಛಾಂದೋಗ್ಯದಲ್ಲಿಯ ಕಥೆಯು ಹೀಗೆ ಇದೆ: ಒಮ್ಮೆ ದೇವಾಸುರರು ಪರತತ್ವವನ್ನು ತಿಳಿದುಕೊಳ್ಳುವ ಜಿಜ್ಞಾಸೆಯುಳ್ಳವರಾಗಿ ಪ್ರಜಾಪತಿಯ ಕಡೆಗೆ ಹೋದರು. ನಿಷ್ಪಾಪವು, ಅಜರವು, ಅಮರವು, ಶೋಕರಹಿತವು, ಹಸಿವೆ ನೀರಡಿಕೆಗಳಿಲ್ಲದ್ದು, ಅಕಾಮವು, ಸಂಕಲ್ಪರಹಿತವು, ಹೀಗೆ ಇದ್ದದ್ದೆ ಆತ್ಮವು, ಅದೇ ಪರಾತ್ಪರ ಸತ್ಯವು, ಎಂದು ಪ್ರಜಾಪತಿಯು ಒಮ್ಮೆ ಅವರಿಗೆ ಹೇಳಿದ್ದನು. ಈ ಬಗೆಯ ಆತ್ಮನು ಯಾರು ಎಂಬುದನ್ನರಿಯುವ ಆತುರವು ದೇವಾಸುರರಿಗೆ ಹುಟ್ಟಿತು. ದೇವತೆಗಳು ಇಂದ್ರನನ್ನೂ ಅಸುರರು ವಿರೋಚನನನ್ನೂ ತಮ್ಮ ತಮ್ಮ ಪರವಾಗಿ ಸತ್ಯಜ್ಞಾನಾರ್ಥವಾಗಿ ಪ್ರಜಾಪತಿಯ ಕಡೆಗೆ ಕಳುಹಿದರು. ಗುರುಗಳ ಅನುಗ್ರಹವನ್ನು ಪಡೆಯಲು ಅವಶ್ಯವಿದ್ದ ಮೂವತ್ತೆರಡು ವರ್ಷದ ಅವಧಿಯನ್ನು ಅವರಿಬ್ಬರೂ ಶಿಷ್ಯರೋಪಾದಿಯಲ್ಲಿ ಕಳೆದರು. ಆ ಮೇಲೆ ನಿಮಗೆ ಬೇಕಾದುದೇನು, ಎಂದು ಪ್ರಜಾಪತಿಯು ಕೇಳಿದನು. ನಮಗೆ ಸತ್ಯವಸ್ತುವಿನ ಜ್ಞಾನವು ಇಷ್ಟವು ಎಂದು ಅವರು ಹೇಳಿದರು. ಪ್ರಜಾಪತಿಯು ಅವರಿಗೆ ಒಮ್ಮೆಲೆ ನಿಜವನ್ನುಸುರಲಿಲ್ಲ. ಈ ಕಣ್ಣಿನಲ್ಲಿ, ನೀರಲ್ಲಿ, ಕನ್ನಡಿಯಲ್ಲಿ ಕಾಣುವ ಪುರುಷನೆ ಆತ್ಮನು ಎಂದು ಪ್ರಜಾಪತಿಯು ಮೊದಲು ಮೋಸದ ಉತ್ತರವನ್ನುಕೊಟ್ಟನು. ಆ ಪುರುಷನೆ ಅಭಯ, ಅಮೃತ, ಆತ್ಮನೆಂದು ಹೇಳಿದನು. ತಮಗೆ ಆತ್ಮಜ್ಞಾನವಾಯಿತೆಂದು ಇಂದ್ರವಿರೋಚನರು ಸಂತೋಷಬಟ್ಟರು. ಸ್ವಚ್ಛ ಸ್ನಾನಮಾಡಿ ಒಳ್ಳೆ ಸುಂದರವಾದ ಉಡಿಗೆತೊಡಿಗೆಗಳನ್ನು ಉಟ್ಟುಕೊಂಡು ಅಲಂಕೃತರಾಗಿ ಅವರು ನೀರಿನ ಹರಿವೆಯಲ್ಲಿ ತಮ್ಮ ಛಾಯೆಯನ್ನು ನೋಡಿದರು. ಆ ಛಾಯಾಪುರುಷನೆ ಆತ್ಮನೆಂದು ತಿಳಿದು ಅವರು ಸಮಾಧಾನಗೊಂಡರು. ವಿರೋಚನನು ಅಸುರರಿಗೆ ಹೋಗಿ ಹೇಳಿದುದೇನಂದರೆ, ‘ ನನಗೆ ಆತ್ಮಜ್ಞಾನವಾಯಿತು. ಕಣ್ಣು, ಕನ್ನಡಿ, ನೀರು ಇವುಗಳಲ್ಲಿ ಕಾಣುವ ಪುರುಷನೆ ಆತ್ಮನು. ’ ಹೀಗೆ ದೇಹದ ಛಾಯೆಯೆ ಆತ್ಮನೆಂದು ವಿರೋಚನನು ತಿಳಿದುಬಿಟ್ಟನು. ಈ ರೀತಿ ದೇಹಾತ್ಮಬುದ್ಧಿಯುಳ್ಳವರೆ ಅಸುರರು, ಎಂದು ಛಾಂದೋಗ್ಯಕಾರರು ಹೇಳುವರು. ದೇಹವೆ ಆತ್ಮವು, ಬಾಹ್ಯಸೃಷ್ಟಿಯೆ ಸತ್ಯವು, ದೇಹದ ಎಚ್ಚರವೆ ಜ್ಞಾನವು ಎಂದು ಪ್ರತಿಪಾದಿಸುವ ಚಾರ್ವಾಕರು ಆ ಕಾಲಕ್ಕೆ ಇನ್ನೂ ಆಗಿರದಿದ್ದರೂ ಅವರ ಮತದ ಉಲ್ಲೇಖವು ಇಲ್ಲಿ ಇದೆ ಎಂದು ಹೇಳಬಹುದು. ವಿರೋಚನನಂತೆ ಇಂದ್ರನು

ಮಾತ್ರ ಮೋಸಹೋಗಲಿಲ್ಲ. ದೇಹವೆ ಆತ್ಮವು ಎಂಬುದನ್ನು ಅವನು ಒಪ್ಪಲಿಲ್ಲ. ಪ್ರಜಾಪತಿಯು ತನಗೆ ಒಮ್ಮೆಲೆ ಸತ್ಯವನ್ನು ಹೇಳಿರಲಿಕ್ಕಿಲ್ಲವೆಂಬ ಮಾತು ಅವನಿಗೆ ಹೊಳೆಯಿತು. ಅವನಿಗೆ ಒಂದು ಬಲವಾದ ಸಂಶಯವು ಬಂದಿತು. ಅದೇನಂದರೆ, ಈ ದೇಹವನ್ನು ಅಲಂಕರಿಸಿದರೆ ಪುರುಷನು ಅಥವಾ ಆತ್ಮನು ಅಲಂಕೃತನಾದಂತೆ ಕಾಣುತ್ತಾನೆ. ದೇಹವು ಒಳ್ಳೆ ವಸ್ತ್ರಗಳನ್ನು ತೊಟ್ಟರೆ ಅವನೂ ಒಳ್ಳೆ ಉಡಿಗೆಗಳನ್ನು ತೊಟ್ಟಂತೆ ಕಾಣುತ್ತಾನೆ. ದೇಹವನ್ನು ಝುಳಝುಳ ತೊಳೆದರೆ ಅವನೂ ಝುಳಝುಳ ಕಾಣುತ್ತಾನೆ. ಆದರೆ ದೇಹವು ಕುರುಡ, ಕುಂಟ ಅಥವಾ ಹೆಳವವಿದ್ದರೆ ಆತ್ಮನೂ ಕುಗುಡ, ಕುಂಟ ಮತ್ತು ಹೆಳವನಾಗುವನೊ ? ಪ್ರಜಾಪತಿಯು ತನಗೆ ಕೊಟ್ಟ ಜ್ಞಾನದಲ್ಲಿ ಇದೊಂದು ದೊಡ್ಡ ಕುಂದು ಇರುವದೆಂದು ತಿಳಿದು ಅವನು ಪುನಃ ಪ್ರಜಾಪತಿಯ ಕಡೆಗೆ ಹೋದನು. ಮತ್ತೆ ಮೂವತ್ತೆರಡು ವರ್ಷ ವ್ರತಸ್ಥನಾಗಿ ತಪವನ್ನಾಚರಿಸೆಂದು ಪ್ರಜಾಪತಿಯು ಇಂದ್ರನಿಗೆ ಅಪ್ಪಣೆಯನಿತ್ತನು. ಆಮೇಲೆ ಪ್ರಜಾಪತಿಯು 'ಕನಸಿನಲ್ಲಿ ಸುಖಿಯಾಗಿ ವಿಹರಿಸುವವನೆ ಆತ್ಮನೆಂದೂ ಅವನೆ ಅಭಯ, ಅಮೃತ, ಬ್ರಹ್ಮನು' ಎಂದೂ ಹೇಳಿದನು. ಸ್ವಪ್ನಸ್ಥಿತಿಯಲ್ಲಿಯ ಆತ್ಮನೆ ಬ್ರಹ್ಮನೆಂದು ಪ್ರಜಾಪತಿಯು ಹೇಳಿದಂತಾಯಿತು. ಅದರಿಂದ ಸಮಾಧಾನಹೊಂದಿದವನಂತೆ ಇಂದ್ರನು ದೇವತೆಗಳ ಕಡೆಗೆ ಹೊರಟನು. ಆದರೆ ನಡುವೆ ಅವನಿಗೆ ಪುನಃ ಸಂಶಯವು ಬಂದಿತು. 'ಕನಸಿನಲ್ಲಿ ನಮ್ಮನ್ನು ಹೊಡೆಯುವರು, ಬಡೆಯುವರು; ನಾವು ದುಃಖಿಸುವೆವು, ಅಳುವೆವು; ಅಂದಮೇಲೆ ಸ್ವಪ್ನಾತ್ಮನು ನಿಜವಾದ ಅಭಯ ಅಮರ, ಆತ್ಮನೆಂದು ಹೇಗೆ ತಿಳಿಯಬೇಕು' ಎಂಬ ಸಂಶಯವು ಅವನಿಗೆ ಹೊಳೆಯಿತು. ನೋವು, ಭಯ ಇವುಗಳಿಂದ ಸ್ವಪ್ನಾತ್ಮನು ದುಃಖಿತನಾಗುತ್ತಿರುವದರಿಂದ ಅವನು ನಿಜವಾದ ಬ್ರಹ್ಮನೆಂದು ಹೇಳಲಿಕ್ಕಾಗದು, ಎಂದು ಇಂದ್ರನು ಬಂದು ಪ್ರಜಾಪತಿಗೆ ಮತ್ತೆ ಹೇಳಿದನು. ಇಂದ್ರನು ನಿಜವಾದ ಜಿಜ್ಞಾಸುವೂ ಯೋಗ್ಯ ಶಿಷ್ಯನೂ ಇರುವನೆಂಬುದನ್ನು ತಿಳಿದು ಅವನಿಗೆ ಮತ್ತೆ ವ್ರತಸ್ಥನಾಗಿ ಮೂವತ್ತೆರಡು ವರ್ಷ ಇರಹೇಳಿದನು. ಆಮೇಲೆ ಸುಷುಪ್ತ ಸ್ಥಿತಿಯಲ್ಲಿ ಸಂಪ್ರಸನ್ನನೂ ವಿಶ್ರಾಂತನೂ ಇರುವ ಆತ್ಮನೆ ಬ್ರಹ್ಮನೆಂದು ಪ್ರಜಾಪತಿಯು ಅವನಿಗೆ ಹೇಳಿದನು. ಇದಾದರೂ ಎಲ್ಲಕ್ಕೂ ಶ್ರೇಷ್ಠ ಜ್ಞಾನವಿರಲಿಲ್ಲ. ಇಂದ್ರನು ಸಂತುಷ್ಟನಾಗಿ ಮರಳಿ ಹೊರಟನು. ದೇವತೆಗಳ ಕಡೆಗೆ ಹೋಗಿ ಮುಟ್ಟುವಷ್ಟರಲ್ಲಿಯೆ ಇಂದ್ರನಿಗೆ ಮತ್ತೆ ಸಂಶಯವು ಬಂದಿತು. ನಿದ್ರೆಯಲ್ಲಿ ಹೊರಗಣ ವಸ್ತುಗಳ ಅರಿವೂ ಇರುವದಿಲ್ಲ, ಒಳಗಣ ಆತ್ಮನ ಅರಿವೂ ಇರುವದಿಲ್ಲ ; ಅಂದಮೇಲೆ ಸುಷುಪ್ತ ಆತ್ಮನು ಬ್ರಹ್ಮನೆಂದೆನಿಸಲಾರನು, ಎಂದು ಇಂದ್ರನು ಸಂಶಯಬಟ್ಟನು. ಸುಷುಪ್ತಸ್ಥಿತಿಯೆಂದರೆ ಕೇವಲ ಕಟ್ಟಿಗೆಯ ತುಂಡಿನಂಥ ಜಡಸ್ಥಿತಿಯು, ಅಲ್ಲಿ ಯಾತರ ಅರಿವೂ ಇರುವದಿಲ್ಲವೆಂಬುದನ್ನು ನೋಡಿ ಅವನು

ಪುನಃ ಪ್ರಜಾಪತಿಯು ಕಡೆಗೆ ಹೋದನು. ನೀನು ನುಡಿದ ಜ್ಞಾನವು ಸಮಾಧಾನಕಾರಕ ವಿಲ್ಲವೆಂದು ಇಂದ್ರನು ಪ್ರಜಾಪತಿಗೆ ಸ್ಪಷ್ಟವಾಗಿ ಹೇಳಿದನು. ಸುಷುಪ್ತ ಆತ್ಮನೆ ಬ್ರಹ್ಮನೆಂಬ ಜ್ಞಾನವು ನಿಜವಿರಲಾರದು, ಯಾಕಂದರೆ ಆ ಸ್ಥಿತಿಯಲ್ಲಿ ಆತ್ಮನಿಗೆ ತನ್ನರಿವೂ ಇರುವದಿಲ್ಲ, ಈ ಭೂತಗಳ ಅರಿವೂ ಇರುವದಿಲ್ಲ, ಅಲ್ಲಿ ಆತ್ಮನು ನಷ್ಟವಾಗಿರುವನೋ ಏನೋ ಎಂಬ ಸಂಶಯವು ಬರುವದು, ಎಂದು ಇಂದ್ರನು ನುಡಿದನು. ತೀಕ್ಷ್ಣಬುದ್ಧಿಯುಳ್ಳವನಾದ ಇಂದ್ರನು ಯೋಗ್ಯಶಿಷ್ಯನೆಂದು ಭಾವಿಸಿ ಮತ್ತೆ ಐದುವರ್ಷ ತಪವನ್ನಾಚರಿಸು ಎಂದು ಪ್ರಜಾಪತಿಯು ಅವನಿಗೆ ಹೇಳಿದನು. ಮತ್ತೆ ಐದುವರ್ಷ ತಪವನ್ನಾಚರಿಸಿ ಇಂದ್ರನು ಒಟ್ಟಗೆ ನೂರಾ ಒಂದು ವರ್ಷದ ತನ್ನ ತಪವನ್ನು ಮುಗಿಸಿದನು. ಆಮೇಲೆ ಅತ್ಯಂತ ನಮ್ರತೆಯಿಂದ, ನನಗೆ ಬ್ರಹ್ಮಜ್ಞಾನವನ್ನು ದಯಪಾಲಿಸು. ಎಂದು ಪ್ರಜಾಪತಿಗೆ ಹೇಳಿಕೊಂಡನು. ಆಗ ನಿಜವಾದ ಜ್ಞಾನವನ್ನು ಪ್ರಜಾಪತಿಯು ಅವನಿಗೆ ಹೇಳಿದನು. ಅವನು ಅಂದದ್ದು, ' ಇಂದ್ರನೇ, ಈ ಶರೀರವು ಮರ್ತ್ಯವು. ಆದರೆ ಇದು ಅಮೃತವಾದ ಆತ್ಮನ ಅಧಿಷ್ಠಾನವು. ಅಶರೀರಿಯಾದ ಆತ್ಮನು ಶರೀರವನ್ನು ಧಾರಣಮಾಡಿದಮೇಲೆ ಮಾತ್ರ ಸುಖದುಃಖ ಪ್ರಿಯಾಪ್ರಿಯಗಳಿಗೆ ಒಳಗಾಗುವನು. ಅಶರೀರಿಯಾದ ಈ ಗಾಳಿ ಗುಡುಗುಗಳು, ಈ ಮಿಂಚುಮೋಡಗಳು, ದಿವ್ಯ ಆಕಾಶದಿಂದ ಹೊರಟು ಪರಂಜ್ಯೋತಿಯನ್ನು ಹೊಂದಿ ತಮ್ಮ ತಮ್ಮ ಸ್ವರೂಪದಿಂದ ಬೆಳಗುವಂತೆ ಸಂಪ್ರಸನ್ನ ಆತ್ಮನು ಈ ಮರ್ತ್ಯ ಶರೀರದಿಂದ ಹೊರಟು ಪರಂಜ್ಯೋತಿಯನ್ನು ಪಡೆದು ಸ್ವ–ಸ್ವರೂಪದಿಂದ ಬೆಳಗುವನು. ಸ್ವ–ಸ್ವರೂಪದಿಂದ ಪ್ರಕಾಶಮಾನನಾಗುವವನೆ ಉತ್ತಮ ಪುರುಷನು (ಛಾಂ, ಅ ೮, ಖಂ ೭, ಮಂ ೧೨ ). ಸ್ವಸ್ವರೂಪಜ್ಞಾನವೆ, ಆತ್ಮಜ್ಞಾನವೆ ಪರಮಸತ್ಯವೆಂದು ಇಲ್ಲಿ ಸೂಚಿಸಲ್ಪಟ್ಟಿರುವದು. ಯಾವುದು ತನ್ನನ್ನು ತಾನೆ ತಿಳಿಯುವದೊ, ಯಾವುದು ಪರಾವಿದ್ಯೆಯ ಬೆಳಕಿನಲ್ಲಿ ತಾನು ತಾನೇ ಎಂದು ಸಾಕ್ಷಾತ್ಕರಿಸುವದೊ ಅದೇ ಸತ್ಯವೆಂದು ತಿಳಿಯಬೇಕು. ಯಾವ ಕೇವಲ ಉನ್ಮನಿ ಅವಸ್ಥೆಯಲ್ಲಿ ಆತ್ಮನು ಸ್ವಯಂಪ್ರಕಾಶನಾಗಿ ತನ್ನನುಳಿದು ಇತರರ ಅರಿವ ನಳಿದಿರುವನೊ ಅದೇ ಸ್ಥಿತಿಯಲ್ಲಿ ಸತ್ಯಸಾಕ್ಷಾತ್ಕಾರವಾಗುವದೆಂದು ಛಾಂದೋಗ್ಯದ ಅಭಿಪ್ರಾಯವಿರುವದು. ಈ ಮೇಲಣ ಕಥೆಯು ಒಳ್ಳೆ ಅರ್ಥಪೂರ್ಣವಿರುವದು. ನಮ್ಮ ಚಿದವಸ್ಥೆಗಳನ್ನು ಚನ್ನಾಗಿ ವಿಮರ್ಶಿಸಿ ಉಪನಿಷತ್ಕಾರರು ಜಾಗ್ರತ್, ಸ್ವಪ್ನ, ಸುಷುಪ್ತ ಈ ಯಾವ ಅವಸ್ಥೆಗಳಲ್ಲಿಯೂ ಆತ್ಮನ ಜ್ಞಾನವಾಗುವದು ಅಶಕ್ಯವು, ಆತ್ಮನು ಶುದ್ಧ ಸ್ವಯಂವೇದ್ಯನು, ನಾನು ನಾನೇ ಎಂಬ ಜ್ಞಾನಸ್ಫುರಣದಿಂದಲೆ ಗೋಚರನು ಎಂದು ಹೇಳಿರುವರು. ದೇಹಾತ್ಮಬುದ್ಧಿಯುಳ್ಳವರು, ಜಾಗೃತಾವಸ್ಥೆಯಲ್ಲಿಯ ಆತ್ಮನೆ ನಿಜವಾದ ಆತ್ಮನೆಂದು ಭಾವಿಸುವವರು ಜಡವಾದಿಗಳು, ಭೌತಿಕವಾದಿಗಳು. ಸ್ವಪ್ನಸ್ಥಿತಿಯಲ್ಲಿಯ ಆತ್ಮನೆ

ಸತ್ಯಾತ್ಮನೆಂದು ತಿಳಿಯುವವರು ಮೇಲಿನವರಿಗಿಂತ ಸ್ವಲ್ಪ ಹೆಚ್ಚಿನ ತರಗತಿಯವರಿದ್ದರೂ ಥಿಯಾಸಫಿಸ್ಟರು ಹೇಳುವ ತೇಜೋಪುರುಷನೆ ( Etheric double ) ಆತ್ಮನೆಂದು ಅವರ ಭಾವನೆಯಿರುವದು. ಸುಷುಪ್ತ ಆತ್ಮನೆ ನಿಜವಾದ ಆತ್ಮನೆಂದು ಭಾವಿಸುವವರ ತಿಳಿವಳಿಕೆಯೂ ತಪ್ಪು. ಯಾಕಂದರೆ ಆ ಅವಸ್ಥೆಯಲ್ಲಿ ಆತ್ಮನ ಅಥವಾ ಈ ಜಗತ್ತಿನ ಅರಿವೇ ಇರುವದಿಲ್ಲ. ಅಂದಮೇಲೆ ಸ್ವಯಂಪ್ರಕಾಶಿಯೂ ಕೇವಲನೂ ಆತ್ಮರತನೂ ಸ್ವಯಂಸಾಕ್ಷಿಯೂ ಆದ ಶುದ್ಧಾತ್ಮನೆ ನಿಜವಾದ ಆತ್ಮವಸ್ತುವು, ಎಂಬುದೆ ಕೊನೆಯ ಸಿದ್ಧಾಂತವು.

**೧೪. ಪರಾತ್ಪರಸತ್ಯವೆ ಆತ್ಮವು ಎಂಬುದು—** ಆತ್ಮಜ್ಞಾನವೆ ಪರಸತ್ಯವು ಎಂಬ ಪ್ರಮೇಯವನ್ನು ಛಾಂದೋಗ್ಯೋಪನಿಷತ್ತಿನ ಋಷಿಯು ಮಾಡಿದುದನ್ನು ನಾವು ಇದುವರೆಗೆ ನೋಡಿದೆವು. ಈ ಆತ್ಮಜ್ಞಾನಿಯಾದ ಆತ್ಮನೂ ಪರಮಾತ್ಮನೂ ಒಂದೇ ಎಂದು ಬಹುಶಃ ಎಲ್ಲ ಉಪನಿಷತ್ಕಾರರು ಹೇಳಿರುವುದನ್ನೂ ನೋಡಿದೆವು. ಇನ್ನು ತೈತ್ತಿರೀಯೋಪನಿಷತ್ತಿನ ಋಷಿಯು ಹೇಳುವ ಪರಾತ್ಪರ ವಸ್ತುವಿನ ಕೆಲವು ಲಕ್ಷಣಗಳನ್ನು ಲಕ್ಷಿಸುವ. ಬ್ರಹ್ಮವು ಸತ್ಯವು, ಜ್ಞಾನವು, ಅನಂತವು ಇರುವದು ( ತೈ, ವಲ್ಲಿ ೨, ಮಂ ೧ ) ಎಂದು ವಚನವಿರುವದು. ಇಲ್ಲಿ ಬ್ರಹ್ಮ ಮತ್ತು ಜ್ಞಾನ ಇವುಗಳ ಐಕ್ಯವನ್ನು ಸ್ಪಷ್ಟವಾಗಿ ಹೇಳಿರುವುದರಿಂದ ಆತ್ಮನ ನಿಜಸ್ವರೂಪದ ವರ್ಣನೆಯನ್ನು ಒಡೆದು ಮಾಡಿದಂತಾಗಿದೆ. ಸತ್ಯ ಮತ್ತು ಜ್ಞಾನ ಇವೆರಡೂ ಈ ಉಪನಿಷತ್ಕಾರರ ದೃಷ್ಟಿಯಿಂದ ಒಂದೇ ಇರುವವು. ಐತರೇಯದಲ್ಲಿ ಇದೇ ಪ್ರಮೇಯದ ಉಚ್ಚಾರವಿರುವದು. 'ಅಖಿಲ ದೇವತೆಗಳು, ಪೃಥಿವಿಯ ಮೇಲಿನ ಎಲ್ಲ ಅಂಡಜ ಜಾರುಜ ಸ್ವೇದಜ ಉದ್ಭಿಜ ಭೂತಗಳು, ಸ್ಥಾವರ ಜಂಗಮವಾದ ಪ್ರತಿಯೊಂದು ಚರಾಚರವಸ್ತುವು—ಇವೆಲ್ಲ ಪ್ರಜ್ಞಾನವು, ಇವು ಪ್ರಜ್ಞಾನದಲ್ಲಿ ಪ್ರತಿಷ್ಠಿತವಾದವುಗಳು, ಪ್ರಜ್ಞಾನವು ವಿಶ್ವದ ನೇತ್ರವು, ಪ್ರಜ್ಞಾನವೆ ಬ್ರಹ್ಮವು' ( ಐ, ಅ ೩, ಮಂ ೩ ) ಎಂದು ಐತರೇಯವು ಹೇಳುವದು. ಪರಾತ್ಪರ ಸತ್ಯದ ಅಥವಾ ಬ್ರಹ್ಮದ ಮತ್ತು ಪ್ರಜ್ಞಾನದ ಅಥವಾ ಆತ್ಮಜ್ಞಾನದ ಐಕ್ಯವು ಇಲ್ಲಿ ನಿಃಸಂದಿಗ್ಧವಾಗಿ ಹೇಳಲ್ಪಟ್ಟಿದೆ. ಈ ರೀತಿ ಆಧಿಭೌತಿಕ, ಆಧಿದೈವಿಕ, ಮತ್ತು ಆಧ್ಯಾತ್ಮಿಕ ಪದ್ಧತಿಗಳಿಂದ ವಿಚಾರಿಸಿ ಕೊನೆಗೆ ಆತ್ಮಜ್ಞಾನದ ಅಲುಗಾಡದ ಅಡಿಗಲ್ಲಿನ ಮೇಲೆ ಉಪನಿಷತ್ಕಾರರು ಪರಾತ್ಪರ ಸತ್ಯವನ್ನು ಸ್ಥಾಪಿಸಿದ್ದಾರೆ. ಅವರ ದೃಷ್ಟಿಯಿಂದ ಆತ್ಮಜ್ಞಾನದ ಕೂಡ ಒಂದಾಗದ ದೇವರು ದೇವರಲ್ಲ, ಇರವು ಇರವಲ್ಲ ; ಶುದ್ಧ ಆತ್ಮಜ್ಞಾನದ ಲಕ್ಷಣಗಳಿಂದ ಲಕ್ಷಿತವಾಗದಿರುವುದು ಸತ್ಯವಲ್ಲ. ಹೀಗೆ ಉಪನಿಷತ್ಕಾರರಿಗೆ ಆತ್ಮಜ್ಞಾನವೆ ಪರಮಸತ್ಯವು, ಪರಾತ್ಪರವಸ್ತುವು.

## ೪. ಆತ್ಮಜ್ಞಾನದ ಮಹತ್ವವು

**೧೫. ಜ್ಞಾನಸ್ವರೂಪ, ಅಧ್ಯಾತ್ಮ, ಅನುಭಾವ ಇವುಗಳ ದೃಷ್ಟಿಯಿಂದ ಆತ್ಮಜ್ಞಾನದ ಮಹತ್ವವು—** ಇನ್ನು ಆತ್ಮಜ್ಞಾನವೆ ಪರಾತ್ಪರ ಸತ್ಯವೆಂದು ಒಪ್ಪಿದರೂ ಆ ಸತ್ಯವನ್ನು ಸಾಕ್ಷಾತ್ಕರಿಸುವ ಬಗೆಯಾವುದು ಎಂಬುದು ಉಪನಿಷತ್ಕಾರರಿಗೆ ಎದುರಾದ ಮಹತ್ಪ್ರಶ್ನೆಯು. ಕೇವಲ ಬುದ್ಧಿಯಿಂದ ನಾವು ಆ ಜ್ಞಾನವನ್ನು ಪಡೆಯಬಹುದೊ ಇಲ್ಲವೆ ಬುದ್ಧಿಯ ಆಚೆಗೆ ಹೋಗಿ ಇನ್ನಾವ ಸಾಧನದಿಂದಾದರೂ ಆತ್ಮಜ್ಞಾನದ ದಿವ್ಯಾಮೃತವನುಣಬಹುದೊ ? ಈ ಪ್ರಶ್ನೆಗೆ ಉಪನಿಷತ್ಕಾರರು, ಕೇವಲ ಬುದ್ಧಿಯು ಆತ್ಮಜ್ಞಾನವನ್ನು ದೊರಕಿಸಿಕೊಡಲಿಕ್ಕೆ ಅಸಮರ್ಥವೆಂದು ಉತ್ತರವನ್ನಿತ್ತಿರುವರು. ಅನುಭಾವಿಯು ಅನುಭವಿಸುವ ಆತ್ಮಸಾಕ್ಷಾತ್ಕಾರದ ಸ್ಥಿತಿಯಲ್ಲಿಯೆ ಶುದ್ಧ, ಕೇವಲ, ಆತ್ಮಜ್ಞಾನವಾಗುವದೆಂದು ಅವರ ಸ್ಪಷ್ಟವಾದ ಅಭಿಪ್ರಾಯವು. ಈ ಅನುಭಾವ ಸಾಮರ್ಥ್ಯವು ಅಥವಾ ದಿವ್ಯಜ್ಞಾನ ಸಾಮರ್ಥ್ಯವು ( Intuition ) ಬುದ್ಧಿಯನ್ನು ಮೀರಿರುವದೊ, ಬುದ್ಧಿಯಂತೆಯೆ ಇರುವದೊ, ಅಥವಾ ಬುದ್ಧಿಯಲ್ಲಿಯೆ ಒಳಕೊಂಡಿರುವದೊ ಎಂಬ ಪ್ರಶ್ನೆಯನ್ನು ನಾವು ಇಲ್ಲಿ ಚರ್ಚಿಸುತ್ತ ಕೂಡುವದಿಲ್ಲ. ಆತ್ಮಜ್ಞಾನವನ್ನು ಹೇಗೆ ಸಾಕ್ಷಾತ್ಕರಿಸಬಹುದು ಎಂಬ ಬಗ್ಗೆ ನಾವು ಬರೆದ ' ಸಾಕ್ಷಾತ್ಕಾರದ ಮುಂಗುರುತುಗಳು ' ಎಂಬ ಕೊನೆಯ ಪ್ರಕರಣದಲ್ಲಿ ನಾವು ಈ ದಿವ್ಯಶಕ್ತಿಯನ್ನು ಬಣ್ಣಿಸಲೆತ್ನಿಸುವೆವು, ಅರ್ಥಾತ್ ಅಲ್ಲಿ ಈ ಶಕ್ತಿಯು ಇಂದ್ರಿಯಾತೀತವು, ಬುದ್ಧಿಯ ಆಚೆಗಿನದು, ಎಂದು ಪ್ರತಿಪಾದಿಸುವೆವು. ಬರಿಯ ಇಂದ್ರಿಯಜ್ಞಾನ ಅಥವಾ ಬುದ್ಧಿಯ ಆಕಲನ ಇವುಗಳಿಗಿಂತ ದಿವ್ಯಜ್ಞಾನವು ಹಿರಿದಾದುದು ಎಂಬುದನ್ನು ನಾವು ಆ ಪ್ರಕರಣದಲ್ಲಿ ಸಿದ್ಧಪಡಿಸುವೆವು. ಇಲ್ಲಿ ನಾವು ತತ್ವಜ್ಞಾನದ ದೃಷ್ಟಿಯಿಂದ ಮಾತ್ರ ಈ ಆತ್ಮಜ್ಞಾನದ ಕಡೆಗೆ ನೋಡುತ್ತಿರುವೆವು. ಆದುದರಿಂದ ಇಲ್ಲಿ ಆ ಆತ್ಮಜ್ಞಾನದ ಸ್ವರೂಪವೇನು ಮತ್ತು ಅಧ್ಯಾತ್ಮದೃಷ್ಟಿಯಿಂದ ಅದರ ಮಹತ್ವವೇನು ಇಷ್ಟೇ ನೋಡಿ ಆತ್ಮಜ್ಞಾನದ ಸಾಕ್ಷಾತ್ ಅನುಭವವನ್ನು ಕೊನೆಯ ಪ್ರಕರಣದಲ್ಲಿ ವಿಚಾರಿಸಬೇಕೆಂದು ನಮ್ಮ ಇಚ್ಛೆಯು.

**೧೬. ಆತ್ಮಜ್ಞಾನದ ಸ್ವರೂಪವೇನು—** ' ಜ್ಞಾನ 'ವೆಂದರೆ ಒರ್ವನು ಒಂದು ವಸ್ತುವಿನ ನಿಜಸ್ವರೂಪವನ್ನು ತಿಳಿದುಕೊಳ್ಳುವದು; ಈ ಅರ್ಥದಲ್ಲಿ ಆತ್ಮನ ಜ್ಞಾನವಾಗುವದು ಅಶಕ್ಯವೆಂದು ಉಪನಿಷತ್ಕಾರರ ಸಿದ್ಧಾಂತವಿರುವದು. ಜರ್ಮನ್ ದಾರ್ಶನಿಕನಾದ ಕಾಂಟನಾದರೂ ಸತ್ಯದ ಅಂದರೆ ಜೀವಾತ್ಮ–ಪರಮಾತ್ಮರ ಜ್ಞಾನವು ಅಸಂಭವನೀಯವೆಂದೇ ಹೇಳಿರುವನೆಂಬುದು ವಾಚಕರಿಗೆ ಗೊತ್ತಿರಬಹುದು. ಈ ಜ್ಞಾನವು ಕೇವಲ

ವಿಶ್ವಾಸದ ವಿಷಯವೆಂದು ಅವನು ಹೇಳಿರುವನು. ಜೀವಾತ್ಮ ಪರಮಾತ್ಮರು ಬುದ್ಧಿಗಮ್ಯ ವಿಲ್ಲದಿದ್ದರೂ ಅವರ ಜ್ಞಾನವು ಬರಿಯ ವಿಶ್ವಾಸವಿಷಯವಲ್ಲ, ಆದರೆ ಅದು ಅನು ಭೂತಿಯ ವಿಷಯವು, ಸಾಕ್ಷಾತ್ಕಾರದ ವಿಷಯವು ಎಂದು ಉಪನಿಷತ್ಕಾರರು ಪ್ರತಿಪಾದಿ ಸಿರುವರು. ಒಮ್ಮೊಮ್ಮೆ ವಿನಯಮೂಲಕ ಅದು ಅಜ್ಞೇಯವೆಂದು ಋಷಿಗಳು ಅಂದರೂ ಸ್ಪೆನ್ಸರನು ಹೇಳಿದಂತೆ ಆ ವಿಷಯವು ನಿಜವಾಗಿ ಅಜ್ಞೇಯವೆಂಬುದಕ್ಕೆ ಅವರು ಎಂದೂ ಒಪ್ಪಿಗೆಯನ್ನಿತ್ತಿಲ್ಲ.

(೧) ಆತ್ಮನು ತತ್ವತಃ ಅಜ್ಞೇಯನು, ಆತ್ಮನ ತಾತ್ವಿಕಸ್ವರೂಪವು ತಿಳಿಯಲ ಸಾಧ್ಯವು ಎಂದು ಋಷಿಗಳು ಹೇಳುವರು. 'ಯಾವ ವಸ್ತುವನ್ನು ತಿಳಿಯಲಾರದೆ ಮನಸ್ಸು, ವಾಚೆ, ಇವುಗಳೆಲ್ಲ ತಿರುಗಿ ಬರುವವೊ ಅದೇ ಸತ್ಯವು' ಎಂದು ತೈತ್ತಿರೀಯದ (ತೈ, ವ ೨, ಅನು ೪) ವಚನವಿರುವದು. 'ಅದನ್ನು ಕಣ್ಣು ಕಾಣಲಾರದು, ವಾಣಿಯು ವ್ಯಕ್ತನಾಡಲಾರದು. ಮನಸು ಮುಟ್ಟಲಾರದು. ಅಂತಹ ವಸ್ತುವಿನ ಕಲ್ಪನೆಯಾದರೂ ನಮಗೆ ಹೇಗೆ ಬರಬೇಕು? ಅದು ಜ್ಞಾತ ಮತ್ತು ಅಜ್ಞಾತ ವಸ್ತುಗಳಾಚೆಗಿರುವದೆಂದು. ಹೇಳುವದೆ ಸರಿ' ಎಂದು ಕೇನೋಪನಿಷತ್ತು (ಕೇನ, ಖಂ ೧, ಮಂ ೩) ಹೇಳುವದು 'ಇದನ್ನು ಬಲ್ಲೆವು ಅನ್ನುವವರಿಗೆ ಇದು ಅಜ್ಞಾತವು, ಇದನ್ನರಿಯೆವು ಅನ್ನುವವರಿಗೆ ಇದು ಜ್ಞಾತವು' ಎಂದು ಆಗಸ್ವಾಯೀನನೋಪಾದಿಯಲ್ಲಿ ಈ ಕೇನೋಪನಿಷತ್ತಿನ ಋಷಿಯೂ ನುಡಿ ದಿರುವನು (ಕೇನ, ಖಂ ೨, ಮಂ ೩). ಕಠೋಪನಿಷತ್ತಾದರೂ (ಕಠ, ಅ ೧, ಮಂ ೨೭) ಇದೇ ಅರ್ಥದಲ್ಲಿ 'ಆತ್ಮವಿಷಯವು ಮೊದಲು ಬಹುಜನರ ಕಿವಿಗೆ ಬೀಳುವುದೇ ಇಲ್ಲ. ಬಿದ್ದರೂ ಅದು ಅವರಿಗೆ ತಿಳಿಯುವದಿಲ್ಲ. ಆತ್ಮವಿಷಯವನ್ನು ಹೇಳುವ ಗುರುಗಳು ಇರು ವದೆ ಒಂದು ದೊಡ್ಡ ಆಶ್ಚರ್ಯದ ಸಂಗತಿಯು. ಗುರುಗಳು ಹೇಳಿದುದನ್ನು ತಿಳಿದುಕೊಳ್ಳು ವವರು ದೊರೆಯುವದಂತೂ ಮಹದಾಶ್ಚರ್ಯವು' ಎಂದು ನುಡಿದಿರುವದು. ಆತ್ಮನು ತತ್ವತಃ ಅಜ್ಞೇಯನು ಎಂಬುದನ್ನು ಈ ಅವತರಣಿಕೆಗಳು ಪುಷ್ಟೀಕರಿಸುವವು.

(೨) ಋಷಿಗಳು ಈ ಆತ್ಮನ ಅಜ್ಞೇಯತ್ವವನ್ನು ಇನ್ನೊಂದು ಬಗೆಯಿಂದ ವಿಚಾರಿಸಿದ್ದಾರೆ. ಆತ್ಮನು ತಾನೇ ಅನಾದಿಯಾದ ಅರಿಯುವವನು, ಜ್ಞಾತಾ, ವೇತ್ತಾ, ಇರುವುದರಿಂದ ಅವನು ಸ್ವತಃ ಅಜ್ಞೇಯನಿರುವನು. ಅರಿಯುವವನೆ ಅರಿವಿನ ವಿಷಯ ನಾಗಬಲ್ಲನೆ? ಜ್ಞಾತಾ ಇದ್ದವನು ಜ್ಞಾನದ ವಿಷಯನಾಗುವ ಬಗೆ ಹೇಗೆ? ಎಂದು ಉಪ ನಿಷತ್ಕಾರರು ಕೇಳುವರು. 'ಅವನು ಅನಾದಿ ಮಹಾಪುರುಷನು. ಅರಿಯುವದೆಲ್ಲವನ್ನು ಅರಿತವನು. ಸಕಲ ಜ್ಞೇಯವನ್ನರಿತ ಜ್ಞಾನಿಯು. ಅವನನ್ನರಿಯುವವರು ಯಾರು?' ಎಂದು ಶ್ವೇತಾಶ್ವತರವು (ಶ್ವೇ, ಅ ೩. ಮಂ ೧೯) ಕೇಳುವದು. ಬೃಹದಾರಣ್ಯಕದಲ್ಲಿ

ಯಾಜ್ಞವಲ್ಕ್ಯನ ಇದೇ ಬಗೆಯ ವಿಚಾರಗಳನ್ನು ನಾವು ಕಾಣಬಹುದು. 'ಇವನ್ನೆಲ್ಲವ ನ್ನರಿತವನ ಅರಿವನ್ನು ಮಾಡಿಕೊಳ್ಳುವರಾರು ? ವಿಜ್ಞಾತನನ್ನು ತಿಳಿದುಕೊಳ್ಳುವ ಸಾಮರ್ಥ್ಯವು ಯಾರಲ್ಲಿ ? ' ( ಬೃ, ಅ ೨, ಬ್ರಾ ೪, ಮಂ ೧೪ ), 'ನೋಡುವವನನ್ನು ನೋಡುವದು, ಕೇಳುವವನನ್ನು ಕೇಳುವದು, ವಿಚಾರಿಸುವವನನ್ನು ವಿಚಾರಿಸುವದು, ಎಲ್ಲ ತಿಳಿದವನನ್ನು ತಿಳಿದುಕೊಳ್ಳುವದು ಅಸಾಧ್ಯವು ' ( ಬೃ. ಅ ೩, ಬ್ರಾ ೪, ಮಂ ೨ ), 'ತಾನುಕಾಣದೆ ಎಲ್ಲವನ್ನು ನೋಡುವವನು, ತಾನು ಕೇಳಿಸದೆ ಎಲ್ಲವನ್ನು ಕೇಳುವವನು, ತಾನು ಅನ್ಯರಿಗೆ ವಿಚಾರಿಸಲಿಕ್ಕೆ ಬಾರದೆ ಎಲ್ಲವನ್ನು ವಿಚಾರಿಸುವವನು, ತಾನು ತಿಳಿಯದೆ ಎಲ್ಲವನ್ನು ತಿಳಿದುಕೊಳ್ಳುವವನವನು. ಅವನನ್ನುಳಿದ ಕಾಣುವವರಿಲ್ಲ, ಕೇಳುವವರಿಲ್ಲ, ವಿಚಾರಿಸುವವರಿಲ್ಲ, ತಿಳಿದುಕೊಳ್ಳುವವರಿಲ್ಲ ' ( ಬೃ, ಅ ೩. ಬ್ರಾ ೭. ಮಂ ೨೩ ) ಹೀಗೆ ಅನೇಕ ವಚನಗಳಿರುವವು. ಆತ್ಮನ ಅಜ್ಞೇಯತ್ವದ ಉಪಪತ್ತಿಯನ್ನು ಇಲ್ಲಿ ಈ ಬಗೆಯಿಂದ ಹೇಳಿರುವರು. ಅವನೆ ಜ್ಞಾನಿಯಾದುದರಿಂದ, ಜ್ಞಾನದ ಕರ್ತೃವಾದುದರಿಂದ ಅನ್ಯರಿಗೆ ಜ್ಞಾನವಿಷಯನಾಗಲರಿಯನು ಎಂಬುದೆ ಇದರ ಮಥಿತಾರ್ಥವು.

( ೩ ) ಈ ಮೇಲಣ ಸಿದ್ಧಾಂತವನ್ನು ಸ್ವೀಕರಿಸಿದರೆ ಇನ್ನೊಂದು ಮಹತ್ವದ ಪ್ರಶ್ನೆಯು ನಮಗೆ ಎದುರಾಗುತ್ತಿದೆ. ಆತ್ಮನೆ ಸರ್ವ ವಸ್ತುಗಳನ್ನರಿಯುವವನೆಂದೂ ಅವನನ್ನರಿಯುವವರಾರೂ ಇಲ್ಲವೆಂದೂ ಕ್ಷಣಹೊತ್ತು ತಿಳಿಯುವ. ಆದರೆ ಇಂಥ ಆತ್ಮನು ತನ್ನನ್ನು ತಾನರಿಯಬಲ್ಲನೆ, ಎಂಬುದೊಂದು ದೊಡ್ಡ ಪ್ರಶ್ನೆಯು. ಬೃಹದಾರಣ್ಯಕದಲ್ಲಿ ಈ ಸೂಕ್ಷ್ಮ ಪ್ರಶ್ನೆಯನ್ನು ಒರ್ವ ಜಿಜ್ಞಾಸುವು ಯಾಜ್ಞವಲ್ಕ್ಯನಿಗೆ ಕೇಳಿರುವನು. ಯಥಾಕ್ರಮದಂತೆ ಈ ಋಷಿಯು ತನ್ನ ಬುದ್ಧಿಕೌಶಲ್ಯದಿಂದ ಈ ಪ್ರಶ್ನೆಯನ್ನು ಬಿಡಿಸಿರುವನು. ಆತ್ಮನು ತನ್ನನ್ನು ತಾನರಿಯಬಲ್ಲನು ಎಂದು ಯಾಜ್ಞವಲ್ಕ್ಯನು ಉತ್ತರ ಕೊಟ್ಟಿರುವನು. ಆತ್ಮನ ಅರಿವು, ಆತ್ಮಜ್ಞಾನವು ಇದೇ ಪರಾತ್ಪರ ಸತ್ಯವು, ಆತ್ಮನು ತನಗೆ ತಾನೇ ಜ್ಞಾನ ವಿಷಯನಾಗಬಲ್ಲನು, ಆತ್ಮಜ್ಞಾನವಿಲ್ಲದಿದ್ದರೆ ಇನ್ನಾವ ಜ್ಞಾನವೂ ಇರದು, ಆ ಜ್ಞಾನವೆ ಕೊನೆಯ ಸತ್ಯವು, ಆತ್ಮನಿರೀಕ್ಷಣೆ ಮತ್ತು ಜ್ಞಾನ ಇವು ಸ್ವಾನುಭವದ ಸಂಗತಿಗಳೆಂದು ಯಾಜ್ಞವಲ್ಕ್ಯನು ಒಳ್ಳೆ ದಿಟ್ಟನಾಗಿ ಹೇಳಿರುವನು. ಕಾಂಟ ಮತ್ತು ಕೋಂಟ ಈ ದಾರ್ಶನಿಕರ ಸಿದ್ಧಾಂತಗಳನ್ನು ಈ ಋಷಿಯ ಸಿದ್ಧಾಂತಕ್ಕೆ ಹೋಲಿಸಿ ನೋಡಿದರೆ ಅವು ತೀರ ಅಪ್ರಗಲ್ಭವೆಂದು ಭಾವನೆಯಾಗುವದು; ಯಾಕಂದರೆ ಅವರು ಆತ್ಮನಿರೀಕ್ಷಣೆಯು ಅಸಾಧ್ಯವೆಂದು ಹೇಳುವರು. ಅಧ್ಯಾತ್ಮಶಾಸ್ತ್ರದಲ್ಲಿ ಆತ್ಮಜ್ಞಾನವು ಹೇಗೆ ಒಂದು ಅಬಾಧಿತ ಸತ್ಯವೊ ಹಾಗೆ ಮಾನಸಶಾಸ್ತ್ರದಲ್ಲಿ ಆತ್ಮನಿರೀಕ್ಷಣೆಯಾದರೂ ಒಂದು ಸತ್ಯವು. ತಾನೂ ಒಂದು ಪ್ರತ್ಯೇಕ ಜ್ಞಾನವಿಷಯವೆಂದು ನೋಡಿಕೊಳ್ಳುವ

ಅಸಾಧಾರಣ ಶಕ್ತಿಯು ಆತ್ಮನಿಗಿದೆ. ಸಾಮಾನ್ಯಜ್ಞಾನದ ನಿಯಮಗಳು ಆತ್ಮನನ್ನು ಬಂಧಿಸಲಾರವು. ಆತ್ಮನು ತನ್ನನ್ನು ಜ್ಞಾತಾ ಮತ್ತು ಜ್ಞೇಯ ಎಂದು ವಿಭಾಗಿಸಬಲ್ಲನು. ಮೌಲಿಕವೂ ಅತೀತವೂ ಸರ್ವಜ್ಞಾನ ಸಮನ್ವಯವೂ ಆದ 'ನಾನು ನಾನೇ ಇರುವೆನು' ಎಂಬ ಅತ್ಯಂತ ಶ್ರೇಷ್ಠವಾದ ಆಧ್ಯಾತ್ಮಿಕ ಸತ್ಯದ ಸಿದ್ಧಾಂತವನ್ನನುಸರಿದ ಕಾಂಟನು ಮಾನಸಶಾಸ್ತ್ರದಲ್ಲಿಯ ಇದೇ ಬಗೆಯಾಗಿರುವ ಆತ್ಮನಿರೀಕ್ಷಣೆಯನ್ನು ನಿರಾಕರಿಸಿದ್ದು ಒಳ್ಳೆ ಸೋಜಿಗದ ಸಂಗತಿಯು. ಯಾಜ್ಞವಲ್ಕ್ಯನು ಆತ್ಮನ ಜ್ಞಾನವು ಶಕ್ಯವೆಂದು ಹೇಳಿ ಸುಮ್ಮ ನಿರದೆ ಅದೇ ಒಂದು ಸತ್ಯವು, ಅದೊಂದೇ ಸತ್ಯವು, ಎಂದು ನಿರ್ಧಾರವಾಗಿ ಹೇಳಿದ್ದಾನೆ. ಪುರುಷನ ಜ್ಯೋತಿಯಾವುದು, ಎಂದು ಜನಕರಾಜನು ಮೊದಲು ಯಾಜ್ಞವಲ್ಕ್ಯನನ್ನು ಕೇಳಿದನು. 'ಮಹಾರಾಜನೆ, ಆದಿತ್ಯನೆ ಪುರುಷನ ಜ್ಯೋತಿಯು; ಅವನ ಸಾಮರ್ಥ್ಯ ದಿಂದಲೆ ಮನುಷ್ಯನು ಕೂಡುವನು, ಚಲಿಸುವನು, ಕಾರ್ಯಮಾಡುವನು, ತಿರುಗಿಬರು ವನು' ಎಂದು ಋಷಿಯು ಹೇಳಿದನು. 'ಆದಿತ್ಯನು ಅಸ್ತಂಗತನಾದ ಮೇಲೆ ಪುರು ಷನ ಜ್ಯೋತಿಯಾವುದು' ಎಂದು ಪುನಃ ಜನಕನು ಕೇಳಿದನು. 'ಆ ಕಾಲಕ್ಕೆ ಚಂದ್ರನು ಜ್ಯೋತಿಯು; ಯಾಕಂದರೆ ಅವನ ಬೆಳಕಿನಿಂದ ಮನುಷ್ಯನು ಕೂಡುವನು, ಚಲಿಸುವನು, ಕೆಲಸಮಾಡುವನು, ತಿರುಗಿಬರುವನು' ಎಂದು ಋಷಿಯು ಉತ್ತರ ಕೊಟ್ಟನು. 'ಸೂರ್ಯಚಂದ್ರರು ಅಸ್ತಹೊಂದಿದ ಮೇಲೆ ಪುರುಷನ ಜ್ಯೋತಿಯು ಮತ್ತಿನ್ನಾವುದು' ಎಂದು ಜನಕನು ಕೇಳಲು, 'ಅಗ್ನಿಯೆ ಜ್ಯೋತಿಯು; ಅಗ್ನಿಯ ಬೆಳಕಿ ನಿಂದ ಮನುಷ್ಯನು ಕೂಡುವನು, ಚಲಿಸುವನು, ಕೆಲಸ ಮಾಡುವನು, ತಿರುಗಿಬರುವನು' ಎಂದು ಋಷಿಯು ಹೇಳಿದನು. 'ಸೂರ್ಯ ಚಂದ್ರ ಅಗ್ನಿ ಮುಂತಾದವುಗಳೆಲ್ಲ ಮುಳುಗಿ ಹೋದ ಮೇಲೆ ಪುರುಷನ ಜ್ಯೋತಿ ಯಾವುದು' ಎಂದು ಮತ್ತೆ ಜನಕನ ಪ್ರಶ್ನೆಯು. ಇದಕ್ಕೆ ಉತ್ತರವೆಂದು ಯಾಜ್ಞವಲ್ಕ್ಯನು ಅಂದದ್ದು, 'ನೀನು ನನಗೆ ಅತಿಪ್ರಶ್ನೆಯನ್ನು ಕೇಳುತ್ತಿರುವಿ. ಸೂರ್ಯ ಚಂದ್ರರು ಅಸ್ತವಾದ ಮೇಲೆ ಅಗ್ನಿಯು ಶಾಂತನಾದ ಮೇಲೆ ಆತ್ಮನೆ ಪುರುಷನ ಜ್ಯೋತಿಯು' (ಬೃ. ಅ ೪, ಬ್ರಾ ೩, ಮಂ ೨-೬). ಅರಿಸ್ಟಾಟಲ್ಲನು ಯಾವ ಅವಸ್ಥೆಗೆ ಥಿಯೋರಿಯಾ (Theoria) ಎಂಬ ಹೆಸರಿಟ್ಟಿರುವನೊ ಯಾವ ಅವ ಸ್ಥೆಯಲ್ಲಿ ಆತ್ಮನೆ ಜ್ಞಾತಾ ಮತ್ತು ಜ್ಞೇಯನಿರುವನೊ ಆ ಶುದ್ಧ ಆತ್ಮರತ ಸ್ಥಿತಿಯನ್ನೆ ಇಲ್ಲಿ ಯಾಜ್ಞವಲ್ಕ್ಯನು ಒಡೆದು ವರ್ಣಿಸಿರುವನು.

**೧೭. ಆತ್ಮಜ್ಞಾನದ ಆಧ್ಯಾತ್ಮಿಕ ಮಹತ್ವವು**– ಹೋದ ಪರಿಚ್ಛೇದದಲ್ಲಿ ಆತ್ಮಜ್ಞಾನದ ಸ್ವರೂಪವನ್ನು ವಿಚಾರಿಸಿದ್ದಾಯಿತು. ಆತ್ಮನು ತತ್ವತಃ ಅಜ್ಞೇಯನು ಹಾಗೂ ಅವನು ಜ್ಞಾನವಿಷಯನಾಗಲಾರನೆಂದು ಅಜ್ಞೇಯನು ಇದ್ದರೂ ಅವನು ತನ್ನ

ಅಸಾಧಾರಣ ಸಾಮರ್ಥ್ಯದ ಮೂಲಕ ತನ್ನನ್ನು ತಾನೇ ನೋಡಬಲ್ಲನೆಂದು ಹೇಳಿದ್ದಾಯಿತು. ಇನ್ನು ಅಧ್ಯಾತ್ಮಶಾಸ್ತ್ರದ ದೃಷ್ಟಿಯಿಂದ ಆತ್ಮಜ್ಞಾನದ ಮಹತ್ವವೇನು ಇದನ್ನು ಚರ್ಚಿಸಬೇಕಾಗಿದೆ. ದ್ವೈತಾದ್ವೈತ ವಿಶಿಷ್ಟಾದ್ವೈತ ಮುಂತಾದ ವಿವಿಧ ಮತಗಳುಳ್ಳ ಅಧ್ಯಾತ್ಮವಾದಿಗಳ ಪರಸ್ಪರ ವಿರೋಧದ ಮೂಲಕ ನಮ್ಮ ತತ್ವಜ್ಞಾನವೆಂದರೊಂದು ದೊಡ್ಡ ವಾದಭೂಮಿಯಾಗಿ ಕಂಗೊಳಿಸುತ್ತಿರುವುದನ್ನು ಹೋದ ಪ್ರಕರಣದಲ್ಲಿ ವರ್ಣಿಸಿರುವೆವಷ್ಟೆ. ಜೀವನು ಪರಮಾತ್ಮನಿಂದ ತೀರ ಭಿನ್ನನು, ಜೀವನು ಪರಮಾತ್ಮನ ಅಂಶನು, ಜೀವನೂ ಪರಮಾತ್ಮನೂ ಒಂದೇ, ಹೀಗೆ ಅನುಕ್ರಮವಾಗಿ ದ್ವೈತ ವಿಶಿಷ್ಟಾದ್ವೈತ ಮತ್ತು ಅದ್ವೈತ ಮತದವರು ತಮ್ಮ ತಮ್ಮ ಮೂಲ ಆಧ್ಯಾತ್ಮಿಕ ಪ್ರಮೇಯಗಳನ್ನು ಪ್ರತಿಪಾದಿಸುವರು. ಹಿಂದುಸ್ಥಾನದ ತತ್ವಜ್ಞಾನದ ಇತಿಹಾಸದಲ್ಲಿ ಕಂಡುಬರುವಷ್ಟು ಕಡುತರ ಹಾಗೂ ದೀರ್ಘವಾದ ವಾದವಿವಾದಗಳು ಬೇರೆ ಯಾವ ದೇಶಗಳಲ್ಲಿಯೂ ಆಗಿರಲಿಕ್ಕಿಲ್ಲವೆಂದು ಹೇಳಬಹುದು. ಈ ಗೊಂದಲವನ್ನೆಲ್ಲ ನೋಡಿ, ಈ ವಾದವಿವಾದ, ಈ ತೀವ್ರತರವಾದ ಮತಭೇದ, ಇವುಗಳನ್ನು ನೋಡಿ ಇವುಗಳೊಳಗಿಂದ ಹೊರಬೀಳಲಿಕ್ಕೆ ಸರಲ ಹಾದಿಯೆ ಇಲ್ಲವೊ ಎಂಬ ಪ್ರಶ್ನೆಯು ಎದುರಾಗುತ್ತಿದೆ. ಶ್ರುತಿಮಂತ್ರಗಳೆ, ಉಪನಿಷದ್ವಾಕ್ಯಗಳೆ ಎಲ್ಲ ಆಚಾರ್ಯರಿಗೂ ಆಧಾರಭೂತ ವಚನಗಳು. ಆದರೆ ಬೇರೆ ಬೇರೆ ಆಚಾರ್ಯರು ಅದೇ ಮಂತ್ರಗಳಿಗೆ ಬೇರೆ ಬೇರೆ ಅರ್ಥ ಹಚ್ಚಿ ಅತ್ಯಂತ ಪರಸ್ಪರ ವಿರುದ್ಧವಿರುವ ತಮ್ಮ ತಮ್ಮ ಮತಗಳನ್ನು ಆ ಮಂತ್ರಗಳ ಆಧಾರದಿಂದಲೆ ಸಮರ್ಥಿಸಿರುವರು. ಇದೊಂದು ಸೋಜಿಗವೆ. ಆದರೆ ಉಪನಿಷತ್ಕಾರರು ಭಾಷ್ಯಕಾರರಿಗಿಂತ ಶ್ರೇಷ್ಠರಲ್ಲವೆ ? ಎಲ್ಲ ಉಪನಿಷತ್ತುಗಳಿಗೂ ಸಾಮಾನ್ಯವಾದ ಕೆಲವೊಂದು ಆಧ್ಯಾತ್ಮಿಕ ತತ್ವಗಳಿದ್ದು ಅವುಗಳನ್ನು ಬೇರೆ ಬೇರೆ ಅಧ್ಯಾತ್ಮವಾದಿಗಳು ಅಸುಮಗ್ರವಾಗಿ ತಿಳಿದುಕೊಂಡಿರುವುದರಿಂದ, ಹೀಗೆ ಮತಭೇದವಾಗಿಲಲಿಕ್ಕಿಲ್ಲವೆ ? ಭಿನ್ನಮತೀಯರು ಬೇಕಾದಷ್ಟು ಬಡಿದಾಡಲಿ, ನಿಜವಾದ ತತ್ವವು ಇವುಗಳಾಚೆಗಿರುವದೆಂಬ ಶ್ರೀ ಶಂಕರಾಚಾರ್ಯರ ವಾಕ್ಯವು ಸುಳ್ಳಲ್ಲ. ಈ ಪರಸ್ಪರ ವಿರೋಧಿಯಾದ ಮತಗಳನ್ನು ಒಂದೇ ಮಾಲೆಯಲ್ಲಿ ಪೋಣಿಸಲಿಕ್ಕೆ ಬರಬಹುದೆಂದು ನಮ್ಮ ಮತವು. ಮಾತ್ರ ಹೀಗೆ ಮಾಡಬೇಕಾದರೆ ಸಾಂಪ್ರದಾಯಿಕ ಟೀಕಾಕಾರರ ಟೀಕೆಗಳನ್ನು ದಾಟ ನಾವು ನಮ್ಮ ಮನಸ್ಸನ್ನು ನಿರ್ಮಲವನ್ನಾಗಿ ಮಾಡಲಿಕ್ಕೆ ಬೇಕು. ನಾವು ನಮ್ಮ ಬುದ್ಧಿಯನ್ನು ಶುದ ಮಾಡುವ. ಒಂದು ಸ್ವಚ್ಛ ತಿಳಿಗನ್ನಡಿಯಂತೆ ಅದನ್ನು ಸಾಂಪ್ರದಾಯವಿರಹಿತ ಮಾಡುವ. ಅಂದರೆ ಈ ಮತಮತಾಂತರಗಳ ತೊಡಕು ಹೋಗಿ ನಮಗೆ ತಿಳಿಯಾದ ಜ್ಞಾನವಾಗುವದು. ಈ ಭಿನ್ನಮತಗಳ ಸಮನ್ವಯವು ಅನುಭಾವದಲ್ಲಿಯೆ, ಆತ್ಮಾನುಭೂತಿಯಲ್ಲಿಯೆ ಆಗಬಲ್ಲದೆಂಬುದು ಸ್ಪಷ್ಟವಿದೆ. ಅನುಭೂತಿಸಾಮ್ರಾ

ಜ್ಯದಲ್ಲಿಯೆ ಆಯಾ ಮತಗಳಿಗೆ ತಕ್ಕ ಸ್ಥಾನವೂ ಭೂಮಿಕೆಯೂ ದೊರೆಯುವದು. ಇದಲ್ಲದೆ ನಾವು ಇವೆಲ್ಲವುಗಳನ್ನು ತತ್ವಜ್ಞಾನದೃಷ್ಟಿಯಿಂದ ನೋಡಬಹುದು. ಮೂಲ ಉಪನಿಷತ್ತುಗಳನ್ನು ಅಭ್ಯಸಿಸಿ ಬೇರೆ ಬೇರೆ ಮತಗಳ ಪ್ರಮೇಯಗಳು ಒಂದಕ್ಕೊಂದು ವಿಕಸಿತವಾದವುಗಳೆಂದು ವರ್ಗೀಕರಿಸಬಹುದು; ಮತ್ತು ಕೊನೆಗೆ ಈ ಪರಸ್ಪರ ವಿರೋಧಿಯಾಗಿ ಕಾಣುವ ಮತಗಳಲ್ಲಿ ಒಂದು ಬಗೆಯ ಶ್ರೇಷ್ಠ ಸಮನ್ವಯ ಸೂತ್ರವನ್ನು ಸಾಕ್ಷಾತ್ಕರಿಸಬಹುದು. ಹೀಗೆ ಮಾಡುವದೂ ಶಕ್ಯವಿದೆ.

**೧೮. ಆಧ್ಯಾತ್ಮಿಕ ಅನುಭವದ ನಿಚ್ಚಣಿಕೆಯು**— ಉಪನಿಷತ್ತುಗಳಲ್ಲಿ ಹೇಳಿದ ಆಧ್ಯಾತ್ಮಿಕ ಅನುಭವವನ್ನು ತಾತ್ವಿಕ ದೃಷ್ಟಿಯಿಂದ ವಿಮರ್ಶಿಸಿ ಅವರಲ್ಲಿ ಒಂದಕ್ಕೊಂದು ಮೇಲಿನದೆಂದು ಐದು ಮೆಟ್ಟಲುಗಳನ್ನು ಮಾಡಬಹುದು. ಇದೊಂದು ಐದು ಮೆಟ್ಟಲುಗಳುಳ್ಳ ಆಧ್ಯಾತ್ಮಿಕ ಅನುಭವದ ನಿಚ್ಚಣಿಕೆಯೆನ್ನಬಹುದು ಅಥವಾ ಐದು ಪಾವಟಿಗೆಗಳುಳ್ಳ ಸ್ವಾತ್ಮಸಾಕ್ಷಾತ್ಕಾರದ ಸೋಪಾನವೆನ್ನಬಹುದು. ಬೃಹದಾರಣ್ಯಕದಲ್ಲಿ ( ಬೃ, ಅ ೨, ಬ್ರಾ ೪, ಮಂ ೫ ) 'ಆತ್ಮನನ್ನು ನೋಡತಕ್ಕದ್ದು' ಎಂಬ ವಾಕ್ಯದಲ್ಲಿ ಹೇಳಿದಂತೆ ನಾವು ಬೇರೆ ಇರುವೆವು, ಎಂಬ ಭಾವನೆಯಿಂದ ನಮ್ಮ ಆತ್ಮನ ದಿವ್ಯತೆಯನ್ನು ನಾವು ನೋಡಲಾರಂಭಿಸುವದು, ಇದು ಮೊದಲನೆಯ ಮೆಟ್ಟಲು. ನಮ್ಮೊಳಗೆ 'ನಾನು' ಎಂದು ಅನ್ನುವ ಪುರುಷನೆ ಮೇಲೆ ಹೇಳಿದ ಆತ್ಮನು ಎಂಬುದನ್ನರಿಯುವದು, ಅದನ್ನನುಭವಿಸುವದು, ಈ ದೇಹೇಂದ್ರಿಯಾದಿಗಳು ಈ ಮನಸು ಭಾವನೆ ಮುಂತಾದ ಹೊದಿಕೆಗಳು 'ನಾನಲ್ಲ,' ನಾನು ತತ್ವತಃ ಆತ್ಮನೆ ಇರುವೆನು ( ಬೃ, ಅ ೪, ಬ್ರಾ ೪, ಮಂ ೧೨ ) ಎಂಬುದನ್ನು ಸಾಕ್ಷಾತ್ಕರಿಸುವದು, ಎರಡನೆಯ ಮೆಟ್ಟಲು. ನಮ್ಮ ಆತ್ಮನು ಬ್ರಹ್ಮನೆ ಇರುವನು, ಎಂದು ತಿಳಿಯುವದು, ಎಂಬುದನ್ನನುಭವಿಸುವದು ಮೂರನೆಯ ಮೆಟ್ಟಲು. ಬೃಹದಾರಣ್ಯಕದಲ್ಲಿ ( ಬೃ, ಅ ೨, ಬ್ರಾ ೫, ಮಂ ೧೯ ) 'ಈ ಆತ್ಮನೆ ಬ್ರಹ್ಮನು' ಎಂಬ ವಚನವಿರುವದು. ಈ ಆತ್ಮಬ್ರಹ್ಮೈಕ್ಯವು, ಈ ಜೀವಾತ್ಮಪರಮಾತ್ಮೈಕ್ಯವು, ಈಶೋಪನಿಷತ್ತಿನ ಶಾಂತಿಮಂತ್ರದಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವದು. ಆತ್ಮನೆ ಬ್ರಹ್ಮನು, ಬ್ರಹ್ಮನು ಅನಂತನಿರುವಂತೆ ಆತ್ಮನೂ ಅನಂತನು, ಆತ್ಮನು ಬ್ರಹ್ಮನಿಂದಲೆ ಬರುವನು, ಪೂರ್ಣಬ್ರಹ್ಮನಿಂದ ಪೂರ್ಣ ಆತ್ಮನನ್ನು ಕಳೆದರೂ ಪೂರ್ಣವೆ ಉಳಿಯುವದು ಎಂದು ಈಶೋಪನಿಷತ್ತು ( ಈಶ, ಶಾಂತಿಮಂತ್ರ ) ಹೇಳುವದು. ಪೂರ್ಣದಿಂದ ಪೂರ್ಣ, ಅನಂತದಿಂದ ಅನಂತ ಕಳೆದರೂ ಅನಂತವೆ ಉಳಿಯುವದು ಎಂಬ ಗಣಿತಶಾಸ್ತ್ರದ ಪ್ರಮೇಯವನ್ನು ಆಧಾರವಾಗಿಟ್ಟುಕೊಂಡು ಆತ್ಮಬ್ರಹ್ಮರ ಐಕ್ಯವನ್ನು ಈ ಉಪನಿಷತ್ತು ವರ್ಣಿಸುವದು. ಆತ್ಮಬ್ರಹ್ಮರು ಒಂದೇ ಎಂಬುದೆ ಇದರ ತಿರುಳು. ಇನ್ನು ನಾಲ್ಕನೆಯ

ಮೆಟ್ಟಲು ಏನಂದರೆ, ಮೊದಲನೆಯ ಪ್ರಮೇಯದ ಪ್ರಕಾರ 'ನಾನು' ಎಂಬುವ ಪುರುಷನೆ ಆತ್ಮನು, ಎರಡನೆಯ ಪ್ರಮೇಯದ ಪ್ರಕಾರ ಆತ್ಮನೆ ಬ್ರಹ್ಮನು, ಅಂದರೆ ನಾನೇ ಆತ್ಮನು, ಆತ್ಮನೆ ಬ್ರಹ್ಮನು; ಅಂದಮೇಲೆ ನಾನೇ ಬ್ರಹ್ಮನು ಎಂಬುದು ಸಿದ್ಧವು. ಇದು ಬೃಹದಾರಣ್ಯಕದಲ್ಲಿ (ಬೃ. ಅ ೧, ಬ್ರಾ ೪, ಮಂ ೧೦) 'ಅಹಂಬ್ರಹ್ಮಾಸ್ಮಿ' ನಾನೇ ಬ್ರಹ್ಮನು ಎಂಬ ವಾಕ್ಯದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟದೆ. ಇದೇ ಪ್ರಮೇಯವು ಛಾಂದೋಗ್ಯದಲ್ಲಿ (ಛಾಂ, ಅ ೬, ಖಂ ೮, ಮಂ ೭) 'ತತ್ವಮಸಿ' 'ನೀನೇ ಅದು ಅಂದರೆ ಬ್ರಹ್ಮವು' ಎಂದು ಇನ್ನೊಂದು ವಿಧವಾಗಿ ಹೇಳಲ್ಪಟ್ಟದೆ. ಇನ್ನು ಮುಂದಿನದು ಐದನೆಯ ಮೆಟ್ಟಲು. 'ನಾನು' ಎಂಬುದೂ ಬ್ರಹ್ಮವು, 'ನೀನು' ಎಂಬುದೂ ಬ್ರಹ್ಮವು, ಜ್ಞಾತಾ ಮತ್ತು ಜ್ಞಾನವಿಷಯ ಇವೆರಡೂ ಬ್ರಹ್ಮವೆ ಆದವು. ಅಂದಮೇಲೆ ನಾವು ಈ ವಿಶ್ವದಲ್ಲಿ ನೋಡುವುದೆಲ್ಲ ಮನಸ್ಸು, ನಿಸರ್ಗ, ಆತ್ಮ-ಅನಾತ್ಮಗಳು, ಇವೆಲ್ಲ ಬ್ರಹ್ಮವೆ ಇರುವವು. ನಮ್ಮ ಜ್ಞಾನವಿಷಯವಾದುದೆಲ್ಲ ಮತ್ತು ನಾವು ಸ್ವತಃ ಇವೆಲ್ಲ ,ಬ್ರಹ್ಮವೆ. ಇದನ್ನೇ ಹೇಳುವುದಕ್ಕಾಗಿ ಛಾಂದೋಗ್ಯದಲ್ಲಿ (ಛಾಂ, ಅ ೩, ಖಂ ೧೪, ಮಂ ೧) 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ವಾಕ್ಯವಿರುವದು. ಈ ಬಗೆಯಿಂದ ಈ ನಿಚ್ಚಣಿಕೆಯು ನಮ್ಮನ್ನು ವಿಚಾರದ ಅತ್ಯುಚ್ಚ ಶಿಖರಕ್ಕೆ ಒಯ್ದು ಮುಟ್ಟಿಸುವದು. ಇದೇ ಕೇವಲ ಅದ್ವೈತಸಿದ್ಧಾಂತವು. ಈ ಸಿದ್ಧಾಂತವನ್ನು ಕೇವಲ ಬುದ್ಧಿಯಿಂದ ಆಕಲನಮಾಡಿ ಸಮಾಧಾನ ಹೊಂದತಕ್ಕದ್ದೊ ಅಥವಾ ಸ್ವತಃ ಸಾಕ್ಷಾತ್ಕರಿಸತಕ್ಕದ್ದೊ ಎಂಬುದು ಈ ಆಧ್ಯಾತ್ಮಿಕ ಯಾತ್ರೆಯಲ್ಲಿ ನಾವು ಬರಿಯ ದಾರೀ ತೋರಿಸುವವರಾಗಬೇಕೊ ಅಥವಾ ಅನುಭಾವಿಗಳಾಗಬೇಕೊ ಈ ಎರಡರಲ್ಲಿ ನಮ್ಮ ಒಲವು ಎತ್ತಕಡೆಗೆ ಇರುವದು ಎಂಬುದನ್ನವಲಂಬಿಸಿದೆ. ಅನುಭಾವಿಗಳಾಗುವುದೆ ನಮ್ಮ ಮನೋಗತವೆಂಬುದು 'ಆತ್ಮಸಾಕ್ಷಾತ್ಕಾರದ ಮುಂಗುರುತುಗಳು' ಎಂಬ ಕೊನೆಯ ಪ್ರಕರಣದ ಮೇಲಿಂದ ವಾಚಕರು ಊಹಿಸಬಹುದು.

---

## ಪ್ರಕರಣ ೬

# ಔಪನಿಷದಿಕ ನೀತಿಶಾಸ್ತ್ರವು

**೧. ಅಧ್ಯಾತ್ಮ, ನೀತಿ, ಹಾಗೂ ಅನುಭೂತಿ—** ಹಿಂದಿನ ಪ್ರಕರಣದಲ್ಲಿ ಉಪನಿಷತ್ತಿನೊಳಗಿನ ತತ್ವಜ್ಞಾನದ ತಿರುಳೇನೆಂಬುದನ್ನು ವಿವೇಚಿಸಿದ್ದಾಯಿತು, ಹಾಗೂ ಅದನ್ನು ಅಳವಡಿಸಿಕೊಳ್ಳಲು ಅರಿವಿನಕಿಂತಲೂ ಅನುಭೂತಿಯೆ ಮಿಗಿಲಾದ ದಾರಿಯೆಂಬ ಮಾತನ್ನೂ ಅಲ್ಲಿ ಸೂಚಿಸಿದ್ದಾಯಿತು. ಆದುದರಿಂದ ಇನ್ನು ಇಲ್ಲಿ ಅನುಭೂತಿಗೂ ಆತ್ಮ ಜ್ಞಾನಕ್ಕೂ ಒಂದುಬಗೆಯಿಂದ ನಿಕಟಸಂಬಂಧವುಳ್ಳ ಔಪನಿಷದಿಕ ನೈತಿಕ ಸಿದ್ಧಾಂತಗಳ ಕಡೆಗೆ ಗಮನಿಸುವದು ಅವಶ್ಯವಾಗಿದೆ. ಜ್ಞಾನವು ಮಿಗಿಲೊ ನೀತಿಯು ಮಿಗಿಲೊ ಎಂಬ ವಾದವು ಪ್ರಾಚೀನ ಕಾಲದಿಂದಲೂ ಉಂಟು ; ಅದೇ ಮೇರೆಗೆ ನೀತಿಯು ಮೇಲೊ ಅನು ಭೂತಿಯು ಮೇಲೊ ಎಂಬ ವಿಚಾರದಲ್ಲಿರುವ ಅರೆದಾಟವೂ ನಿನ್ನೆ ಮೊನ್ನಿನದಲ್ಲ. ಅವು ಗಳೊಳಗಿನ ಪರಸ್ಪರ ಸಂಬಂಧವೇನು ಎಂಬ ಚರ್ಚೆಯು ಬಹು ಪ್ರಾಚೀನವು. ಆತ್ಮ ವಿಕಾಸದ ಪಥದಲ್ಲಿ ಅಧ್ಯಾತ್ಮಕ್ಕೆ ಹೆಚ್ಚು ಮಹತ್ವಕೊಡಬೇಕೋ ಏನು ನೀತಿಗೆ ಕೊಡ ಬೇಕೋ ಎಂಬುದನ್ನು ನಿಶ್ಚಯಿಸುವದು ಎಷ್ಟು ಕಠಿಣವೊ ಅಷ್ಟೇ ನೀತಿಯು ಹೆಚ್ಚಿನದೊ ಅನುಭಾವವು ಹೆಚ್ಚಿನದೊ ಎಂಬುದನ್ನು ಹೇಳುವದು ಬಿಗಿಯಾಗಿರುವದು. ಬೇರೆ ಬೇರೆ ಶಕ್ತಿಗಳುಳ್ಳದ್ದಾಗಿ ಬೇರೆ ಬೇರೆ ಕಾರ್ಯಗಳನ್ನು ಮಾಡುತ್ತಿದ್ದರೂ ಮನುಷ್ಯನ ಚಿತ್ತವು ಇಡೀ ಒಂದೇ ಇರುವದು ಎಂಬುದನ್ನು ಲಕ್ಷಿಸಿದರೆ ಅಧ್ಯಾತ್ಮ, ನೀತಿ, ಅನುಭಾವ ಇವು ಗಳನ್ನು ಬೇರ್ಪಡಿಸುವದು ಅತ್ಯಂತ ಅನಿಷ್ಟವೆ ಸೈ. ಆದರೆ ಮನುಷ್ಯನ ಆತ್ಮೋನ್ನತಿಗೆ ವಿಚಾರವಿಲ್ಲದ ಆಚಾರವಾಗಲಿ, ಅದರಂತೆ ಆಚಾರವಿಲ್ಲದ ಅನುಭಾವವಾಗಲಿ ಎಂದೆಂದೂ ನೆರವಾಗಲಾರವು. ನೀತಿವಿರಹಿತ ಬುದ್ಧಿಯು ಕೇವಲ ವಂಚನೆಯ ವ್ಯವಹಾರದಲ್ಲಿ ತೊಡ ಗುವದು. ಬುದ್ಧಿಯ ಬೆಂಬಲವಿಲ್ಲದ ನೈತಿಕ ಆಚಾರಗಳು ಬಾಲಿಶ ಕೃತ್ಯಗಳಾಗಿ ಪರಿಣಮಿ ಸುವವು ; ಜಗತ್ತಿನಲ್ಲಿ ಆಚಾರವಿಹೀನ ಅನುಭಾವಿಯು ಇರುವ ಸಂಭವವೇ ಇಲ್ಲ ; ಒಂದೊಪ್ಪತ್ತು ಇರುವ ಸಂಭವವಿದ್ದರೆ ಅದೊಂದು ಅನುಭಾವ ಮಾರ್ಗದಲ್ಲಿಯ ದೊಡ್ಡ ಕುತ್ತೇ ಆಗುವದು. ನೈತಿಕ ಆಚಾರಗಳ ಕಟ್ಟಡವು ವಿಚಾರದ ಅಡಿಗಲ್ಲಮೇಲೆ ನಿಂತಿದೆ, ಅನುಭಾವದ ಕಳಸದಲ್ಲಿ ಕೊನೆಗಂಡಿದೆ. ಮನೋವಿಕಾಸಕ್ಕೆ ಇಚ್ಛಾ, ಬುದ್ಧಿ, ಹಾಗೂ ಭಾವನಾಶಕ್ತಿಗಳು ಹೇಗೆ ಅವಶ್ಯಕವೊ ಹಾಗೆಯೆ ಆತ್ಮವಿಕಾಸಕ್ಕೆ ಜ್ಞಾನ, ನೀತಿ ಹಾಗೂ

ಅನುಭೂತಿಗಳು ಇಲ್ಲದೆ ನಡೆಯುವಂತಿಲ್ಲ. ಆದುವರಿಂದ ಉಪನಿಷತ್ತುಗಳಲ್ಲಿ ಹೇಳಿದ ತತ್ವಜ್ಞಾನ ಹಾಗೂ ಅದರಲ್ಲಿಯೆ ಹೇಳಿದ ಆ ಜ್ಞಾನದ ಅನುಭಾವಸ್ಥಿತಿ ಇವೆರಡಕ್ಕೂ ನಡುವಿನ ಕಳಿಗೆಯಂತಿರುವ ನೈತಿಕ ಸಿದ್ಧಾಂತಗಳ ವಿವೇಚನವನ್ನು ಉಪನಿಷತ್ತುಗಳಲ್ಲಿ ಎಷ್ಟರ ಮಟ್ಟಿಗೆ ಮಾಡಿರುವರೆಂಬುದನ್ನು ಸ್ವಲ್ಪ ನಿರೀಕ್ಷಿಸುವುದು ಅಗತ್ಯ.

**೨. ಹಿಂದಿನ ಪ್ರಕರಣವು ಮುಂದರಿದುದು**—ಪರದೇಶಗಳಿಗೆ ನೀತಿಯ ಯಾವ ಪ್ರಾಥಮಿಕ ಕಲ್ಪನೆಗಳೂ ಹೊಳೆಯದಿದ್ದಾಗ ನಮ್ಮ ದೇಶದಲ್ಲಿ ಉಪನಿಷತ್ತುಗಳು ನೀತಿಶಾಸ್ತ್ರದ ಮಹತ್ವದ ಎಲ್ಲ ಸಿದ್ಧಾಂತಗಳನ್ನೂ ಸುಂದರವಾಗಿ ವಿವೇಚಿಸಿವೆ! ಆಧುನಿಕ ನೀತಿಶಾಸ್ತ್ರಜರೂ ಮನನಮಾಡಿ ಲಾಭಪಡೆಯಬಹುದಾದಂಥ ಕೆಲವು ನೈತಿಕ ಸಿದ್ಧಾಂತಗಳ ನಿರ್ಣಯಗಳು ಅದರಲ್ಲಿವೆ; ಈ ನಿರ್ಣಯಗಳು ಆತ್ಮಾನುಭವದ ಶಾಶ್ವತ ಒರೆಗಲ್ಲಿಗೆ ಹತ್ತಿರುವುದರಿಂದ ಅವುಗಳಲ್ಲಿ ಅದಲುಬದಲಾಗುವ ಸಂಭವವೇ ಇಲ್ಲ. ಉಪನಿಷತ್ತುಗಳಲ್ಲಿ ಆಚಾರವನ್ನು ಕುರಿತು ಇರುವ ನೈತಿಕ ವಿಧಿ-ನಿಷೇಧಗಳ ವಿಚಾರಕ್ಕಿಂತಲೂ, ನೈತಿಕ ಆದರ್ಶದ ವಿಚಾರವೆ ಹೆಚ್ಚಾಗಿದೆ. ಮನುಷ್ಯನಿಗೆ ಅವನ ಆಚಾರವಿಷಯದಲ್ಲಿ ಆತನು ಹಾಗೆ ನಡೆಯಬೇಕು, ಹೀಗೆ ನಡೆಯಬೇಕು, ಎಂದು ಮುಂತಾಗಿ ನೈತಿಕ ಆಜ್ಞೆಗಳನ್ನು ಕೊಡಬೇಕಾದರೆ ಸ್ಥಿರ ಪರಿಸ್ಥಿತಿಯಿರಬೇಕಾಗುತ್ತದೆ. ಯಾಕಂದರೆ ಒಂದು ಪರಿಸ್ಥಿತಿಯಲ್ಲಿ ಕೊಟ್ಟ ಇಂತಹ ಆಜ್ಞೆಗಳು ಮತ್ತೊಂದು ಪರಿಸ್ಥಿತಿಯಲ್ಲಿ ಸರಿಯಾಗುವದಿಲ್ಲ; ಪರಿಸ್ಥಿತಿಯಂತೂ ಎಂದೂ ಸ್ಥಿರವಿರುವದಿಲ್ಲ. ಆಪಕಾರಣ ಉಪನಿಷತ್ತುಗಳಲ್ಲಿ ಈ ಬಗೆಯ ನೈತಿಕ ವಿಧಿಗಳ ವಿಚಾರವು ಹೆಚ್ಚಾಗಿಲ್ಲ. ಆದರೆ ಮನುಷ್ಯನು ತನ್ನ ನೈತಿಕ ಆದರ್ಶವು ಹೀಗೆ ಇರಬೇಕೆಂದು ನಿಶ್ಚಯಿಸಿಕೊಳ್ಳುವನು. ಆದುದರಿಂದ ಆ ಸ್ಥಿರ ಸ್ಥಿತಿಗೆ ಸಂಬಂಧಪಟ್ಟ ನೈತಿಕ ಆದರ್ಶಗಳ ವಿಚಾರವೆ ಇಲ್ಲಿ ವಿಶೇಷವುಂಟು. ಈ ಪ್ರಕರಣದಲ್ಲಿ ಮೊದಲು ಉಪನಿಷತ್ತಿನಲ್ಲಿ ಉಲ್ಲೇಖಿತ ನೈತಿಕ ವಿಧಿಗಳ ಮೂಲತತ್ವದ ವಿವೇಚನೆಯನ್ನು ಮಾಡುವೆವು. ಬಳಿಕ ಈ ತತ್ವಗಳ ಕುಂದುಕೊರತೆಗಳನ್ನು ತೋರಿಸಿ ನೈತಿಕ ಆದರ್ಶಗಳ ವಿಚಾರಕ್ಕೆ ಸಾಗುವೆವು. ನೈತಿಕ ಆದರ್ಶಗಳಲ್ಲಿಯ ಆನಂದವಾದ ( Beatificism ) ಹಾಗೂ ಅನುಭಾವವಾದ (Self realisation) ಎಂಬೆರಡು ಬಹಳ ಮಹತ್ವವುಳ್ಳವುಗಳು. ಇವುಗಳ ವಿವರಣೆಯಾದ ತರುವಾಯ ಉಪನಿಷತ್ತಿನಲ್ಲಿ ಹೇಳಿದ ವ್ಯವಹಾರಿಕ ನೀತಿಯ ವಿಚಾರ ಮಾಡುವೆವು; ಇದರಲ್ಲಿ ಬೇರೆ ಬೇರೆ ಉಪನಿಷತ್ತುಗಳಲ್ಲಿ ಹೇಳಿದ ಸುಗುಣ ದುರ್ಗುಣಗಳ ಪಟ್ಟಿಯನ್ನು ಕೊಟ್ಟಿದೆ; ಅದರೊಳಗೂ ಸತ್ಯಕ್ಕೆ ವಿಶೇಷ ಪ್ರಾಶಸ್ತ್ಯವುಂಟು. ಆದರೆ ವ್ಯವಹಾರ ನೀತಿಯು ಉಪನಿಷತ್ಕಾಲಕ್ಕಿಂತ ಅದರ ಮುಂದಿನ ಕಾಲದಲ್ಲಿಯೆ ಪರಿಪೂರ್ಣಾವಸ್ಥೆಗೆ ಬಂದಿತು. ಯಾಕಂದರೆ ಮುಂದೆ ತತ್ವಜೀವನವು ಹಿಂಗಡಿದು, ನೈತಿಕ ಜೀವನವೆ ಹಿರಿ

ದುಯ್ತು; ಅಧ್ಯಾತ್ಮಕ್ಕಿಂತ ನೀತಿಯ ಕಡೆಗೆ ಹೆಚ್ಚು ಮನವೊಲಿಯಿತು. ಮುಂದೆ ಉಪ ನಿಷತ್ತಿನಲ್ಲಿ ಉಲ್ಲೇಖಿತ ಇಚ್ಛಾಸ್ವಾತಂತ್ರ್ಯದ ಚರ್ಚೆಮಾಡಿ ಕಟ್ಟಕಡೆಗೆ ಔಪನಿಷದಿಕ ಮಹರ್ಷಿಯ ಆದರ್ಶದಲ್ಲಿಯೂ ಸ್ಟೋಯಿಕ್ ಹಾಗೂ ಕ್ರಿಸ್ತ ಸಾಧುಗಳ ಆದರ್ಶಗಳ ಲ್ಲಿಯೂ ಇರುವ ಅಭ್ಯಂತರದ ಶಬ್ದಚಿತ್ರವೊಂದನ್ನು ಕೊಟ್ಟು ಮುಗಿಸುವೆವು.

## ೧ ನೈತಿಕ ವಿಧಿಗಳ ತತ್ತ್ವವಿವೇಚನೆ

**೩. ಲೋಕಾನುವರ್ತನವು** — ನೈತಿಕವಿಧಿಗಳ ವಿಚಾರಮಾಡುವಾಗ ಮೊದಲು ನಮ್ಮ ಕಣ್ಣಿಗೆ ಬೀಳುವ ಮಾತೆಂದರೆ ಮಂದಿಯನ್ನು ನೋಡಿ ಮಾಡುವುದು ಬಾಲಸ್ವಭಾವವೆಂಬುದು. ಹಿರಿಯರನ್ನು ನೋಡಿ ಹಾಗೇ ಮಾಡುವ ಮನಸ್ಸು ಕಿರಿತನ ದಲ್ಲಿ ಹೆಚ್ಚು. ಮನುಷ್ಯನ ಬಾಲ್ಯದಂತೆಯೆ ಮನುಷ್ಯಜಾತಿಯ ಬಾಲ್ಯವು. ಮನುಷ್ಯ ಜಾತಿಯು ಬಾಲ್ಯದಲ್ಲಿದ್ದಾಗ ತಮಗಿಂತ ಆಚಾರವಿಚಾರಗಳಲ್ಲಿ ಶ್ರೇಷ್ಠರಾದವರನ್ನು ನೋಡಿ ನಡೆವುದೆ ನೀತಿಯೆಂದು ತಿಳಿಯಲ್ಪಡುತ್ತಿತ್ತು. ಅರಿಸ್ಟಾಟಲ್‌ನೂ ಹೇಳಿದ್ದು ಹೀಗೆಯೆ. ನೀತಿ ಯಾವದು ಅನೀತಿ ಯಾವದು ಎಂಬದು ಕಿರಿತಿಳಿವಿನಿಂದ ತನಗೆ ತಿಳಿಯದೆ ತೊಡಕು ಉಂಟಾದಾಗ ತನ್ನಿಂದ ಶ್ರೇಷ್ಠವಾದ ಸದಾಚಾರಿಗಳ ನಡೆಯೆ ತನ್ನ ನೈತಿಕ ಆದ ರ್ಶವು, ಎಂದು ಆತನು ಉಸುರಿದ್ದು ಸಕಾರಣವು. ತೈತ್ತಿರೀಯೋಪನಿಷತ್ತಿನಲ್ಲಿ ವಿದ್ಯಾರ್ಥಿ ಗಳಿಗೆ ಉಪದೇಶಿಸಿದ ಮಹತ್ವದ ಒಂದು ಭಾಗವಿದೆ. ಅದರಲ್ಲಿ ಹೇಳಿರುವದೇನಂದರೆ, ' ನೀವು ನಿಮ್ಮ ಗುರುಗಳ ಒಳ್ಳೆ ನಡತೆಗಳನ್ನಲ್ಲದೆ ಉಳಿದವುಗಳನ್ನು ಇಣಿಕಿ ಸಹ ನೋಡ ಬೇಡಿರಿ. ನಡೆನುಡಿಗಳಲ್ಲಿ ಹಿರಿದಾದವರು ನಿಮ್ಮ ಗುರುಗಳಿಗಿಂತ ಆರಾದರೂ ಇದ್ದರೆ ಅವರನ್ನು ನೋಡಿ ನಡೆದರೆ ನಿಮಗೆ ಮತ್ತಿಷ್ಟು ಲಾಭವುಂಟು. ನಡತೆ ಅಥವಾ ಇರವು ಹೇಗಿರಬೇಕೆಂಬದನ್ನು ಹೆಚ್ಚಾಗಿ ಅರಿತುಕೊಳ್ಳಬೇಕೆಂದು ಬಯಸಿದರೆ ನಿಮಗೆ ಒಂದೇ ದಾರಿ. ಸಟೆದಿಟಗಳನ್ನು ಒರೆಗೆ ಹಚ್ಚಿ ತಿಳಿಯುವವರೂ ಸೌಮ್ಯರೂ ಧರ್ಮಾಸಕ್ತರೂ ಆದ ಬ್ರಾಹ್ಮಣರ ಹೆಜ್ಜೆಯಲ್ಲಿ ಹೆಜ್ಜೆಯನ್ನಿಕ್ಕಿ ನಡೆಯಬೇಕು, ಇದೇ ಧರ್ಮವು ' ( ತೈ, ವ ೧, ಅನು ೧೧ ). ನಮಗಿಂತ ಹೆಚ್ಚಿನವರೂ ತಮ್ಮ ನಡೆವಳಿಗಳಿಂದ ನಮಗೆ ದಾರಿ ತೋರಲು ಸಮರ್ಥರೂ ಆದಂಥವರನ್ನು ನೋಡಿ ಹಾಗೆ ನಮ್ಮ ನಡೆಯನ್ನಿಡಬೇ ಕೆಂದೇ ಮೇಲಣ ಉಪನಿಷನ್ಮಂತ್ರವಾದರೂ ಹೇಳುತ್ತದೆ. ಮಂದಿಯಂತೆ ಮಾಡು ಎಂದು ಹೇಳುವುದು ಸಹಜವಾಗಿದ್ದರೂ ಅದರ ಅರ್ಥವು ನಿಃಸಂದಿಗ್ಧವಿಲ್ಲ. ನಾಲ್ಕುಮಂದಿ ಕೂಡಿ ಆದ ಸಮಾಜವನ್ನಾಗಲಿ, ಹಲವುಮಂದಿಯಿಂದಾದ ರಾಜ್ಯವನ್ನಾಗಲಿ ( State )

ನೋಡಿ ನಡೆವುದು ಸಾಧ್ಯವೂ ಇಲ್ಲ, ಸಂಭವನೀಯವೂ ಇಲ್ಲ; ಯಾಕಂದರೆ ಜನರು ಹೀಗೆ ನಡೆಯಬೇಕೆಂದು ಏಕವಿಧವಾದ ನೀತಿನಿರ್ಬಂಧಗಳನ್ನು ಸಮಾಜದವರಾಗಲಿ ರಾಜ್ಯದವರಾಗಲಿ ಹಾಕಿಕೊಡುವದು ಯಾವಾಗಲೂ ಸಾಧ್ಯವಾದೀತೆಂದು ಹೇಳಲಿಕ್ಕಾಗದು. ಆದರೆ ಸ್ವಲ್ಪ ಆಳವಾಗಿ ನೋಡಿದರೆ ಸಮಾಜವಾಗಲಿ ರಾಜ್ಯವಾಗಲಿ ಹಲವು ಬಲ್ಲಿದರಾದ ಹಿರಿಯರು ಹಾಕಿಕೊಟ್ಟ ಕಟ್ಟಳೆಗಳಮೇಲೆಯೆ ನಿಂತಿರುತ್ತದೆ. ಸಮಾಜದಲ್ಲಿ ಅಥವಾ ರಾಜ್ಯದಲ್ಲಿ ಕೆಲವರ ಹಿರಿತನವೆ ನಡಿಯುತ್ತಿರುವಂತೆ ನೀತಿವಿಚಾರದೊಳಗೂ ಕೆಲ ಶಿಷ್ಟರ ಪ್ರಭುತ್ವವೆ ಉಂಟು ಹಾಗೂ ಇಂತಹ ಹಿರಿಯರ ಅಡಿವಿಡಿದು ನಡೆಯಬೇಕೆಂದೇ ತೈತ್ತಿರೀಯೋಪನಿಷತ್ತಿನ ಕಟ್ಟಪ್ಪಣೆಯಿದೆ.

**೪. ಈಶ್ವರಾನುವರ್ತನವು**— ಈಶ್ವರಾನುವರ್ತನವೂ ಒಂದು ಬಗೆಯ ಲೋಕಾನುವರ್ತನವೆ. ಯಾಕಂದರೆ ನೀತಿಯ ದೃಷ್ಟಿಯಿಂದ ನೋಡಿದರೆ ಅದೊಂದು ರೀತಿಯ ಪರಾನುವರ್ತನವೆ ಸೈ. ಆದರೂ ಮಾನವರ ಕಟ್ಟಳೆಗಳಿಗೂ ಮಹಾದೇವನ ಕಟ್ಟಳೆಗಳಿಗೂ ಕೆಲವೊಂದಂತರವಿದೆ. ಕರ್ತವ್ಯಾಕರ್ತವ್ಯದ ತೊಡಕು ಉಂಟಾದಾಗ, ಕರ್ಮಾಕರ್ಮದ ಗೊಂದಲವೆದ್ದಾಗ, ಧರ್ಮಾಧರ್ಮದ ಸಂಶಯವಿದ್ದಾಗ ಇದನ್ನು ಮಾಡು, ಇದನ್ನು ಬಿಡು, ಎಂದು ಹೇಳುವವರಾರು ? ಇಂತಹದೇ ದೇವರ ಆಜ್ಞೆ ಎಂದು ಹೇಗೆ ತಿಳಿಯಬೇಕು ? ದೇವರ ಪ್ರತಿನಿಧಿತ್ವವು ಯಾರಿಗೆ ? ಇಂತಹ ಸಂದರ್ಭದಲ್ಲಿ ಹೃದಯಸ್ಥ ಪರಮಾತ್ಮನ ಅತಃಸ್ಫೂರ್ತಿರೂಪವಾದ ಆಜ್ಞೆಗಳೆ ಭಗವಂತನ ಇಚ್ಛೆಗಳೆಂದು ಭಾವಿಸದಿದ್ದರೆ ನಡೆಯುವಂತಿಲ್ಲ. ಆದರೆ ದೇವರು ಸರ್ವಾಂತರ್ಯಾಮಿಯಾಗಿರದೆ ಎಲ್ಲಿಯೊ ಹೊರಗೊತ್ತಟ್ಟಿಗೆ ಕುಳಿತು ಆಳುತ್ತಿರುವನೆಂದು ನಂಬುವವರಲ್ಲಿ ಅಂತಃಸ್ಫೂರ್ತಿಗೆ ಅವಕಾಶವಿಲ್ಲ. ಈ ಬಗೆಯವರು ಅಂತರ್ಯಾಮಿ ಭಗವಂತನ ಆಜ್ಞೆಗಳನ್ನು ಲೆಕ್ಕಿಸದೆ ಆತನ ಆಜ್ಞೆಗಳೆಂದು ಮನುಷ್ಯನೆ ನಿಶ್ಚಯಿಸಿಕೊಂಡ ನಿರ್ಬಂಧಗಳನ್ನು ಭಯಭೀತಿಯಿಂದ ಪಾಲಿಸುವರು. ಆತನ ಆಜ್ಞೆಯಂತೆ ನಡೆವುದರಲ್ಲಿ ತಪ್ಪುತಡೆಗಳೆಲ್ಲಿ ಆಗುವವೊ ಎಂದು ಅವರ ಮನಸ್ಸು ಯಾವಾಗಲೂ ಅಳುಕುತ್ತಿರುತ್ತದೆ ; ಎದೆಯು ಗಡಗಡನೆ ನಡುಗುತ್ತಿರುತ್ತದೆ. ಕಠೋಪನಿಷತ್ತಿನ ಮುನಿಯು ಇದೇ ಅರ್ಥದಿಂದಲೆ ನುಡಿದುದೇನಂದರೆ, ‘ ದೇವರು ನಮ್ಮ ಮೇಲೆತ್ತಿರುವ ( ಕಟ್ಟಳೆಗಳೆಂಬ ) ಭಯಂಕರ ವಜ್ರಾಯುಧವನ್ನು ಅರಿತವನೆ ಅಮರನಾಗುತ್ತಾನೆ. ಯಾಕಂದರೆ ಇದರ ಅಂಜಿಕೆಯಿಂದಲೆ ಅಗ್ನಿಯು ಕಾಯುತ್ತಾನೆ ; ಸೂರ್ಯನು ಬೆಳಗುತ್ತಾನೆ ; ಇಂದ್ರ, ವಾಯು ಹಾಗೂ ಐದನೆಯವನಾದ ಯಮನು ಇವರು ಕೂಡ ತಮ್ಮ ಕೆಲಸಮಾಡುತ್ತ ಓಡುತ್ತಿರುವರು. ’ ( ಕಠ, ಅ ೨, ವ ೬, ಮಂ ೨–೩ ). ತೈತ್ತಿರೀಯೋಪನಿಷತ್ಕಾರನೂ ಸ್ವಲ್ಪ ಶಬ್ದಭೇದದಿಂದ ಇದೇ ಮಾತನ್ನೆ ಹೇಳಿದ್ದಾನೆ (ತೈ, ವ ೨,

ಅನು ೮ ). ಆದರೆ ಈ ಸಂಬಂಧದಿಂದ ಅನುಕೂಲವಿರುವ ಎಷ್ಟು ಮಾತುಗಳನ್ನು ಹೇಳಿದರೂ ಸಹ ಬಹಿರಾದೇಶಗಳು ಅಂತರಾದೇಶಗಳ ಪಾಸಂಗಕ್ಕೂ ಬಾರವು ಮತ್ತು ಎಲ್ಲಕ್ಕೂ ಹೆಚ್ಚಿನ ಸದಾಚಾರದ ಹೊಣೆಯನ್ನು ಕೊಡವು. ಅಂತರ್ಯಾಮಿಯ ಆದೇಶಗಳನ್ನು ಪಾಲಿಸುವವರ ಅನುಭವಕ್ಕೆ ಬರುವ ಶಾಂತಿ, ಸ್ಫೂರ್ತಿ, ಆನಂದಗಳು ಹೊರಗಿನ ಕಟ್ಟುಪ್ಪಣೆಗಳನ್ನನುಸರಿಸುವದರಲ್ಲಿ ಅನುಭವಿಸಲಿಕ್ಕೆ ಸಿಗುವುದು ದುರ್ಲಭವು ಎಂಬುದನ್ನು ನಾವು ಒಪ್ಪಲೇಬೇಕಾಗುವದು.

**೫. ಆತ್ಮಾನುವರ್ತನವು—** ಇಂತು ನೀತಿಶಾಸ್ತ್ರವಿದರು ಮೇಲಿನಂತೆ ವಿಚಾರಮಾಡುತ್ತ ಮಾಡುತ್ತ ನೀತಿಯ ನಿಜವಾದ ಸೆಲೆಯಾದ ಅಂತರಾದೇಶಗಳ ಮೆಟ್ಟಿಗೆ ಬಂದು ಮುಟ್ಟಿದರು. ಸಮಾಜವಾಗಲಿ, ರಾಜನಾಗಲಿ, ದೇವನಾಗಲಿ, ಮನುಷ್ಯನಿಗೆ ಅಡಿಗಡಿಗೆ ಬೇಕಾಗುವ ಮುಖ್ಯವಾದ ನೈತಿಕ ನಿರ್ಬಂಧಗಳನ್ನು ಹಾಕಿಕೊಡಲಿಕ್ಕೆ ಅಸಮರ್ಥರಿರುತ್ತಾನೆ. ನೀತಿನಿರ್ಬಂಧದ ನಿಚ್ಚಳವಾದ ನಿರ್ಝರವು ನಮ್ಮೊಳಗೆಯೆ ಉಗಮಹೊಂದಲಿಕ್ಕೆ ಬೇಕು. ಕಟ್ಟಿದ ಬುತ್ತಿ, ನಿಂತ ನೀರು, ಕಲಿಕೆಯ ಮಾತು ಕಡೆತನಕ ಸಾಲವು. ಆದುದರಿಂದ ಎಂದೂ ಬತ್ತಿ ಹೋಗದಂಥ ನೀತಿವಿಚಾರದ ಸೆಲೆಯು ಒಳಗಣಿದಂಲೆ ಒಡೆಯಲಿಕ್ಕೆ ಬೇಕು. ಈ ವಿಚಾರವನ್ನು ಪ್ರಾಚೀನ ಉಪನಿಷತ್ಕಾರರು ಅಷ್ಟೊಂದು ಸ್ಪಷ್ಟವಾಗಿ ಹೇಳಿಲ್ಲ. ಆದರೂ ಛಾಂದೋಗ್ಯೋಪನಿಷತ್ತಿನಲ್ಲಿ ಒಂದೆಡೆಯಲ್ಲಿ ' ಮನವೆ ಬ್ರಹ್ಮವೆಂದಾರಾಧಿಸು ' ಎಂದು ಹೇಳಿವೆ ( ಛಾಂ, ಅ ೩, ಖಂ ೧೮, ಮಂ ೧ ). ಇನ್ನೊಂದೆಡೆಯಲ್ಲಿ ಅದೇ ಉಪನಿಷತ್ತಿನಲ್ಲಿ ' ಮನದಂತೆ ಆತ್ಮವೂ ಬ್ರಹ್ಮವೆಂದರ್ಚಿಸು ' ಎಂಬದಾಗಿ ಹೇಳಿದೆ ( ಛಾಂ, ಅ ೭, ಖಂ ೩, ಮಂ ೧ ). ಹಿಂದೂ ನೀತಿಶಾಸ್ತ್ರದ ಮೇಲೆ ಮೊನ್ನೆ ಮೊನ್ನೆ ಬರೆದ ಗ್ರಂಥಕಾರರೊಬ್ಬರು ಮೇಲಿನ ಎರಡೂ ಉಲ್ಲೇಖಗಳು ಅಂತರ್ಜ್ಞಾನಕ್ಕೆ (Intuition) ಸಂಬಂಧಪಟ್ಟವೆಯೆಂದು ಅಭಿಪ್ರಾಯಬಡುತ್ತಾರೆ. ನಿಜಸ್ಥಿತಿಯು ಹಾಗಿಲ್ಲ. ಯಾಕಂದರೆ ಮೇಲಣ ಉಪನಿಷದ್ವಾಕ್ಯಗಳಲ್ಲಿ ಬ್ರಹ್ಮವೆಂದು ಭಾವಿಸಲಿಕ್ಕೆ ಹೇಳಿದ ಮನಸ್ಸು ಆತ್ಮವಲ್ಲ ; ಆತ್ಮದ ಉಲ್ಲೇಖವು ಸ್ವತಂತ್ರವಾಗಿ ಸ್ಪಷ್ಟವಾಗಿದೆ. ಆದುದರಿಂದ ಅಲ್ಲಿ ಉಚ್ಚವಾದ ಸ್ವತಂತ್ರ ಅಂತರ್ಜ್ಞಾನದ ( Intuition ) ವಿಚಾರವಿರದೆ ಒಂದುಬಗೆಯ ಕಡಿಮೆ ತರದ ಅಂತರ್ಜ್ಞಾನದ ( Lower Intuition ) ವಿಚಾರವು ಮಾತ್ರವಿದೆ. ಯುರೋಪೀಯ ನೀತಿಶಾಸ್ತ್ರದ ಇತಿಹಾಸದೊಳಗೂ ಇದೇ ಬಗೆಯ ವಿಚಾರಗಳ ಪ್ರಗತಿಯು ಕಂಡುಬರುತ್ತದೆ. ಅಲ್ಲಿಯೂ ಸೌಂದರ್ಯ ಅಥವಾ ಸಹಾನುಭೂತಿಯ ಭಾವಗಳಿಂದ ಆರಂಭವಾಗಿ ಉಚ್ಚತರಗತಿಯ ಅಂತರ್ಜ್ಞಾನದ ಕಲ್ಪನೆಯವರೆಗೆ ವಿಚಾರಗಳ ವಿಕಾಸವಾದುದು ಕಂಡುಬರುತ್ತದೆ. ನಮ್ಮ ನೀತಿಶಾಸ್ತ್ರದ ಇತಿಹಾಸದಲ್ಲಿ ಭಗವದ್ಗೀತೆಯ

ಕಾಲದ ವರೆಗೂ 'ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ' ಎಂಬ ವಾಕ್ಯದಲ್ಲಿ ಗರ್ಭಿತವಾದ ಆತ್ಮಸ್ವಾತಂತ್ರ್ಯದ ಸ್ವಚ್ಛವಿಚಾರವಾಗಲಿ, ತನ್ಮೂಲಕ ಪ್ರಾಪ್ತವಾಗುವ ಶುದ್ಧ ನಿಷ್ಕಾಮಕರ್ಮದ ಸ್ಪಷ್ಟ ಕಲ್ಪನೆಯಾಗಲಿ ಉಲ್ಲೇಖಿಸಲ್ಪಟ್ಟಿಲ್ಲ. ಆದ ಕಾರಣ ಔಪನಿಷದಿಕ ನೀತಿವಿಚಾರಗಳಲ್ಲಿ ಆತ್ಮಾನುವರ್ತನವನ್ನು ಕುರಿತು ಎಲ್ಲಿಯೂ ಅಷ್ಟೊಂದು ನಿಚ್ಚಳವಾದ ವಚನವಿಲ್ಲವೆಂದರೂ ಸಲ್ಲುವದು.

## ೨. ನೈತಿಕ ಆದರ್ಶ ವಿಚಾರವು

**೬. ವಿಷಯಸುಖ ವಿರೋಧವು**—ನೈತಿಕ ಆದರ್ಶಗಳ ವಿಚಾರವು ಬರುತ್ತಲೆ ಉಪನಿಷತ್ಕಾರರ ಪ್ರತಿಭೆಯು ಹೊರಸೂಸುತ್ತಿದೆ. ನೀತಿಯ ಆಜ್ಞೆಗಳು ಅನಿಶ್ಚಿತ ಸ್ವರೂಪವುಳ್ಳವೂ ಅನುಮಾನಗಮ್ಯವೂ ಆಗಿರುವವೆಂದು ಈ ಮೊದಲು ವಿವರಿಸಿದ್ದಾಯಿತು; ಆದರೆ ನೈತಿಕ ಆದರ್ಶಗಳ ಮಾತು ಹಾಗಿಲ್ಲ. ಇವು ಹೆಚ್ಚು ನಿಶ್ಚಿತ ಹಾಗೂ ಸ್ಥಿರಸ್ವರೂಪವುಳ್ಳವುಗಳು. ಹಿಂದಿನ ಒಂದು ಅಧ್ಯಾಯದಲ್ಲಿ ಹೇಳಿದ ಮೇರೆಗೆ ಉಪನಿಷತ್ತುಗಳಲ್ಲಿ ತತ್ವಜ್ಞಾನದ ಭಿನ್ನಭಿನ್ನ ಮತಗಳ ಸಿದ್ಧಾಂತಗಳಿರುವಂತೆ ಬಗೆಬಗೆಯ ನೈತಿಕ ಆದರ್ಶಗಳ ವಿಚಾರಗಳೂ ಅಡಕವಾಗಿವೆ. ಇನ್ನು ಸುಖವಿರೋಧವಾದವನ್ನೆ ಮೊದಲಿಗೆ ತಕ್ಕೊಂಡು ಈ ಬಗೆಯ ಪಂಥಗಳ ವಿವೇಚನೆಗೆ ಆರಂಭಿಸುವ. ಕಠೋಪನಿಷತ್ಕಾರರು 'ವಿಷಯಸುಖ ವಿರೋಧ'ವಾದವನ್ನು ಒತ್ತೊತ್ತಿ ಹೇಳಿದ್ದಾರೆ. ಅದರಲ್ಲಿ ಬರೆದಿರುವದೇನಂದರೆ, 'ಜಗತ್ತಿನಲ್ಲಿ ಎರಡು ದಾರಿಗಳಿವೆ; ಒಂದು ಶ್ರೇಯ, ಮತ್ತೊಂದು ಪ್ರೇಯ. ಇವೆರಡೂ ದಾರಿಗಳು ಮನುಷ್ಯನನ್ನು ತಮ್ಮ ತಮ್ಮೆಡೆಗೆ ಎಳೆಯುತ್ತವೆ. ಶ್ರೇಯೋಮಾರ್ಗಿಯು ಕೊನೆಗೆ ಕಲ್ಯಾಣವನ್ನು ಹೊಂದುತ್ತಾನೆ. ಪ್ರೇಯೋಮಾರ್ಗಿಯು ಕೈಯೊಳಗಿನದನ್ನು ಕಳಕೊಂಡು ಕಂಗೆಡುತ್ತಾನೆ. ಶ್ರೇಯ ಹಾಗೂ ಪ್ರೇಯಗಳೆರಡೂ ಮನುಷ್ಯನೆದುರಿಗೆ ಬಂದಾಗ ಬಲ್ಲಿದನಾದ ಬಂಟನು, ಧೀರನು ಶ್ರೇಯವನ್ನೆ ಕೈಕೊಳ್ಳುವನು. ಕಂಗೆಟ್ಟ ಕಲ್ಲಿದನು, ಮಂದನು ಪ್ರೇಯವನ್ನೆ ವರಿಸುವನು' (ಕಠ, ಅ ೧, ವ ೨, ಮಂ ೧–೨). ಇವೆರಡೂ ಶ್ಲೋಕಗಳಿಂದ, ಉಪನಿಷತ್ಕಾಲದಂಥ ಅತಿ ಪ್ರಾಚೀನಕಾಲದಲ್ಲಿಯೂ ಶ್ರೇಯ ಪ್ರೇಯಗಳ ಬಡಿದಾಟದ ಅನುಭವವು ಬಾರದೆ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ಕಠದೊಳಗಿನ ಶ್ರೇಯಪ್ರೇಯಗಳ ಈ ಎಳೆದಾಟದ ವರ್ಣನೆಯು, ಝೆನೋಫೇನನ ಗ್ರಂಥದೊಳಗೆ ಸದ್ಗುಣ ಹಾಗೂ ಸುಖಗಳು ಹಣ್ಣಿನ ಸೋಗಿನಿಂದ ಬಂದು ಹರಕ್ಯೂಲಸನನ್ನು ಮೋಹಿಸಿ ತಮ್ಮೆಡೆಗೆ ಒಲಿಸಿಕೊಳ್ಳಲು ಹವಣಿಸಿದವೆಂಬ ಕಥೆಯ ನೆನಪು ಕೊಡುತ್ತದೆ. ಹರಕ್ಯೂಲಸ

ನಂತೆಯೆ ನಚಿಕೇತನ ಕಥೆಯೂ ಇದೆ. ನಚಿಕೇತನು ಬಯಸಬಹುದಾದ ಸೌಖ್ಯದ ಎಲ್ಲ ಸೊಗಸಿನ ವಸ್ತುಗಳನ್ನು ಕೊಡಲು ಯಮನು ಸಿದ್ಧನಿದ್ದನು. ಆತನ ಆಯುಷ್ಯವನ್ನು ಭೋಗದ ಬೀಡು ಮಾಡುವನೆಂದು ಯಮನು ನುಡಿದನು. ಆದರೆ ನಚಕೇತನು ಯಮನ ಮಾಯಾಜಾಲದಲ್ಲಿ ಸಿಲುಕಲು ಒಪ್ಪಲಿಲ್ಲ (ಕಠ, ಅ ೧, ವ ೨, ಮಂ ೩); ಹಾಗೂ ಈ ಸುಖಭೋಗಗಳಿಗೆ ಮನಸೋತು ಕೊನೆಗೆ ಅದು ಕೈಗೂಡದ್ದರಿಂದ ಕಂಗೆಟ್ಟು ಮುಳುಮುಳುಗಿ ಏಳುವ ಜನಸಾಮಾನ್ಯರಿಂದ ತಾನು ಬೇರೆದಾರಿಯವನೆಂದು ಸಿದ್ಧಪಡಿಸಿದನು. ನಚಿಕೇತನು ನಿಜವಾಗಿಯೂ ವಿಷಯಸುಖವಿರೋಧಿಯು; ಆದುದ ರಿಂದಲೆ ಆತನು ಪ್ರೇಯಮಾರ್ಗದ ಮೋಹಜಾಲದಲ್ಲಿ ಸಿಕ್ಕಿಬೀಳಲು ಒಪ್ಪದೆ ಶ್ರೇಷ್ಠ ವಾದ ಶ್ರೇಯೋಮಾರ್ಗದ ಉಪಾಸಕನಾದನು.

೭. **ನಿರಾಶಾವಾದವು**— ಸುಖವಿರೋಧವಾದದ ವಿಕೃತರೂಪವೆ ತೀರ ನಿರಾಶಾವಾದವಾಗಿ ತೋರ್ಪಡುವದು. ಇಂತಹ ಪರಿಣಾಮವನ್ನು ಕೆಲ ಉಪನಿಷತ್ತು ಗಳಲ್ಲಿ ಕಾಣಬಹುದು. ಕಠೋಪನಿಷತ್ತಿನಲ್ಲಿ ನಿರಾಶಾವಾದದ ವಾಣಿಯು ಕೇಳಬರುತ್ತದೆ. ಅದರಲ್ಲಿ ಒಂದೆಡೆಯಲ್ಲಿ ಉಸುರಿರುವುದೇನಂದರೆ, 'ಮುಪ್ಪು ಸಾವುಗಳನ್ನು ಮೀರಿದ ಅಮರಪದದ ರುಚಿಯನ್ನು ಒಮ್ಮೆ ಸವಿದ ಬಳಿಕ ಮುಪ್ಪುಸಾವುಗಳ ಬಲೆಯಲ್ಲಿ ಸಿಲುಕಿದ ಯಾವ ಮರ್ತ್ಯನು ಈ ಲೋಕದ ಸೌಂದರ್ಯ ಸಂಭೋಗಗಳನ್ನು ಧ್ಯಾನಿಸುತ್ತ ಬಹಳ ದಿನ ಬಾಳುವುದರಲ್ಲಿ ಹೇಗೆ ತಾನೆ ಹಿಗ್ಗಬಹುದು ?' (ಕಠ, ಅ ೧, ವ ೧, ಮಂ ೨೮). ಜರ್ಮನಿಯ ತತ್ವಜ್ಞನಾದ ಶೌಪೆನಹೌಏರ ಎಂಬವನೂ ಸರಿಯಾಗಿ ಹೀಗೆಯೆ ಅಂದಿ ದ್ದಾನೆ. ಅವನ ಅಭಿಪ್ರಾಯದಂತೆ ಈ ಲೋಕದಲ್ಲಿ ಮನುಷ್ಯನು ಹುಟ್ಟದೆ ಇರಬೇಕು ಇದು ಉತ್ತಮ ಪಕ್ಷ. ಇನ್ನು ಒಂದು ವೇಳೆ ಹುಟ್ಟುವುದೆ ಹಣೇಬರಹದಲ್ಲಿ ಬರೆದಿದ್ದರೆ ಚಿಕ್ಕಂದಿ ನಲ್ಲಿಯಾದರೂ ಸಾಯಬೇಕು, ಇದು ಗೌಣಪಕ್ಷ. ಇದೇ ಮೇರೆಗೆ ಕಠೋಪನಿಷತ್ತು ಸಹ ಅರಗಳಿಗೆಯಾದರೂ ಅಮೃತಪದವಿಯು ದೊರೆತರೆ ಸಾಕು,ನೂರಾರು ವರುಷದ ವಿಷಯೋ ಪಭೋಗದ ಬಾಳು ಹಾಳು, ಎಂದು ಹೇಳಿ ದೀರ್ಘಾಯುಷ್ಯದ ತಿರಸ್ಕಾರ ಮಾಡಿರುತ್ತದೆ. ಈ ಬಗೆಯ ನಿರಾಶಾವಾದವು ಮೈತ್ರ್ಯುಪನಿಷತ್ತಿನಲ್ಲಿ ಮುಗಿಲ ಮುಟ್ಟಿದೆ. ಜಗತ್ತಿನಲ್ಲಿ ತುಂಬಿಕೊಂಡ ದೋಷಗಳನ್ನೂ ವಿಷಯುಗಳ ಕ್ಷಣಭಂಗುರತ್ವವನ್ನೂ ಕಾವ್ಯಮಯವಾಗಿ ಅಲ್ಲಿ ವರ್ಣಿಸಿದೆ ; ಸಂಸಾರವು ಅನಂತಾನಂತ ಸಂಕಷ್ಟಗಳ ಉಗಮಸ್ಥಾನವೆಂದು ಅಲ್ಲಿ ಹೇಳಿದೆ. ಆ ಉಪನಿಷತ್ತಿನಲ್ಲಿ ಬೃಹದ್ರಥರಾಜನು ಜ್ಞಾನೋಪದೇಶ ಹೊಂದುವುದಕ್ಕಾಗಿ ತನ್ನ ಗುರುಗಳ ಬಳಿಯಲ್ಲಿ ಹೋದಾಗ ಆತನು ಅವರ ಅಡಿಯುಲ್ಲಿ ಹಾಳು ಮೈಯ್ಯನ್ನು ಈ ಬಗೆಯಾಗಿ ಬೀಳಗಳೆದಿದ್ದಾನೆ: 'ಎಲುವು, ತೊಗಲು, ಸ್ನಾಯು, ಮಜ್ಜಾ, ಮಾಂಸ,

ವೀರ್ಯ, ರಕ್ತ, ಸಿಂಬಳ, ಕಣ್ಣೀರುಗಳಿಂದ ಹೊಲ್ಲವಾಗಿರುವ ಹಾಗೂ ಹೇಲು, ಉಚ್ಚೆ, ವಾತ, ಪಿತ್ತ, ಕಫಗಳಿಂದ ಕೂಡಿದ ಹೊಲಸು ನಾತದ ಒಡವೆಯಾಗಿರುವಂತಹ ಹುರುಳಿಲ್ಲದ ಈ ಮೈಯಿಯಿಂದ ಊಟಕೂಟದ ಸುಖವನ್ನು ಹೊಂದಿದರೇನು ಬಿಟ್ಟರೇನು ? ಬೆದೆಗುದಿ, ಸಿಟ್ಟು ಸೆಡವು, ಅಳಿಪು ಆಸೆ, ಅಂಜಿಕೆ ಅಳಕು, ಸಿಡಿಕು ಮಿಡಕು, ಹಮ್ಮು ಬಿಮ್ಮುಗಳಿಂದ ತೊಳಲಿಬಳಲುವ ಈ ಮೈಯಿಯಿಂದ ಊಟಕೂಟದ ಸುಖವನ್ನು ಹೊಂದಿದರೇನು ಬಿಟ್ಟರೇನು ? ಬೇಕಿದ್ದವರು ಬಯಲಾಗುವುದು, ಬೇಡಾದವರು ಗಂಟು ಬೀಳುವುದು, ಹಸಿವೆ ನೀರಡಿಕೆ, ಮುಪ್ಪು ಸಾವು, ಬೇನೆ ಬಳಲಿಕೆ ಎಂದು ಮುಂತಾಗಿ ಬೆಂದು ಬೆಂಡಾಗುವ ಮೈಯಿಯಿಂದ ಊಟಕೂಟದ ಸುಖವನ್ನು ಹೊಂದಿದರೇನು ಬಿಟ್ಟರೇನು ? ಇದೆಲ್ಲವೂ ನಾಶವಂತ; ಈ ಗಳಿಗೆಗೆ ಇದೆ, ಮುಂದಿನ ಗಳಿಗೆಗಿಲ್ಲ. ನೊಣ ನೊರಜು, ಹುಲ್ಲು ಕಂಟಿ ಮೊದಲಾದವು ಹೇಗೆ ಇಂದು ಹುಟ್ಟಿ ನಾಳೆ ಹಾಳಾಗುವವೊ ಹಾಗೆ ಮನುಷ್ಯನದೂ ಹಾಡು. ಸಾಗರಗಳು ಶುಷ್ಕವಾಗುತ್ತಿರಲು, ಪರ್ವತಗಳು ಪುಡಿಪುಡಿಯಾಗುತ್ತಿರಲು, ಧ್ರುವನು ದಿಕ್ಕೆಟ್ಟು ಹೋಗುತ್ತಿರಲು, ಗಾಳಿಯು ಕಟ್ಟುಗೆಟ್ಟು ಹರಿಯುತ್ತಿರಲು, ನೆಲವು ನಿಲುವುಗೆಟ್ಟು ಮುಳುಗುತ್ತಿರಲು, ದೇವತೆಗಳು ದಿವ್ಯಸ್ಥಾನದಿಂದ ಉರುಳಿ ಬೀಳುತ್ತಿರಲು ಮನುಷ್ಯನೆ ಮೊದಲಾದ ಜಂತುಗಳ ಪಾಡೇನು ? ಹಾಗೂ ಈ ಬಗೆಯ ಬಾಳ್ವೆಯುಲ್ಲಿ ಊಟಕೂಟದ ಸೊಬಗು ಮಾಡಿದರೇನು ಬಿಟ್ಟರೇನು ?' (ಮೈ. ಅ ೧, ಮಂ ೨-೭ ). ಬೃಹದ್ರಥರಾಜನು ಈ ಬಗೆಯಿಂದ ಬಾಳ್ವೆಯನ್ನು ಹೀಯಾಳಿಸಿ 'ಮಹಾಸ್ವಾಮಿ, ಬತ್ತಿದ ಬಾವಿಯೊಳಗಿಂದ ಕಪ್ಪೆಯನ್ನೆತ್ತಿ ತೆಗೆವಂತೆ ನನ್ನನ್ನು ಈ ನಿಸ್ಸಾರ ಸಂಸಾರದೊಳಗಿಂದ ಪಾರುಗಾಣಿಸಿರಿ' ಎಂದು ಗುರುಗಳಾದ ಶಾಕಾಯನ್ಯ ಮುನಿಗಳಿಗೆ ಬೇಡಿಕೊಂಡಿದ್ದಾನೆ. ನಚಿಕೇತನಲ್ಲಿ ಉದಯವಾದ ಸುಖವಿರೋಧವಾದವು ಬೃಹದ್ರಥರಾಜನಲ್ಲಿ ಈ ಬಗೆಯ ನಿರಾಶಾವಾದದೊಳಗೆ ಪರಿಣಮಿಸುವದು ಸಹಜವೆ. ಆದುದರಿಂದ ಸುಖವಿರೋಧವಾದದ ಕಟ್ಟಕಡೆಯ ಬಿಟ್ಟೀ ನಿರಾಶಾವಾದವು ಎಂದು ಹೇಳಬಹುದು.

**೮. ವೈರಾಗ್ಯವಾದ, ಸತ್ಯಾಗ್ರಹ, ಹಾಗೂ ಶಾಂತಿ—** ವಿರಾಗವಾದವೂ ವೈರಾಗ್ಯವೃತ್ತಿಯೂ ಅದಕ್ಕನುಷಂಗಿಕವಾದ ವಿರಕ್ತ ವಿಚಾರಗಳೂ ನಿರಾಶಾವಾದಕ್ಕೆ ತೀರ ನೆರೆಯವು. ಸಂಸಾರವು ನಿಸ್ಸಾರವೆಂದು ತನಗೆ ತೋರಹತ್ತಿದಾಗಲೆ ಮನುಷ್ಯನಿಗೆ ವೈರಾಗ್ಯವೃತ್ತಿಯ ಅವಶ್ಯಕತೆ ಎನಿಸಲಾರಂಭಿಸುತ್ತದೆ ; ಬಾಳು ಹಾಳೆಂದೆನಿಸಿದಾಗಲೆ ಬೈರಾಗಿಯಾಗುವ ಮನಸ್ಸು ಆಗುತ್ತದೆ. ಶಾಶ್ವತವೂ ಸತ್ಯವೂ ನಿತ್ಯವೂ ಆದುದರ ಮೇಲೆ ಕಣ್ಣಿಟ್ಟಾಗಲೆ ಅಶಾಶ್ವತ ಸಂಸಾರದ ಕಡೆಗೆ ಬೆನ್ನು ತಿರುವಬೇಕೆಂದೆನಿಸುವದು, ಮನಸ್ಸು ಬೈರಾಗಿತನವನ್ನು ಬಯಸುವದು. ಪ್ರಾಚೀನ ವಿದ್ವಾಂಸರು ಮಕ್ಕಳು ಮರಿ,

ಹೊನ್ನು ಹೆಣ್ಣು, ಹೆಜ್ಜಳ ಹೆಕ್ಕಳಿಕೆಗಳನ್ನು ಹುರುಳಿಲ್ಲದವುಗಳೆಂದು ಬಗೆದುದು ಇದಕ್ಕಾಗಿಯೆ, ಎಂದು ಬೃಹದಾರಣ್ಯಕೋಪನಿಷತ್ತೂ ಹೇಳುತ್ತದೆ. 'ಶಾಶ್ವತಲೋಕದ ಸಮೀಪ ಒಯ್ಯಲು ನಮಗೆ ಸಾಧನವಾಗದ ಆ ಮಕ್ಕಳನ್ನು ಪಡೆದು ಮಾಡುವದೇನು ?' ಎಂದು ಅದು ಕೇಳುತ್ತದೆ. ಹೀಗೆ ಬಗೆದು ಪುತ್ರೈಷಣೆ, ವಿತ್ತೈಷಣೆ ಹಾಗೂ ಲೋಕೈಷಣೆಗಳನ್ನೆಲ್ಲ ಅವರು ತೊರೆದರು (ಬೃ, ಅ ೪, ಬ್ರಾ ೪, ಮಂ ೨೨). ಕೌಷೀತಕಿ ಉಪನಿಷತ್ತು ಇನ್ನೂ ಮುಂದೊಂದಡಿಯಿಟ್ಟು ವಿಚಿತ್ರವಾದ ವಿಚಾರಕ್ರಮದಿಂದ ಸತ್ಯಾಗ್ರಹವನ್ನು ಎತ್ತಿಹಿಡಿಯುತ್ತದೆ. '(ದೇಹದಲ್ಲಿ) ಬ್ರಹ್ಮಸ್ವರೂಪಿಯಾದ ಪ್ರಾಣಕ್ಕೆ ಮನಸ್ಸೆ ದೂತನು, ಕಣ್ಣೆ ಕಾವಲುಗಾರ, ಕಿವಿಯೆ ಬೇಹುಗಾರ, ನುಡಿಯೆ ತೊತ್ತು ; ಅದರಂತೆ ಒಡೆಯನಾದ ಪ್ರಾಣಕ್ಕೆ ಬೇಡದಿದ್ದರೂ ಇಂದ್ರಿಯಗಳೆಲ್ಲ ತಮ್ಮ ತಮ್ಮ ಕಪ್ಪಕಾಣಿಕೆಗಳನ್ನೆಲ್ಲ ತಂದೊಪ್ಪಿಸುತ್ತವೆ, ಎಂಬೀ ಗುಟ್ಟುಗೊತ್ತಾದವನಿಗೆ ಆತನು ಕೇಳದಿದ್ದರೂ ಪ್ರಾಣಿಮಾತ್ರಗಳೆಲ್ಲ ಕಾಣಿಕೆಯನ್ನು ತಂದುಕೊಡುತ್ತವೆ. ಆದುದರಿಂದ ಯಾರಿಗೂ ಬೇಡಲಾಗದು, ಬಾಯುತೆಗೆಯಲಾಗದು ಎಂಬುದೆ ಆತನ ಜೀವನವ್ರತ. ಹಳ್ಳಿಗೆ ಹೋದಾಗ ಭಿಕ್ಷೆ ದೊರೆಯದಾಗುತ್ತಲೆ ತನಗೆ ಕೊಟ್ಟರೂ ಕೊಳ್ಳೆನೆಂದು ಗಟ್ಟಿಯಾಗಿ ಕುಳ್ಳಿರಬೇಕು ; ಆಗ ಮೊದಲು ಮಾತನಾಡದವರೂ ಮನವೊಲಿಸಬರುವರು. ಯಾಕಂದರೆ ಅಯಾಚಿತ ವ್ರತದ ಫಲವೇ ಹೀಗಿದೆ. ಕೇಳದವನಿಗೆ 'ತಕ್ಕೊಳ್ಳಿರಿ ಕೊಟ್ಟೇ ಕೊಡುವೆವು' ಎಂದು ಕಾಣಿಕೆಗಳಂಕೊಟ್ಟು ಕಕ್ಕುಲತೆಯಿಂದ ಬರುವರು' (ಕೌ, ಅ ೨, ಮಂ ೧). ಬೇಡಿದರೆ ಬೆನ್ನು ತಿರುಗಿಸುವದು, ಬೇಡದಿದ್ದರೆ ಬೆಂಬತ್ತುವುದು, ಎಂಬ ಶ್ರದ್ಧೆಯಮೂಲಕ ಯಾರಿಗೂ ಬೇಡಕೂಡದೆಂದು ಕೌಷೀತಕಿ ಉಪನಿಷತ್ತು ಕಟ್ಟಳೆಯನ್ನು ಹಾಕಿದೆ. 'ವಿರಕ್ತ ಬ್ರಾಹ್ಮಣನು ಬುದ್ಧಿಜ್ಞಾನಗಳ ಬಲೆಯಲ್ಲಿ ಸಿಲುಕದೆ ಬಾಲಕನಂತೆ ಸಹಜಯೋಗಿಯಾಗಬೇಕು' (ಬೃ, ಅ ೩, ಬ್ರಾ ೫, ಮಂ ೧) ಎಂದು ಬೃಹದಾರಣ್ಯಕವು ಮತ್ತೊಂದು ನಿಯಮವನ್ನು ಹೇಳುತ್ತದೆ. 'ಬಾಯಿಂದ ಬರಿದೆ ಬಹಳ ಮಾತು ಬೇಡ ; ಯಾಕಂದರೆ ಮಾತಿನಿಂದ ಮೈಮನಗಳ ಶಕ್ತಿನಾಶವು ಮಾತ್ರ,' ಎಂದು ಬೃಹದಾರಣ್ಯಕವು ಇನ್ನೊಂದೆಡೆಗೆ ನುಡಿದು ಮುನಿಗೆ ಮೌನಿಯಾಗಿರಲು ಅಪ್ಪಣೆ ಕೊಡುತ್ತದೆ (ಬೃ, ಅ ೪, ಬ್ರಾ ೪, ಮಂ ೨೧). ಇದನ್ನೆ ಸರ್ವಜ್ಞಕವಿಯು ತನ್ನ ಒರಟು ಮಾತಿನ ರೀತಿಯಲ್ಲಿ 'ಸತ್ಯವನು ಅರಿತವನು ಸತ್ತಹಾಗಿರಬೇಕು' ಎಂದುಸುರಿದ್ದಾನೆ.

೯. **ಆಧ್ಯಾತ್ಮಿಕ ಕರ್ಮಯೋಗ**—'ಸತ್ಯವನು ಅರಿತವನು ಸತ್ತಹಾಗಿರಬೇಕು' ಎಂದು ಹೇಳಿದಾಕ್ಷಣಕ್ಕೆ ಜ್ಞಾನಿಯು ಕೈಕಾಲುಗಳನ್ನೆ ಅಲ್ಲಾಡಿಸಕೂಡ

ದೆಂದರ್ಥವಲ್ಲ- ಸತ್ತಹಾಗಿರುವುದು ಸಂಸಾರಕ್ಕೆ, ವೈಷಯಿಕ ಲೋಕಕ್ಕೆ. ಆದರೆ ಆತ್ಮ ಲೋಕದಲ್ಲಿ ಅವನು ಜೀವಂತನಿದ್ದೆ ತೀರಬೇಕಾಗುತ್ತದೆ. ಆದುದರಿಂದ ಸತ್ತಹಾಗಿದ್ದರೂ ಕೆಲಸಗಲಿಯಾಗಿರಲಿಕ್ಕೂ ಬರುತ್ತದೆಂದು ಕೆಲ ಉಪನಿಷತ್ತುಗಳು ಹೇಳುತ್ತವೆ. ‘ ಆ ಈ ಮಾತುಗಳನ್ನೆಲ್ಲ ತೊರೆದು ಆತ್ಮನನ್ನು ಅರಿತುಕೊಳ್ಳುವವರಲ್ಲಿಯೆ ಆಸಕ್ತರಾಗಬೇಕು. ಯಾಕಂದರೆ ಆತ್ಮವೆ ಅಮೃತತ್ವದ ಆಗರವು. ಓಂಕಾರರೂಪದಿಂದ ಆತ್ಮಧ್ಯಾನಮಾಡ ಬೇಕು; ಅದರಿಂದಲೆ ಕಗ್ಗತ್ತಲೆಯ ಆಚೆಗೆ ಸುಖದಿಂದ ಹೋಗಿ ಮುಟ್ಟುವರು. ಅಮೃತ ಮಯನೂ ಆನಂದರೂಪನೂ ಆದ ಆತ್ಮನನ್ನು ಬಲ್ಲಿದರು ತಿಳಿವಿನ ಬೆಳಕಿನಲ್ಲಿ ಕಣ್ಣಾಣೆವಂತೆ ಕಾಣುತ್ತಾರೆ ’ ( ಮುಂ ೨, ಖಂ ೨, ಮಂ ೫–೭ ). ಆದುದರಿಂದ ನಿಸ್ಸಂಗರಾಗಲು ಹೇಳಿದುದು ಹಾಳು ಬಾಳ್ವೆಗೆ ಹೇಸಿಕೊಂಡು. ಆದರೆ ಸಂಸಾರದಿಂದ ನಿಸ್ಸಂಗ ನಾದರೂ ಆತ್ಮಸಂಗಿಯಾಗಿರಲೆಬೇಕೆಂದು ಆ ಮಾತಿನ ರಹಸ್ಯವಿರುತ್ತದೆ. ಬೃಹದಾರ ಣ್ಯಕವು ಹೇಳುವುದೇನಂದರೆ, ‘ ಈ ಬಗೆಯಾಗಿ ಶಾಂತನೂ ಇಂದ್ರಿಯನಿಗ್ರಹಿಯೂ ಸಹನಶೀಲನೂ ಸ್ಥಿರನೂ ಇರುವವನು ತನ್ನೊಳು ತನ್ನನು ನೋಡುವನು. ಎಲ್ಲವನ್ನೂ ತಾನೆಂದೇ ತಿಳಿವನು. ಪಾಪವು ಅವನನ್ನು ದೂಡಿಕೊಂಡು ಹೋಗಲರಿಯದು; ಯಾಕಂದರೆ ಅವನು ಪಾಪವನ್ನು ದಾಟಿ ಬಂದಿರುವನು. ಪಾಪವು ಅವನನ್ನು ಸುಡಲಮ್ಮದು. ಯಾಕಂದರೆ ಅವನೆ ಎಲ್ಲ ಪಾಪವನ್ನು ಸುಟ್ಟುಬಿಟ್ಟರುವನು. ಇಂತು ಅವನು ಪಾಪರಹಿ ತನು, ದೋಷರಹಿತನು, ಸಂಶಯರಹಿತನು, ; ಆದುದರಿಂದ ಅವನು ನಿಜವಾದ ಬ್ರಾಹ್ಮ ಣನು ’ ( ಬೃ, ಅ ೪, ಬ್ರಾ ೪, ಮಂ ೨೩ ) ಮುಂಡಕೋಪನಿಷತ್ತು ಇದಕ್ಕೂ ವಿಧ್ಯಾ ತ್ಮಕ ಶಬ್ದಗಳಿಂದ ಹೇಳುವದೇನಂದರೆ, ‘ ಇದನ್ನರಿತವನು ಆತ್ಮಪ್ರಕಾಶವ ನೋಡಿದುದ ರಿಂದ ಮಾತಾಳಿತನವನೆಲ್ಲ ಮರೆತು ಬಿಡುವನು. ಆತ್ಮದೊಡನಾಡಿಯಾಗುವನು. ಆತ್ಮ ಸಂಗಸುಖವುಳ್ಳವನಾಗುವನು; ಯಾಕಂದರೆ ಇಂಥ ಕ್ರಿಯಾವಾನನಿಗೆ ಎಲ್ಲವು ಆತ್ಮ ಕ್ರೀಡೆಯೆ. ಇಂಥವನು ಬ್ರಹ್ಮವಿದರಲ್ಲಿ ವರಿಷ್ಠನೆನಿಸಿಕೊಳ್ಳುವನು ’ ( ಮುಂ ೩, ಅ ೧, ಮಂ ೪ ). ಇಲ್ಲದ ಅಟಮುಟ, ಹುಸಿ ಮಸಕು, ಜಂಜಾಟಗಳ ಓಕರಿಕೆಯುಂಟಾಗಿ ಸಮಾ ಜದಿಂದ ಸಿಡಿದುನಿಂತು ದೂರ ಏಕಾಕಿಯಾಗಿ ಏಕಾಂತವಾಸದಲ್ಲಿದ್ದವನು ತೋರಿಕೆಯಲ್ಲಿ ನಿಷ್ಕರ್ಮಿಯಂತೆ ಕಂಡರೂ ಅವನಿಗೆ ಆಟಕೂಟಗಳ ಆನಂದವನ್ನನುಭವಿಸಲಿಕ್ಕೆ ಆತ್ಮವೆಂಬ ವಸ್ತುವೊಂದಿದ್ದೇ ಇದೆ. ಈ ಬಗೆಯ ಆತ್ಮನಿಮಗ್ನನಾದವನ ಆಯುಷ್ಯವು ಸಂಪೂರ್ಣ ವಾಗಿ ಅಧ್ಯಾತ್ಮಕ್ರಿಯಾಮಯವಾಗಿರುವುದೆ ಹೊರ್ತು ಕೆಲವರಿಗೆ ಮೇಲ್ತೋರಿಕೆಯಲ್ಲಿ ಕಾಣುವಂತೆ, ಬೇಸತ್ತು ಕೈಕಾಲು ಅಲುಗಿಸದೆ ಕಮ್ಮನೆ ಕುಳಿತ ಅಕರ್ಮಿಯ ಜೀವನವಲ್ಲ ವೆಂದು ಮುಂಡಕೋಪನಿಷತ್ತು ಇಲ್ಲಿ ಸಾರುತ್ತಿದೆ.

೧೦. **ಲೌಕಿಕ ಕರ್ಮಯೋಗ**— ಜನಸಾಮಾನ್ಯರಿಗೆ ಗೊತ್ತು ಇದ್ದುದು ಲೌಕಿಕ ಕ್ರಿಯಾಯೋಗವು. ಇದು ಮೇಲೆ ವಿವೇಚಿಸಿದ ಆಧ್ಯಾತ್ಮಿಕ ಕ್ರಿಯಾಯೋಗದಿಂದ ತೀರ ಬೇರೆ. 'ಇಲ್ಲಿ ಬಿಟ್ಟೂಬಿಡದೆ ಕರ್ಮ ಮಾಡುತ್ತ ಮಾಡುತ್ತ ಇಡೀ ನೂರು ವರುಷ ಬಾಳಲು ಬಯಸಲಿಕ್ಕೆ ಬೇಕು. ಕರ್ಮವು ಮೈಗಂಟಿಕೊಳ್ಳದಿರಲಿಕ್ಕೆ ಇದೊಂದೆ ದಾರಿಯಲ್ಲದೆ ಬೇರೆಯಿಲ್ಲ,' ಎಂದು ಈಶೋಪನಿಷತ್ತಿನಲ್ಲಿ ಹೇಳಿದೆ (ಈಶ, ಮಂ ೨). ಆದರೆ ಈಶೋಪನಿಷತ್ತಿನಲ್ಲಿ ಬಂದ ಈ ಕರ್ಮ ಶಬ್ದವು 'ಯಜ್ಞಯಾಗಾದಿ ಕರ್ಮ' ಎಂಬುದಕ್ಕಿಂತ ಹೆಚ್ಚಿನ ಅರ್ಥವನ್ನು ಒಳಗೊಂಡಿಲ್ಲವೆಂದು ಹೇಳಬಹುದು. ಅಲ್ಲದೆ ಕರ್ಮಫಲವು ಮೈಗೆ ಅಂಟಿಕೊಳ್ಳದ ನಿಷ್ಕಾಮ ಕರ್ಮಯೋಗದ ಕಲ್ಪನೆಯು ಹೆಚ್ಚು ನಿಚ್ಚಳವಾಗಿ ಅಲ್ಲಿದ್ದಂತೆ ಕಾಣುವದಿಲ್ಲ. ಮುಂದೆ ಭಗವದ್ಗೀತೆಯ ಕಾಲಕ್ಕೆ ನಿಷ್ಕಾಮ ಕರ್ಮಯೋಗದ ಸಂಪೂರ್ಣ ಸ್ವರೂಪವು ಪ್ರಕಟವಾಯಿತು ; ಫಲಾಶಾರಹಿತನಾಗಿ, ಫಲಹೇತುವಿನ ವಿಷಯಕ್ಕಿರುವ ಕೃಪಣತನವನ್ನು ಬಿಟ್ಟು, ಮನುಷ್ಯನು ಕರ್ಮಪ್ರವಾಹದೊಳಗಿದ್ದರೂ ಕರ್ಮಸ್ಪರ್ಶವಾಗದಂತೆ ಇರುವ ವಿಶೇಷ ಕರ್ಮಿಯಾದರೂ ವಿಗತಕರ್ಮಿಯಾಗಿರುವ ಬಗೆಯು ಗೊತ್ತಾಯಿತು. ಈಶೋಪನಿಷತ್ತು ಸಂನ್ಯಾಸ ಹಾಗೂ ಕರ್ಮಯೋಗಗಳ ನಡುವಿನ ಹತ್ತುಗಡೆಯನ್ನು ಅಷ್ಟೊಂದು ಒಡೆದು ಹೇಳುವದಿಲ್ಲ. ಕಾಮ್ಯಕರ್ಮಗಳ ನ್ಯಾಸಮಾಡಿದ ಮೇಲೆ ಸಂಸಾರದೊಳಗಿದ್ದರೂ ಸಂನ್ಯಾಸವೆ ಅದು, ಕರ್ಮನಿರತನಾಗಿದ್ದರೂ ಕರ್ತೃತ್ವದ ಅಹಂಕಾರವನ್ನು ತೊರೆದಮೇಲೆ ಅದುವೆ ಕರ್ಮಯೋಗವು, ಎಂಬ ಮಾತುಗಳು ಸ್ಫುಟವಾಗಿ ಈಶಾವಾಸ್ಯದಲ್ಲಿಲ್ಲ. ಆದರೂ ವಿದ್ಯೆ ಹಾಗೂ ಅವಿದ್ಯೆಗಳ ಅಥವಾ ಜ್ಞಾನ ಹಾಗೂ ಕರ್ಮಗಳ ಸಮನ್ವಯ ಮಾಡುವಲ್ಲಿ ಈಶೋಪನಿಷತ್ತು ಉಳಿದ ಉಪನಿಷತ್ತುಗಳನ್ನು ಹಿಂದೊಗೆಯುತ್ತದೆ. ಈ ವಿಷಯಕ್ಕೆ ಅದರಲ್ಲಿ ಹೇಳಿರುವುದೇನಂದರೆ, 'ಅವಿದ್ಯೆಯ ಅಂದರೆ ಕೇವಲ ಕರ್ಮದ ದಾರಿಯನ್ನೆ ಹಿಡಿದವರು ಕಗ್ಗತ್ತಲೆಯ ಲೋಕಕ್ಕೆ ಹೋಗುತ್ತಾರೆ. ಕರ್ಮರಹಿತರಾಗಿ ಕೇವಲ ವಿದ್ಯೆಯ ಅಂದರೆ ಜ್ಞಾನದ ಬೆನ್ನೀ ಹತ್ತಿದವರು ಅದಕ್ಕೂ ಹೆಚ್ಚಿನ ಕಗ್ಗತ್ತಲೆಯ ಲೋಕವನ್ನು ಪ್ರವೇಶಿಸುತ್ತಾರೆ. ಬರಿ ಕರ್ಮಿಗಳದೊಂದು ಹಾಡು, ಬರಿ ಜ್ಞಾನಿಗಳದಿನ್ನೊಂದು ಹಾಡು ಆಗುವುದೆಂದು ಬಲ್ಲಿದರು ಬಹು ಪ್ರಾಚೀನ ಕಾಲದಿಂದ ಹೇಳುತ್ತ ಬಂದಿರುವರು. ಆದರೆ ವಿದ್ಯೆ ಮತ್ತು ಅವಿದ್ಯೆಗಳೆರಡನ್ನೂ ಬಲ್ಲ ಬಲ್ಲಿದನು ಕರ್ಮದಿಂದ ಸಾವನ್ನು ಮೀರುವನು, ಹಾಗೂ ಜ್ಞಾನಬಲದಿಂದ ಅಮರನಾಗುವನು' (ಈಶ, ಮಂ ೯-೧೧). ಇಂತು ಜ್ಞಾನ-ಕರ್ಮಗಳ ಸಮನ್ವಯವನ್ನು ಈಶಾವಾಸ್ಯವು ಮಾಡಲೆತ್ನಿಸಿದೆ. ನೆಲಕ್ಕೆ ಕಾಲುಹಚ್ಚದೆ ಗಾಳಿಗೋಪುರಗಳನ್ನು ಕಟ್ಟುವದರಲ್ಲಿಯೆ ಮೈಮರೆವ ವಿದ್ಯೆಯೂ, ಒಂದರಗಳಿಗೆಯು ತೆರವಿಲ್ಲದೆ ಹಗಲಿರುಳು ಕೆಲಸಗಳನ್ನು

ಮಾಡುವ ಕರ್ಮವೂ ಅಷ್ಟೇ ದೋಷಪೂರ್ಣವಿರುವವು ; ಆದರೆ ಇವೆರಡರ ಹದವ ನರಿತು ಸಮಕಟ್ಟಿನಿಂದ ನಡೆವವನೆ ಸಿದ್ಧಿಯನ್ನು ಪಡೆವನು, ಎಂದು ಈಶಾವಾಸ್ಯದ ಆದೇಶವು. ಅರ್ವಾಚೀನ ಕಾಲದಲ್ಲಿ ಅರಿಸ್ಟಾಟಲ್ಲನು ಪ್ರತಿಪಾದಿಸಿದ ಜ್ಞಾನಮಾರ್ಗ ಹಾಗೂ ಬೆಕನ್‌ನು ಹೇಳುವ ಕರ್ಮಮಾರ್ಗಗಳ ಸಮನ್ವಯವನ್ನು ಪ್ರಾಚೀನ ಕಾಲದಲ್ಲಿ ಈಶೋಪನಿಷತ್ತು ಈ ಬಗೆಯಾಗಿ ಮಾಡಿಬಿಟ್ಟಿದೆ.

**೧೧. ಸುಖಸಮುಚ್ಚಯವಾದವು** – ಇನ್ನು ಅಂತರ್ಬಾಹ್ಯ ಸುಖಗಳೆರಡೂ ಅವಶ್ಯವಾದವುಗಳು ಎಂದು ಪ್ರತಿಪಾದಿಸುವ ಸುಖಸಮುಚ್ಚಯ ವಾದವನ್ನು ವಿಚಾರಿಸುವ. ಮೇಲೆ ಹೇಳಿದ ಲೌಕಿಕ ಕ್ರಿಯಾಯೋಗವನ್ನು ಮಾನ್ಯ ಮಾಡಿದ ಬಳಿಕ ಅತ್ಯಂತ ಶ್ರೇಷ್ಠ ನೈತಿಕ ಆದರ್ಶದಲ್ಲಿ ಕೂಡ ಭೌತಿಕ ಹಿತಕ್ಕೆ ಒಂದು ಸ್ಥಾನವನ್ನು ಕೊಡಬೇಕಾಗುವದು. ಇಂಥ ಪರಿಸ್ಥಿತಿಯಲ್ಲಿ ನೈತಿಕ ಹಿತವೆ ಆತ್ಯಂತಿಕ ಕಲ್ಯಾಣವೆಂದು ತಿಳಿಯಲ್ಪಡದಿದ್ದರೂ ಆತ್ಯಂತಿಕ ಕಲ್ಯಾಣದ ಕಲ್ಪನೆಯಲ್ಲಿ ಭೌತಿಕ ಹಿತಕ್ಕೂ ಅಷ್ಟೇ ಮಹತ್ವವಿದೆ ಎಂದು ತಿಳಿಯಬಹುದು. ಶ್ವೇತಾಶ್ವತರದಲ್ಲಂತೂ ನಾಲ್ಕನೆಯ ಅಧ್ಯಾಯದ ಕೊನೆಯ ಪ್ರಾರ್ಥನೆಯು ವೇದದ ಪದ್ಧತಿಯಲ್ಲಿದೆ ; ವೈದಿಕ ಋಷಿಗಳ ಹಾಗೆ ಇದರೊಳಗೂ ಕೆಲಹೊತ್ತು ಭೌತಿಕ ಹಿತವೆ ಆತ್ಯಂತಿಕ ಕಲ್ಯಾಣದ ಮುಖ್ಯ ಭಾಗವೆಂದು ತಿಳಿಯಲ್ಪಟ್ಟಿದೆ. ಶ್ವೇತಾಶ್ವತರವು ಬೇಡಿಕೊಳ್ಳುವದೇನಂದರೆ, ' ಮಕ್ಕಳುಮರಿಗಳ ವಿಷಯದಲ್ಲಿ ನಮಗೆ ಕಷ್ಟ ಕೊಡಬೇಡ ; ನಮ್ಮ ಆಯುಷ್ಯದಲ್ಲಿ ಕಷ್ಟ ಕೊಡಬೇಡ ; ಆವು ಕುದುರೆಗಳ ವಿಷಯದಲ್ಲಿ ಕಷ್ಟಕೊಡಬೇಡ ; ನಮ್ಮ ಗಂಡುಗಲಿಗಳನ್ನು ಕೊಲ್ಲಬೇಡ ; ಅಂದರೆ ಎಲೈ ರುದ್ರನೆ, ನಿನಗೆ ನಿರಂತರ ತಪ್ಪದೆ ಹವಿಸ್ಸನ್ನರ್ಪಿಸಲು ಸಮರ್ಥರಾಗುವೆವು ' (ಶ್ವೇ, ಅ ೪, ಮಂ ೨೨ ). ಮನುಷ್ಯನು ಒಳಗಣ್ಣಿನಿಂದ ( ಅಂತರ್ದೃಷ್ಟಿ ) ನೋಡದೆ ಬೇಡಿಕೊಂಡ ಈ ಬಗೆಯ ಸೌಖ್ಯವು ಕೇವಲ ಬಾಹ್ಯ ಸುಖವೇ ಎನಿಸುವುದು. ಆದರೆ ತೈತ್ತಿರೀಯ ಉಪನಿಷತ್ತು ಅಂತರ್ಬಾಹ್ಯ ಕಲ್ಯಾಣಗಳಲ್ಲಿ ಯಾವದೂ ಒಂದಕ್ಕೊಂದು ಕೀಳೆಂದು ಬಗೆಯದೆ ಸತ್ಯ ಹಾಗೂ ಧರ್ಮಗಳನ್ನು ಪಾಲಿಸಿ ಅಂತರ್ಬಾಹ್ಯ ಕಲ್ಯಾಣವನ್ನು ಹೊಂದಿ ಕುಶಲ ಮತ್ತು ಭೂತಿ ಇವೆರಡನ್ನೂ ಪಡೆಯಲಿಕ್ಕೆ ಬೋಧಿಸುತ್ತದೆ ( ತೈ, ವ ೧, ಅನು ೩, ಮಂ ೧ ). ಈ ಉದ್ದೇಶದಿಂದಲೆ ಶ್ರೇಷ್ಠ ಜ್ಞಾನಯೋಗಿಯೆನಿಸಿದ ಯಾಜ್ಞವಲ್ಕ್ಯನೂ ಜನಕರಾಜನ ಒಡ್ಡೋಲಗದಲ್ಲಿ ಹೋದಾಗ ' ಧನವು ಬೇಕೊ, ದನಕರುಗಳು ಬೇಕೊ, ಅಥವಾ ವಾದದಲ್ಲಿ ವಿಜಯವು ಬೇಕೊ ' ಎಂಬ ಅರಸನ ಪ್ರಶ್ನೆಗೆ ' ನನಗೆ ಎರಡೂ ಬೇಕೆಂದು ' ಉತ್ತರವಿತ್ತನು. ಯಾಜ್ಞವಲ್ಕ್ಯನಿಗೆ ಬಂಗಾರದ ನಾಣ್ಯಗಳೊಂದಿಗೆ ಗೋವುಗಳೂ ಬೇಕಿದ್ದವು ಹಾಗೂ ಜನಕನ ಓಲಗದೊಳಗಿನ ತತ್ವಜ್ಞರೊಡನೆ ವಾದ

ನೂಡಿ ಅದರಲ್ಲಿ ವಿಜಯವೂ ಬೇಕಿತ್ತು. ಆದರೆ ಯಾಜ್ಞವಲ್ಕ್ಯನು, ' ಶಿಷ್ಯನಿಗೆ ಜ್ಞಾನ ಕೊಡದೆ ಆತನಿಂದ ಏನೂ ತಕ್ಕೊಳ್ಳಲಾಗದೆಂದು ನಮ್ಮ ತಂದೆಯು ಕಟ್ಟಪ್ಪಣೆ ಇದೆ. ಅದರ ಮೇರೆಗೆ ನಾನು ನಡೆಯುವವನು ' ಎಂದು ಹೇಳಿ ತನ್ನ ಕೃತಿಯ ಸಮರ್ಥನ ಮಾಡಿದ್ದಾನೆ ( ಬೃ, ಅ ೪. ಬ್ರಾ ೧, ಮಂ ೭ ). ಭೌತಿಕ ಸೌಖ್ಯ ಹಾಗೂ ಆಧ್ಯಾತ್ಮಿಕ ಆನಂದಗಳೆರಡೂ ಅವನಿಗೆ ಬೇಕಾಗಿದ್ದವೆಂಬುದು ಸ್ಪಷ್ಟವಿದೆ. ಯಾಜ್ಞವಲ್ಕ್ಯನು ಕೇವಲ ಜ್ಞಾನನಿಷ್ಠನು, ಧ್ಯೇಯವಾದಿಯು ( Idealist ) ; ಜ್ಞಾನಿಯು ಮುನಿಯಾಗಿ, ಮೌನಿಯಾಗಿ, ವಿರಕ್ತನಾಗಿ, ಪರಿವ್ರಾಜಕನಾಗಿ ಆಯುಷ್ಯವನ್ನು ಕಳೆಯಬೇಕೆಂದು ಉಪದೇಶಿಸಿದವನು ; ಹೀಗಿದ್ದರೂ ಜ್ಞಾನಿಯೂ ಕೂಡ ಬಾಹ್ಯಹಿತದ ಕಡೆಗೆ ಕಣ್ಣು ಮುಚ್ಚಿ ನಡೆಯಲಾಗದೆಂದು ತನ್ನ ಕೃತಿಯಿಂದ ತೋರಿಸಿ ಕೊಡುವದಕ್ಕಾಗಿಯೇ ಅವನು ಆಗ ಈ ರೀತಿಯಲ್ಲಿ ವರ್ತಿಸಿರಬೇಕು.

**೧೨. ಆನಂದವಾದವು** – ತೈತ್ತಿರೀಯೋಪನಿಷತ್ತು ಇನ್ನೂ ಒಂದಡಿ ಮುಂದಿಟ್ಟಿದೆ. ಭೌತಿಕ ಸೌಖ್ಯವೂ ಆತ್ಮಾನಂದವೂ ಒಂದೇ ವರ್ಗದವು, ಒಂದೇ ಜಾತಿಯವು, ಒಂದನ್ನು ಇನ್ನೊಂದರಿಂದ ಅಳೆಯಬಹುದು, ಎಂದು ಅದು ಪ್ರತಿಪಾದಿಸುತ್ತದೆ. ಈ ಉಪನಿಷತ್ತಿನ ದ್ವಿತೀಯ ವಲ್ಲಿಯ ಎಂಟನೆಯ ಅನುವಾಕದೊಳಗೆ ಆನಂದದ ಮೀಮಾಂಸೆಯಿದೆ. ಭೌತಿಕ ಸುಖದ ಪರಿಣತ ರೂಪವೆ ಆಧ್ಯಾತ್ಮಿಕ ಆನಂದವು; ಆದುದರಿಂದ ಭೌತಿಕ ಸುಖವು ಆತ್ಮಾನಂದದ ಒಂದು ರೂಪವು ಎಂಬ ಅಭಿಪ್ರಾಯವಿದ್ದ ಈ ಉಪನಿಷತ್ಕಾರರು ಒಂದು ತಕ್ಕಡಿಯಿಂದ ತೂಗಿ ಸುಖ ಹಾಗೂ ಆನಂದಗಳ ನಡುವಿನ ಕೋಷ್ಟಕವನ್ನು ಗೊತ್ತುಪಡಿಸಿದ್ದಾರೆ. ಹಾಗಾದರೆ ಎರಡನ್ನೂ ತೂಗುವ ಅಳತೆ ಯಾವದು ? ಕುಲಶೀಲವುಳ್ಳವನೂ ಸುಶಿಕ್ಷಿತನೂ ಚಪಲನೂ ಗಟ್ಟಿಗನೂ ಬಲಿಷ್ಠನೂ ಆದ ತರುಣನಿಗೆ ಧನಕನಕ ಸಮೃದ್ಧವಾದ ಭೂಲೋಕವನ್ನೆಲ್ಲ ಕೊಟ್ಟರೆ ಅವನಿಗಾಗುವ ಹಿಗ್ಗು ಮಾನಷಾನಂದನು. ಇದನ್ನೆ ಆರಂಭದ ಅಳೆಯುವ ಪರಿಮಾಣವೆಂದು ತಿಳಿದು ಆ ಉಪನಿಷತ್ತಿನಲ್ಲಿ ಮುಂದೆ ಹೇಳಿರುವದೇನಂದರೆ, ' ಇಂತಹ ನೂರು ಮಾನುಷಾನಂದಗಳೆಂದರೆ ಒಂದು ಮನುಷ್ಯಗಂಧರ್ವಾನಂದವು; ಇಂತಹ ನೂರು ಆನಂದಗಳು ಒಂದು ದೇವಗಂಧರ್ವಾನಂದವು; ಇಂತಹ ನೂರು ಆನಂದಗಳು ಒಂದು ಪಿತೃಗಳಾನಂದವು; ಇಂತಹ ನೂರು ಆನಂದಗಳು ಒಂದು ಆಜನ್ಮ ದೇವರಾದವರ ಆನಂದವು; ಇಂತಹ ನೂರು ಆನಂದಗಳು ಕರ್ಮದಿಂದ ದೇವತ್ವ ಹೊಂದಿದವರ ಒಂದು ಆನಂದವು. ಇಂತಹ ನೂರು ಆನಂದಗಳು ದೇವದೇವರ ಒಂದು ಆನಂದವು; ಇಂತಹ ನೂರು ಆನಂದಗಳು ಇಂದ್ರನ ಒಂದು ಆನಂದವು; ಇಂದ್ರನ ನೂರು ಆನಂದಗಳು ಬೃಹಸ್ಪತಿಯ ಒಂದು ಆನಂದವು; ಇಂತಹ ನೂರು ಆನಂದಗಳು

ಪ್ರಜಾಪತಿಯ ಒಂದು ಆನಂದವು; ಇಂತಹ ನೂರು ಆನಂದಗಳು ಬ್ರಹ್ಮನ ಒಂದು ಆನಂದವು. ಈ ಎಲ್ಲ ಆನಂದಗಳೂ ಹಾಗೂ ಮೇಲ್ತರಗತಿಯ ಪ್ರತಿಯೊಂದು ಆನಂದವೂ ನಿಷ್ಕಾಮ ಶ್ರೋತ್ರಿಯನಿಗೆ ಸಿಗುತ್ತವೆ ' ( ತೈ, ವ ೨, ಅನು ೮ ). ಹೀಗೆ ಹೇಳಿರುವುದರಿಂದ ಭೌತಿಕ ಸುಖವು ಆಧ್ಯಾತ್ಮಿಕ ಆನಂದದ ಪಾಸಂಗಕ್ಕೂ ಹತ್ತಲಾರದೆಂದು ಈ ಉಪನಿಷತ್ಕಾರರು ತಿಳಿಯುತ್ತಿರಬೇಕು; ಇಲ್ಲವೆ ಇವೆರಡೂ ಒಂದೇ ಜಾತಿಯವೆಂದೂ ಅವುಗಳ ಅಳತೆಯಲ್ಲಿ ಅಂತರವನ್ನು ಹೇಳಿದರೂ ಅವು ಒಂದೇ ವರ್ಗದವೆಂದೂ ತಿಳಿದಿರಬೇಕು. ಆದರೆ ಲೌಕಿಕ ಹಾಗೂ ಪೌರಾಣಿಕ ದೃಷ್ಟಾಂತಗಳಿಂದ ಇಷ್ಟೊಂದು ಪರಿಶ್ರಮಬಟ್ಟು ಹೇಳಿರುವ ಆನಂದದ ಕೋಷ್ಟಕದಲ್ಲಿ ಭೌತಿಕ ಸುಖವು ಆತ್ಮಾನಂದದ ಪಾಸಟಿಗೂ ಬಾರದು, ಎಂಬ ವಿಚಾರಸರಣಿಯು ಇದ್ದಂತೆ ಕಂಡುಬರುವದಿಲ್ಲ. ನಿಷ್ಕಾಮಿಯಾದ ಶ್ರೋತ್ರಿಯನಿಗೆ ಇವೆಲ್ಲ ಆನಂದಗಳು ಯಾವಾಗಲೂ ಸಿಗುವವೆಂದು ಅಲ್ಲಿ ಹೇಳಿದ ಮಾತು ಅದರಷ್ಟೇ ಮಹತ್ವದ್ದಿರುತ್ತದೆ. ಯಾಕಂದರೆ ಆಶಾರಹಿತನಾಗುವದೆ ಶ್ರೇಷ್ಠವಾದ ಆನಂದಕ್ಕೆ ಮೂಲಕಾರಣವೆಂದಬಳಿಕ ಆ ಆನಂದವನ್ನು ವಿಷಯಗಳಿಂದ ಉಂಟಾಗುವ ಭೌತಿಕ ಸುಖಗಳಿಗೆ ಹೋಲಿಸುವದು ವಿಸಂಗತವಾಗುವದಿಲ್ಲವೆ ? ಅದು ಏನೇ ಇರಲಿ. ಆತ್ಮಾನಂದವನ್ನು ಆವುದೇ ಬಗೆಯ ಭೌತಿಕ ಸುಖಕ್ಕೆ ಹೋಲಿಸಲಿಕ್ಕಾಗುವದಿಲ್ಲವೆಂಬುದೆ ಸಮಂಜಸವಾಗುವದು. ಇವೆರಡೂ ಒಂದಕ್ಕೊಂದು ಸರಿಬಾರವು; ಇವು ಒಂದರಿಂದೊಂದು ತೂಕದಲ್ಲಿ ಹೆಚ್ಚುಕಡಿಮೆ ಇರುವವೆಂದಲ್ಲ; ಆದರೆ ಮೂಲತಃ ಅವೆರಡರ ಜಾತಿಯೆ ಬೇರೆ, ವರ್ಗವೆ ಬೇರೆ. ಎಂಥ ಹೆಚ್ಚಿನವನಿರಲಿ, ದೈವುಳ್ಳವನಿರಲಿ, ಸಾಧುವಿರಲಿ, ಆತನ ಇಂದ್ರಿಯ ಸುಖದ ಅಳತೆಯಿಂದ ಮಹರ್ಷಿಯ ಬ್ರಹ್ಮಾನಂದವನ್ನು ಅಳೆಯಲ್ಲೆತ್ನಿಸುವದು ಅಸಮಂಜಸವು. ಯಾಕಂದರೆ ಆ ಆತ್ಮಾನಂದದ ವರ್ಗವೆ ಬೇರೆ ಈ ವಿಷಯಸುಖದ ವರ್ಗವೆ ಬೇರೆ.

**೧೩. ಆತ್ಮಸಾಕ್ಷಾತ್ಕಾರವು—** ಆಧ್ಯಾತ್ಮಿಕ ಸಂಗತಿಗಳನ್ನು ಭೌತಿಕ ಸಂಗತಿಗಳಿಗೆ ಎಂದೂ ಹೋಲಿಸಲಾಗದು. ಆದುದರಿಂದ ಆತ್ಮಸಾಕ್ಷಾತ್ಕಾರದ ಆನಂದವು ಅನ್ಯಾದೃಶವು, ಅನುಪಮೇಯವು, ಅಪರಂತಹದು ಅದೊಂದೆ, ಎಂದು ಹೇಳಬಹುದು. ಆತ್ಮಸಾಕ್ಷಾತ್ಕಾರದ, ಆತ್ಮಾನುಭವದ ಮಾತನ್ನೆತ್ತಿದೊಡನೆ ಆತ್ಮನ ಅಂದರೆ ತನ್ನ ಅನುಭವವು ತನಗೆ ಹೊಸದಾಗಿ ಬರುವುದೇನು, ಅದು ಮೊದಲೆ ಬಂದಿದೆ, ಎಂದು ಚೇಷ್ಟೆಮಾಡುವವರು ಆತ್ಮಸಾಕ್ಷಾತ್ಕಾರದ ನಿಜ ಮರ್ಮವನ್ನೆ ಅರಿತಿಲ್ಲವೆನ್ನಬೇಕಾಗುತ್ತಿದೆ. ಆತ್ಮಾನುಭವವು ಮೊದಲೆ ಆಗಿ ಬಿಟ್ಟಿದೆಯೆಂದು ಕ್ಯಾನನ್ ರ್‍ಯಾಶಡಾಲನು ಅನ್ನುವನು. ಹೀಗನ್ನುವಾಗ ಅವನು ತತ್ವಜ್ಞಾನದೊಳಗಿನ ಒಂದು ತತ್ವವನ್ನು ಬುದ್ಧಿಯಿಂದ ಗ್ರಹಿಸಿರುವನು ಎಂದು ಮಾತ್ರ ಅನ್ನಬಹುದು. ಆದರೆ ಅವನಿಗೆ ಆತ್ಮಸಾಕ್ಷಾತ್ಕಾರದ ತಿರುಳು ತಿಳಿದಿಲ್ಲವೇದೇ

ಅನ್ನಬೇಕಾಗುವದು. ಯಾಕಂದರೆ ಆತ್ಮನ ಸಾಕ್ಷಾತ್ಕಾರವು ಆಗತಕ್ಕದ್ದಿದೆ ಎನ್ನುವಾಗ ಮನುಷ್ಯನಲ್ಲಿ ಮೊದಲಿನಿಂದ ಮನೆಮಾಡಿಕೊಂಡಿರುವ ಕಾಮ ಕ್ರೋಧ ಮದ ಮತ್ಸರಾದಿ ಅನಾತ್ಮಿಕವಿಷಯಗಳ ಹೊಲಸನ್ನು ನೀತಿ ಹಾಗೂ ಅನುಭೂತಿಗಳ ಸಹಾಯದಿಂದ ಹೊರ ದೂಡಿ ದಿವ್ಯವಾದ ಆತ್ಮಜ್ಯೋತಿಯು ತೊಳಗಿ ಬೆಳಗುವಂತೆ ಮಾಡಬೇಕಾಗಿದೆ ಎಂಬರ್ಥ ವಿರುತ್ತದೆ. ಆತ್ಮಸಾಕ್ಷಾತ್ಕಾರಕ್ಕೆ ನೀತಿ ಹಾಗೂ ಅನುಭೂತಿಮಾರ್ಗಗಳು ಸಾಧನಗಳು ; ಆತ್ಮಸಾಕ್ಷಾತ್ಕಾರದಲ್ಲಿಯೆ ಅವೆರಡರ ಸಂಗಮವು. ಇದೇ ಮಾತನ್ನೆ ಇಲ್ಲಿ ಮುಂದೆ ಹೇಳುವ ದಿದೆ. ಬ್ರ್ಯಾಡ್ಲೇ ಪ್ರಭೃತಿ ಯುರೋಪೀಯ ನೀತಿಶಾಸ್ತ್ರಜ್ಞರು ಪುರುಷನ ಬೌದ್ಧಿಕ, ಭಾವನಾಮಯ, ಹಾಗೂ ನೈತಿಕ ಶಕ್ತಿಗಳನ್ನು ಪರಿಣತಿಗೊಯ್ಯುವುದೆ ಸಾಕ್ಷಾತ್ಕಾರವೆಂದು ಭಾವಿಸಿ ಅವುಗಳ ಅನುಭವವೆಂದರೆ ಆತ್ಮಾನುಭವವೆಂದು ನಂಬಿರುವರು. ಆದರೆ ಉಪನಿಷತ್ತಿನ ಮಹರ್ಷಿಗಳು ಈ ಬಗೆಯ ನೀರಸ, ಹುರುಳಿಲ್ಲದ, ಜೊಳ್ಳು ಅನಾತ್ಮದರ್ಶನಕ್ಕೇ ಆತ್ಮಾನುಭವವೆನ್ನುತ್ತಿದ್ದಿಲ್ಲ ; ಅವರು ಅಂತರಾತ್ಮನ ವಿಕಾಸ ಹಾಗೂ ಪ್ರತ್ಯಕ್ಷದರ್ಶನಕ್ಕೇ ಆತ್ಮಾನುಭವವೆನ್ನುತ್ತಿದ್ದರು. ನಮ್ಮ ಒಳಹೊರಗಣದ್ದೆಲ್ಲವೂ ಯಾವನಿಂದ ಆಗಿರುವದೊ ಆ ಆತ್ಮನಿಗಿಂತ ನಮಗೆ ಪ್ರಿಯತಮವಾದುದು ಬೇರೆ ಯಾವದೂ ಇಲ್ಲ. ಮಕ್ಕಳುಮರಿ, ಹೊನ್ನುಮಣ್ಣು, ಇಂತಹ ಎಲ್ಲ ಭೌತಿಕವಸ್ತುಗಳಿಗಿಂತಲೂ ಆತ್ಮನೆ ಪ್ರಿಯನು. ಯಾಕಂದರೆ ಆತ್ಮನೆ ನಮ್ಮ ತಿರುಳಾಗಿರುವದರಿಂದ ನಮಗೆ ಎಲ್ಲಕ್ಕಿಂತ ಹತ್ತರದವನು ಅವನೆ. ನಮ್ಮ ಅಂತರಂಗದ ಅಂತರಂಗದಲ್ಲಿರುವುದು ಆತ್ಮವೆ, ಎಲ್ಲಕ್ಕೂ ನಮಗೆ ನೆರೆಯಲ್ಲಿರುವುದು ಆತ್ಮವೆ, ಎಂದು ಬೃಹದಾರಣ್ಯಕದಲ್ಲಿ ಹೇಳಿದೆ. ಅದರಲ್ಲಿಯೆ ಮತ್ತೆ ಬರೆದಿರುವದೇನಂದರೆ, 'ಆತ್ಮಕ್ಕಿಂತ ಪ್ರಿಯತಮವಾದ ವಸ್ತುವುಂಟೆಂದು ಯಾವನಾದರೂ ಉಸುರಿದರೆ, ಮತ್ತೊಬ್ಬನು, ದೇವರಿದ್ದದ್ದಾದರೆ ನಿನ್ನ ಪ್ರೀತಿಯ ಆ ಅನಾತ್ಮವಸ್ತುಗಳನ್ನು ಅವನು ನಾಶಮಾಡಲಿ ಎನ್ನುವನು, ಮತ್ತು ಆ ವಸ್ತುಗಳು ಹಾಗೆ ನಾಶಹೊಂದುವವು. ಆದ ಕಾರಣ ಆತ್ಮಕ್ಕಿಂತ ಪ್ರಿಯತಮವಸ್ತುವಾವದೂ ಇಲ್ಲವೆಂದು ಬಗೆದು, ಭಾವಿಸಿ ಅದನ್ನೆ ಆರಾಧಿಸಬೇಕು. ಯಾಕಂದರೆ ಹೀಗೆ ಆರಾಧಿಸುವವನ ಪ್ರಿಯವಸ್ತುವಿನ ವಿನಾಶವು ಎಂದೆಂದೂ ಆಗದು ( ಬೃ, ಅ ೧, ಬ್ರಾ ೪, ಮಂ ೮ ). ಆತ್ಮಸಾಕ್ಷಾತ್ಕಾರವಾದ ಬಳಿಕ ಅವನಿಗೆ ಆಮೇಲೆ ಪರಿಪೂರ್ಣವಾಗತಕ್ಕ ಆಶೆಆಳಿಪುಗಳೇನೂ ಉಳಿಯುವದಿಲ್ಲ. ಅವನು ನಿಷ್ಕಾಮನಾಗುವನು, ಅಕಾಮನಾಗುವನು. ಇದರ ಸಲುವಾಗಿಯೂ ಆತ್ಮವೆ ನಮ್ಮ ಆರಾಧ್ಯವಿಷಯವಾಗಬೇಕೆಂದು ಉಪನಿಷತ್ತಿನಲ್ಲಿ ಮತ್ತೆ ಒಂದು ಕಾರಣವು ಹೇಳಲ್ಪಟ್ಟಿದೆ. ( ಬೃ, ಅ ೪, ಬ್ರಾ ೩, ಮಂ ೨ ಹಾಗೂ ಬ್ರಾ ೪, ಮಂ ೬ ). ಆತ್ಮನೆ ಎಲ್ಲಕ್ಕೂ ಹೆಚ್ಚಿನ ಇಷ್ಟ ವಸ್ತುವು, ಆದುದರಿಂದ ಆತ್ಮನನ್ನು ಸಾಕ್ಷಾತ್ಕರಿಸಬೇಕು, ಎಂಬೀ

ವಿಚಾರಕರಿಗಿಂತ ಉಪನಿಷತ್ಕಾರರು ಎಷ್ಟೋ ಮುಂದೆ ಹೋಗಿರುವರು. ಆತ್ಮವೆ ಮನುಷ್ಯನ ಎಲ್ಲ ಕರ್ಮಗಳ ಎಲ್ಲ ಆಕಾಂಕ್ಷೆಗಳ ಎಲ್ಲ ವ್ಯವಹಾರಗಳ ಮೂಲ ಗುರಿಯು ಎಂದು ಉಪನಿಷತ್ತುಗಳ ಪ್ರತಿಪಾದನವಿರುವದು. ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯ ಹಾಗೂ ಮೈತ್ರೇಯಿ ಇವರೀರ್ವರ ಸುಪ್ರಸಿದ್ಧವಾದ ಸಂವಾದವಿದೆ. ಯಾಜ್ಞವಲ್ಕ್ಯನು ಕಾತ್ಯಾಯನಿ ಹಾಗೂ ಮೈತ್ರೇಯಿ ಎಂಬ ತನ್ನ ಇಬ್ಬರು ಹೆಂಡಿರಲ್ಲಿ ಬದುಕನ್ನೆಲ್ಲ ಹಂಚತಕ್ಕವನಿದ್ದನು. ಅದರೆ ಅಧ್ಯಾತ್ಮದೃಷ್ಟಿಯುಳ್ಳ ಮೈತ್ರೇಯಿಯು ಹೊನ್ನು ಮಣ್ಣಿನ ಬದುಕನ್ನು ಬಯಸದೆ ತನ್ನ ಪತಿಯನ್ನು ಕುರಿತು, 'ಸಂಪತ್ತಿನಿಂದ ತುಂಬಿ ತುಳುಕುವ ಪ್ರಪಂಚವೆ ನನ್ನ ಕೈಯಲ್ಲಿದೆಯೆಂದು ತಿಳಿದರೂ ಅದು ನನಗೆ ಅಮರಪದವ ಕೊಟ್ಟೀತೇ?' ಎಂದು ಕೇಳಲು ಅವನು 'ಎಂದೂ ಇಲ್ಲ, ದೇಹದ ಸುಖಸಾಧನಗಳೆಲ್ಲವೂ ಉಳ್ಳವರ ಬಾಳಿನಂತೆ ನಿನ್ನ ಬಾಳೂ ಆಗುವುದು. ಸಂಪತ್ತಿನಿಂದ ಅಮೃತತ್ವದ ಆಶೆಯಿಲ್ಲ' ಎಂದು ಅಂದನು. ಆಗ ಮೈತ್ರೇಯಿಯು ನುಡಿದುದೇನಂದರೆ, 'ಹಾಗಾದರೆ ಅಮರಪದವ ಕೊಡದ ಸಂಪತ್ತಿಯಿಂದೇನು ?' ಯಾಜ್ಞವಲ್ಕ್ಯನು ಮೈತ್ರೇಯಿಗಂದದ್ದು, 'ಸತಿಯೇ, ಇದೀಗ ನೀನು ನಲ್ನುಡಿಗಳನ್ನಾಡಿ ಎನ್ನ ನಲ್ಲೆಯಾದೆ. ಬಾ, ಕುಳ್ಳಿರು, ಮನ ಮುಟ್ಟಿ ಕೇಳು, ಮನನಮಾಡು; ನಿನಗೆ ನಾನು ಆತ್ಮಜ್ಞಾನವನ್ನು ಕಲಿಸುವೆನು. ಗಂಡನು ಪ್ರಿಯನಾಗಿರುವುದು ಗಂಡನಿಗೋಸುಗವಲ್ಲ, ಆತ್ಮನಿಗೋಸುಗ; ಮಕ್ಕಳು ಪ್ರಿಯವಾಗುವುದು ಮಕ್ಕಳಿಗಾಗಿಯಲ್ಲ, ಆತ್ಮನಿಗಾಗಿ; ಬದುಕು ಪ್ರಿಯವಾಗುವದು ಬದುಕಿಗೋಸುಗವಲ್ಲ, ಆತ್ಮನಿಗೋಸುಗ; ......ಎಲ್ಲವೂ ಬೇಕಾಗಿರುವುದು ಎಲ್ಲದರ ಸಲುವಾಗಿಯಲ್ಲ, ಆತ್ಮನಸಲುವಾಗಿ; ಇದಕ್ಕಾಗಿ ಮೈತ್ರೇಯಿ, ಕಾಣಬೇಕು ಆ ಆತ್ಮನನ್ನು, ಕೇಳಬೇಕು ಆ ಆತ್ಮನನ್ನು, ಬಗೆಯಬೇಕು ಆ ಆತ್ಮನನ್ನು, ನಿದಿಧ್ಯಾಸಮಾಡಬೇಕು ಆ ಆತ್ಮನದೆ; ಯಾಕಂದರೆ ಆತ್ಮನನ್ನು ಕಂಡು, ಕೇಳಿ, ಬಗೆದು, ಭಾವಿಸಿ, ಕುರಿತಾಗಲೆ, ಇದೆಲ್ಲವೂ ತಿಳಿಯುವದು' (ಬೃ, ಅ ೨, ಬ್ರಾ ೪, ಮಂ ೨-೫). ಇದರ ಅರ್ಥಮಾಡುವಾಗ ಒಂದು ಮಹತ್ವದ ಮಾತನ್ನು ಮರೆಯಲಾಗದು. ಇದರೊಳಗಿನ 'ಆತ್ಮ' ಶಬ್ದಕ್ಕೆ 'ನಾ' 'ನಾ' ಎಂಬ ಉಬ್ಬಾಳುತನದಿಂದ ಉಕ್ಕಿಬೀಳುವ ಅಹಂಕಾರಿಕ ಅರ್ಥವನ್ನು ಹಚ್ಚಿ ಸ್ವಾರ್ಥಪ್ರವೃತ್ತಿಯ ನೈತಿಕಸಿದ್ಧಾಂತಗಳನ್ನು ಕೆಲವರು ಪುಷ್ಟೀಕರಿಸುವದುಂಟು. ಹೀಗೆ ಅರ್ಥವನ್ನು ಕೆಲವರು ಮಾಡಿದ್ದೂ ಉಂಟು. ಆದರೆ ಅದು ತೀರ ವಿಪರೀತಾರ್ಥವು. ಇಲ್ಲಿ ಅಧ್ಯಾತ್ಮಪರ ಅರ್ಥವನ್ನೇ ಮಾಡಲಿಕ್ಕೆಬೇಕು. ಆತ್ಮನೆಂದರೆ 'ನಾ' ಎಂಬ ಅಹಂಕಾರಿಕ ಅರ್ಥಮಾಡಿ, ಗಂಡ ಅಥವಾ ಹೆಂಡತಿ ಇಲ್ಲವೆ ಮಕ್ಕಳು ನನ್ನಸಲುವಾಗಿ, ಸ್ವಾರ್ಥಕ್ಕಾಗಿ, ಎಂಬರ್ಥ ಹಚ್ಚುವದು ಸರಿಹೋಗುವದಿಲ್ಲ. 'ಆತ್ಮಾ ವಾ ಅರೇ ದೃಷ್ಟವ್ಯೋ'

ಎಂದು ಕೊನೆಗೆ ಬಂದಿರುವ ವಾಕ್ಯದೊಳಗಿನ 'ಆತ್ಮ' ಶಬ್ದದರ್ಥವೆ ಈ ವಚನದಲ್ಲಿ ಅಭಿಪ್ರೇತವಿರುವದೆಂಬುದು ಸ್ಪಷ್ಟವಿದೆ. ಆದುದರಿಂದ ಈ ಇಡೀ ಭಾಗದಲ್ಲಿ, ಆತ್ಮಶಬ್ದಕ್ಕೆ ಅಂತರಾತ್ಮ–ಪರಮ ಆತ್ಮ, ಎಂದು ಅರ್ಥಮಾಡದೆ ಗತ್ಯಂತರವಿಲ್ಲ. ಆದಕಾರಣ ಗಂಡ ಅಥವಾ ಹೆಂಡತಿ ಇಲ್ಲವೆ ಮಕ್ಕಳು ಇವರನ್ನು ಪ್ರೀತಿಸುವದೆಂದರೆ ಆತ್ಮನಲ್ಲಿರುವ ನಮ್ಮ ಪ್ರೀತಿಯು ಒಂದು ಬಗೆಯು ಎಂಬರ್ಥ, ಅಥವಾ ಆತ್ಮನಲ್ಲಿರುವ ಪ್ರೀತಿಯ ಪಡಿನೆಳಲೆ ಈ ಪ್ರೀತಿಯು, ಎಂದರೂ ಸಲ್ಲುವದು. ಅರ್ಥಾತ್ ಆತ್ಮನಿಗಾಗಿಯೆ ಬೇಕಾಗಿರುವುದು ಇದೆಲ್ಲ. ಈ ಆತ್ಮನ ನಿಧಿಧ್ಯಾಸದಿಂದ ಅವನನ್ನು ಸಾಕ್ಷಾತ್ಕರಿಸಬೇಕೆಂದು, ಅವನ ಅನುಭಾವ ಹೊಂದ ಬೇಕೆಂದು ಬೃಹದಾರಣ್ಯಕದ ಆದೇಶವು.

**೧೪. ಆತ್ಮಸಾಕ್ಷಾತ್ಕಾರ ಹಾಗೂ ನೀತಿ–ಅನುಭಾವಗಳು—** ಛಾಂದೋಗ್ಯದ ಸುಪ್ರಸಿದ್ಧವಾದ ಒಂದು ಅಧ್ಯಾಯದಲ್ಲಿ ನೀತಿ ಮತ್ತು ಅನುಭೂತಿ ಇವೆರಡು ಹೊಂಪುಗೂಡಿರುವಷ್ಟು ಚನ್ನಾಗಿ ಹೊಂದುಗೂಡಿದ್ದು ಬೇರೆ ಎಲ್ಲಿಯೂ ನೋಡಲಿಕ್ಕೆ ಸಿಗುವದಿಲ್ಲ. ಮನುಷ್ಯನನ್ನು ಕೆಲಸಕ್ಕೆ ಎಳಿಸುವದು ಯಾವದು ಎಂದು ಅದರಲ್ಲೊಂದು ಪ್ರಶ್ನೆ. ಸುಖದ ಅಪೇಕ್ಷೆಯೆ ಕರ್ಮಪ್ರವೃತ್ತಿಗೆ ಕಾರಣವು ಎಂದು ಅಲ್ಲಿಯೆ ಉತ್ತರ. ಸುಖವು ದೊರೆಯದಿದ್ದರೆ ಮನುಷ್ಯನು ಆಯಾ ಕಾರ್ಯವನ್ನು ಎಂದೂ ಮಾಡನೆಂದು ಆ ಋುಷಿಯ ಅಭಿಪ್ರಾಯವು. ಹಾಗಾದರೆ ಸುಖವು ಎಲ್ಲಿದೆ ? ಅನಂತನ ದರ್ಶನದಲ್ಲಿ, ಎಂದು ಅವನ ಹೇಳಿಕೆ. ಇದೊಂದೆ ಹಿರಿದಾದ ಹಿಗ್ಗು, ಉಳಿದುದೆಲ್ಲ ಕಿರಿ ಹಿಗ್ಗು. ಆ ಹಿರಿಹಿಗ್ಗಿನ ಹೊರತು ಉಳಿದುದಕ್ಕೆ ಬೆಲೆಯಿಲ್ಲ. ಈ ಋುಷಿಯ ಅಭಿಪ್ರಾಯದಂತೆ ಹಿಗ್ಗಿನಲ್ಲಿ ಹಿರಿದು ಕಿರಿದೆಂದು ತತ್ವತಃ ತೀರ ಬೇರೆ ಎರಡು ಜಾತಿಗಳುಂಟು. ಹಿರಿಯ ಹಿಗ್ಗು ಆತ್ಮನನ್ನು ಕಾಣುವದರಲ್ಲಿದೆ, ಕೇಳುವದರಲ್ಲಿದೆ, ಧ್ಯಾನಿಸುವದರಲ್ಲಿದೆ. ಹಿರಿಯ ಹಿಗ್ಗು ಅಳಿವಿಲ್ಲದ್ದು, ಕಿರಿಯ ಹಿಗ್ಗು ಕೊನೆಯುಳ್ಳದ್ದು. ಹಿರಿಯ ಹಿಗ್ಗು ಏನನ್ನೊಳಗೊಂಡಿದೆ, ಎಂದು ಕೇಳಿದರೆ ಹಿರಾಕ್ಲಿಟಸ್ಸನ ರೀತಿಯಲ್ಲಿ ಅದು ತನ್ನ ಹಿರಿತನವನೊಳಗೊಂಡಿದೆ, ಅಥವಾ ಒಂದು ವೇಳೆ ತನ್ನ ಹಿರಿತನದ ಮೇರೆಯನ್ನು ಮಿಕ್ಕಿದೆ, ಎಂದು ಉತ್ತರ ದೊರೆಯಬಹುದು. ಆನೆ ಕುದುರೆಗಳು, ಆಳು ಆವುಗಳು, ಹೊನ್ನು ಹೆಣ್ಣುಗಳು ಮಣ್ಣುಮನೆಗಳು, ಇವುಗಳ ಒಡೆತನದಲ್ಲಿ ಹಿಗ್ಗುಂಟೆಂದು ಜನರ ಅಭಿಪ್ರಾಯವು; ಆದರೆ ತನ್ನ ಮತವು ಹಾಗಿಲ್ಲವೆಂದು ಸಾರಿ ಈ ಋುಷಿಯು ಹೇಳುವದೇನಂದರೆ, 'ಅವು ಎಲ್ಲ ಬೇರೊಂದರಲ್ಲಿವೆ, ಆದರೆ ಅನಂತವು ಮಾತ್ರ ತನ್ನಲ್ಲಿ ತಾನಿದೆ. ಅನಂತನು ಮೇಲೆ ಕೆಳಗೆ, ಹಿಂದೆ ಮುಂದೆ, ಎಡಬಲಕ್ಕೆ, ಎಲ್ಲವೂ ಅವನೇ ಅವನು, ಎಂಬ ಅನುಭವವು ಬರುವುದು. 'ನಾ' 'ನಾ' ಎಂದುಕೊಳ್ಳುವ ಹಮ್ಮು ಹರಿದು ಹಬ್ಬಿ ಮೇಲೆ ಕೆಳಗೆ,

ಹಿಂದೆಮುಂದೆ, ಎಡಬಲಕ್ಕೆ ಎಲ್ಲವೂ ಆತ್ಮವೆ ಆತ್ಮವೆಂಬ ಸಾಕ್ಷಾತ್ಕಾರವಾಗಲು, ನೆಲೆಯಿಲ್ಲದಂತಹ ಹಿರಿ ಹಿಗ್ಗು ದೊರೆವುದು. ಇಂತು ಅನಂತ, ನಾನು, ಹಾಗೂ ಆತ್ಮ ಈ ಮೂರು ವಸ್ತುಗಳ ಐಕ್ಯವನ್ನು ಅನುಭವಿಸಿದವನಿಗೇ ಅಂದರೆ ಸೋಽಹಮಾತ್ಮಾಎಂಬ ಮಂತ್ರ ರಹಸ್ಯವನ್ನು ಅನುಭವಿಸಿದವನಿಗೆ ಮಾತ್ರ ಈ ಹಿರಿದಾದ ಹಿಗ್ಗು ಉಣ್ಣಲಿಕ್ಕೆ ಸಿಗುವದು. ಇದನ್ನು ಕಣ್ಣಾರೆ ಕಾಣುವವನು, ಬಗೆಯುವವನು, ಧ್ಯಾನಿಸುವವನು, ಸ್ವರಾಜ್ಯದ ಅಧಿಪತಿ ( ಸ್ವರಾಟ್ ) ಆಗುತ್ತಾನೆ. ಅವನು ಆತ್ಮನಲ್ಲಿ ನಲಿವನು, ಆತ್ಮನ ಒಡನಾಡಿಯಾಗುವನು, ಆತ್ಮನೊಡಗೂಡುವನು, ಆತ್ಮಾನಂದಿಯಾಗುವನು ( ಛಾಂ, ಅ ೭, ಖಂ ೨೨-೨೫ ). ಈ ಬಗೆಯಾಗಿ ಮೂರೂ ವಸ್ತುಗಳ ಸಮ್ಯಗೈಕ್ಯದ ಅನುಭಾವದಲ್ಲಿಯೆ ಅಂದರೆ ಸೋಽಹಮಾತ್ಮಾ ಎಂಬುದರ ಗುಟ್ಟನ್ನರಿಯುವದರಲ್ಲಿಯೆ ನೈತಿಕ ಪರಮಾವಸ್ಥೆಯುಂಟೆದೂ, ಸಾಧಕನು ಅನನ್ಯ ಪ್ರಯತ್ನದಿಂದ ಸಾಧಿಸತಕ್ಕ ಗುರಿಯೂ ಇದುವೆ ಎಂದೂ ಛಾಂದೋಗ್ಯವು ಸಾರುತ್ತದೆ.

೧೫. **ಅತೀತವಾದವು**—ಉಪನಿಷತ್ತುಗಳಲ್ಲಿ ಉಲ್ಲೇಖಿತವಿರುವ ಇನ್ನೊಂದು ನೈತಿಕ ಅವಸ್ಥೆಯ ವಿಚಾರಮಾಡುವುದೂ ಅವಶ್ಯವು. ಇದು ಅದ್ವೈತ ಸಿದ್ಧಾಂತದ ಇನ್ನೊಂದಂಗವಾದ ಅತೀತವಾದವು. ನೀತಿ ಅನೀತಿ, ವಿಧಿನಿಷೇಧ ಎಂಬ ಬಂಧನಗಳಾಚೆ ಇರುವ ಸ್ಥಿತಿಗೆ ಅತೀತಸ್ಥಿತಿ, ಮುಕ್ತಸ್ಥಿತಿ ಎಂಬ ಹೆಸರು. ಬ್ರ್ಯಾಡ್ಲೇ ಹಾಗೂ ನೀತ್ಶೇ ಇವರು ಮಾಡಿದ ಅತೀತಸ್ಥಿತಿಯ ವರ್ಣನೆಗಳು ಒಂದರಿಂದೊಂದು ಬೇರೆ. ಅದರಂತೆ ಉಪನಿಷತ್ಕಾರರು ಹೇಳಿದ ಈ ಸ್ಥಿತಿಯ ವರ್ಣನೆಯು ಅವರಿಬ್ಬರಿಂದಲೂ ಬೇರೆ. ಈ ಅವಸ್ಥೆಯಲ್ಲಿ ಸರ್ವಶಕ್ತಿಮಂತನಾದ ಪುರುಷನು ಬಂಧನಗಳನ್ನು ಪಾಲಿಸಲೊಪ್ಪದೆ ನೀತಿ ಅನೀತಿಗಳನ್ನು ಮೀರಿನಿಲ್ಲುವನೆಂದು ನೀತ್ಶೇನ ಹೇಳಿಕೆ. ಈ ಅತೀತಸ್ಥಿತಿಯು ಪುರುಷೋತ್ತಮನಲ್ಲಿ ಮಾತ್ರ ಉಂಟೆಂದು ಬ್ರ್ಯಾಡ್ಲೇನ ಅಭಿಪ್ರಾಯವು. ಆದರೆ ಪುರುಷ ಹಾಗೂ ಪುರುಷೋತ್ತಮ ಇವರಿಬ್ಬರಲ್ಲಿಯೂ ಅತೀತಸ್ಥಿತಿಯುಂಟೆಂದೂ ಪುರುಷೋತ್ತಮಯೋಗವು ಸಾಧಿಸಿದ ಮಟ್ಟಿಗೆ ಪುರುಷನಿಗೆ ಅತೀತಸ್ಥಿತಿಯು ಪ್ರಾಪ್ತವಾಗುವದೆಂದೂ ಉಪನಿಷತ್ತುಗಳ ಮತವು. 'ಪರಮಾತ್ಮನು ಧರ್ಮಾಧರ್ಮ, ಕರ್ಮಾಕರ್ಮ ಹಾಗೂ ಭೂತ ಭವಿಷ್ಯತ್ತುಗಳ ತೊಡಕಿನಾಚೆಗೆ ಇರುವನು' ( ಕಠ, ಅ ೧, ವ ೨, ಮಂ ೧೪ ) ಎಂದು ಅವುಗಳ ಆಶಯವು. ದೇಹರಹಿತನಾದ ಆತ್ಮನಿಗೆ ಬೇಕು-ಬೇಡಗಳು ಸೋಂಕವು, ( ಛಾಂ, ಅ ೮, ಖಂ ೧೨, ಮಂ ೧ ) ಎಂದು ಛಾಂದೋಗ್ಯವು ಮೇಲಿನ ಮಾತನ್ನೆ ಎತ್ತಿ ಹಿಡಿಯುತ್ತದೆ. ಮುಂಡಕೋಪನಿಷತ್ತಿನಲ್ಲಿ ಇದಕ್ಕೆ ಪೂರಕವಾಗಿ ಹೀಗೆ ಹೇಳಿದೆ, 'ಒಡೆಯನೂ, ಎಲ್ಲವನ್ನಾಳುವವನೂ ಆದ ಹೊಂಬಣ್ಣದ ಪುರುಷೋತ್ತಮನನ್ನು ಕಣ್ಣಾರೆ

ಕಂಡು ಅವನೊಡನೆ ಒಂದುಗೂಡಿದನೆಂದರೆ ಜೀವನು ತಿಳಿಯಾಗುವನು, ಪುಣ್ಯಪಾಪಗಳಿಂದ ಪಾರಾಗಿ ನಿರಂಜನನಾಗುವನು, ನಿರ್ಲಿಪ್ತನಾಗುವನು ; ಅಂದರೆ ಒಳಿತು ಕೆಡಕು, ನೀತಿ ಅನೀತಿಗಳ ಬಂಧನಗಳ ಆಚೆಗೆ ಹೋಗುವನು ' ( ಮುಂ ೩, ಖಂ ೧, ಮಂ ೩ ). ಬೃಹದಾರಣ್ಯಕದಲ್ಲಿ ಇದರಂತೆಯೆ ಹೇಳಿರುವುದೇನಂದರೆ, ' ನಮ್ಮೆದೆಯ ಇಂಬಿನಲ್ಲಿ ಪವಡಿಸಿರುವವನೂ ಎಲ್ಲದರ ಅರಸನೂ ಎಲ್ಲವನ್ನಾಳುವವನೂ ಆದ ಆತ್ಮನು ಒಳ್ಳೆ ಕೆಲಸಗಳಿಂದ ಹಿರಿದೂ ಆಗುವದಿಲ್ಲ, ಕೆಡಕು ಕೆಲಸಗಳಿಂದ ಕಿರಿದೂ ಆಗುವದಿಲ್ಲ. ಈ ಆತ್ಮನ ನಿಧಿಧ್ಯಾಸ ಮಾಡುವವನು ಆತ್ಮನಂತೆಯೆ ಆಗುತ್ತಾನೆ. ಅವನು ಒಳ್ಳೆಕೆಲಸಗಳಿಂದ ಉಬ್ಬುವದಿಲ್ಲ, ಕೀಳ್ಗೆಲಸಗಳಿಂದ ಉಡುಗುವದಿಲ್ಲ' (ಬೃ, ಅ ೪, ಬ್ರಾ ೪, ಮಂ ೨೨,೨೩). ತತ್ವದೃಷ್ಟಿಯಿಂದ ಆತ್ಮನು ಎಂದಿಗೂ ತ್ರಿಗುಣಾತೀತನು, ದ್ವಂದ್ವಾತೀತನು. ಒರ್ವ ನೀತಿವಂತನಾದರೂ ಆತ್ಮೈಕ್ಯವನ್ನು ಹೊಂದಿದಮಟ್ಟಿಗೆ, ಆತ್ಮಸಾಕ್ಷಾತ್ಕಾರವನ್ನು ಪಡೆದಮಟ್ಟಿಗೆ, ತಾನೂ ಒಳಿತು ಕೆಡಕುಗಳಾಚೆಗೆ ಹೋಗಿ ಅತೀತನಾಗುವನು ಎಂಬುದೆ ಇದೆಲ್ಲದರ ಮಥಿತಾರ್ಥವು.

## ೩. ವ್ಯಾವಹಾರಿಕ ನೀತಿ

**೧೬. ಬೃಹದಾರಣ್ಯಕದಲ್ಲಿಯ ಸದ್ಗುಣಗಳ ಪಟ್ಟಿ—** ಈ ಮೇರಿಗೆ ಉಪನಿಷತ್ತುಗಳಲ್ಲಿ ಉಲ್ಲೇಖಿತವಾಗಿರುವ ನೈತಿಕ ವಿಧಿ ಮತ್ತು ನೈತಿಕ ಆದರ್ಶಗಳನ್ನು ಕುರಿತು ವಿವೇಚಿಸಿದ್ದಾಯಿತು. ಇನ್ನು ನೀತಿಯ ವ್ಯಾವಹಾರಿಕ ಅಂಗದ ಬಗ್ಗೆ ಬೇರೆ ಬೇರೆ ಉಪನಿಷತ್ತುಗಳಲ್ಲಿ ಇದ್ದ ಗುಣಗಳ ವಿವರ ಮತ್ತು ಅವುಗಳ ಉಪದೇಶ ಇದರ ಕಡೆಗೆ ನೋಡುವ. ಬೃಹದಾರಣ್ಯಕವು ಮೊದಲಿಗೆ ಮೂಲಭೂತವಾಗಿರುವ ದಮನ, ದಾತೃತ್ವ, ದಯೆ ಎಂಬ ಮೂರು ಗುಣಗಳನ್ನು ಎಣಿಕೆಯಲ್ಲಿ ತಕ್ಕೊಳ್ಳುತ್ತದೆ. ' ಒಂದಾನೊಂದು ಸಮಯದಲ್ಲಿ ಪ್ರಜಾಪತಿಯ ಮಕ್ಕಳಾದ ದೇವರು, ಮನುಷ್ಯರು, ಮತ್ತು ದೈತ್ಯರು ತಮ್ಮ ತಂದೆಯಕಡೆಗೆ ಹೋದರು ; ತನಗಿರುವ ಜ್ಞಾನವನ್ನು ತಮಗೆ ಕಲಿಸಬೇಕೆಂದು ಅವನನ್ನು ಬಿನ್ನವಿಸಿದರು. ಪ್ರಜಾಪತಿಯು ದೇವರಿಗೆ ' ದ ' ಎಂದು ನುಡಿದು, ನಿಮಗೆ ಇದರರ್ಥವು ಹೊಳೆಯಿತೆ, ಎಂದು ಕೇಳಿದನು. ನೀನು ನಮಗೆ ದಮನ ಮಾಡಲಿಕ್ಕೆ ಹೇಳಿರುವಿ, ಎಂದು ಆಗ ದೇವತೆಗಳು ಉತ್ತರಕೊಟ್ಟರು. ಅದನ್ನು ಕೇಳಿ ಅವನು ಸಂತುಷ್ಟನಾದನು. ಮನುಷ್ಯರಿಗೂ ' ದ ' ಎಂದೇ ಹೇಳಿ, ನಿಮಗೆ ತಿಳಿಯಿತೆ, ಎಂದುದಕ್ಕೆ ಅವರು, ದಾತೃಗಳಾಗಲು ಉಪದೇಶಿಸಿರುವಿ, ಎನ್ನಲು ಅವನು ಆನಂದಿತನಾದನು.

ಬಳಿಕ ದೈತ್ಯರಿಗೂ ಹಾಗೆಯೆ ' ದ ' ಎಂದುಸುರಿ, ನಿಮಗಿದರ ಗುಟ್ಟು ಗೊತ್ತಾಯಿತೆ, ಎಂದು ಕೇಳಲು ಅವರು, ದಯಾಧರ್ಮಿಗಳಾಗಲಿಕ್ಕೆ ನೀನು ಆದೇಶಿಸುವಿ, ಎನ್ನಲು ಅವನು ಹಿಗ್ಗಿದನು ' ( ಬೃ, ಅ ೫, ಬ್ರಾ ೨, ಮಂ ೧–೩ ). ಪ್ರಜಾಪತಿಯು, ಮೂವರು ಜಿಜ್ಞಾಸುಗಳ ಪ್ರಶ್ನೆಗಳಿಗೆ ಒಂದೇ ಮಂತ್ರೋಪದೇಶವನ್ನು ಮಾಡಿದ್ದರೂ ಅವರು ತಮ್ಮ ತಮ್ಮ ಬುದ್ಧಿಗನುಸಾರವಾಗಿ ಬೇರೆ ಬೇರೆ ಅರ್ಥಗಳನ್ನು ಮಾಡಿಕೊಂಡರು. ಮತ್ತು ತಮ ತಮಗೆ ಅತ್ಯವಶ್ಯಕವಾದ, ಯೋಗ್ಯವಾದ ಕಾರ್ಯವಾವುದೆಂಬದನ್ನು ಅರಿತುಕೊಂಡರು. ಈ ಉಪನಿಷತ್ತಿನಲ್ಲಿಯೆ ಮುಂದೆ ಹೇಳಿರುವದೇನಂದರೆ, ' ದಿವ್ಯಧ್ವನಿಯಾದ ಗುಡುಗಿನಲ್ಲಿ ದ, ದ, ದ, ಎಂದು ಕೇಳಬರುವಾಗ ದಮನ, ದಾತೃತ್ವ, ದಯೆ ಇವುಗಳನ್ನಾಚರಿಸಿರಿ ಎಂಬ ಉಪದೇಶದ ಮಾರ್ದನಿಯು ಕೇಳಬರುತ್ತದೆ. ' ಸತ್ವ–ರಜ–ತಮಃ ಪ್ರಧಾನವಾದ ವೃತ್ತಿಯವರಿಗೆ ಅನುಕ್ರಮವಾಗಿ ಮೇಲಣ ಮೂರು ಮೂಲಗುಣಗಳು ಬೇಕೆಂದು ಇದರ ಅರ್ಥವು. ಸಮಾಜದಲ್ಲಿ ದೇವರಹಾಗೆ ದೈವುಳ್ಳವರಿಗೆ, ' ಆತ್ಮಸಂಯಮನಮಾಡಿರಿ ; ಇಲ್ಲದಿದ್ದರೆ ನೀವು ನಿಮ್ಮ ದೊಡ್ಡಸ್ತಿಕೆಯ ಮೂಲಕ ಮಂದಿಗೆ ದುಃಖಕೊಡಬಹುದು, ' ಎಂದು ಆರ್ಷಮಂತ್ರೋಪದೇಶವು ; ಮಾನವರಂತೆ ಸರಿಸಮಾನ ಯೋಗ್ಯತೆಯಿದ್ದವರಿಗೆ, ' ದಾತೃತ್ವಭಾವವುಳ್ಳವರಾಗಿರಿ, ನಿಮ್ಮ ಬಂಧುಗಳನ್ನು ಪ್ರೀತಿಸಿರಿ, ' ಎಂಬ ಆರ್ಷಸಂದೇಶವು ; ಅಳವಿಗಳಿಂದ ಕೇಡು ಮಾಡುವ ಬಿಗುವು ಇರುವ ದೈತ್ಯರಂತಹರಿಗೆ, ' ದಯಾಧರ್ಮಿಗಳಾಗಿರಿ, ಯಾರೊಡನೆ ನೀವು ಕ್ರೂರತನದಿಂದ ನಡೆಯಬಹುದೊ ಅವರೊಡನೆ ಕನಿಕರದಿಂದ ವರ್ತಿಸಿರಿ, ' ಇಂತು ಆರ್ಷ ಆದೇಶವು ; ಹೀಗೆ ಬೇರೆ ಬೇರೆ ಮನೋವೃತ್ತಿಯವರಿಗೆ ಅವರವರಿಗೆ ಅನುಗುಣವಾದ ದಮನ, ದಾತೃತ್ವ, ದಯೆ ಎಂಬೀ ಮೂರು ಮುಖ್ಯಗುಣಗಳು ಅವಶ್ಯವಾಗಿವೆಯೆಂದು ಇಲ್ಲಿ ಹೇಳಲ್ಪಟ್ಟಿದೆ.

**೧೬. ಛಾಂದೋಗ್ಯದಲ್ಲಿ ಹೇಳಿರುವ ಸುಗುಣ ದುರ್ಗುಣಗಳು—** ಇದು ಬೃಹದಾರಣ್ಯಕದ ಮಾತಾಯಿತು. ಇನ್ನು ಛಾಂದೋಗ್ಯೋಪನಿಷತ್ತು. ಅದರಲ್ಲಿ ಘೋರ ಆಂಗಿರಸ ಮತ್ತು ದೇವಕಿಯ ಮಗ ಕೃಷ್ಣ ಇವರ ಸಂವಾದದಲ್ಲಿ ಗುಣಗಳ ಬೇರೆ ಒಂದು ಪಟ್ಟಿಯೆ ದೊರೆಯುತ್ತದೆ. ಈ ಕೃಷ್ಣನಾರು, ಆ ಘೋರ ಆಂಗಿರಸನು ಕೃಷ್ಣನಿಗೆ ಉಪದೇಶಿಸಿದ್ದರ ಮಥಿತಾರ್ಥವೇನು ಎಂಬುದನ್ನು ಕುರಿತು ಹಿಂದಿನ ಒಂದು ಅಧ್ಯಾಯದಲ್ಲಿ ವಿವೇಚಿಸಿದೆ. ಇಲ್ಲಿ ಆಂಗಿರಸನ ಎಣಿಕೆಯಲ್ಲಿ ಬಂದ ಗುಣಗಳ ಪಟ್ಟಿಯನ್ನುಕೊಟ್ಟು ಅದರ ನೈತಿಕ ಮಹತ್ವವನ್ನು ತೋರಿಸತಕ್ಕದ್ದಿದೆ. ತಪಸ್ಸು, ದಾನ, ಆರ್ಜವ, ಅಹಿಂಸೆ ಮತ್ತು ಸತ್ಯವಚನ ಎಂಬಿವು ಮನುಷ್ಯನಲ್ಲಿ ಮುಖ್ಯವಾಗಿರಬೇಕಾದ ಗುಣಗಳು, ಎಂದು ಘೋರ ಆಂಗಿರಸನು ಹೇಳುತ್ತಾನೆ ( ಛಾಂ, ಅ ೩, ಖಂ ೧೭, ಮಂ ೪ ). ಈ ಗುಣಗಳ

ಎಣಿಕೆಯು ಭಗವದ್ಗೀತೆ (ಅ ೧೬ಮಂ೧–೨) ಯಲ್ಲಿ ಬಂದಿರುವ ಗುಣಗಳ ಎಣಿಕೆಗೆ ಹೇಗೆ ಹೋಲುತ್ತದೆಂಬುದರ ವಿಚಾರವು ಈ ಮೊದಲೆ ಆಗಿದೆ. ಛಾಂದೋಗ್ಯದ ಮುಂದಿನ ಒಂದು ಅಧ್ಯಾಯದಲ್ಲಿ ಮನುಷ್ಯನು ಮಾಡಬಹುದಾದ ಪಂಚಮಹಾಪಾತಕಗಳ ಉಲ್ಲೇಖವಿದೆ. ಅದು ಹೀಗೆ, 'ಹೊನ್ನುಗಳ್ಳನು, ಹೆಂಡಗುಡಕನು, ಗುರುವಿನ ಹಾಸಿಗೆಯನ್ನು ಹೊಲ್ಲ ಮಾಡುವವನು (ಗುರುತಲ್ಪಗ), ಬ್ರಹ್ಮಘಾತಕನು, ಈ ನಾಲ್ವರೂ ಕೀಳ್ಮೆಯನ್ನೈದುವರು ; ಇವರೊಡನೆ ಸಂಬಂಧವಿರುವ ಐದನೆಯವನೂ ಅದೇ ಗತಿಯನ್ನು ಹೊಂದುವನು.' (ಛಾಂ, ಅ ೫, ಖಂ ೧೦, ಮಂ ೯). ಉಪನಿಷತ್ಕಾರರು ಎಂತಹ ಪಾಪಕರ್ಮಗಳಿಗೆ ಪಂಚಮಹಾಪಾತಕಗಳೆನ್ನುತ್ತಿದ್ದರೆಂಬದು ಮೇಲಣ ಉಲ್ಲೇಖದಿಂದ ತಿಳಿಯುತ್ತದೆ. ಕಳ್ಳ, ಕುಡಕ, ಹಡಕ, ಬ್ರಾಹ್ಮಣನ ಕೊಲೆಗಡಕ ಹಾಗೂ ಇವರೊಡನೆ ನಡೆಕ ಇವರೈವರು ಪಂಚಮಹಾಪಾತಕಿಗಳು, ಇವರೆಲ್ಲರು ವಧಾರ್ಹರು. ಬಹುತರ ಈ ಶಬ್ದಗಳಲ್ಲಿಯೆ ಮನು ಹಾಗೂ ಯಾಜ್ಞವಲ್ಕ್ಯರು (೩, ೫, ೨೨೭) ಮುಂದೆ ಪಂಚಮಹಾಪಾತಕಗಳಾವವೆಂಬುದನ್ನು ಬಣ್ಣಿಸಿದ್ದಾರೆ.

**೧೮. ತೈತ್ತಿರೀಯದೊಳಗಿನ ಆದೇಶಪರ ಕಟ್ಟಪ್ಪಣೆಗಳು**—ತೈತ್ತಿರೀಯೋಪನಿಷತ್ತಿನಲ್ಲಿ ಇರುವಷ್ಟು ಕಟ್ಟಪ್ಪಣೆಗಳು ಬೇರೆ ಆವ ಉಪನಿಷತ್ತಿಲ್ಲಿಯೂ ಇಲ್ಲ. ಇದರಲ್ಲಿ ಅಧಿಕಾರವಾಣಿಯಿಂದ ಉಪದೇಶ ಮಾಡಿದ ಸೊಲ್ಲು ಕೇಳಬರುತ್ತದೆ. ಗುರುವಿನ ಅಧಿಕಾರದಿಂದಲೆ ಅನೇಕ ಸದ್ಗುಣಗಳನ್ನು ಅನುಸರಿಸಲು ಇಲ್ಲಿ ಒತ್ತೊತ್ತಿ ಹೇಳಿದೆ. 'ವೇದಗಳನ್ನು ಕಲಿ, ಹಾಗೂ ಕಲಿಸು' ಎಂಬುದೆ ಆ ಆದೇಶದ ಪಲ್ಲವಿಯು. 'ಧರ್ಮವನ್ನಾಚರಿಸು, ಸತ್ಯವನ್ನು ನುಡಿ, ತಪಸ್ಸಿನಲ್ಲಿರು, ಇಂದ್ರಿಯದಮನಮಾಡು, ಶಾಂತಿಯನ್ನು ತಾಳು. ಆಹಿತಾಗ್ನಿಯಾಗು, ಅಗ್ನಿಹೋತ್ರಮಾಡು, ಅತಿಥಿಸತ್ಕಾರಕ್ಕೆ ತಪ್ಪದಿರು, ಮನುಷ್ಯತ್ವವನ್ನೂ ಕರುಣೆಯನ್ನೂ ಬಿಡದಿರು, ಹುಟ್ಟಿಸು ಹಾಗು ಹೆಚ್ಚುಮಾಡು' ಎಂಬ ಆದೇಶಗಳಿವೆ. ಈ ಉಪನಿಷತ್ತಿನಲ್ಲಿ ಮೂರು ನಯಶಾಸ್ತ್ರವಿದರ ಉಲ್ಲೇಖವಿದ್ದು ಅವರಲ್ಲಿ ಪ್ರತಿಯೊಬ್ಬನೂ ತನ್ನದೊಂದು ಸದ್ಗುಣವನ್ನು ಆಚರಿಸಲು ವಿಶೇಷ ಆಸ್ಥೆಯಿಂದ ಉಪದೇಶಿಸಿರುವನು. ಸತ್ಯವಚನೀರಾಥೀತರನು ಸತ್ಯವನ್ನು ಕಲಿಸುತ್ತಾನೆ. ತಪೋನಿತ್ಯಪೌರೂಶಿಷ್ಟನು ತಪಸ್ಸಿಗೆ ಹೆಚ್ಚು ಮಹತ್ವಕೊಡುತ್ತಾನೆ. ಮೂರನೆಯವನಾದ ನಾಕಮೌದ್ಗಲ್ಯನು ವೇದದ ಅಧ್ಯಯನಅಧ್ಯಾಪನಗಳಿಗಿಂತ ಹೆಚ್ಚಿನ ಸದ್ಗುಣವೆ ಇಲ್ಲ, ಯಾಕಂದರೆ ತಪಸ್ಸಿನ ಉದ್ದೇಶವು ಸ್ವಾಧ್ಯಾಯ ಪ್ರವಚನಗಳೇ ಎಂದು ಹೇಳುತ್ತಾನೆ (ತೈ, ವ ೧, ಅ ೯). ಇದೇ ಉಪನಿಷತ್ತಿನಲ್ಲಿ ಸ್ವಲ್ಪ ಮುಂದಿನ ವಚನಗಳಲ್ಲಿಯೆ ಅಧ್ಯಯನ ತೀರಿಸಿಕೊಂಡು ಹೊರಬೀಳುವ ಆಶ್ರಮಿಗಳಿಗೆ ಗುರುಗಳು ಮಾಡಿದ ಪ್ರತ್ಯಕ್ಷ ಉಪದೇಶವೊಂದುಂಟು. ಅದರಲ್ಲಿ

ವಿದ್ಯಾರ್ಥಿಗಳಿಗೆ ಗುರುಗಳ ಆದೇಶಗಳಾವವೆಂದರೆ, ‘ ಸತ್ಯವನ್ನು ನುಡಿ, ಧರ್ಮದಂತೆನಡೆ, ವೇದಾಭ್ಯಾಸಕ್ಕೆ ತಪ್ಪಬೇಡ, ಗುರುಗಳು ನಲಿವ ಗುರುದಕ್ಷಿಣೆಯುವರಿಗಿತ್ತು ಮದುವೆಯಾಗು, ಮನೆತನದ ಬಳ್ಳಿಯನ್ನು ಹಬ್ಬಿಸು, ಸುರುಟ ಮುರುಟ ನಿಲ್ಲಿಸಗೊಡಬೇಡ; ’ ಶಿಷ್ಯರಿಗೆ ಮತ್ತೆ ಬೋಧಿಸಿರುವವೇನಂದರೆ, ‘ದೇವಪಿತೃಕಾರ್ಯಗಳಿಗೆ ತಪ್ಪಲಾಗದು, ತಾಯಿಯು ದೇವಿಯೆಂದು ತಿಳಿ, ತಂದೆಯು ದೇವನೆಂದು ಭಾವಿಸು, ಗುರುವು ದೇವರೆಂದು ನಂಬು, ಅತಿಥಿಯು ದೇವರೆಂದು ಅರಿ. ’ ಸಮಾಜವು ಶುದ್ಧವೆಂದೆಣಿಸುವ ಕೆಲಸಗಳನ್ನೆ ಕೈಕೊಳ್ಳಿರೆಂದು ಸಾಮಾನ್ಯವಾಗಿ ಶಿಷ್ಯರಿಗೆ ಗುರುಗಳು ಹೇಳಿದ್ದಾರೆ. ಅವರಲ್ಲಿರುವ ಉಪದೇಶವೇನಂದರೆ, ‘ ನಮ್ಮಿಂದ ಹೆಚ್ಚಿನವರಾರಾದರೂ ಅನುಭಾವಿಗಳು ಬಂದರೆ ಎದ್ದು ಅವರನ್ನು ಬರಮಾಡಿಕೊಂಡು ಆಸನವನ್ನು ಕೊಡಬೇಕು. ’ ( ಇಲ್ಲಿ ಆಸನಕೊಡಬೇಕು, ಎಂಬರ್ಥವುಳ್ಳ ಪದಕ್ಕೆ ‘ ಇಂತಹರ ಎದುರಿನಲ್ಲಿ ಶಿಷ್ಯನು ಏನನ್ನೂ ಉಸುರಲಾಗದು ’ ಎಂದು ಶಬ್ದಶಃ ಅರ್ಥವನ್ನು ಕೆಲರು ಮಾಡುವರು ) ಕಟ್ಟಕಡೆಗೆ ಯಾವಬಗೆಯಿಂದ ದಾನ ಮಾಡಬೇಕು ಎಂಬುದನ್ನು ಉಪದೇಶಿಸುತ್ತಾರೆ. ‘ ನಂಬಿಗೆಯಿಂದ ಕೊಡಬೇಕು, ನಂಬದೆ ನಚ್ಚದೆ ಕೊಡಲಾಗದು; ದೊಡ್ಡಿತೆಯಿಂದೀಯಬೇಕು, ನಾಚುತ್ತ ನಲಿಯುತ್ತ ಕೊಡಬೇಕು, ಅಂಜುತ್ತ ಅಳುಕುತ್ತ ಕೊಡಬೇಕು, ಸಹ–ಅನುಭೂತಿಯಿಂದ ಕೊಡಬೇಕು.’ (ತೈ, ವ ೧, ಅ ೧೧, ಮಂ ೧–೩ ). ಇಂತು ಇವರಿಂದ ತೈತ್ತಿರೀಯೋಪನಿಷತ್ಕಾರರು ನೀತಿಯ ವ್ಯವಹಾರಿಕ ಗುಣಗಳ ಎಣಿಕೆಯನ್ನು ಹೇಗೆಮಾಡಿರುವರೆಂಬದು ಕಂಡು ಬರುತ್ತದೆ.

೧೯. **ಸತ್ಯವೆ ಸದ್ಗುಣಗಳಲ್ಲಿ ಶ್ರೇಷ್ಠವು**— ಉಳಿದೆಲ್ಲ ಸದ್ಗುಣಗಳಿಗಿಂತಲೂ ಸತ್ಯದಲ್ಲಿ ಉಪನಿಷತ್ಕಾರರಿಗೆ ಪಕ್ಷಪಾತ ಬಹಳ. ಹಲವು ಉಪನಿಷತ್ತುಗಳಲ್ಲಿ ಅಲ್ಲಲ್ಲಿಗೆ ದೊರೆಯುವ ವಚನಗಳಿಂದ ಈ ಮಾತಿನ ಮನವರಿಕೆಯಾಗಬಹುದು. ಅರಸುಗದ್ದಿಗೆಯ ಮೇಲೆ ಕುಳಿತು ರಾಜಪ್ರತಿನಿಧಿಗಳೆನಿಸುವ ಈಗಿನ ಕೆಲವು ಉದ್ದಾಮ ರಾಜಾಧಿಕಾರಿಗಳು, ಶ್ರೇಷ್ಠಸದ್ಗುಣವೆನಿಸುವ ಸತ್ಯವನ್ನು ಕುರಿತು ಹಿಂದೂ ಧರ್ಮಗ್ರಂಥಗಳಲ್ಲಿ ವಿವೇಚನೆ ಮಾಡಿದಂತೆ ಕಂಡುಬರುವದಿಲ್ಲವೆಂದು ಬಾಯ್ಮಾಡುವರು ; ಅವರು ಹೀಗೆ ಬರಿದೆ ಬಾಯ್ಬಿಡುವ ಮೊದಲು ಉಪನಿಷತ್ತುಗಳ ಅಭ್ಯಾಸಮಾಡಿದ್ದರೆ ಚೆನ್ನಾಗುತ್ತಿತ್ತು. ಯಾಕಂದರೆ ಸತ್ಯವೆ ಸರ್ವಶ್ರೇಷ್ಠಸದ್ಗುಣವೆಂದು ಅವುಗಳು ಕಂಠರವದಿಂದ ಬೋಧಿಸುತ್ತವೆ. ಛಾಂದೋಗ್ಯೋಪನಿಷತ್ತಿನ ಒಂದು ಪ್ರಸಿದ್ಧವಾದ ಅಧ್ಯಾಯದಲ್ಲಿ ಒಂದು ಕಥೆಯಿದೆ. ಅದರಲ್ಲಿ ಜಬಾಲೆ ಎಂಬವಳಿಗೆ ಹರೆಯದ ಹರಿಬಿದ್ದಕಾಲದಲ್ಲಿ ಹುಟ್ಟಿದ ಸತ್ಯಕಾಮನೆಂಬವನೊರ್ವ ಮಗನಿದ್ದನು. ದೊಡ್ಡವನಾದಮೇಲೆ ತನ್ನ ತಂದೆ ಯಾರೆಂದು ಅವನು ಕೇಳಲು, ಅವಳು ನಿನಗೆ ‘ ತಂದೆ ’ ಎಂಬುವವರು ಯಾರು ಎಂಬುದು ನಿಶ್ಚಿತವಾಗಿ ಹೇಳಲಿಕ್ಕಾಗದಿದ್ದರೂ

ನನ್ನ ಬಸುರಿನಲ್ಲಿ ಹುಟ್ಟಿರುವೆಯೆಂದು ಹೇಳಿದಳು. ಸತ್ಯಕಾಮನು ಅಧ್ಯಯನಕ್ಕೆ ಗುರುಗಳ ಹತ್ತಿರ ಹೋದಾಗ ಅವರು ನೀನಾವ ಗೋತ್ರದವನೆಂದು ಅವನಿಗೆ ಪ್ರಶ್ನೆಮಾಡಿದರು. ಅದಕ್ಕೆ ತರುಣ ಸತ್ಯಕಾಮನು ತನಗೆ ತನ್ನ ಗೋತ್ರಗೊತ್ತಿಲ್ಲ, ತನ್ನ ತಾಯಿಯ ಹೆಸರು ಮಾತ್ರ ತನಗೆ ಗೊತ್ತು. ಅವಳು ಹರೆಯದ ಹರಿದಾಟದಲ್ಲಿದ್ದಾಗ ತಾನವಳ ಬಸುರಿನಲ್ಲಿ ಬಂದುದರಿಂದ ತನ್ನ ತಂದೆಯ ಹೆಸರು ಅವಳೂ ಅರಿಯಳು. ಆದ್ದರಿಂದ ತಾನೂ ಅರಿಯನೆಂದು ಪ್ರತ್ಯುತ್ತರವನ್ನಿತ್ತನು. ಆಗ ಗುರುಗಳು ಸತ್ಯಕಾಮನಿಗೆ ನುಡಿದುದೇನಂದರೆ, 'ಎಲಾ ಹುಡುಗ, ಇಂತಹ ನುಡಿಗಳನ್ನು ಅ–ಬ್ರಾಹ್ಮಣನು ಆಡಲಾರನು. ಬಾ, ನಾನು ನಿನಗೆ ಪಾಠಹೇಳುತ್ತೇನೆ ; ಯಾಕಂದರೆ ನೀನು ಸತ್ಯವನ್ನು ಬಿಡಲಿಲ್ಲ, ಬಚ್ಚಿಡಲಿಲ್ಲ' (ಛಾಂ, ಅ ೪, ಖಂ ೪, ಮಂ ೧–೫). ಸತ್ಯವನ್ನು ನುಡಿದುದರಿಂದ ಸ್ವೇಚ್ಛಾಚಾರಿಣಿಯ ಮಗನು ಸಹ ಬ್ರಾಹ್ಮಣಪದವಿಗೆ ಹೇಗೆ ಅರ್ಹನಾಗುತ್ತಿದ್ದನೆಂಬುದು ಇದರಿಂದ ಕಂಡುಬರುವಂತಿದೆ. ಸತ್ಯವು ನಿತ್ಯ (ಸಚ್ಚಿದಾನಂದ) ಸ್ವರೂಪದ ಮತ್ತೊಂದು ಅಂಗವೇ ಆಗಿರುವುದರಿಂದ ಮನುಷ್ಯನನ್ನು ಸಾವಿನಿಂದ ಉಳಿಸುವ ಸಾಮರ್ಥ್ಯವು ಸತ್ಯದಲ್ಲಿ ಉಂಟೆಂದು ಇದೇ ಉಪನಿಷತ್ತಿನಲ್ಲಿ ಹೇಳಿದೆ. 'ತುಡುಗು ಮಾಡಿದಾಗ ತುಡುಗನ ಕೈಗಳನ್ನು ಕಟ್ಟಿ ನ್ಯಾಯಸ್ಥಾನಕ್ಕೆ ತರುವರು. ಅವನಿಗಾಗಿ ಕೊಡಲಿಯನ್ನು ಕಾಸುವರು. ಅವನು ನಿಜವಾಗಿಯೆ ತುಡುಗು ಮಾಡಿದ್ದಾಗಿದ್ದರೆ ಸುಳ್ಳಾಡಿ ಅಟಮಟಗನಾಗುವನು. ಸುಳ್ಳನ್ನು ಹೊದ್ದುಕೊಂಡ ಆ ಅಟಮಟಗನು ಕಾಯ್ದು ಕೆಂಪಾದ ಕೊಡಲಿಯನ್ನು ಹಿಡಿದು ಸುಟ್ಟುಕೊಂಡು ಸಾಯುವನು. ಆದರೆ ತುಡುಗನ್ನೆ ಮಾಡಿರದಿದ್ದರೆ ಸತ್ಯವನ್ನಾಡುವನು, ಸತ್ಯವಂತನಾಗುವನು. ಸತ್ಯಸಂಧನಾದ ಈತನು ಸತ್ಯದ ಕವಚವನ್ನು ತೊಟ್ಟು ಕೆಂಪಗೆ ಕಾಯ್ದ ಕೊಡಲಿಯನು ಹಿಡಿವನು. ಅದು ಅವನನ್ನು ಸ್ವಲ್ಪವೂ ಸುಡಲಮ್ಮದು. ಆಗ ಆತನು ಸೆರೆಯಿಂದ ಬಿಡಲ್ಪಡುವನು' (ಛಾಂ, ಅ ೬, ಖಂ ೧೬, ಮಂ ೧–೨). ಪ್ರಾಚೀನಕಾಲದಲ್ಲಿ ಅಪರಾಧಿಗಳಾರು, ನ್ಯಾಯವಂತರಾರು ಎಂಬುದನ್ನು ನಿರ್ಣಯಿಸುವ ರೀತಿಯು ಇದು. ಆಧುನಿಕರು ಈ ನ್ಯಾಯವಿಚಾರಣಾಪದ್ಧತಿಯ ಗುಣಾವಗುಣಗಳ ಬಗ್ಗೆ ಏನೇ ಅನ್ನಲಿ, ಈ ಬಗೆಯ ತೀರ್ಪುಕೊಡುವ ಪದ್ಧತಿಯ ಬುಡದಲ್ಲಿ ಅವರಿಗೆ ಸತ್ಯದ ಸಾಮರ್ಥ್ಯದೊಳಗೆ ಎಷ್ಟೊಂದು ದೃಢವಿಶ್ವಾಸವಿತ್ತೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. 'ಭೀತನಾಗಬೇಡ, ಸತ್ಯಸಂಧನಾಗು. ಅಂತಃಕರಣವು ಶುದ್ಧವಿದ್ದರೆ ಹತ್ತಾಳುಗಳ ಕಸುವು ನಿನ್ನೊಬ್ಬನಲ್ಲಿ. ಆದರೆ ನಿನ್ನೆದೆಯಲ್ಲಿ ಸುಳ್ಳಿನ ಕೊಳೆಯನ್ನು ಬಚ್ಚಿಟ್ಟುಕೊಂಡಿದ್ದರೆ ನಡುಹಗಲಿನಲ್ಲಿಯೂ ಬೆಚ್ಚುತ್ತ ಬೆದರುತ್ತ ನಡೆದಾಡುವಿ,' ಎಂದು ಉಪನಿಷತ್ಕಾರರ ಉಪದೇಶವು. ಈ ತೆರನಾಗಿಯೆ ಭಾರದ್ವಾಜನು ಪ್ರಶ್ನೋಪನಿಷತ್ತಿನಲ್ಲಿ

ಉಸುರಿದ್ದಾನೆ. ಆತನು ಹೇಳುವುದೇನಂದರೆ, 'ಸುಳ್ಳನಾಡಿದರೆ ಆತನ ತುದಿಮೊದಲೆ ಲ್ಲವೂ ಬಾಡಿ ಬತ್ತುವದು. ಆದುದರಿಂದ ನಾನು ಸುಳ್ಳನಾಡಲಮ್ಮೆನು' (ಪ್ರ ೬, ಮಂ ೧). ಆದರೆ ಮುಂಡಕೋಪನಿಷತ್ತು ಸಾರುತ್ತಿರುವುದೇನಂದರೆ, 'ಸತ್ಯಕ್ಕೆ ಮಾತ್ರ ಗೆಲವುಂಟು. ಸುಳ್ಳಿಗಲ್ಲ. ದೇವರ ದಾರಿಯು ಸತ್ಯದಿಂದಲೆ ಆಗಿದೆ. ಅದರ ಕೊನೆಗೆ ಸತ್ಯದ ಸಾಗರವೇ ಉಂಟು. ಬಯಕೆಗಳು ಪೂರ್ಣವಾದ (ಆಪ್ತಕಾಮ) ಋಷಿಗಳು ಆ ದಾರಿಯನ್ನೆ ಹಿಡಿದು ನಡೆಯುತ್ತಾರೆ' (ಮುಂ ३, ಖಂ ೧, ಮಂ ೬). ಇಂತು ಸತ್ಯವೆಂಬ ನೈತಿಕ ಗುಣವು ಸಾಧಕನ ಪರಬ್ರಹ್ಮಸಿದ್ಧಿಗೆ ಒಳ್ಳೆ ನೆರವಾಗುತ್ತದೆ. ಇನ್ನು ನಾರದ ಹಾಗೂ ಸನತ್ಕುಮಾರರ ಸಂವಾದದಲ್ಲಿ ಬಂದ ಸತ್ಯದ ವಿಚಾರವು ಒಳ್ಳೆ ಬೋಧಕವಾಗಿದೆ. ಒಮ್ಮೆ ನಾರದನು ಸನತ್ಕುಮಾರ ಗುರುಗಳ ಬಳಿಗೆ ಹೋಗಿ ಸತ್ಯಸ್ವರೂಪವನ್ನು ಬೋಧಿಸಲು ಬೇಡಿಕೊಂಡನು. ಆಗ ಗುರುಗಳು ಹೇಳಿದ್ದು 'ನರನು ಪರಬ್ರಹ್ಮನನ್ನು ಅರಿತಾಗಲೆ ಸತ್ಯವನ್ನಾಡುವನು, ಅರಿಯದವನು ಹುಸಿಯಾಡುವನು, ಅರಿತವನೆ ಸತ್ಯನುಡಿಯುವನು' (ಛಾಂ, ಅ ೭, ಖಂ ೧೬, ಮಂ ೧೭). ಇದು ನಗೆಯಾಡುವವಕ್ಕಾಗಿ, ಸತ್ಯವೆಂದರೇ ನೆಂದು ಕೇಳಿ, ಪ್ರತ್ಯುತ್ತರದ ದಾರಿನೋಡದ ಪಾಯಲೇಟನ ಮಾತಿನಂತಿದೆ. ಆದರೆ ಅವರಿಬ್ಬರಲ್ಲಿಯ ಭೇದವೇನಂದರೆ, ಪಾಯಲೇಟನು ಸತ್ಯಸ್ವರೂಪದ ಬಗ್ಗೆ ಸಂಶಯ ಗೊಂಡನು; ಆದರೆ ಸನತ್ಕುಮಾರನು ಸತ್ಯಸ್ವರೂಪವನ್ನು ನಿಚ್ಚಳಾಗಿ ತಿಳಿಸಿದನು; ಪರ ಬ್ರಹ್ಮಸಿದ್ಧಿಯನ್ನು ಹೊಂದಿದವರಿಗೆ ಆತ್ಯಂತಿಕ ಸತ್ಯವು ಸಾಧ್ಯವು ಎಂದು ಅವನು ಸ್ಪಷ್ಟ ವಾಗಿ ಹೇಳಿದನು. ಜನರು ಸಾಮಾನ್ಯವಾಗಿ ಆವುದಕ್ಕೆ ಸತ್ಯವೆಂದು ಹೇಳುತ್ತಾರೊ ಅದು ನಿಜವಾದ ಸತ್ಯವಲ್ಲವೇ ಅಲ್ಲ; ಅದು ಸತ್ಯಾಭಾಸವು. ಇಂತು ಸತ್ಯವು ಆತ್ಮಸಿದ್ಧಿಗೆ ಸಂಬಂಧವಿರುವ, ಆತ್ಮಸಿದ್ಧಿಯನ್ನೊಳಕೊಳ್ಳುವ ವಸ್ತುವೆಂದು ಛಾಂದೋಗ್ಯೋಪನಿಷತ್ತು ಎಣಿಸುತ್ತದೆ.

**೨೦. ಇಚ್ಛಾಸ್ವಾತಂತ್ರ್ಯವು—** ಇನ್ನುಮುಂದೆ ಇಚ್ಛಾಸ್ವಾತಂತ್ರ್ಯದ ವಿಚಾರವು. ಇಚ್ಛಾಸ್ವಾತಂತ್ರ್ಯದ ವಿವೇಚನೆಯಾಗಬೇಕಾದರೆ ನೀತಿಶಾಸ್ತ್ರವು ಬಹಳೇ ವಿಕಾಸ ಹೊಂದಿರುವುದು ಅತ್ಯವಶ್ಯವೆಂಬುದು ಸಹಜ ತಿಳಿಯಬುವಂತಿದೆ. ಈ ವಿಚಾರದಲ್ಲಿ ಉಪನಿ ಷತ್ತುಗಳು ತಮ್ಮ ಸೂಕ್ಷ್ಮದೃಷ್ಟಿಯನ್ನು ತೋರ್ಪಡಿಸಿರುವ ಕೆಲವು ಉಲ್ಲೇಖಗಳುಂಟು; ಅವುಗಳ ಶ್ರೇಯಸ್ಸು ಉಪನಿಷತ್ಕಾರರಿಗೇ ಸಲ್ಲುವದು. ಮನುಷ್ಯನು ಕಾಮನೆ, ಕ್ರತು, ಕರ್ಮ ಇವುಗಳಿಂದೊಡಗೂಡಿರುವನೆಂದು ಬೃಹದಾರಣ್ಯಕವು ಹೇಳುತ್ತದೆ. 'ಕಾಮನೆ ಯಂತೆ ಕ್ರತು, ಕ್ರತುವಿನಂತೆ ಕರ್ಮ, ಕರ್ಮದಂತೆ ಫಲ' (ಬೃ, ಅ ४, ಬ್ರಾ ४, ಮಂ ೫). ಕಾಮನೆ, ಕ್ರತು, ಮತ್ತು ಕರ್ಮಗಳ ಪರಸ್ಪರ ಸಂಬಂಧವನ್ನು ಕುರಿತು ಇಲ್ಲಿ

ಬಹಳ ಜಾಣತನದ ಚರ್ಚೆಯಿದೆ ; ಇದು ನೈತಿಕ ವಿಚಾರಗಳಲ್ಲಿ ಬಹಳೇ ಮಹತ್ವದ ವಿಷಯವು. ಕೌಷೀತಕಿ ಉಪನಿಷತ್ತಿನಲ್ಲಿ, ಕರ್ಮಾಕರ್ಮದ ಕಡಿವಾಣಗಳು ದೇವರ ಕೈಯಲ್ಲಿ, ಎಂದು ಹೇಳಿದೆ. ' ಮನುಷ್ಯನು ಮಹಾದೇವನ ಕೈಯ್ಯಗೊಂಬೆ. ಆ ಲೋಕಪಾಲಕನು ಲೋಕದೊಡೆಯನು, ಲೋಕವನ್ನಾಳುವವನು, ಕುಣಿಸಿದಂತೆ ಕುಣಿಯುವನು ಮಾನವನು. ಅವನ ಏಳ್ಗೆ ಮಾಡಬೇಕೆಂದರೆ ದೇವನು ಅವನಿಂದ ಸತ್ಕರ್ಮಗಳನ್ನು ಮಾಡಿಸುವನು. ಅವನನ್ನು ಕೆಳಗೆ ನೂಕಬೇಕೆಂದರೆ ದುಷ್ಕರ್ಮಗಳನ್ನು ಮಾಡಿಸುವನು ' ( ಕೌ, ಅ ೩, ಮಂ ೮ ). ಯಾವುದಕ್ಕೆ ನೀತಿಶಾಸ್ತ್ರವು ಸ್ವಾತಂತ್ರ್ಯವೆನ್ನುವದೋ ಅದು ಮನುಷ್ಯನಿಗೆ ಇಲ್ಲವೇ ಇಲ್ಲವೆಂದು ಈ ಮಾತುಗಳು ಹೇಳುತ್ತವೆ. ಆದರೆ ಛಾಂದೋಗ್ಯವು ಇನ್ನೊಂದು ಬಗೆಯಾಗಿ ಹೇಳುತ್ತದೆ. ಆತ್ಮಾನುಭವದ ಮೊದಲು ಮನುಷ್ಯನಿಗೆ ನಿಜವಾದ ಸ್ವಾತಂತ್ರ್ಯವು ಇರುವದಿಲ್ಲವಾದರೂ ಅನುಭಾವಿಯಾದ ಬಳಿಕ ಅವನಿಗೆ ಸ್ವಾತಂತ್ರ್ಯವುಂಟೆಂದು ಅದರ ಅಭಿಪ್ರಾಯವು. ಸಣ್ಣ ಪುಟ್ಟ ಗೆಲವುಗಳ ಎಣಿಕೆಯಲ್ಲಿದ್ದಾಗ ಆ ಹುಚ್ಚು ವಿಚಾರದಲ್ಲಿ ಮನುಷ್ಯನು ತಾನೆಲ್ಲದರ ಒಡೆಯನೆಂದು ಭಾವಿಸುವನು ; ಬೇಕಾದ ಪರಿಸ್ಥಿತಿಯು ಬಂದರೂ ಎದೆಗೊಟ್ಟು ಅದನ್ನಾಳುವ ಬಂಟನು ತಾನೆಂದು ತಿಳಿಯುವನು ; ತನ್ನ ಹಿರಿದಾದ ಇಚ್ಛೆಗಳಿಗೆ ಅನುಸರಿಸಿ ಪ್ರಕೃತಿಯನ್ನು ಒಲಿಸಿಕೊಳ್ಳಬಹುದೆಂದು ಎಣಿಕೆಹಾಕುವನು. ಆದರೆ ಆಯುಷ್ಯದೊಳಗಿನ ಅನುಭವಗಳು ' ಇದೆಲ್ಲ ಮನಸಿನೊಳಗಿನ ಮಂಡಿಗೆ ' ಎಂದು ಸಿದ್ಧ ಮಾಡುತ್ತವೆ. ಅಂಥ ಇಂಥ ಮಾತಿನಲ್ಲಿ ಮನುಷ್ಯನಿಗೆ ಸ್ವಲ್ಪ ಸ್ವಾತಂತ್ರ್ಯವುಂಟೆಂದು ತಿಳಿದರೂ ನಿಜವಾದ ಅರ್ಥದಲ್ಲಿ ಸ್ವಾತಂತ್ರ್ಯವು ಅವನಿಗಿಲ್ಲ. ಸೆರೆಯಲ್ಲಿ ಬಿದ್ದಿರುವ ಸೆರೆಯಾಳು ತಾನು ಸ್ವತಂತ್ರನೆಂದು ಭಾವಿಸುವಂತೆ ಮನುಷ್ಯನಾದರೂ ತಿಳಿಯುವನು. ಆದರೆ ಅವನಿಗೆ, ಕೂಳು ನೀರು ಹೊಟ್ಟೆಯಲ್ಲಿ ತುರುಕಲಿಕ್ಕೆ ಮಾತ್ರ ಸ್ವಾತಂತ್ರ್ಯವು ; ಅತ್ತಿತ್ತ ಅಡ್ಡಾಡಲಿಕ್ಕೆ ಸಹ ಆ ಸ್ವಾತಂತ್ರ್ಯವಿಲ್ಲ. ದಾರದಿಂದ ಕಾಲ್ಕಟ್ಟಿದ ಹಕ್ಕಿಯಂತೆ ಮಾನವನ ಹಾಡು ; ಕಟ್ಟಿದ ದಾರದ ಉದ್ದಳತೆಗಿಂತ ದೂರ ಹಾರಲಿಕ್ಕಾಗದು, ಆ ದಾರದ ಅಳತೆಯೊಳಗೆ ಮಾತ್ರ ಸ್ವಾತಂತ್ರ್ಯ. ಆ ದಾರದಿಂದತ್ತ ಬದ್ಧ. ಛಾಂದೋಗ್ಯವು ಹೇಳುವದೇನಂದರೆ, ಆತ್ಮಾನುಭವವಾದಮೇಲೆ ಎಲ್ಲ ಲೋಕಗಳಲ್ಲಿಯೂ ನಮಗೆ ಸ್ವಾತಂತ್ರ್ಯವುಂಟು ; ಆತ್ಮಾನುಭವವಿಲ್ಲದಿದ್ದರೆ ಮಾತ್ರ ನಮಗೆಲ್ಲಿಯೂ ಏನೂ ಸ್ವಾತಂತ್ರ್ಯವಿಲ್ಲ. ( ಛಾಂ, ಅ ೮, ಖಂ ೧, ಮಂ ೬ ). ಸ್ವಲ್ಪ ಮುಂದಿನ ಸಾಲುಗಳಲ್ಲಿಯೆ ಈ ಉಪನಿಷತ್ತಿನಲ್ಲಿ ಹೇಳಿರುವದೇನಂದರೆ ' ಆತ್ಮಾನುಭವಿಯಾದ ಬಳಿಕ ಆವಾವುದನ್ನು ಎಲ್ಲೆಲ್ಲಿ ಬೇಡುವನೊ ಅದನವನು ಅಲ್ಲಲ್ಲಿ ತನ್ನ ಸಂಕಲ್ಪಶಕ್ತಿಯಿಂದಲೆ ಸಂಪಾದಿಸುತ್ತಾನೆ ; ಇದರಿಂದ ಸಂಪನ್ನನಾದವನು ಮಹತ್ವವನ್ನು ಪಡೆಯುತ್ತಾನೆ ' ( ಛಾಂ, ಅ ೮, ಖಂ ೨, ಮಂ ೧೦).

ಮೊಗಲಿನ ಉಪನಿಷತ್ತುಗಳಲ್ಲಿ ಸದ್ವಾಸನೆ ಅಸದ್ವಾಸನೆಗಳ ತಿಕ್ಕಾಟದ ಉಲ್ಲೇಖವಿಲ್ಲ ದಿದ್ದರೂ ಮುಕ್ತಿಕವೆಂಬ ಮುಂದಿನ ಒಂದು ಉಪನಿಷತ್ತಿನಲ್ಲಿ ಇವರ ಸ್ವಲ್ಪ ವಿಚಾರವು ಬಂದಿದೆ. ಅದರಲ್ಲಿ ಹೇಳಿರುವದೇನಂದರೆ, ' ಬಯಕೆಗಳ ಹೊಳೆಯು ಒಳಿತು ಕೆಡಕು ಗಳೆಂಬ ಎರಡು ತಡಿವಿಡಿದು ಹರಿಯುತ್ತದೆ. ಆದರೆ ನಮ್ಮ ಪೌರುಷಪ್ರಯತ್ನದಿಂದ, ಇಚ್ಛಾಶಕ್ತಿಯಿಂದ ಅದನ್ನು ಒಳ್ಳೆಯದಾರಿಗುಂಟ ಹರಿವಂತೆಯೆ ಮಾಡಬೇಕು. ' (ಮುಕ್ತಿಕ ಅ ೨, ಮಂ ೫–೬ ). ಈ ವಿಚಾರವು ಸಂಕ್ಷೇಪದಲ್ಲಿರುವದಾದರೂ ಇಚ್ಛಾಸ್ವಾತಂತ್ರ್ಯದ ವಿಷಯದಲ್ಲಿ ಹಿಂದಿನವರು ಇಂದಿನ ವಿಚಾರಭಾಂಡಾರಕ್ಕೆ ಸಲ್ಲಿಸಿದ ಸಣ್ಣ ಕೈಗಾಣಿಕೆ ಯಿದು.

**೨೧. ಋಷಿಗಳ ಆದರ್ಶವು—** ಇನ್ನು ಉಪನಿಷತ್ಕಾರರಾದ ಋಷಿಗಳ ಆದರ್ಶವಾವುದು? ಈ ಅಧ್ಯಾಯದ ಈವರೆಗಿನ ವಿವೇಚನೆಯಿಂದ ಉಪನಿಷತ್ಕಾರರ ವಿಚಾ ರದ ಓಘವು ಎತ್ತಕಡೆಗಿರುವದೆಂಬದು ಸ್ವಲ್ಪಾದರೂ ತಿಳಿದು ಬಂದಿರಬಹುದು. ನೀತಿ ಅನು ಭೂತಿಗಳೆರಡನ್ನು ಜೋಡಿಸಿಯೆ ಅವರು ವಿಚಾರಿಸುವರು. ನೀತಿಯು ಗಟ್ಟಿಯಾದ ಅಡಿ ಗಲ್ಲಮೇಲೆ ನಿಂತಿದ್ದರೆ ಅದು ಮಾತ್ರ, ಅದು ನಿಜವಾದ ಅನುಭೂತಿ ಎಂದು ಅವರ ವಿಶ್ವಾಸ. ಆದುದರಿಂದ ನೀತಿಯು ವಿಕಸಿತವಾಗಿ ಪೂರ್ಣತ್ವವನ್ನು ಪಡೆಯಬೇಕಾದರೆ ಅನುಭೂತಿ ಯಲ್ಲಿ ಪರಿಣಮಿಸಲಿಕ್ಕೆಬೇಕೆಂದು ಅವರ ನಂಬುಗೆ. ನೀತಿಯು ಅನುಭೂತಿಯಲ್ಲಿ ಪರಿಣ ಮಿಸದಿರುವ ನೈತಿಕ ವಿಚಾರದ ಉಲ್ಲೇಖವೆ ಉಪನಿಷತ್ತಿನಲ್ಲಿಲ್ಲ. ಆದುದರಿಂದ ಉಪನಿಷ ತ್ತಿನ ಋಷಿಗಳಿಗೂ ಸ್ಟೋಯಿಕ್ ಹಾಗೂ ಕ್ರಿಸ್ತೀ ಸಾಧುಗಳಿಗೂ ಈ ವಿಚಾರದಲ್ಲಿ ವ್ಯತ್ಯಾ ಸವಿದೆ. ಸ್ಟೋಯಿಕ್ ಸಾಧುಗಳು ನೀತಿಯ ಶಿಖರಕ್ಕೆ ಮುಟ್ಟಿದರೂ ಪರಮಾತ್ಮನ ಅನು ಭಾವಿಗಳಾಗಲಪೇಕ್ಷಿಸದೆ ಬರಿ ಬೌದ್ಧಿಕ ಧ್ಯಾನ–ದರ್ಶನಗಳಿಂದಲೆ ಸಂತುಷ್ಟರಾಗುವರು. ಕ್ರಿಸ್ತೀ ಸಾಧುಗಳು ( ಪರಮಾತ್ಮನಲ್ಲಿ ) ಶ್ರದ್ಧೆ, ( ತಮಗೆ ಮುಕ್ತಿಯಾಗುವದೆಂಬ ) ವಿಶ್ವಾಸ, ದಯೆಗಳೆಂಬ ಮೂರು ನೈತಿಕ ಸದ್ಗುಣಗಳಿಗೆ ಸರಿಯಾಗಿ ಹೊಂದಿಕೊಂಡರೂ ತಮ್ಮಿಂದ ತಾವು ಅನುಭಾವದ ಪರಿಣಿತಾವಸ್ಥೆಗೆ ಮುಟ್ಟಬೇಕೆಂದು ಬಯಸದೆ ಅವರು ಕ್ರೈಸ್ತನೆಂಬ ತಮ್ಮ ಹೊರಗಣ ವ್ಯಕ್ತಿಯಮೇಲೆ ಅವಲಂಬನ ಮಾಡುವರು. ಆದರೆ ಉಪ ನಿಷತ್ತಿನ ಋಷಿಗಳ ನಂಬುಗೆ ಏನಂದರೆ, ಸಾಧಕನ ಶೀಲ, ವಿಶ್ವಾಸ, ಹಾಗೂ ಪ್ರಯತ್ನ ಗಳ ಪ್ರಮಾಣದಲ್ಲಿ ಅವನು ಆತ್ಮವನ್ನು ಎಲ್ಲರೊಳು ಕಾಣುವನು. ಈಶೋಪನಿಷತ್ತು ಹೇಳುವುದೇನಂದರೆ, ' ಎಲ್ಲೆಲ್ಲೂ ಆತ್ಮವೊಂದನ್ನೆ ನೋಡುವನು. ಎಲ್ಲವೂ ಆತ್ಮಸ್ವರೂ ಪವೆ ಆದವನಿಗೆ ಮೋಹವೆಲ್ಲಿಯದು ? ಶೋಕವೆಲ್ಲಿಯದು ? ಯಾಕಂದರೆ ಅವನು 'ಒಂದು' ತನವನ್ನೆ ನೋಡುವನು' ( ಈ, ಮಂ ೭ ). ' ಅನುಭಾವಿಗೆ ದುಃಖದ ಮುಕ್ತಾಯವಾ

ಗುವುದು. ಈ ವರೆಗೆ ಮುಸುಕಿಕೊಂಡು ಅವನನ್ನು ಕತ್ತಲೆ ಕಳವಳದಲ್ಲಿರಿಸಿದ ತಿಳುವಾದ ಸೂಕ್ಷ್ಮಚರ್ಮದ ಚೀಲದಂತಿದ್ದ ಆಶಾಪಾಶವನ್ನು ಅವನು ಕಿತ್ತೊಗೆಯುವನು. ' ( ಶ್ವೇ, ಅ ೬, ಮಂ ೨೦ ). ' ಅವನು ಆತ್ಮಸಾಕ್ಷಾತ್ಕಾರ ಹೊಂದಿ ಕೃತಕೃತ್ಯನಾದುದರಿಂದ ಅವನ ಬಯಕೆಗಳೆಲ್ಲ ಇಲ್ಲಿಯೆ ಲಯವಾಗುವವು ' ( ಮುಂ ೩, ಖಂ ೨, ಮಂ ೨ ). ' ಕಮಲದ ಎಲೆಗೆ ನೀರು ಅಂಟಿಕೊಳ್ಳದಂತೆ ಇವನಿಗೆ ಪಾಪಕೃತ್ಯವು ಸೋಂಕುವದಿಲ್ಲ ' ( ಛಾಂ, ಅ ೪, ಖಂ ೧೪, ಮಂ ೩ ). 'ಪುಣ್ಯಕರ್ಮವ ಮಾಡಲಿಲ್ಲ. ಪಾಪವನ್ನಷ್ಟೆ ನಾನು ಮಾಡಿದೆನು ಎಂಬೀ ಬಗೆಯ ತಾಪವು ಅವನ ಮನಕ್ಕಾಗುವದಿಲ್ಲ ' ( ತೈ, ವ ೨, ಅನು ೯ ). 'ಬ್ರಹ್ಮನ ಸತ್ಯಸ್ವರೂಪವನ್ನು ಅರಿತು ದ್ವಂದ್ವಾತೀತನಾಗುವನು ' (ತೈ, ವ ೨, ಅನು ೯). 'ಯಾವನಾದರೂ ಎಂದಾದರೂ ಅವನಿಗೆ ಕಾಡಿಸಬೇಕೆಂದು ಬಯಸಿದರೆ ಅಥವಾ ಕೇಡು ಬಗೆದರೆ, ಯಾವದೊಂದು ಪದಾರ್ಥವು ಅಖಂಡ ಕಲ್ಲುಬಂಡೆಗೆ ಹೋಗಿ ಎರಗಿದರೆ ಆಗುವ ಪಾಡೆ ಇಂಥ ಕಿಡುಕನ ಪಾಡು. ಯಾಕಂದರೆ ಬ್ರಹ್ಮಜ್ಞನು ಒಂದು ಅಖಂಡ ಬಂಡೆಗಲ್ಲೆ ' ( ಛಾಂ, ಅ ೧, ಖಂ ೨, ಮಂ ೮ ). ' ಅವನು ಪರಬ್ರಹ್ಮನನ್ನೆ ಸಂಗ್ರಹಿಸಿದುದರಿಂದ ಅತ್ಯಂತ ಶಾಂತಿಯನ್ನು ಹೊಂದಿರುತ್ತಾನೆ ' ( ಶ್ವೇ, ಅ ೪, ಮಂ ೨ ). ' ಪರಮಾತ್ಮ ಧ್ಯಾನದಲ್ಲಿ ಸ್ಥಿರವಾಗಿ ಯೋಗಯುಕ್ತನಾದುದರಿಂದ ಅವನ ಪಂಚೇಂದ್ರಿಯಗಳೂ ಮನಸ್ಸೂ ಬುದ್ಧಿಯೂ ನಿಶ್ಚಲವಾಗುತ್ತವೆ ' ( ಕಠ, ಅ ೨, ವ ೬, ಮಂ ೧೦-೧೧ ). ' ಆತ್ಮಾನುಭವವಾದುದರಿಂದ ಅವನು ಎಲ್ಲೆಲ್ಲೂ ಶಾಶ್ವತ ಶಾಂತಿಯನ್ನು ಹೊಂದುತ್ತಾನೆ ' ( ಶ್ವೇ, ಅ ೬, ಮಂ ೧೨ ). ಈ ಅನುಭಾವದ ಪರಿಪೂರ್ಣಾವಸ್ಥೆಯನ್ನು ಹೊಂದುವುದು ಎಂತು, ಮತ್ತು ನೀತಿಯು ಅನುಭೂತಿಯಲ್ಲಿ ಎಂತು ಪರಿಣಮಿಸುವುದು ಎಂಬುದು ನಮ್ಮ ಮುಂದಿನ ಪ್ರಕರಣದ ಪಲ್ಲವಿಯು.

---

# ಪ್ರಕರಣ ೭

## ಆತ್ಮಸಾಕ್ಷಾತ್ಕಾರದ ಮುಂಗುರುತುಗಳು

**೧. ತತ್ವಜ್ಞಾನಕ್ಕೂ ಅನುಭಾವಕ್ಕೂ ಇದ್ದ ಅಂತರವು**—ಮನೋಮಯ ಲೋಕವನ್ನೂ ಪ್ರಾಕೃತ ಲೋಕವನ್ನೂ ವ್ಯಾಪಿಸಿ, ಜಗದುತ್ಪತ್ತಿ–ಸ್ಥಿತಿ–ಲಯಗಳಿಗೆ ಪ್ರಧಾನಹೇತುವಾಗಿರುವ ಏಕಾತ್ಮನ ಕಲ್ಪನೆಯನ್ನು ಔಪನಿಷಧಿಕ ಋಷಿಗಳು ಹೇಗೆ ರೂಪುಗೊಳಿಸಿರುವರೆಂಬುದನ್ನು ಹಿಂದಣ ಒಂದು ಅಧ್ಯಾಯದಲ್ಲಿ ಹೇಳಿರುವೆವಷ್ಟೆ. ಈ ಕಲ್ಪನೆಯೆ ಉಪನಿಷತ್ತುಗಳಲ್ಲಿನ ತತ್ವವಿದ್ಯೆಯನ್ನು ಮಥಿಸಿ ತೆಗೆದ ನವನೀತವಾಗಿದೆಯೆಂಬುದನ್ನು ನಾವಲ್ಲಿ ಕಂಡುಕೊಂಡೆವು; ಮತಮತಾಂತರಗಳ ತುಮುಲ ಯುದ್ಧದ ಗೊಂದಲದಲ್ಲಿ ಇನೊಂದೇ ಪಾರತೀರಕ್ಕೊಯ್ಯುವ ಸೇತುವಾಗಿದೆ; ಮತ್ತು ತತ್ವಾರ್ಥ ನಿರ್ಣಯದಲ್ಲಿ ‘ ಇದೇ ಸತ್ಯ ’ ವೆಂದು ಸಾಧಿಸುವ ಬೇರೆ ಬೇರೆ ವಾದಗಳ ಬೆಲೆಕಟ್ಟಿ ವಿವಿಕ್ತ ಸ್ಥಾನವನ್ನು ಇದೊಂದೇ ಕಲ್ಪನೆಯು ಕಲ್ಪಿಸಿಕೊಡಬಲ್ಲದು. ಆತ್ಮಪ್ರತೀತಿಯನ್ನು ವ್ಯವಹಾರತಃ ಹೇಗೆ ಸಂಪಾದಿಸಬೇಕೆಂಬುವರ ವಿಷಯವಾಗಿಯೂ ಉಪನಿಷತ್ತುಗಳು ದೀಪಿಕೆಯಾಗಿ ಹೇಗೆ ದಾರಿದೋರುತ್ತಿವೆಯೆಂಬ ಮಾತನ್ನೂ ನಾವಲ್ಲಿ ಸೂಚಿಸಿರುವೆವು. ‘ತತ್ವ’ ವಾವುದೆಂಬುದರ ಬಗ್ಗೆ ವಿಚಾರಶಕ್ತಿಯಿಂದ ಮಾಡಿದ ಮೀಮಾಂಸೆಯಷ್ಟೇ ಅಲ್ಲಿರದೆ, ತತ್ವಾನುಸಂಧಾನಕ್ಕೆ ಬೇಕಾದ ಆಚಾರಸಂಹಿತೆಯೂ ಅಲ್ಲಿರುವದು. ಉಪನಿಷತ್ಕಾಲೀನ ಋಷಿಗಳು ಆತ್ಮ–ಸಾಕ್ಷಾತ್ಕಾರದ ಸಮಸ್ಯೆಯನ್ನು ಬರಿಯ ಬುದ್ಧಿಯ ಸಹಾಯದಿಂದ ಬಿಡಿಸಲೆಸಗಲಿಲ್ಲವೆಂಬುದು ಸ್ಪಷ್ಟವದೆ. ಅನುಭಾವದ ಮಹಾಶಾಸ್ತ್ರವು ಶಾಬ್ದಿಕ ವಿವೇಚನೆಯನ್ನು ಮಿಕ್ಕಿನಿಂತಿದೆ; ಸ್ವಾನುಭವದ ಸಮೀಪದ ಒರೆಯುಲ್ಲದೆ ಕೇವಲ ಬೌದ್ಧಿಕ ಸ್ಪಷ್ಟೀಕರಣದ ದೂರಾನ್ವೇಷಣವು ಅಲ್ಲಿ ಸಲ್ಲದು, ಎಂಬೀ ಮರ್ಮವನ್ನು ಅವರು ತುಂಬಾ ಅರಿತಿರುವರಾದ್ದರಿಂದ, ಆತ್ಮಸಾಕ್ಷಾತ್ಕಾರದ ಹಾದಿಕಾರರಿಗೆ ನಿರ್ದೇಶಗಳನ್ನು ಮಾತ್ರ ಕೊಟ್ಟಿರುವರು. ಸತ್ತಿನಲ್ಲಿಯೂ ಸತ್ತಿನ ಜ್ಞಾನದಲ್ಲಿಯೂ ಅಂತರವಿರುವಷ್ಟೆ ಅನುಭಾವದಲ್ಲಿಯೂ ಅನುಭಾವದ ಬರಿಯ ವಿವೇಚನೆಯಲ್ಲಿಯೂ ಇದೆ. ಹಾಗಿದ್ದರೂ, ಅನುಭಾವಮಾರ್ಗದಲ್ಲಿನ ಸಾಧಕ–ಜೀವರಿಗೋಸ್ಕರವಾಗಿ ಕೆಲ ಸೂಚನೆಗಳನ್ನು ಮುಚ್ಚಿಯಾದರೂ ಕೊಡಬೇಕಾಗಿಯೇ ಬರುವುದು. ಅಂತೆಯೆ ಉಪನಿಷತ್ತುಗಳಲ್ಲಿ

ಬುದಿ ಕೋಶದ ಹಿಂದೆ ಆತ್ಮಾನುಭವದ ಪ್ರತೀತಿಗಳೆಷ್ಟೋ ರತ್ನರಾಶಿಯಂತೆ ರಾರಾಜಿಸುತ್ತಿವೆ. ಆ ದೃಷ್ಟಿಯುಳ್ಳಾತನೆ ಅವುಗಳ ಅನರ್ಘತೆಯನ್ನು ವಿಮರ್ಶಿಸಿ ಹೇಳಬಲ್ಲನು.

೨. **ಪರಾ ಮತ್ತು ಅಪರಾವಿದ್ಯೆಗಳು**—ಬರಿಯ ಬುದ್ಧಿಯ ವೈಭವವು ಎಷ್ಟಿದ್ದರೂ ಆತ್ಮಪ್ರತೀತಿಯಲ್ಲಿ ಅದು ಸಹಾಯ್ಯಕಾರಿಯಾಗಲಾರದೆಂಬುದನ್ನು ತತ್ಕಾಲಿನ ಋಷಿಗಳು ತುಂಬಾ ತಿಳಿದಿದ್ದರು. ಜ್ಞಾನದಲ್ಲಿ ಗ್ರೀಕರಂತೆ ಅವರಾದರೂ ಪರಾವಿದ್ಯೆ, ಅಪರಾವಿದ್ಯೆಯೆಂದು ಎರಡು ತೆರನಾಗಿ ವಿಂಗಡಿಸಿರುವರು. ಮುಂಡಕೋಪನಿಷತ್ತಿನಲ್ಲಿ ಇದರ ಸಂದರ್ಭವು ಬಂದಿದೆ. ಅಲ್ಲಿ ವೇದವೇದಾಂಗ–ವ್ಯಾಕರಣ–ನಿರುಕ್ತ ಛಂದಃಶಾಸ್ತ್ರ– ಜ್ಯೋತಿಷಗಳಲ್ಲಿನ ಪ್ರಾವೀಣ್ಯವು ಅಪರಾವಿದ್ಯೆಯೆಂದೂ ಅಕ್ಷರಬ್ರಹ್ಮದ ಅರಿಕೆಯು ಪರಾವಿದ್ಯೆಯೆಂದೂ ಹೇಳಿದೆ (ಮುಂ ೧, ಖಂ ೧, ಮಂ ೪–೫). ಜ್ಞಾನ–ಸಾಕ್ಷಾತ್ಕಾರಗಳಲ್ಲಿನ ಈ ಮೂಲ ಭೇದವನ್ನೆ ನಾರದನು ಅಧ್ಯಾತ್ಮವಿದ್ಯೆಗಾಗಿ ಸನತ್ಕುಮಾರರ ಬಳಿಗೆ ಹೋದಾಗ ಅವರಿಬ್ಬರ ಸಂಭಾಷಣೆಯಲ್ಲಿ ಸನತ್ಕುಮಾರರು ಹೇಳಿದ್ದಾರೆ. ಯಾವ ಯಾವ ಅಂಗಗಳನ್ನು ಅಭ್ಯಾಸಿಸಿರುವೆ ಎಂದು ಕೇಳಿದಾಗ, ನಾರದನು 'ವೇದೇತಿಹಾಸ ಪುರಾಣಗಳನ್ನು ಓದಿರುವೆನು; ರಾಶಿ, ಗಣಿತ, ಶಕುನ, ಮುಹೂರ್ತ, ತರ್ಕ, ಸ್ಮೃತಿ, ದೇವವಿದ್ಯೆ, ಬ್ರಹ್ಮವಿದ್ಯೆ, ಭೂತವಿದ್ಯೆ, ಕ್ಷತ್ರವಿದ್ಯೆ, ನಕ್ಷತ್ರವಿದ್ಯೆ ಮಂತ್ರತಂತ್ರಗಳೆಲ್ಲವನ್ನು ಪಠಿಸಿರುವೆನು. ಇಷ್ಟೆಲ್ಲ ಇದ್ದರೂ ಒಳಗಿನ ಬಳಲಿಕೆಯನ್ನು ಇಲ್ಲವಂತೆ ಮಾಡುವ ಜ್ಞಾನನಿಧಿಯಿನ್ನೂ ಸಿಕ್ಕಿಲ್ಲವಲ್ಲ! ಆತ್ಮನ ಗುರುತಿನ್ನೂ ಆಗಿಲ್ಲವಲ್ಲ! ಎಂದು ಕಳವಳಗೊಳ್ಳುತ್ತಿರುವೆನು. ಗುರುವೇ! ದುಃಖದ ಆಚೆಯ ದಡಕ್ಕೆ ನನ್ನನ್ನು ಪಾರುಗಾಣಿಸುವೆಯಾ?' ಎಂದು ಮರಳಿ ನುಡಿದನು (ಛಾಂ, ಅ ೭, ಖಂ ೧, ಮಂ ೨–೩). ಈ ಅವತರಣಿಕೆಯ ಮೇಲಿಂದ ಪರಾ–ಅಪರಾವಿದ್ಯೆಗಳ ನಡುವಿನ ವ್ಯತ್ಯಾಸವು ತಿಳಿಯುವುದಲ್ಲದೆ, ಅಧ್ಯಾತ್ಮವಿದ್ಯೆಯ ಉನ್ನತಪದವಿಯ ಮುಂದೆ ಬೌದ್ಧಿಕಜ್ಞಾನವು ಬರೀ ಬಾಯ್ಬಡುಕವೂ ಕಿರುಕುಳವಾದುದೂ ಎಂದು ತಿಳಿದು ಬರುವುದು. ಕೇನೋಪನಿಷತ್ತಿನಲ್ಲಿ 'ಜೀವಮಾನವಿರುವಾಗಲೆ ಗುರಿಯನ್ನು ತಿಳಿದುಕೊಳ್ಳಬೇಕು; ಇಲ್ಲವಾದರೆ, ಮೈ ಮಣ್ಣುಗೂಡಿ ಹೋದಮೇಲೆ ಎಂತೆಂತಹ ಕ್ಲೇಶಗಳು ಒದಗಬಹುದೋ ಹೇಳಲಾಗದು' ಎಂದು ಬರೆದುದನ್ನು ನೋಡಲಾಗಿ, ಆಗಣ ಋಷಿಗಳು ಆಚಾರದ ಒರೆಗೆ ಹಿಡಿದೇ ಆತ್ಮಜ್ಞಾನವನ್ನು ಹೇಗೆ ನೋಡುತ್ತಿದ್ದರೆಂಬುದು ವ್ಯಕ್ತವಾಗುವುದು (ಕೇನ, ಅ ೨, ಮಂ ೧೩). 'ಶರೀರಪಾತವಾಗುವ ಮುಂಚೆಯೆ ಸ್ವ–ಸಾಕ್ಷಾತ್ಕಾರವಾಗದಿದ್ದರೆ, ಜೀವನು ಪುನರ್ಜನ್ಮದ ಅನೇಕ

ಯಾತ್ರೆಗಳನ್ನು ಮಾಡಬೇಕಾಗುವದು ' ಎಂದು ಕಠದಲ್ಲಿಯೂ ಇದೇ ವಿಚಾರವನ್ನು ಸ್ವಲ್ಪ ಬೇರೆಯಾಗಿ ಒತ್ತಿ ಹೇಳಿದೆ ( ಕಠ, ಅ ೨, ವ ೬, ಮಂ ೪ ).

**೩. ಆತ್ಮಸಾಕ್ಷಾತ್ಕಾರದ ಅಧಿಕಾರಿ—** ದೇಹವಿರುವಾಗಲೆ ಆತ್ಮನನ್ನು ಸಾಕ್ಷಾತ್ಕರಿಸುವದು ಸಾಧ್ಯವಿದೆಯೆಂದಮೇಲೆ ಎಲ್ಲರೂ ಹಾಗೇಕೆ ಮಾಡಿಕೊಳ್ಳುವುದಿಲ್ಲ? ಕೆಲವರಾದರೂ ಹಾಗೆ ಮಾಡಿಕೊಳ್ಳುವರೆಂದ ಬಳಿಕ, ಆ ಸಾಕ್ಷಾತ್ಕಾರಕ್ಕೆ ಪಾತ್ರನನ್ನಾಗಿ ಮಾಡುವ ಅಧಿಕಾರದ ಲಕ್ಷಣಗಳಾದರೂ ಯಾವವು, ಎಂದು ನಾವು ಕೇಳಬಹುದು. ಈ ವಿಷಯವಾಗಿಯೆ ಎಷ್ಟೋಕಡೆ ಉಪನಿಷದ್ವಾಙ್ಮಯದಲ್ಲಿ ಉಲ್ಲೇಖಗಳುಂಟು. ಅಂತರ್ಮುಖವೃತ್ತಿಯು ಮೊದಲನೆಯ ಅವಶ್ಯಕತೆಯೆಂದು ಕಠವು ಹೇಳುತ್ತಿದೆ. 'ನಮ್ಮ ಇಂದ್ರಿಯಗಳು ಹೊರಗಡೆಗೇ ಹರಿಯುತ್ತಿರುವಂತೆ ಸ್ವಯಂಭುವು ಅವುಗಳನ್ನು ಹುಟ್ಟಿಸಿದನು. ಅಂತೆಯೆ ಅಂತರಾತ್ಮನನ್ನು ಹುಡುಕಲೆಳಸದೆ ಹೊರಹೊರಗೆ ಹಣಿಕಿಹಾಕುತ್ತಿರುವೆವು ನಾವು. ಅಮೃತತ್ವವನ್ನು ಬಯಸುವ ಎಲ್ಲಿಯಾದರೊಬ್ಬ ಧೀರನು ಒಳಗೆ ಕಣ್ಣುಗಳನ್ನು ಹೊರಳಿಸಿ ಪ್ರತ್ಯಗಾತ್ಮನನ್ನು ಕಾಣುವನು ' ( ಕಠ, ಅ ೨, ವ ೪, ಮಂ ೧ ). ಇಂದ್ರಿಯಗ್ರಾಮವು ಬಹಿರ್ಗಾಮಿಯೆಂಬೀ ಮಾತನ್ನೆ ' ದೇಹವೆಂಬ ನವದ್ವಾರಪುರದಲ್ಲಿ ಹಂಸನು ಬದ್ಧನಾಗಿದ್ದು, ಸಮಯಸಿಕ್ಕಿದಾಗೆಲ್ಲಾ ಹೊರಗೆ ಹಾರಿ ಹೋಗಲು ರೆಕ್ಕೆಗಳನ್ನು ಬಡಿಯುತ್ತಿರುವನು ' ಎಂದು ಶ್ವೇತಾಶ್ವತರದಲ್ಲಿ ( ಶ್ವೇ, ಅ ೩, ಮಂ ೧೮ ) ಒತ್ತಿ ಹೇಳಿದೆ. ಇಂತು ಆತ್ಮನಿರೀಕ್ಷಣವು ಸಂಪೂರ್ಣವಾಗಿ ಸಾಧಿಸಲಿಕ್ಕೆ ಮೊದಲು ಸಾಧಕನು ಹೊರಗಿನ ಜಗತ್ತಿನೊಡನಿದ್ದ ಸಂಬಂಧಗಳನ್ನು ತೀರ ಕಡಿದುಕೊಳ್ಳಬೇಕಾಗಿರಬಹುದೆಂದು ತೋರುವುದು. ' ಅಂತರ್ನಿರೀಕ್ಷಣ ' ವಾದಮೇಲೆ ' ಚಿತ್ತಶುದ್ಧಿ '. ' ಕೆಟ್ಟುದಕ್ಕೆ ಬೆನ್ನು ತೋರಿಸುವವರೆಗೆ, ಪುಟ್ಟಪೂರಾ ಸಮಾಧಾನಿಯಾಗುವವರೆಗೆ, ಬೌದ್ಧಿಕಸಂಪತ್ತಿಯು ಎಷ್ಟೇ ಹೇರಳವಾಗಿದ್ದರೂ ಆತ್ಮನ ಅಧಿಷ್ಠಾನವು ದೊರೆಯದು ' ಎಂದು ಕಾಠಕೋಪನಿಷತ್ತು ಸಾರುತ್ತಿದೆ ( ಕಠ, ಅ ೧, ವ ೨, ಮಂ ೨೪ ). ' ಸತ್ಯದಿಂದ, ತಪಸ್ಸಿನಿಂದ, ಸಮ್ಯಗ್ಜ್ಞಾನದಿಂದ, ಬ್ರಹ್ಮಚರ್ಯದಿಂದ ಈ ಆತ್ಮನು ದೊರೆಯುವನು ' ಎಂದು ಮುಂಡಕೋಪನಿಷತ್ತು ನುಡಿಯುತ್ತಿದೆ ( ಮುಂ ೩, ಖಂ ೧, ಮಂ ೫ ). ಪ್ರವಚನದಿಂದಾಗಲಿ, ಧೀಮಂತಿಕೆಯಿಂದಾಗಲಿ, ಬಹುಶ್ರುತತ್ವದಿಂದಾಗಲಿ, ಆತನು ಲಭಿಸನು ' ಎಂದು ಕಠವು ಹೇಳುವುದರಿಂದ, ಆತ್ಮದರ್ಶನವು ಬುದ್ಧಿಗೆ ಸಂಬಂಧಿಸಿದುದಲ್ಲ, ಬುದ್ಧಿಶಕ್ತಿಯನ್ನು ಮಿಕ್ಕಿದೆಯೆಂಬ ಮಾತು ತಿಳಿಯುವದು ( ಕಠ. ಅ ೧, ವ ೨, ಮಂ ೨೨ ). ಇದೇ ತತ್ತ್ವಾರ್ಥವನ್ನೆ ಈಶಾವಾಸ್ಯವು ' ಅವಿದ್ಯೆಯ ಉಪಾಸಕರು ಅಂಧಂತಮಸ್ಸಿನ ಹಾದಿಯನ್ನು ಹಿಡಿದರೆ, ಬರೀ ವಿದ್ಯೆಯಲ್ಲಿ ಆಸಕ್ತರಾದವರು ಅದಕ್ಕೂ ಮಿಗಿಲು ಕತ್ತಲೆಯ ನಾಡಿಗೆ ಹೋಗುವರಾ

ದುದರಿಂದ ಅಜ್ಞಾನಕ್ಕಿಂತಲೂ ಜ್ಞಾನವು ಹೆಚ್ಚು ಭಯದಾಯಕವು ' ಎಂದು ಬಣ್ಣಿಸಿದೆ ( ಈಶ, ಮಂ ೯ ). ' ಬಲಹೀನನಿಗಾಗಲಿ, ಸ್ಖಲನಶೀಲನಿಗಾಗಲಿ, ತಪಸ್ಯೆಯನ್ನೆಸಗಲು ಒಲ್ಲದವನಿಗಾಗಲಿ ಆತ್ಮನ ಮರ್ಮಜ್ಞಾನವಾಗದು ' ಎಂದು ಮುಂಡಕವು (ಮುಂ ೩, ಖಂ ೨, ಮಂ ೪)ಹೇಳಿದೆ. ಅದೇ ಉಪನಿಷತ್ತಿನಲ್ಲಿ ಮತ್ತೊಂದೆಡೆ, ' ಕರ್ಮಾಚರಣೆಯಿಂದ ಲಭಿಸುವ ಲೋಕಗಳೆಲ್ಲ ಬರೀ ಭ್ರಮವೆಂದು ಮನಗಾಣುವವರೆಗೆ, ಎಷ್ಟೇ ಒಳ್ಳಿತ್ತಾದರೂ ಬರೀ ಕರ್ಮದಿಂದ ಜ್ಞಾನವಾಗದು ಎಂದು ಮನವರಿಕೆಯಾಗುವವರೆಗೆ, ಅಧ್ಯಾತ್ಮಲೋಕ ದಲ್ಲಿ ಕಾಲಿಡಲು ಮಾನವನು ಭಾಧ್ಯಸ್ಥನಾಗನು. ಎಷ್ಟು ಒಳ್ಳೇ ಕರ್ಮವಾದರೂ ಸಾಕ್ಷಾತ್ಕಾರಕ್ಕೆ ಸಾಟಿಯಲ್ಲವೆಂಬುದನ್ನರಿತು ಆ ರಹಸ್ಯವನ್ನು ತಿಳಿದುಕೊಳ್ಳಲಿಕ್ಕೆ ಕೈಯಲ್ಲಿ ಸಮಿತ್ತುಗಳನ್ನು ಹಿಡಿದುಕೊಂಡು ಬ್ರಹ್ಮವಿತ್ತರಾದ ಆಚಾರ್ಯರ ಬಳಿ ಹೋಗಬೇಕು ' ಎಂದು ಆ ದಿವ್ಯಜೀವನದ ಮತ್ತೆ ಕೆಲ ಲಕ್ಷಣಗಳನ್ನು ಕೊಟ್ಟಿದೆ ( ಮುಂ ಕೌ ಖಂ ೨, ಮಂ ೧೨ ). ಅಂತೂ, ಅಧ್ಯಾತ್ಮಜ್ಞಾನವಾಗಲಿಕ್ಕೆ ಅಂತರ್ಮುಖದೃಷ್ಟಿ, ಜಗತ್ತಿಗಾಗಿ ನಿಃಸೀಮ ಜುಗುಪ್ಸೆ, ಚಿತ್ತಶುದ್ಧಿ, ನಮ್ರತೆ, ಶಾಂತಿ, ದಾಂತಿ, ಸತ್ಯ, ಸಮ್ಯಜ್ಞಾನ, ಶಕ್ತಿ, ಉತ್ಸಾಹಗಳೆಂಬ ಗುಣಗಳು ಅತ್ಯಾವಶ್ಯಕವೆಂದು ಉಪನಿಷತ್ಕಾರರ ಮತವು.

**೪. ಗುರುಬೋಧೆಯ ಅವಶ್ಯಕತೆ**– ಇಂತು ನೈತಿಕವಿಕಾಸವು ಪರಿಪೂರ್ಣವಾದಬಳಿಕ, ಗುರುವಿನ ಕೈಯಿಂದ ದೀಕ್ಷೆಯೆ ಎರಡನೆಯ ಹೆಜ್ಜೆ. ಇದರ ಮಹತ್ವವನ್ನು ಉಪನಿಷತ್ತುಗಳು ಅಷ್ಟಿಷ್ಟು ಸಲ ಹೇಳಿಲ್ಲ. ಛಾಂದೋಗ್ಯದಲ್ಲಿ ಸತ್ಯಕಾಮನೂ ಈ ಮಾತನ್ನೆ ಸಮರ್ಥಿಸಿರುವನು ( ಛಾಂ, ಅ ೪, ಖಂ ೯, ಮಂ ೩ ). ಅಧ್ಯಾತ್ಮವಿದ್ಯೆಯು ನದಿಯು ಮೇಲಿನಿಂದ ಕೆಳಗೆ ಹರಿದು ಬರುವುದು ಸಹಜವೆಂದು ಬಗೆದು, ಕಠೋಪನಿಷತ್ತು ಹೀಗೆ ಹೇಳುವುದು, ' ಗುರುವು ಅಧಿಕಾರಿಯಾಗಿರದಿದ್ದರೆ, ಆತ್ಮವಂತನಿರದಿದ್ದರೆ, ಪರಾವಿದ್ಯೆಯು ದುಷ್ಪ್ರಾಪ್ಯವು, ತರ್ಕವಾದಗಳನ್ನು ಮೀರಿದ ಆ ಸೂಕ್ಷ್ಮಧರ್ಮದ ಜ್ಞಾನವು ಅಶಕ್ಯವು. ತಾರ್ಕಿಕ ಯುಕ್ತಿವಾದದಲ್ಲಿ ನಮ್ಮ ಬುದ್ಧಿಯನ್ನು ಅಡ್ಡಹಾದಿಗೆ ಒಯ್ಯುವದು ಬೇಡ; ಸಾಕ್ಷಾತ್ಕಾರಿಯಾದ ಮತ್ತೊಬ್ಬರಿಂದ ದೀಕ್ಷಿತರಾಗುವವರೆಗೆ ಆತ್ಮನ ಜ್ಞಾನವಾಗುವುದಾದರೂ ಎಂತು ? ' (ಕಠ, ಅ ೧, ವ ೨, ಮಂ ೮-೯ ). ' ಎದ್ದೇಳು ! ಬಲ್ಲವರಿಂದ ಪಡೆದುಕೊಳ್ಳೇಳು ! ಕತ್ತಿಯ ಬಾಯಿಯಂತೆ ಹದನಾಗಿದೆ ಆ ಹಾದಿ ! ದಾಟಲು ಗಡುಸಾದುದೆಂದು ಕವಿಗಳು ಸುಮ್ಮನೆ ಹೇಳಲಿಲ್ಲ ! ' ( ಕಠ, ಅ ೧, ವ ೩, ಮಂ ೧೪ ). ಆ ಜ್ಞಾನವು ಅತಿಸೂಕ್ಷ್ಮವೂ ಅತಿಗೂಢವೂ ಆಗಿರುವದರಿಂದ, ಒಬ್ಬಟಿಗನಾದ ವ್ಯಕ್ತಿಮಾತ್ರಕ್ಕೆ ಅದನ್ನು ಸಾಧಿಸುವದು ಆಗದೆಂದು ಪದೇ ಪದೇ ಉಪನಿಷತ್ತುಗಳು ಹೇಳುತ್ತಿವೆ. ಹಾಗಲ್ಲದೆ, ಆ ಗುರುವಾದರೂ ಬ್ರಹ್ಮಸಾಯುಜ್ಯ

ವನ್ನು ಪಡೆದವನಿರಬೇಕು. ಅಂಥವನಾತನಿರದಿದ್ದರೆ, ಆತನು ಕೊಡುವ ಜ್ಞಾನವು ಅನ್ಯರಲ್ಲಿ ಫಲಕಾರಿಯಾಗದು. ಗುರುವಿನ ಅಗತ್ಯವೇನೆಂದು ಆಕ್ಷೇಪಕರೆಷ್ಟೋ ಕೇಳುವರು. ಗ್ರಂಥಾಭ್ಯಾಸವು ಸಾಲದೇ, ಎನ್ನುವರು. ಪುಸ್ತಕಪಠಣದಲ್ಲಿಯೂ ಗುರುಮುಖ ದಿಂದಾದ ಜ್ಞಾನಗ್ರಹಣದಲ್ಲಿಯೂ ಎಷ್ಟು ಅಂತರವಿದೆಯೆಂಬ ಬಗ್ಗೆ ಪ್ಲೇಟೋನು ಹೇಳುವುದನ್ನು ಅವರು ಲಾಲಿಸಬೇಕು. ಮೊದಲನೆಯದು ನಿರ್ಜೀವವಹುದಾದರೆ, ಎರಡನೆಯದು ಸಜೀವ ಝರಿಯಿಂದ ಬಂದ ಅಮೃತೋಪಮವು. ಆತ್ಮಸಾಕ್ಷಾತ್ಕಾರದ ದುರ್ಗಮ ಮಾರ್ಗದಲ್ಲಿನ ಸೂಕ್ಷ್ಮವಾದ ತೊಡಕುತಡಿಗಳನ್ನು ಬಿಡಿಸುವ ಕಠಿಣಕಾರ್ಯವು ಸಾಕ್ಷಾತ್ಕಾರಿ ಗುರುವು ಅಡಿಗಡಿಗೆ ಕೊಡುವ ಒಲವಿನ ಸಲಹೆಗಳಿಂದಲೇ ಒದಗುವದು ವಿನಾ ಹೊತ್ತಿಗೆಗಳನ್ನು ಬಾಯಿಪಾಠಮಾಡಿ ಆಗದು.

೫. **ಕಣ್ಣುಕಟ್ಟಿದವನ ಕಥೆ** — ಆತ್ಮಪ್ರತೀತಿಯ ದಾರಿಯಲ್ಲಿ ಶಿಷ್ಯನನ್ನು ಗುರುವು ಹೆಜ್ಜೆಹೆಜ್ಜೆಗೆ ಮುಂದಕ್ಕೊಯ್ಯಲು ಹೇಗೆ ನೆರವಾಗುವನೆಂಬುದರ ವಿಷಯವಾಗಿ ಛಾಂದೋಗ್ಯದಲ್ಲಿ ಒಂದು ಮನೋವೇಧಕವಾದ ರೂಪಕವಿದೆ. ಗಾಂಧಾರವಾಸಿಯಾದ ಒಬ್ಬ ಮನುಷ್ಯನನ್ನು ಕೆಲ ಕಳ್ಳರು ಕಣ್ಣುಕಟ್ಟಿ ನಿರ್ಜನವಾದ ಸ್ಥಾನಕ್ಕೊಯ್ದು ಮನ ಬಂದತ್ತ ಓಡಿಯಾಡಲು ಬಿಟ್ಟರೆಂದೂ, ‘ ಯಾರಾದರೂ ದಾರೀ ತೋರಿರೋ ! ’ ಎಂದು ಆತನು ಒರಲಿ ಮೊರೆಯಿಡುತ್ತಿರುವಾಗ, ಯಾವನೊಬ್ಬನು ಅಕಸ್ಮಾತ್ತಾಗಿ ಬಂದು, ‘ ಆ ನಿಟ್ಟಿನಲ್ಲಿ ನಡೆ ; ಹಾಗೆ ಹೋದೆಯೆಂದರೆ ಗಾಂಧಾರವು ಬರುವುದು, ’ ಎಂದು ಹೇಳಿದೊಡನೆ, ಆತನು ತನ್ನೆಲ್ಲ ಬುದ್ಧಿಚಾತುರ್ಯವನ್ನು ಬಳಸಿ, ಹಳ್ಳಿಹಳ್ಳಿಗೆ ಹಾದಿ ಕೇಳುತ್ತ, ಮರಳಿ ತನ್ನೂರಿಗೆ ಬಂದನೆಂದೂ ಅಲ್ಲಿ ಬರೆದಿದೆ ( ಛಾಂ, ಅ ೬, ಖಂ ೧೪, ಮಂ ೧–೨). ಪ್ಲೇಟೋನು ಬರೆದ ತನ್ನ ಪುಸ್ತಕದಲ್ಲಿಯ ( Republic ) ಗುಹೆಯ ಕಥೆಯಷ್ಟೇ ( The parable of the cave ) ಇದಾದರೂ ದಿವ್ಯಾರ್ಥಪರಿಪ್ಲುತವಾಗಿದೆ. ಅಂಧಕಾರದ ಆಚ್ಛಾದನೆಯಲ್ಲಿ ಸ್ವಸ್ವರೂಪವನ್ನು ಮರೆತು ಕುಳಿತ ಜೀವಾತ್ಮನು ಉದ್ಬೋಧವನ್ನು ಹೊಂದಿ ಹೇಗೆ ಹೊಸಬನಾಗುವನೆಂಬುದನ್ನು ಇಲ್ಲಿ ಯುಕ್ತಿಯಿಂದ ತೋರಿಸಲಾಗಿದೆ. ನಾವು ಮೊದಲಿದ್ದುದು ಬ್ರಹ್ಮಾನಂದದ ಸಾಮ್ರಾಜ್ಯದಲ್ಲಿ ; ಹುಸಿ ಆಸೆಗಳೆಂಬ ಪಾಶಗಳಿಂದ ನಮ್ಮ ಕಣ್ಣುಗಳನ್ನು ಕಟ್ಟಿ ವಿಷಯವಾಸನೆಗಳೆಂಬ ಕಳ್ಳರು ತಿಳಿಗೇಡಿತನದ ಅಡವಿಯಲ್ಲಿ ನಮ್ಮನ್ನೆಳತಂದು ಬಿಟ್ಟರು. ‘ ನೆರವಾಗಿರೋ ! ನಮ್ಮ ಮೊದಲನಾಡಿಗೆ ಕರೆದೊಯ್ಯಿರೋ ! ’ ಎಂದು ಗೋಳಿಟ್ಟು ಕರೆವಾಗ, ಮುನ್ನ ಮಾಡಿದ ಸುಕೃತವಿಶೇಷ ದಿಂದಲೊ ಏನೋ, ಗುರುಮೂರ್ತಿಯೊಂದು ಪ್ರಾಪ್ತವಾಗಿ, ಪ್ರಬೋಧವನ್ನು ಕೊಟ್ಟ ಕೂಡಲೆ, ನಮ್ಮೆಲ್ಲ ಕೌಶಲವನ್ನು ವಿನಿಯೋಜಿಸಿ, ಒಂದೊಂದು ಹೆಜ್ಜೆಹಾಕುತ್ತ, ಮತ್ತೆ

ನಮ್ಮ ಮನೆಯಾದ ಬ್ರಹ್ಮವನ್ನು ನಾವು ಸೇರುವೆವು. ಇದೇ ಈ ಸುಂದರ ರೂಪಕದ ಸಾರವು.

**೬. ಗುರುಗಳಿಗೆ ಎಚ್ಚರ**—ಸತ್ಯಜ್ಞಾನಾಪೇಕ್ಷಿಯಾದ ಶಿಷ್ಯನಿಗೆ ಅನುಗ್ರಹವನ್ನು ಕೊಡುವ ಮುಂಚೆ, ಗುರುವಾದರೂ ಕೆಲಮಾತುಗಳನ್ನು ನೆನಪಿನಲ್ಲಿಡಬೇಕಾಗುವುದು. ಶಿಷ್ಯನು ತಲೆಯಮೇಲಿಂದ ಬೆಂಕಿಯನ್ನೊಯ್ಯುವಂತಹ ದುಷ್ಕರಕಾರ್ಯವನ್ನು ಮಾಡುವ ಮುಂಚೆ, ಗುರುವು ಆತನಿಗೆ ಜ್ಞಾನೋಪದೇಶವನ್ನು ಮಾಡಬಾರದೆಂದು ಮುಂಡಕೋಪನಿಷತ್ತಿನಲ್ಲಿ ( ಮುಂ ೩, ಖಂ ೨, ಮಂ ೧೦ ) ಹೇಳಿದೆ. ತಲೆಯನ್ನು ಮುಂಡನಮಾಡಿಕೊಳ್ಳುವ ಮುಂಚಿತ ಅಧ್ಯಾತ್ಮದೀಕ್ಷಾಪೇಕ್ಷಿಗೆ ಆ ಮಾರ್ಗದಲ್ಲಿ ಕಾಲಿಕ್ಕಲಿಕ್ಕೆ ಅಧಿಕಾರವು ಬರದೆಂಬುದೆ ಇದರ ಅರ್ಥವೆಂದು ಕೆಲವರು ಹೇಳುವರು. ಎಂದರೆ ಸನ್ಯಾಸಿಯೆ ಅಧ್ಯಾತ್ಮಶಾಸ್ತ್ರಕೋವಿದನಾಗಲು ಅರ್ಹನೆಂದು ಹೇಳುವರು. ಸನ್ಯಾಸವನ್ನು ನಾವು ಕಡಿಮೆ ಬಗೆಯುವೆವೆಂದಲ್ಲ. ಆ ರಹಸ್ಯಜ್ಞಾನದ ಭಾಗಿಯಾಗಲು ಸಂನ್ಯಾಸಾಶ್ರಮವೊಂದೇ ತಕ್ಕುದೆಂದು ಉಳಿದ ಉಪನಿಷತ್ತುಗಳು ಏಕಕಂಠವಾಗಿ ನುಡಿಯುವದಿಲ್ಲವೆಂದು ನಾವಿಲ್ಲಿ ಹೇಳದಿರಲಾರೆವು. ಛಾಂದೋಗ್ಯದಲ್ಲಿ 'ಜ್ಯೇಷ್ಠಪುತ್ರನಿಗಾಗಲಿ, ಬಹುಕಾಲ ಸಾನ್ನಿಧ್ಯದಲ್ಲಿದ್ದ ವಿದ್ಯಾರ್ಥಿಗಾಗಲಿ, ಬ್ರಹ್ಮವಿದ್ಯೆಯನ್ನು ಕೊಡಬೇಕಲ್ಲದೆ ಮತ್ತುಳಿದವರಿಗೆ ಕೊಡಲಾಗದು. ಸಮುದ್ರವಲಯಾಂಕಿತವಾದ ಬಹುರತ್ನಗರ್ಭಿತವಾದ ವಸುಂಧರೆಯನ್ನು ಧಾರೆಯೆರೆದು ಕೊಡುವೆವೆಂದರೂ ಅದು ಜ್ಞಾನೋಪದೇಶಕ್ಕೆ ಪಾಸಟಿಯಾಗಲಾರದು' ಎಂದು ವಿವರಿಸಿದೆ ( ಛಾಂ, ಅ ೩, ಖಂ ೨, ಮಂ ೫–೬ ). ಸ್ವಲ್ಪ ಅರ್ವಾಚೀನವಾದ ಶ್ವೇತಾಶ್ವತರದ ಒಂದು ಭಾಗದಲ್ಲಿ, 'ಭಕ್ತಿ' ಯೆಂಬ ಪ್ರಯೋಗವನ್ನು ಔಪನಿಷದಿಕ ವಾಙ್ಮಯದಲ್ಲಿ ಮೊಟ್ಟಮೊದಲು ತಂದಿರುವಲ್ಲಿ, 'ಗುರುದೈವತಗಳಲ್ಲಿ ಪರಾಭಕ್ತಿಯಿದ್ದವನಿಗಲ್ಲದೆ ಈ ಗುಹ್ಯವಿದ್ಯೆಯನ್ನು ಉಪದೇಶಿಸಲಾಗದು' ಎಂದು ಒತ್ತಿಒತ್ತಿ ಹೇಳಿದೆ ( ಶ್ವೇ, ಅ ೬, ಮಂ ೨೨–೨೩ ). ಗುರುವಾದರೂ ಅಷ್ಟು ಎಚ್ಚರಪಡಬೇಕಾಗುವುದೆಂಬುದು ಇದರಿಂದ ತಿಳಿದು ಬರುವುದು. ಈ ಭಕ್ತಿಯೆಂಬ ಶಬ್ದವನ್ನೆ ಎತ್ತಿ, ಮುಂದೊಮ್ಮೆ ಭಗವದ್ಗೀತೆಯು 'ತಪಃಪೂತನಾಗದಿದ್ದವನಿಗೆ, ಗುರುದೇವಭಕ್ತಿಹೀನನಿಗೆ, ಅಧ್ಯಾತ್ಮಜ್ಞಾನಪಿಪಾಸೆಯಿಲ್ಲದವನಿಗೆ, ವಿಜ್ಞಾನವಿದ್ವೇಷಿಗೆ ಪರಾವಿದ್ಯೆಯನ್ನು ಉಪದೇಶಿಸಲಾಗದು' ಎಂದು ಹೇಳಿದೆ ( ಅ ೧೮, ಮಂ ೬೭ ).

**೭. ಓಂ ಮಂತ್ರದ ಧ್ಯಾನದಿಂದ ಸಾಕ್ಷಾತ್ಕಾರವು**— ಇನ್ನು ಧ್ಯಾನವನ್ನು ಕಲಿಸುವಾಗ 'ಓಂ' ಎಂಬ ಸಂಜ್ಞೆಯನ್ನೆ ಗುರುವು ಉಪದೇಶಿಸುವನೆಂದು ಉಪನಿಷತ್ತುಗಳು ಏಕರವದಿಂದ ಹೇಳುತ್ತಿವೆ. ಓಂಕಾರವು ಧ್ಯಾನದ ಸಾಧನವಷ್ಟೇ ಅಲ್ಲದೆ,

ಧ್ಯಾನದ ಸಾಧ್ಯವೂ ಇರುವುದೆಂಬುವನ್ನು ಮರೆಯಕೂಡದು. ಕ್ರಿಸ್ತಶಾಸ್ತ್ರದಲ್ಲಿ ಲೊಗೋಸ್ ( Logos ) ಎಂಬುವಕ್ಕಿಷ್ಟ ಸ್ಥಾನವೇ ನಮ್ಮ ತತ್ತ್ವಜ್ಞಾನದಲ್ಲಿ ಪ್ರಣವಕ್ಕಿದೆ. ಪ್ರಣವ ಸಹಿತವಾದ ಧ್ಯಾನದ ಮಹತ್ವವನ್ನು ಉಪನಿಷತ್ಸಾಹಿತ್ಯವು ಅಷ್ಟಿಷ್ಟು ಹೊಗಳುವುದಿಲ್ಲ. 'ಯಾವ ಪದವನ್ನು ಶ್ರುತಿಗಳೆಲ್ಲ ಉಚ್ಚರಿಸುವವೊ ಎಲ್ಲ ತಪಸ್ಯೆಯ ಲಕ್ಷ್ಯವಾವುದೊ ಯಾವುದನ್ನಪೇಕ್ಷಿಸಿ ಎಲ್ಲರೂ ಬ್ರಹ್ಮಚರ್ಯವನ್ನಾಚರಿಸುವರೊ ಆ ಬೀಜಾಕ್ಷರವನ್ನು ಹೇಳುವೆ ಕೇಳು, ಅದು 'ಓಂ' ಎಂಬುದು. ಅದುವೆ, ಅಕ್ಷರ ಬ್ರಹ್ಮವು ; ಅದುವೆ ತುರೀಯ ಸಂಕೇತವು ; ಅದುವೆ ಕಾಮಧೇನುವು, ( ಕಠ, ಅ ೧, ವ ೨, ಮಂ ೧೫–೧೭ ) ಎಂಬೀ ಶಬ್ದಗಳಲ್ಲಿ ಕಠವು ಧ್ಯೇಯವನ್ನೂ, ಧ್ಯಾನಸಾಧನವನ್ನೂ ಏಕೀಕರಿಸಿದೆ ; ಇಂತು ಈ ಓಂ ಎಂಬ ಕುರುಹಿನಲ್ಲಿ ಗುರಿ–ದಾರಿಗಳು ಒಂದಾಗಿವೆ. 'ಪ್ರಣವದ ದೇಟಿನಮೇಲೆ ಶಬ್ದಸಮೂಹವು ಎಲೆಗಳಂತೆ ಅಂಟಿಕೊಂಡಿದೆ' ಎಂದು ಛಾಂದೋಗ್ಯವು ಹೇಳುತ್ತಿದೆ ( ಛಾಂ, ಅ ೨, ಖಂ ೨, ಮಂ ೩ ). 'ಉಪನಿಷತ್ತುಗಳೆಂಬ ಧನುವನ್ನು ಹಿಡಿದು, ಉಪಾಸನೆಯಿಂದ ಹದನಾದ ಆತ್ಮಶರವನ್ನು ಹೂಡಿ, ಮನಸ್ಸು ಅದನ್ನು ಏಕಾಗ್ರವಾಗಿ ಕುರಿಯುತ್ತಿರುವಾಗ ಲಕ್ಷ್ಯವಾದ ಆ ಅಕ್ಷರವನ್ನು ವೇಧಿಸಬೇಕು. ಪ್ರಣವವೇ ಬಿಲ್ಲು, ಆತ್ಮವೇ ಅಂಬು, ಬ್ರಹ್ಮವೇ ಗುರಿ ; ಅಪ್ರಮತ್ತ ಚಿತ್ತದಿಂದ ಶರದಂತೆ ಗುರಿಯಲ್ಲಿ ತನ್ಮಯ ವಾಗುವಂತೆ ಎಸೆಯಬೇಕು' ( ಮುಂ ೨, ಖಂ ೨, ಮಂ ೩–೪ ). ಬಾಣದ ಮೊನೆ ಯನ್ನು ಕೂರಾಗಿಸಲು ಉಪಾಸನೆಯ ಅಗತ್ಯವನ್ನೂ ಬ್ರಹ್ಮವನ್ನು ತಾಕಲು ಧ್ಯಾನದ ಮತ್ತು ಅವಿರತಪರಿಶ್ರಮದ ಅವಶ್ಯಕತೆಯನ್ನೂ ಲಕ್ಷ್ಯವನ್ನು ಮುಟ್ಟಿದೊಡನೆ ಬಿಡಿಯಾಗಿ ಬೇರೆಯಾಗಿ ಆತ್ಮವು ಉಳಿಯದೆಂಬ ಮಾತನ್ನೂ ಈ ಮನೋರಮವಾದ ದೃಷ್ಟಾಂತದಲ್ಲಿ ವ್ಯಕ್ತಗೊಳಿಸಿದೆ. ಜೀವಾತ್ಮನ ವ್ಯಕ್ತಿತ್ವವು ಸಂಪೂರ್ಣ ಲಯಹೊಂದುವಂತೆ ಆತ್ಮ-ಬ್ರಹ್ಮೈ ಕ್ಯದ ಸ್ಥಿತಿಯನ್ನು ರೂಪಕಮುಖಾಂತರವಾಗಿ ಬಣ್ಣಿಸುವುದೇ ಆದರೆ ತತ್ತ್ವಾನುಭವವನ್ನು ಪಡಿಮೂಡಿಸಲಿಕ್ಕೆ ಶಬ್ದಸೃಷ್ಟಿಯು ಸಾಲದೆಂಬ ಮಾತನ್ನು ಮರೆಯಕೂಡದು. ಮುಂಡಕ ದಲ್ಲಿನ ಈ ರೂಪಕದಷ್ಟು ಉಚಿತವಾದ ರೂಪಕವು ಇನ್ನೊಂದು ದೊರೆಯದು. ಮತ್ತೀ ಓಂಕಾರವು ವೈಯಕ್ತಿಕ ಮಹತ್ವವುಳ್ಳದಷ್ಟೇ ಇರದೆ ವಿಶ್ವಕ್ಕೂ ಬಲಕೊಡುವಂತಹದು ಇರುವುದು. 'ಸೂರ್ಯನೇ ಇದನ್ನುಚ್ಚರಿಸುತ್ತ ಅಂತರಿಕ್ಷದಲ್ಲಿ ಚರಿಸುವನು' ಎಂದು ಒಂದುಕಡೆ ವರ್ಣನೆ ಉಂಟು ( ಛಾಂ, ಅ ೧, ಖಂ ೫, ಮಂ ೧,೩ ). ಇನ್ನಿದರ ಪುರಶ್ಚ ರಣದಿಂದ ಪ್ರಾಪ್ತವಾಗುವ ನೈತಿಕವರ್ಚಸ್ಸವು 'ಪ್ರಣವದ ಅನುಸಂಧಾನವನ್ನು ಮಾಡುವ ವನು ಪರೆಬಿಟ್ಟ ಹಾವಿನಂತೆ ಸರ್ವಪಾಪವಿಮುಕ್ತನಾಗಿ, ಮಂತ್ರಸಾಮರ್ಥ್ಯದಿಂದ ಬ್ರಹ್ಮ ಲೋಕವನ್ನೇರಿ ಶರೀರ ಪ್ರೇರಕನಾದ ಜೀವಘನಕ್ಕೆ ಅತೀತನಾದ ಪುರುಷನನ್ನು ಎವೆ

ಯಿಕ್ಕದೆ ನೋಡುವನು,' ಹೀಗೆ ಇರುವದೆಂದು ಪ್ರಶ್ನೋಪನಿಷತ್ತಿನಲ್ಲಿ (ಪ್ರ ೫, ಮಂ ೧-೫) ಗುರುವು ಸತ್ಯಕಾಮನಿಗೆ ಹೇಳಿರುವನು.

**೮. ಮಾಂಡೂಕ್ಯದಲ್ಲಿ ಓಂಕಾರದ ಗೌರವವು—** ಮಾಂಡೂಕ್ಯವು ಪ್ರಣವದ ಆಧ್ಯಾತ್ಮಿಕ ಮಹತ್ವವನ್ನು ಇನ್ನಿಷ್ಟು ವಿಶೇಷವಾಗಿ ಹೇಳುವುದು. ಓಂಕಾರದಲ್ಲಿ ಅ, ಉ, ಮಕಾರಗಳಷ್ಟೇ ಅಲ್ಲದೆ, ಈ ಮೂರಕ್ಷರಗಳನ್ನು, ಮಾತ್ರೆಗಳನ್ನು, ಮಿಕ್ಕಿದ ನಾಲ್ಕನೆಯದೊಂದು ಅ-ಮಾತ್ರ ಅಂಶವು ಉಂಟೆಂದು ಹೇಳಿದೆ. ಇತ್ತ ಚಿತ್ತದ ಅವಸ್ಥೆಗಳು (States of consciousness), ಅತ್ತ ಆತ್ಮನ ಭೂಮಿಕೆಗಳು ಈ ಎರಡನ್ನೂ ಮೇಳಾಗಿ ತರಬೇಕೆಂದು ಉಪನಿಷತ್ಕಾರರ ಮಾನಸವಿದ್ದಿತೆಂದು ತೋರುತ್ತಿದೆ. ಓಂ ಇದು ಚಿವವಸ್ಥೆಗಳ ಸಂಕೇತವೂ ಅಹುದು, ಜೀವಾತ್ಮನ ಭೂಮಿಕೆಗಳ ಕುರುಹೂ ಅಹುದು. ಎಂದರೆ, ಪ್ರಣವವು ಜಾಗೃತಿ-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥಾತ್ರಯದ ಸಂಕೇತವಾಗಿರುವದಲ್ಲದೆ ತುರ್ಯಾವಸ್ಥೆಯ ಸಂಜ್ಞೆಯೂ ಆಗಿರುವಂತೆ, ಅತ್ತ ವೈಶ್ವಾನರ-ತೈಜಸ-ಪ್ರಾಜ್ಞರೆಂಬ ಮೂರು ಪದವಿಗಳನ್ನಲಂಕರಿಸಿದುದಲ್ಲದೆ, 'ಆತ್ಮ'ವೆಂಬ ನಾಲ್ಕನೆಯ ನೈಜಸ್ಥಿತಿಯ ಕುರುಹೂ ಆಗಿರುವುದು. ಮೂರನ್ನು ಮಿಕ್ಕಿದ ಈ ನಾಲ್ಕನೆಯ ಅಂಶವು ಮನಃಶಾಸ್ತ್ರದ ಇಂದ್ರಿಯಾತೀತಸ್ಥಿತಿ (Fourth dimension) ಆಗಿರುವ ತೂರ್ಯೆಯಾಗಿದೆಯಲ್ಲದೆ, ಅಧ್ಯಾತ್ಮಶಾಸ್ತ್ರದ 'ಆತ್ಮ'ವೂ ಆಗಿಹುದು. ವೈಶ್ವಾನರನು ಸ್ಥೂಲಭೋಗಿ; ತೈಜಸನು ಸೂಕ್ಷ್ಮಭೋಗಿ. ಪ್ರಾಜ್ಞನೆಂದರೆ ತತ್ವಜ್ಞಾನವು ಗುರುತಿಸುವ 'ಈಶ್ವರ'ನು, ಸರ್ವೇಶ್ವರನು, ಸರ್ವಜ್ಞನು, ಸರ್ವಾಂತರ್ಯಾಮಿಯು, ಸರ್ವದ ಯೋನಿಯು, ಸರ್ವದ ಹುಟ್ಟುಸಾವುಗಳಿಗೆ ಮೂಲಕಾರಣನು. ಇದಕ್ಕೆ ಪ್ರತಿಯಾಗಿ ತತ್ವಜ್ಞಾನವು 'ದಿಕ್ಕಾಲಾದ್ಯನವಚ್ಛಿನ್ನ' (Absolute) ವೆಂದು ಗುರುತಿಸುವುದನ್ನು ತುಲನಾತ್ಮಕವಾಗಿ ನೋಡಬಹುದು. 'ಆತ್ಮನು ಅಂತಃಪ್ರಜ್ಞನಲ್ಲ, ಬಹಿಃಪ್ರಜ್ಞನಲ್ಲ, ಉಭಯತಃ ಪ್ರಜ್ಞನೂ ಅಲ್ಲ; ಪ್ರಜ್ಞಾನಘನನೂ ಅಲ್ಲ, ಪ್ರಜ್ಞನೂ ಅಲ್ಲ, ಅಪ್ರಜ್ಞನೂ ಅಲ್ಲ; ಆತನು ದೃಷ್ಟಿಗೆ, ವ್ಯವಹಾರಕ್ಕೆ, ಗ್ರಹಣಕ್ಕೆ, ಲಕ್ಷಣಕ್ಕೆ, ಚಿಂತನಕ್ಕೆ, ನಿರ್ದೇಶಕ್ಕೆ ಅತೀತನು, ತನ್ನ ಪ್ರತ್ಯಯವು ತನಗೇ ಇದ್ದವನು; ಪ್ರಪಂಚವು ಆತನಲ್ಲಿ ನಿರಸ್ತವಾಗುವುದು; ಶಾಂತನು, ಶಿವನು, ಅದ್ವೈತನು' (ಮಾಂ, ಮಂ ೧-೧೨). ಇಂತು ಮನಃಶಾಸ್ತ್ರ-ಅಧ್ಯಾತ್ಮಶಾಸ್ತ್ರಗಳಿಗೆ (Psychology and Metaphysics) ಅನ್ವಯಿಸುವಂತೆ ಓಂಕಾರದ ಅರ್ಥಮಾಡುವುವರ ಪ್ರಯೋಜನವೇನೆಂದರೆ ಜೀವಾತ್ಮದ ಅನ್ಯ ಭೂಮಿಕೆಗಳ ಉಪಶಮವಾಗಿ ಆತ್ಮನು ತುರೀಯ ಅವಸ್ಥೆಯಲ್ಲಿ ನೆಲೆಯಾಗಿ ಊರಿಕೊಳ್ಳುವದಕ್ಕೆ ನೆರವಾಗುವುದು. ಮಾಂಡೂಕ್ಯದಲ್ಲಿಯಲ್ಲದೆ ಮತ್ತೆ ಬೇರೆಕಡೆ ಪ್ರಣವಕ್ಕೆ

ಇಷ್ಟೊಂದು ಔನ್ನತ್ಯವೂ, ಪ್ರಣವಪುರಶ್ಚರಣದಿಂದೊದಗುವ ಆಧ್ಯಾತ್ಮಿಕ ವರ್ಚಸ್ಸಿಕ್ಕೆ ಇಷ್ಟೊಂದು ಗೌರವವೂ ಕಂಡುಬರವು.

**೯. ಯೋಗಸಾಧನವು**— ಉಪನಿಷತ್ತುಗಳ ಲಕ್ಷ್ಯವು ವ್ಯಾವಹಾರಿಕವಾಗಿರುವುದರಿಂದ ಯೋಗಸಾಧನದಿಂದ ಬ್ರಹ್ಮಸಾಕ್ಷಾತ್ಕಾರವು ಹೇಗೆ ಆಗುವುದೆಂಬುವನ್ನು ಕುರಿತು ಅವುಗಳಲ್ಲಿ ಕೆಲ ಸೂಚನೆಗಳನ್ನು ಅಲ್ಲಲ್ಲಿ ಕಾಣಬಹುದು. 'ದೇಹವನ್ನು ಅರಣಿಯನ್ನಾಗಿಯೂ ಪ್ರಣವವನ್ನು ಉತ್ತರಾರಣಿಯನ್ನಾಗಿಯೂ ಮಾಡಿ, ಧ್ಯಾನವೆಂಬ ಕಡೆಯುವಿಕೆಯಿಂದ ದೇವನೆಂಬ ಅಗ್ನಿಯನ್ನು ಪ್ರಕಟಮಾಡಿಕೊಳ್ಳತಕ್ಕದ್ದು' ಎಂದು ( ಶ್ವೇ, ಅ ೧, ಮಂ ೧೪ ) ಶ್ವೇತಾಶ್ವತರವು ಅಸಂದಿಗ್ಧವಾಗಿ ಹೇಳುತ್ತಿದೆ. ಈ ಅವತರಣಿಕೆಯಮೇಲಿಂದ ಕಠದಲ್ಲಿನ ಮತ್ತೊಂದು ಸಂದರ್ಭದ ಅರ್ಥವು ಸ್ಪಷ್ಟವಾಗುವುದು. ಗರ್ಭಿಣಿಯ ಗರ್ಭದಂತೆ ಕಡೆಯುವ ಕಟ್ಟಿಗೆಗಳಲ್ಲಿ ಅಡಗಿದ ಅಗ್ನಿನಾರಾಯಣನನ್ನು ಉಪಾಸಕರು ಅಹೋರಾತ್ರವೂ ಜಾಗೃತರಿದ್ದು ಆಹುತಿಸಹಿತವಾಗಿ ಅರ್ಚಿಸುತ್ತಿರುವಂತೆ, ( ಪ್ರಣವ–ದೇಹಗಳೆಂಬ) ಅರಣಿಗಳಲ್ಲಿನ ಆಧ್ಯಾತ್ಮಿಕ ಪಾವಕನನ್ನು ಕಡೆದುತೆಗೆದು ಚಿತ್ತವೃತ್ತಿಗಳ ಆಹುತಿಯನ್ನಿಕ್ಕುತ್ತಿರಬೇಕೆಂದು ನಾವಲ್ಲಿ ( ಕಠ, ಅ ೨, ವ ೪, ಮಂ ೮ ) ತಿಳಿದುಕೊಳ್ಳಬಹುದು. ಕಠೋಪನಿಷತ್ತಿನಲ್ಲಿನ ಈ ಬರೆಹವನ್ನು ನಾವು ಬೇರೆ ತೆರನಾಗಿಯೂ ಊಹಿಸಿಕೊಳ್ಳಬಹುದು. ಏಕೆಂದರೆ ಸ್ವಲ್ಪ ಮುಂದೆ 'ಯೋಗಸಾಧನದಲ್ಲಿ ಪ್ರಾಣ–ಅಪಾನಗಳೇ ಆ ಎರಡು ಕಟ್ಟಿಗೆಗಳೆಂದೂ, ಅವೆರಡರ ನಡುವೆ ಎಲ್ಲ ವಿಶ್ವೇದೇವತೆಗಳ ಕೈಯಿಂದ ಪೂಜೆಯನ್ನು ಕೈಕೊಂಬ ಸುಂದರ ವಾಮನನು ಕುಳಿತಿರುವನೆಂದೂ' ಅದೇ ಉಪನಿಷತ್ತಿನಲ್ಲಿ ( ಕಠ, ಅ ೨, ವ ೫, ಮಂ ೩ ) ಬಂದಿದೆ. ಮತ್ತು ಮುಂಡಕೋಪನಿಷತ್ತಿನಲ್ಲಿಯೂ 'ಚಿತ್ತ ಪ್ರಾಣಗಳು ನಿಕಟಸಂಬಂಧಿಗಳಾಗಿವೆಯಾದಕಾರಣ, ಪ್ರಾಣಸಂಯಮನವಾದ ಮೇಲೆ ಚಿತ್ತಶುದ್ಧಿಯಾಗಿ ಆತ್ಮನು ಸ್ವವೈಭವದಿಂದ ಪ್ರಕಟನಾಗುವನು' ಎಂಬೀ ಯೋಗವಿಷಯಕವಾದ ತತ್ವವು ಬಂದಿದೆ ( ಮು ೩ ಖಂ ೧, ಮಂ ೯ ).

**೧೦. ಶ್ವೇತಾಶ್ವತರದಲ್ಲಿ ಯೋಗವು**— ಉಳಿದ ಉಪನಿಷತ್ತುಗಳಿಗಿಂತ ಶ್ವೇತಾಶ್ವತರದಲ್ಲಿ ಯೋಗಸಿದ್ಧಾಂತವು ಹೆಚ್ಚು ವ್ಯವಸ್ಥಿತವಾಗಿ ಹೇಳಲ್ಪಟ್ಟಿದೆ. ಅದರ ದ್ವಿತೀಯ ಖಂಡದಲ್ಲಿ ಯೋಗದ ಪ್ರಕ್ರಿಯೆಗಳನ್ನೂ ಫಲಗಳನ್ನೂ ಒಳ್ಳೆಯ ಪದ್ಧತಿಯಲ್ಲಿ ಹೇಳಿರುವುದರಿಂದ, ಯೌಗಿಕಸಿದ್ಧಾಂತವು ಸುಸಂಘಟಿತವಾಗಿ, ಪ್ರತ್ಯೇಕವಾಗಿ ಏರ್ಪಡುವ ಕಾಲದಲ್ಲಿ ಆ ಉಪನಿಷತ್ತು ಹುಟ್ಟಿತೆಂದು ಹೇಳಬಹುದು. 'ಶರೀರದ ತ್ರಿಭಾಗಗಳನ್ನೂ ಸಮವಾಗಿ ನಿಲ್ಲಿಸಿ, ಮನಸ್ಸನ್ನೊಡಗೂಡಿದ ಇಂದ್ರಿಯಗಳನ್ನು ಹೃದಯದಲ್ಲಿ ನೆಟ್ಟು, ಬ್ರಹ್ಮತತ್ವವನ್ನು ಧ್ಯಾನಿಸಿ, ಆ ನೌಕೆಯನೆರವಿನಿಂದ ಭಯಾವಹವಾದ ಹೊಳೆಗಳನ್ನು

ದಾಟಬೇಕು. ಪಾಪಗಳನ್ನು ನಿರೋಧಿಸಿ, ಶರೀರವ್ಯಾಪಾರಗಳಲ್ಲಿ ಸ್ವಸ್ಥತೆಯನ್ನುಂಟು ಮಾಡಿ, ಕ್ಷೀಣವಾದ ಪ್ರಾಣವನ್ನು ನಾಸಿಕೆಯು ಹೊರಕ್ಕೆಹಾಕಬೇಕು. ಉನ್ಮತ್ತವಾದ ಕುದುರೆಹೂಡಿದ ರಥದಂತಿದ್ದ ಮನವನ್ನು ತಡೆದುನಿಲ್ಲಿಸಬೇಕು. ಹರಳು, ಮಳಲು, ಉರಿಗಳಿಲ್ಲದ, ಸಮವಾದ, ಮಡಿಯಾದ, ಸಪ್ಪಳವಿಲ್ಲದ, ನಿರ್ಜಲವಾದ ಭೂಮಿಯಲ್ಲಿ ಕುಳ್ಳಿರಬೇಕು. ಮನಸ್ಸಿಗೆ ಅನುಕೂಲವೂ, ಕಣ್ಣಿಗೆ ಸುಂದರವೂ ಆದ ಗುಹೆಯೊಳಗಿನ ಏಕಾಂತಿಕ ಪ್ರದೇಶದಲ್ಲಿ ಯೋಗವನ್ನಾಚರಿಸಬೇಕು ’ ( ಶ್ವೇ, ಅ ೨, ಮಂ ೮–೧೦ ). ಯೋಗಸಾಧನದಿಂದ ಆಗುವ ಶಾರೀರಿಕ ಪರಿಣಾಮಗಳನ್ನೂ ಶ್ವೇತಾಶ್ವತರವು ಹೇಳಿದೆ. ‘ ಪಂಚಭೂತಗಳಿಂದ ಉದ್ಭೂತವಾದ ಪಂಚವಿಧಸಿದ್ಧಿಗಳಿಂದ ರೋಗ–ಜರಾ–ಮೃತ್ಯುಗಳು ನಷ್ಟವಾಗುವವು. ಯೋಗಿಯ ದೇಹವು ಯೋಗಾಗ್ನಿಯಿಂದ ತುಂಬಿಕೊಂಡುದರಿಂದ ಹಗುರಾಗಿಯೂ ನಿರಾಮಯವಾಗಿಯೂ ವೈಷಯಿಕಪ್ರವೃತ್ತಿಯು ಇಲ್ಲದಂತಾಗಿಯೂ ಸ್ವರವು ಕಿವಿಗಿಂಪಾಗಿಯೂ ಬಣ್ಣವು ಮನೋಹರವಾಗಿಯೂ ಶ್ವಾಸವು ಸುಗಂಧ ಪೂರಿತವಾಗಿಯೂ ಮೂತ್ರಪುರೀಷಗಳು ಅತ್ಯಲ್ಪವಾಗಿಯೂ ಆಗುವವು. ಯೋಗ ಪ್ರವೃತ್ತಿಯ ಪ್ರಥಮಲಕ್ಷಣಗಳಿವು ’ ( ಶ್ವೇ, ಅ ೨, ಮಂ ೧೨–೧೩ ). ಅಲ್ಲಿಯೇ ಹೇಳಿದ ಆಧ್ಯಾತ್ಮಿಕ ಪರಿಣಾಮಗಳು ಇಲ್ಲಿ ಪ್ರಸ್ತುತವಿಲ್ಲದ್ದರಿಂದ ಇದೇ ಅಧ್ಯಾಯದಲ್ಲಿ ಮುಂದೆ ನಿರೂಪಿಸಲ್ಪಟ್ಟಿವೆ.

**೧೧. ಈಶನನ್ನು ಸಾಕ್ಷಾತ್ಕರಿಸಿಕೊಳ್ಳುವ ಶಕ್ತಿ—** ಯೋಗ್ಯಾಭ್ಯಾಸದ ಕೊನೆಯೆಲ್ಲಿ ? ಅರ್ಥಾತ್ ಈಶಸಾಕ್ಷಾತ್ಕಾರದಲ್ಲಿ. ಹಾಗಾದರೆ ಈಶಸಾಕ್ಷಾತ್ಕಾರವೆಂದರೇನು ? ಅದರ ರೂಪ ರೀತಿಯಾವದು ? ಎಂದು ಕೇಳಬಹುದು. ಆದರೆ ತತ್ಪೂರ್ವದಲ್ಲಿ ‘ ಈಶನನ್ನು ಸಾಕ್ಷಾತ್ಕರಿಸಿಕೊಳಬಲ್ಲ ಶಕ್ತಿಯಾವುದು? ಎಂಬ ಪ್ರಶ್ನೆಯನ್ನು ಚರ್ಚಿಸುವ. ಈಶಸಾಕ್ಷಾತ್ಕಾರವಾಗುವದೇನು ಇಂದ್ರಿಯಗಳಿಗೋ ? ವಿಚಾರಕ್ಕೋ ? ಏನು ಇಂದ್ರಿಯಗಳನ್ನು ಮಿಕ್ಕಿ ಬುದ್ಧಿಯನ್ನು ಮೀರಿ ಇರುವ ಅಂತರ್ಜ್ಞಾನಶಕ್ತಿಗೋ ? ಈಶನ ರೂಪವು ಕಣ್ಣಿನ ಅಳತೆಯಲ್ಲಿ ಹಿಡಿಸಲರಿಯದೆಂದು ಕೇನೋಪನಿಷತ್ತಿನ ಹೇಳಿಕೆ. ‘ಅವನ ರೂಪವನ್ನು ಗ್ರಹಿಸಲು ಕಣ್ಣು ಈಡಲ್ಲ; ಯಾರೂ ಅವನನ್ನು ಕಣ್ಣುಗಳಿಂದ ಕಂಡಿಲ್ಲ; ಹೃದಯದಿಂದಾಗಲಿ ಮನೀಷೆಯಿಂದಾಗಲಿ ಮನಸ್ಸಿನಿಂದಾಗಲಿ ಅವನನ್ನು ಕಾಣುವುದಾಗದು; ಇದನ್ನು ಬಲ್ಲವರೇ ಅಮೃತರಾಗುವರು ’ (ಕ, ಅ ೨, ವ ೬, ಮಂ ೯ ). ಇತ್ತೀಚಿನ ಕೆಲವು ಭಾಷ್ಯಕಾರರು ಮೇಲಿನ ಮಂತ್ರವನ್ನು ಬೇರೆ ವಿಧವಾಗಿ ಭಾಷಾಂತರಿಸುವರು. ‘ ಚರ್ಮಚಕ್ಷು ’ ಗಳಿಂದ ಅವನನ್ನು ನೋಡುವದಾಗದಿದ್ದರೂ ‘ ಹೃದಯದಿಂದಾಗಲಿ, ಮನೀಷೆಯಿಂದಾಗಲಿ, ಮನಸ್ಸಿನಿಂದಾಗಲಿ ಈಶನನ್ನು ಸಾಕ್ಷಾತ್ಕರಿಸಿಕೊಳ್ಳ

ಬಹುದು ' ಎಂದು ಇವರ ಅಭಿಪ್ರಾಯವು. ಮೇಲ್ಕಾಣಿಸಿದ ಮಂತ್ರದ ವಾಕ್ಯರಚನೆಯು ಈ ಭಾಷ್ಯಕ್ಕೂ ವಿರೋಧವಾಗುವಂತಿಲ್ಲವೆಂಬುವದೇನೋ ನಿಜ. ಆದರೆ ಈ ಮಂತ್ರದ ಮುಂದಿನ ಮಂತ್ರವೇ ಸುವ್ಯಕ್ತವಾಗಿ ' ಮಾತಿನಿಂದಾಗಲಿ, ಮನಸ್ಸಿನಿಂದಾಗಲಿ, ಕಣ್ಣಿನಿಂದಾಗಲಿ ಅವನನ್ನು ಪಡೆಯುವದಾಗದು. ' ಅವನು ಉಂಟು ' ಎಂದರಿತವರೇ ಪಡೆಯುವರು; ಉಳಿದವರಿಲ್ಲ ' ಎಂದು ಸಾರುತ್ತಿದೆ ( ಕ, ಅ ೨, ವ ೬, ಮಂ ೧೨ ). ಮನಸ್ಸಿನಿಂದ ಈಶನನ್ನು ಸಾಕ್ಷಾತ್ಕರಿಸಿಕೊಳ್ಳುವದಾಗದೆಂದು ಇಲ್ಲಿ ಹೇಳಿರುವದೆಂದಮೇಲೆ ಮೊದಲಿನ ಮಂತ್ರದ ಎರಡನೆಯ ಚರಣದೊಳಗಿನ ನಕಾರವನ್ನು ಮುಂದೂ ಅನ್ವಯಿಸಿಕೊಂಡು ಮನಸ್ಸಿನಿಂದ ಸಾಕ್ಷಾತ್ಕರಿಸಿಕೊಳ್ಳುವದು ಎಂದೆಂದೂ ಆಗದು. ಎಂದೇ ಅರ್ಥವನ್ನು ಮಾಡುವುದುಚಿತವು. ಮತ್ತೊಂದು ಲಕ್ಷ್ಯದಲ್ಲಿರಿಸಬೇಕಾದ ಮಹತ್ವದ ಮಾತೆಂದರೆ ಈಶ ಸಾಕ್ಷಾತ್ಕಾರದ ಸತ್ಯತೆಯು ' ವಸ್ತು ' ಗಳ ಅಸ್ತಿತ್ವದಂತಿದೆ. ಅದಕ್ಕೆ ಅಹುದು, ಅಲ್ಲ ಎನ್ನುವಂತಿಲ್ಲ. ಅದನ್ನು ವಿಚಾರವಿವೇಕದಿಂದ ಬಗೆಹರಿಸಬೇಕಾಗಿಲ್ಲ. ' ಈಶನಿರುವನು ' ಎಂದು ತಿಳಿದಿದ್ದರೆ ಮಾತ್ರ ಈಶಸಾಕ್ಷಾತ್ಕಾರವಾಗುದದು. ವಾಸ್ತವಿಕ ಅಸ್ತಿತ್ವವನ್ನು ಸಾಧಕ ಪ್ರಮಾಣಗಳಿಂದ ಸಾಧಿಸಬೇಕಾಗಿಲ್ಲ, ಬಾಧಕ ಪ್ರಮಾಣಗಳಿಂದ ಅದಕ್ಕೆ ಬಾಧೆ ಬರುವಂತಿಲ್ಲ. ನಮ್ಮ ಘಟಪಟನ್ಯಾಯದ ವಾಕ್ಚಾಪಲ್ಯವಾಗಲಿ ಪ್ರತಿಭಾಪೂರಿತ ಉನ್ನತೋನ್ನತ ವಿವೇಚನಾ ಸರಣಿಯಾಗಲಿ ಒಂದು ವಸ್ತುವಿನ ವಾಸ್ತವಿಕ ಅಸ್ತಿತ್ವವನ್ನು ಅಣುಮಾತ್ರವಾದರೂ ಚಲಿಸಲರಿಯದು. ಅಂತೂ ಏನು ? ಇಂದ್ರಿಯಗಳಾಗಲಿ ವಿಚಾರವಾಗಲಿ ಈಶನನ್ನು ಸಾಕ್ಷಾತ್ಕರಿಸಿಕೊಳ್ಳಲು ಶಕ್ತವಲ್ಲ. ಅದಿರಲಿ. ಈಶನನ್ನು ಸಾಕ್ಷಾತ್ಕರಿಸಿಕೊಳ್ಳಬಹುದಾದರೆ ಅದಾವ ಶಕ್ತಿಯಿಂದ ? ಮನುಷ್ಯನಲ್ಲಿ ಅಂಥ ಶಕ್ತಿಯಿದೆಯೇ ? ಕಠೋಪನಿಷತ್ತಿನೊಳಗಿನ ಇನ್ನೊಂದು ಮಂತ್ರವು ಈ ಪ್ರಶ್ನೆಗೆ ಉತ್ತರವನ್ನೀಯುವುದು. ' ಎಲ್ಲ ಭೂತಜಾತದಲ್ಲಿ ಅಡಗಿರುವ ಈ ಆತ್ಮನು ಪ್ರಕಟನಾಗುವುದಿಲ್ಲ. ಆದರೆ ಸೂಕ್ಷ್ಮವಾಗಿ ನೋಡಬಲ್ಲವರ ಸೂಕ್ಷ್ಮವಾದ ಏಕಾಗ್ರಬುದ್ಧಿಗೆ ಮಾತ್ರ ತೋರುವನು ' ( ಕ, ಅ ೧, ವ ೩, ಮಂ ೧೨ ). ಆದರೆ ಈ ' ಬುದ್ಧಿ ' ಯ ಸಾಕ್ಷಾತ್ಕಾರ ಸಾಮರ್ಥ್ಯದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಭಗವದ್ಗೀತೆಯಲ್ಲಿ ( ಅ ೧, ಮಂ ೨೧, ) ಒಂದೆಡೆಗೆ ಈಶಸಾಕ್ಷಾತ್ಕಾರದ ಆತ್ಯಂತಿಕ ಸುಖವು ಬುದ್ಧಿಗ್ರಾಹ್ಯವೆಂದು ಹೇಳಿದ್ದಾಗಿದೆ; ಆದರೆ ಅದೆ ಇನ್ನೊಂದೆಡೆಗೆ ( ಅ ೩, ಮಂ ೪೨ ) ಈಶನು ಇಂದ್ರಿಯಮನಾದಿಗಳನ್ನು ಮಿಕ್ಕಿರುವಂತೆ ಬುದ್ಧಿಯನ್ನಾದರೂ ಮಿಕ್ಕಿರುವನೆಂದು ಹೇಳಿದೆ. ಆದರೆ ಈಶನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲ ಅಂತಃಶಕ್ತಿಯನ್ನು ಅಚ್ಚುಕಟ್ಟಾಗಿ ಬಣ್ಣಿಸಲಿಕ್ಕೆ ಬರದಾಗಲು ಅದಕ್ಕೆ ಒಂದು ' ಬುದ್ಧಿ ' ಯೆಂದೋ ' ವಿಜ್ಞಾನ ' ವೆಂದೋ ಶಬ್ದವನ್ನು ಶಾಸ್ತ್ರಕಾ

ರರೂ ಹುಟ್ಟಿಸಿಕೊಳ್ಳಬೇಕಾಗುವದು. ಉಪನಿಷತ್ತುಗಳು ಇನ್ನೂ ಒಂದು ದಸ್ಟಿಯಿಂದ ಈಶಸಾಕ್ಷಾತ್ಕಾರದ ವಿಚಾರವನ್ನು ವಿವೇಚಿಸುವವು. ಆ ವಿಚಾರವು ಮಾನಸಶಾಸ್ತ್ರದ ರೀತಿಯಲ್ಲಿ ಅಲ್ಲ, ನೀತಿಶಾಸ್ತ್ರದ ರೀತಿಯಲ್ಲಿ. ಮುಂಡಕೋಪನಿಷತ್ತು ಅನ್ನುವದೇ ನಂದರೆ, ' ಕಣ್ಣಿನಿಂದಾಗಲಿ, ಮಾತಿನಿಂದಾಗಲಿ, ತಪಸ್ಸಿನಿಂದಾಗಲಿ, ಕರ್ಮದಿಂದಾಗಲಿ ದೇವನನ್ನು ಗ್ರಹಿಸುವುದಾಗದು. ಸತ್ವದಲ್ಲಿ ಶುದ್ಧಿಯಾಗಿ ನಮ್ಮ ಜ್ಞಾನದಲ್ಲಿ ತಿಳಿ ಯಟುಂಟಾಗಬೇಕು; ಆಗ ಧ್ಯಾನದಿಂದ ಆ ನಿಷ್ಕಲನಾದ ದೇವನನ್ನು ಕಾಣುವೆವು ' ( ಮುಂ ೩, ಖಂ ೧, ಮಂ ೮ ). ಇದೇ ಅರ್ಥದ ಒಂದು ಮಂತ್ರವು ಕಠೋಪನಿಷತ್ತಿ ನಲ್ಲಿದೆ. ' ಸಂಕಲ್ಪರಹಿತನಾದವನೂ ಶೋಕವನ್ನಳಿದವನೂ ತನ್ನ ತ್ರಿಕರಣಶುದ್ಧಿಯ ( ಧಾತುಪ್ರಸಾದ ) ಮೂಲಕ ಆತ್ಮನ ಮಹಿಮೆಯನ್ನು ಕಾಣುವನು ' ( ಕ, ಅ ೧, ವ ೨, ಮಂ ೨೦ ). ಮೇಲಿನ ಮಂತ್ರದಲ್ಲಿ ಕೆಲವರು ' ಧಾತುಪ್ರಸಾದ ' ಎಂಬಲ್ಲಿ ' ಧಾತುಃ ಪ್ರಸಾದ ' ವೆಂಬ ಯಾವುದೋ ಪಾಠಾಂತರವನ್ನು ತರುವರು. ಆದರೆ ಇಲ್ಲಿ 'ಧಾತೃ ' ವಿನ ( ಸೃಷ್ಟಿಕರ್ತ ) ಸಂಬಂಧವಿಲ್ಲ. 'ಧಾತುಃ ಪ್ರಸಾದ' ವೆಂದರೆ 'ಚಿತ್ತಶುದ್ಧಿ' ಎಂದು ತಿಳಿಯುವದೇ ನ್ಯಾಯವೂ ಅಗತ್ಯವೂ ಆಗಿದೆ.

**೧೨. ಈಶನು ಎಲ್ಲಿಯೂ ತುಂಬಿಕೊಂಡಿರುವನೆಂಬ ಬಗ್ಗೆ**—ಅನು ಭಾವಿಯು ದೇವನನ್ನು ಕಾಣುವನು, ' ಪಶ್ಯತೇ ' ಎಂದು ಕಠೋಪನಿಷತ್ತಿನಲ್ಲಿ ಹೇಳಿರು ವಂತೆ ಬೇರೆ ಉಪನಿಷತ್ತುಗಳಲ್ಲಿಯೂ ಮತ್ತೆ ಮತ್ತೆ ಒತ್ತಿ ಒತ್ತಿ ಹೇಳಲಾಗಿದೆ. ಅದೇ ಕಠೋಪನಿಷತ್ತಿನಲ್ಲಿ ಇನ್ನೊಂದೆಡೆಗೆ ' ಹುಲ್ಲುಸೊಪ್ಪಿನೊಳಗಿಂದ ಕಡ್ಡಿಯನ್ನು ಹಿರಿದು ತೆಗೆಯುವಂತೆ ನಾವು ಧೈರ್ಯದಿಂದ ದೇಹದೊಳಗಿಂದ ಆತ್ಮನನ್ನು ಹಿರಿದು ತೆಗೆಯಲು ಬೇಕು. ಆ ತೇಜಸ್ವಿಯಾದ ಆತ್ಮನನ್ನೆ ಅಮೃತನೆಂದರಿಯಬೇಕು ; ಆ ತೇಜಸ್ವಿಯನ್ನೆ ಅಮೃತನೆಂದರಿಯಬೇಕು ' ( ಕ, ಅ ೨, ವ ೬, ಮಂ ೧೭ ) ಈ ಭಂಗುರ ದೇಹದೊಳ ಗಿಂದ ಆತ್ಮನನ್ನು ಕರೆದು ( ಹಿಂಡಿ ) ಕೊಳ್ಳಬೇಕಾದರೆ ಆತ್ಮನ ಓತಪ್ರೋತನಾಗಿರಲಿಕ್ಕೆ ಬೇಕು. ದೇಹವು ಹೊಟ್ಟು ; ಆತ್ಮನು ಅದರೊಳಗಿನ ಗಟ್ಟಿಕಾಳು ಇದ್ದಂತೆ. ಹೊಟ್ಟೆ ಬೇರೆ ಗಟ್ಟಿಕಾಳು ಬೇರೆ ಮಾಡಬೇಕಾದದ್ದು ಅವಶ್ಯವಿದ್ದರೂ ಕಾಳನ್ನು ಹೊಟ್ಟು ( ಗೊಳ ಲಿಯು ) ಮುಸುಕಿರುವುದು ಸ್ವಾಭಾವಿಕ. ಹಾಗೆಯೆ ಆತ್ಮನಿಗೆ ದೇಹವು ಮುಸುಕಿರು ವುದು ; ಅವೆರಡನ್ನು ವಿಂಗಡಿಸಲಿಕ್ಕೆಬೇಕು. ' ಕತ್ತಿಯು ಒರೆಯಲ್ಲಿರುವಂತೆ, ವಿಶ್ವಂಭ ರನು ವಿಶ್ವದ ಗೂಡಿನಲ್ಲಿರುವಂತೆ, ಈ ಪ್ರಜ್ಞಾತ್ಮನು ನಖಶಿಖಾಂತವಾಗಿ ದೇಹದಲ್ಲಿ ತುಂಬಿ ಕೊಂಡಿರುವನು ' ( ಕೌ, ಅ ೪ ಮಂ ೨೦ ). ಈ ಪ್ರಕಾರವಾಗಿ ಆತ್ಮನ ಓತಪ್ರೋತ ತ್ವದ ಬಗ್ಗೆ ಕೌಷೀತಕಿ ಉಪನಿಷತ್ತು ಹೇಳುವುದು. ಶ್ವೇತಾಶ್ವತರೋಪನಿಷತ್ತು ಈ ಬಗ್ಗೆ

ಹೇಳುವುದೇನಂದರೆ, ‘ ಎಳ್ಳಿನಲ್ಲಿ ಎಣ್ಣೆಯಂತೆ, ಮೊಸರಿನಲ್ಲಿ ತುಪ್ಪದಂತೆ, ಝರಿಯಲ್ಲಿ ನೀರಿನಂತೆ, ಅರಣಿಗಳಲ್ಲಿ ಬೆಂಕಿಯಂತೆ ದೇಹದಲ್ಲಿ ಆತ್ಮವು ಓತಪ್ರೋತವಾಗಿರುವುದು ’ ( ಶ್ವೇ, ಅ ೧, ಮಂ ೧೫ ). ಶ್ವೇತಾಶ್ವತರದ ಇನ್ನೊಂದು ಮಂತ್ರದಲ್ಲಿ ‘ ತುಪ್ಪದಮೇಲಿನ ತಿಳುವಾದ ಕೆನೆಯಂತೆ ಎಲ್ಲ ಭೂತಜಾತಗಳಲ್ಲಿ ಆತ್ಮನು ಅಡಕವಾಗಿರುವನು. ಈ ವಿಶ್ವ ವನ್ನೆಲ್ಲ ಒಬ್ಬನೇ ಒಬ್ಬನಾಗಿ ಮುಸುಕಿರುವ ಆ ದೇವನನ್ನು ತಿಳಿದರೆ ಎಲ್ಲ ಪಾಪಗಳಿಂದ ಮಾನವನು ಮುಕ್ತನಾಗುವನು ’ ( ಶ್ವೇ, ಅ ೪, ಮಂ ೧೬ ). ಈ ಎಲ್ಲ ಉಪದೇಶದ ಸಾರವೇನೆಂದರೆ, ಆತ್ಮನು ದೇಹದಲ್ಲಿ ಓತಪ್ರೋತನಾಗಿರುವುದರಿಂದ ನಾವು ಯುಕ್ತರೀತಿ ಯಲ್ಲಿ ಪ್ರಯತ್ನಿಸಿದ್ದಾದರೆ ಆತ್ಮನನ್ನು ನಮ್ಮಲ್ಲಿಯೇ ನಾವು ಕಾಣಬಹುದೆಂಬುದರಲ್ಲಿ ಸಂದೇಹವಿಲ್ಲೆಂಬುದೇ.

**೧೩. ಅನುಭಾವದ ವಿವಿಧ ಪರಿಗಳು—** ತನ್ನಲ್ಲಿಯೇ ಆತ್ಮನನ್ನು ಕಾಣಬಹುದಾದುದರಿಂದಲೇ ಅನುಭಾವಿಯು ಆ ತೆರದ ಚಿತ್ತಶುದ್ಧಿಯನ್ನೂ ಧ್ಯಾನಧಾರ ಣಾದಿಗಳನ್ನೂ ಆಶ್ರಯಿಸಿ ಈಶನನ್ನು ಶೋಧಿಸುವನು ; ಮತ್ತು ಅದು ಯುಕ್ತವೇ ಸೈ. ಅಧ್ಯಾತ್ಮಪಥದಲ್ಲಿ ಅನುಭಾವಿಯು ಏನೇನನ್ನು ಕಾಣುವನೆಂಬುದನ್ನೆಲ್ಲ ಉಪನಿಷತ್ತು ಗಳಲ್ಲಿ ಹೇಳಿರದಿದ್ದರೂ ನಾದಗಳ ಬಗ್ಗೆಯೂ ವರ್ಣಗಳ ಬಗ್ಗೆಯೂ ಸಾಕಷ್ಟು ಮಾತು ಗಳನ್ನು ಹೇಳದೆ ಹೋಗಿಲ್ಲ. ಒಟ್ಟಾರೆ ಅನುಭಾವದ ನಾಲ್ಕು ಪರಿಗಳನ್ನು ಹೇಳಿದ್ದುದು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಕಾಣಬಹುದು ; ಅವಾವೆಂದರೆ, ಆಕೃತಿ, ವರ್ಣ, ನಾದ, ತೇಜ; ಅವುಗಳನ್ನು ವಿಶೇಷವಾಗಿ ವಿಂಗಡಿಸದೆ ಇನ್ನು ಆ ಅನುಭವಗಳನ್ನು ಇಲ್ಲಿ ಸ್ವಲ್ಪಮಾತ್ರ ಸೂಚಿಸುತ್ತೇವೆ. ಶ್ವೇತಾಶ್ವತರದಲ್ಲಿ ( ಶ್ವೇ, ಅ ೨, ಮಂ ೨ ) ‘ ಮಂಜು, ಹೊಗೆ, ಸೂರ್ಯ, ಬೆಂಕಿ, ಗಾಳಿ, ಹೊನ್ನೆಹುಳ, ಮಿಂಚು, ಸ್ಫಟಿಕ, ಚಂದ್ರ ’ ಮೊದಲಾದ ರೂಪ ಗಳನ್ನು ಅನುಭಾವಿಯು ಕಾಣುವನೆಂದು ಹೇಳಿದೆ. ಬೃಹದಾರಣ್ಯಕದ ಮೊದಮೊದಲಲ್ಲೆ ‘ ಕೇಸರಿಬಣ್ಣದ ವಸ್ತ್ರ, ಕೆಂಪುಹುಳು ( ಇಂದ್ರಗೋಪ ), ಬೆಂಕಿಯ ಉರಿನಾಲಗೆ, ಕಮಲ, ಮಿಂಚು, ಇವೇ ಮೊದಲಾದುವು ಬಲ್ಲ ಅನುಭಾವಿಯ ಸಂಪತ್ತು ’ ಎಂದು (ಬೃ, ಅ ೨, ಬ್ರಾ ೩, ಮಂ ೬ ) ಹೇಳಿವೆ. ಇದೇ ಉಪನಿಷತ್ತಿನ ಋಷಿಗಳು ಹೆಚ್ಚಾಗಿ ದ್ರಷ್ಟಾರರು ಅಂದರೆ ವರ್ಣಾಕೃತಿಗಳನ್ನು ಕಾಣುವವರು ; ನಾದಾದಿಗಳನ್ನು ಅಷ್ಟೇನು ಕೇಳಿದವರಲ್ಲ. ನಾದಗಳ ಬಗ್ಗೆ ಕೆಲವೊಂದೇ ಮಾತುಗಳು ಉಪನಿಷತ್ತುಗಳಲ್ಲಿ ಬಂದಿವೆ ಅದರೆ ಅವುಗಳ ಕಾರ್ಯಕಾರಣ ಭಾವವನ್ನು ಅಲ್ಲಿ ಸಮರ್ಪಕವಾಗಿ ಹೇಳಿಲ್ಲ. ಬೃಹದಾರಣ್ಯಕ ಮತ್ತು ಮೈತ್ರಿ ಉಪನಿಷತ್ತುಗಳಲ್ಲಿ ಅನುಭಾವಿಯು ನಾದಗಳನ್ನು ಕೇಳುವನೆಂದೂ ಅವು ಹೊಟ್ಟೆ ಯೊಳಗಿನ ಪಚನಕ್ರಿಯೆಯವೆಂದೂ ಹೇಳಿದ್ದಾಗಿದೆ. ಬೃಹದಾರಣ್ಯಕವು ಅನ್ನುವುದೇನೆಂ

ದರೆ, 'ಹೊಟ್ಟೆಯೊಳಗಿರುವ ವೈಶ್ವಾನರಾಗ್ನಿಯು ಉಂಡ ಅನ್ನವನ್ನು ಪಚನಮಾಡುವುದು. ಕಿವಿಗಳನ್ನು ಮುಚ್ಚಿಕೊಂಡಾಗ್ಗೆ ಅದರ ಸಪ್ಪಳವೆ ಕೇಳಬರುವುದು. ಸಾಯುವ ಮನುಷ್ಯ ಸಿಗೆ ಆ ಸಪ್ಪಳವು ಕೇಳಬರುವದಿಲ್ಲ' (ಬೃ, ಅ ೫, ಬ್ರಾ ೯, ಮಂ ೧ ; ಮೈ, ಅ ೨, ಮಂ ೬). ಕಿವಿಯನ್ನು ಮುಚ್ಚಿಕೊಂಡರೆ 'ಎತ್ತು ಡುರಕಿ ಹಾಕಿದಂತೆಯೂ, ಗುಡುಗಾಡಿದಂ ತೆಯೂ, ಬೆಂಕಿಯು ಚಿಳಿಚಿಟಲ್ ಎಂದಂತೆಯೂ ಕೇಳಬರುವದು' ಎಂದು (ಛಾಂ, ಅ ೩, ಖಂ ೧೩, ಮಂ ೮) ಛಾಂದೋಗ್ಯವು ಹೇಳುವುದು. ಅನುಭಾವಿಗಳ ಅನುಭವದಲ್ಲಿ ಈ ನಾದಗಳು ಕಿವಿಗಳನ್ನು ಮುಚ್ಚಿಕೊಂಡಾಗಲಷ್ಟೆ ಅಲ್ಲ, ಕಿವಿಗಳನ್ನು ತೀರ ತೆರೆದಾಗಲೂ, ಅದೇಕೆ ಕಿವುಡರು ಕೂಡ ಕೇಳಬಹುದೆಂದು ಇದೆ. ಈ ನಾದಗಳಿಗೆ ಶಾರೀರಿಕಸಿ ತಿಯು ಆಧಾರವಾಗಿದ್ದರೂ ಈ ನಾದಗಳು ಪಚನಕ್ರಿಯೆಯ ಸಪ್ಪಳಗಳಾಗಿವೆಯೆಂದು ಎನ್ನಲಾ ಗದು. ಈ ಮಾತಿನಿಂದ ಕಾರ್ಯಕಾರಣಭಾವವನ್ನು ತಿರುವುಮುರುವುಗೊಳಿಸಿದಂತೆ ಆಗುವುದು. ಇವರಿಗೆ ನಾದಗಳು ಕೇಳಿಸಿದ್ದರೂ ಅವುಗಳ ಮಹತ್ವವೂ ಕಾರಣವೂ ಚೆನ್ನಾಗಿ ತಿಳಿದಬಂದಿಲ್ಲವೆನ್ನಬಹುದೇ? ಆದರೆ ವರ್ಣಾಕೃತಿಗಳ ಮಾತು ಬಂದಕೂಡಲೆ ಉಪ ನಿಷತ್ತಿನ ಋಷಿಗಳು ಹಿರಿದಾಗುತ್ತಾರೆ. 'ಹಿರಣ್ಮಯವಾದ ಮೇಲಿನ ಹೊದಿಕೆಯಲ್ಲಿ ವಿರ ಜನೂ ನಿಷ್ಕಲನೂ ಆದ ಬ್ರಹ್ಮನು ಜ್ಯೋತಿಗಳ ಜ್ಯೋತಿಯಾಗಿ ಶುಭ್ರನಾಗಿ ಬೆಳಗುವನು. ಅದೇನೆಂಬುದನ್ನು ಆತ್ಮವೇತ್ತರು ಬಲ್ಲರು' ಎಂದು (ಮುಂ ೨, ಖಂ ೨, ಮಂ ೯) ಮುಂಡಕೋಪನಿಷತ್ತು ಹೇಳುವುದು. ಛಾಂದೋಗ್ಯವು ಹೇಳಿರುವುದೇನಂದರೆ, 'ಈ ಭವದ ಸೇತುವೆಯನ್ನು ದಾಟಿದವನು ಕುರುಡನಿದ್ದರೂ ಕಣ್ಣುಳ್ಳವನಾಗುವನು, ವಿದ್ಧನಿ ದ್ದರೂ ಅವಿದ್ಧನಾಗುವನು ; ಈ ಸೇತುವೆ ದಾಟಿದಮೇಲೆ ಇರುಳು ಹಗಲಿನಂತೆ ಬೆಳಗು ವದು. ಯಾಕಂದರೆ ಅನುಭಾವಿಗೆ ಬ್ರಹ್ಮಲೋಕದರ್ಶನವಾಗುವದು' (ಛಾಂ, ಅ ೮, ಖಂ ೪, ಮಂ ೨). ಅದೇ ಉಪನಿಷತ್ತಿನಲ್ಲಿ 'ಬ್ರಹ್ಮೋಪನಿಷತ್ತನ್ನರಿತವನಿಗೆ, ಬ್ರಹ್ಮಜ್ಞಾನ ವಾದವನಿಗೆ ಸೂರ್ಯೋದಯ ಸೂರ್ಯಾಸ್ತಗಳೆಂಬವು ಇಲ್ಲೇ ಇಲ್ಲ; ಯಾಕಂದರೆ ಶಾಶ ತವಾದ ಅಧ್ಯಾತ್ಮಜ್ಯೋತಿಯು ಅವನೆದುರಿಗೆ ಸತತ ಬೆಳಗುವದು' (ಛಾಂ, ಅ ೩, ಖಂ ೨, ಮಂ ೨-೩). ಕೊನೆಗೆ ಶ್ವೇತಾಶ್ವತರವು ಇದೇ ವಿಚಾರವನ್ನು 'ಅನುಭಾವಿಗೆ ಹಗಲಿ ರುಳುಗಳೆಂಬವು ಇಲ್ಲದಂತಾಗುವವು ; ಸತ್ ಅಸತ್ ಎಂಬವುಗಳಾಚೆಗೆ ಅವನು ಹೋಗು ವನು. ಇದೆಲ್ಲ ಕೇವಲ ಬ್ರಹ್ಮಮಯವಾಗುವದವನಿಗೆ' (ಶ್ವೇ, ಅ ೪, ಮಂ ೧೮) ಹೀಗೆ ಹೇಳಿರುವದು. ಇದರ ತಾತ್ಪರ್ಯವೇನಂದರೆ, ಪರಬ್ರಹ್ಮನ ಸಾಕ್ಷಾತ್ ದರ್ಶನ ವಾಯಿತೆಂದರೆ ಅನುಭಾವಿಯು ಈ ಎಲ್ಲ ದ್ವಂದ್ವಗಳಾಚೆಗೆ ಹೋಗಿಬಿಡುವನು. ದ್ವಂದ್ವಾ

ತೀತ ಬ್ರಹ್ಮಸಾಕ್ಷಾತ್ಕಾರವಾದಾಗ ಎಲ್ಲಿಯ ಇರುಳು ಎಲ್ಲಿಯ ಹಗಲು, ಎಲ್ಲಿಯ ಸತ್ತು ಎಲ್ಲಿಯ ಅಸತ್ತು ?

**೧೪. ಅನುಭಾವದ ಕೊನೆಯ ಮೆಟ್ಟು**—ಅನುಭಾವಿಗೆ ಮೊದಮೊದಲು ಬಣ್ಣಬೆಳಕುಗಳು ಕಾಣುವುವು, ನಾದವು ಕೇಳಬರುವುದು. ಇದು ಅನುಭೂತಿಯ ಮುಂಗುರುತಾಗಿದ್ದರೂ ಪರಿಪೂರ್ಣವಾದ ಅನುಭಾವವಿದಲ್ಲ; ಆತ್ಮಾನುಭೂತಿಯ ಕೊನೆಯ ಮೆಟ್ಟು ಇದಲ್ಲ; ಮುಂಡಕೋಪನಿಷತ್ತಿನ ಒಂದು ಸುಪ್ರಸಿದ್ಧ ವಚನದಲ್ಲಿ ಹೇಳಿರುವದೇನಂದರೆ, ‘ ಆತ್ಮನು ಆರನ್ನರಸುವನೊ ಅವರಿಗೆ ಮಾತ್ರ ಅನುಭಾವವು ಕೈಗೂಡುವುದು. ಉಳಿದವರಿಗಿದು ಕೈಮೀರಿದ ಮಾತು. ಇಂತು ತಾನಾಗಿ ಒಲಿದವರಿಗೇ ಆತ್ಮನು ತನ್ನ ಮೈದೋರುವನು ’ ( ಮುಂ ೩, ಖಂ ೨, ಮಂ ೩ ). ಇದು ಆತ್ಮನ ನಲುಮೆಯ ಒಲುಮೆ. ಆತ್ಮನು ಒಲಿಯದಿದ್ದರೆ ಆತನೊಡನೆ ಒಂದುಗೂಡಬೇಕೆಂದು ನಡೆಸಿದ ಒದ್ದಾಟಗಳೆಲ್ಲ ವ್ಯರ್ಥವೆಂಬುದೆ ಮೇಲಣ ಮಂತ್ರದ ಅರ್ಥವು. ಪರಮಾತ್ಮನ ಅನುಗ್ರಹವಿಲ್ಲದೆ ಮುಕ್ತಿಯಿಲ್ಲವೆಂಬುದೆ ಇದರ ತಾತ್ಪರ್ಯವು. ಆತ್ಮನು ಬಣ್ಣಿಸಲಸದಳವಾದ ತನ್ನ ಬೆಡಗನ್ನು ಭಕುತನಿಗೆ ತೋರಬೇಕೆಂದು ಕರುಣಿಸಿದರೆ ಮಾತ್ರ ಅನುಭಾವಿಯು ಅದನ್ನು ಕಾಣಲಾಪನು; ಇಂತು ಪರಮಾತ್ಮನು ನಲಿದು ಒಲಿದಾಗಲೆ ಛಾಂದೋಗ್ಯ ಉಪನಿಷತ್ತಿನಲ್ಲಿ ಉಲ್ಲೇಖಿಸಿದ ‘ ಸೂರ್ಯನಲ್ಲಿ ಕಾಣುವಂತಹ ಹೊಂಬಣ್ಣದ ಮೀಸೆಯ, ಹೊಂಬಣ್ಣದ ಕೂದಲಿನ ಹಾಗೂ ತುದಿಬೆರಳಿನವರೆಗೂ ಬಂಗಾರದಂತೆ ಮಿರಿಮಿರಿ ಮಿರುಗುವ ಸುವರ್ಣಮಯ ಪುರುಷನನ್ನು ಕಾಣಲಾಪನು ’ ( ಛಾಂ, ಅ ೧, ಖಂ ೬, ಮಂ ೬ ); ಹಾಗೂ ಈಶಾವಾಸ್ಯೋಪನಿಷತ್ತಿನ ಋಷಿಯು ಒಡನುಡಿದಂತೆ ಆ ಹಿರಣ್ಮಯ ಪುರುಷನೇ ತಾನು; ತನ್ನಲ್ಲಿರುವ ಚಿನ್ಮಯ ಪುರುಷನೂ ಆ ತೇಜೋಮಯ ಹಿರಣ್ಮಯ ಪುರುಷನೂ ಒಂದು, ಎಂದು ಅನುಭಾವಗೊಂಡು ಎನ್ನಲಾಪನು ( ಈಶ, ಮಂ ೧೬ ). ಈವಾಗ ಮಾತ್ರ ವ್ಯಕ್ತಿಯ ಆತ್ಮನು ವಿಶ್ವಾತ್ಮನೊಡನೆ ಒಂದುಗೂಡಲು ಸಮರ್ಥನಾಗುವನು. ಈ ಮೆಟ್ಟಿನ ವರ್ಣನೆಯನ್ನೆ ಶ್ವೇತಾಶ್ವತರದಲ್ಲಿ ಹೀಗೆ ಮಾಡಿದ್ದಾಗಿದೆ, ಚೊಕ್ಕಾಗಿ ಮಾಡಿದ ಮೇಲೆ ‘ಧೂಳಡರಿದ ಕನ್ನಡಿಯು ಹೇಗೆ ಲಕಲಕನೆ ಹೊಳೆದು ಸ್ವಚ್ಛ ಸುಸ್ಪಷ್ಟವಾದ ಪ್ರತಿಬಿಂಬವನ್ನು ಕೊಡುವದೊ ಹಾಗೆ ಆತನನ್ನು ಕಂಡುಂಡವನೂ ಕೃತಾರ್ಥನಾಗುವನು; ದುಃಖ, ಸಂಕಷ್ಟಗಳ ಹುದಿಲೊಳಗಿಂದ ಹೊರಬೀಳುವನು. ದೀಪದ ಸಹಾಯದಿಂದ ಬೇರೆ ಒಡವೆಗಳನ್ನು ಹೇಗೆ ನೋಡಬಲ್ಲನೊ ಹಾಗೆ ದೇವಾತ್ಮನ ನೆರವಿನಿಂದ ಹುಟ್ಟುಸಾವಿಲ್ಲದಂತಹ, ಎಂದೆಂದಿಗೂ ಇರುವಂತಹ, ಎಲ್ಲ ಸತ್ವಗಳಿಂದಲೂ ಆಚೆಗಿರುವಂತಹ ಬ್ರಹ್ಮತತ್ವವನ್ನು ಕಂಡುಕೊಳ್ಳಬಲ್ಲನು, ಹಾಗೂ ಎಲ್ಲ ತೊಡಕುಗಳೊಳಗಿಂದ ಪಾರಾಗಬಲ್ಲನು ’ ( ಶ್ವೇ, ಅ ೨,

ಮಂ ೧೪–೧೫ ). ಶ್ವೇತಾಶ್ವತರದಲ್ಲಿ ಹೇಳಿದ ಮೇಲಿನ ತತ್ವಗಳು ಮೈತ್ರಿಮುನಿವರ್ಯನ ಮಾತಿನಲ್ಲಿ ಇದಕ್ಕೂ ಹೆಚ್ಚು ಸುಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ. ಆತನು ತನ್ನ ಶಿಷ್ಯನಿಗೆ ಉಪದೇಶಿಸುವಲ್ಲಿ ಹೇಳಿರುವುದೇನಂದರೆ, 'ಅನುಭಾವಿಯು ಕೊನೆಯ ಮೆಟ್ಟು ಮುಟ್ಟಿದನೆಂದರೆ ಅವನೊಳಗಿಂದಲೆ ಬೆಳಕಿನ ಹೊಳೆಯು ಹೊರಟು ಆ ಬೆಳಕಿನಲ್ಲಿ ತನ್ನ ದಿವ್ಯರೂಪವನ್ನು ಕಾಣುವನು' ( ಮೈ, ಅ ೨, ಮಂ ೧–೩ ). ಇದೇ ಭಯರಹಿತನೂ ಅಮೃತಮಯನೂ ಆಗಿರುವ ಬ್ರಹ್ಮನ ಸಾಕ್ಷಾತ್ಕಾರವು. ಇದೇ ಉಪನಿಷತ್ತುಗಳ ಗುಟ್ಟು, ಆತ್ಮಾನುಭವದ ಕಡೆಮುಟ್ಟು.

**೧೫. ಆತ್ಮನ ಪರಸ್ಪರವಿರೋಧಿ ವರ್ಣನೆಗಳು—** ಒಂದಕ್ಕೊಂದು ವಿಪರೀತವಾಗಿರುವ ಆತ್ಮನ ವರ್ಣನೆಗಳನ್ನು ಉಪನಿಷತ್ತುಗಳು ಸಂಗಡಿಸಲು ಯತ್ನಿಸುವವು. ಶ್ವೇತಾಶ್ವತರವಲ್ಲಿ ' ಆತ್ಮನು ಗಂಡೂ ಅಲ್ಲ, ಹೆಣ್ಣೂ ಅಲ್ಲ, ಅಥವಾ ಗಂಡುಗೇಡಿಯೂ ಅಲ್ಲ. ಅವನು ಆವ ದೇಹಧರಿಸುವನೋ ಆ ದೇಹವು ಅವನನ್ನು ಕಾಪಾಡುವುದು ' ( ಶ್ವೇ, ಅ ೫, ಮಂ ೧೦ ) ಎಂದು ವರ್ಣನೆಯಿದೆ. ಈಶಾವಾಸ್ಯೋಪನಿಷತ್ತಿನಲ್ಲಿ ಆತ್ಮನ ಸ್ಥಿತಿಗತಿಗಳನ್ನು ಹೇಳುವಾಗ ವರ್ಣಿಸಿರುವುದೇನಂದರೆ, ' ಅವನು ಅಲುಗುವನು, ಉಲುಕದೆ ಕಲ್ಲಿನಂದದಿ ನಿಲ್ಲುವನು. ಅವನು ಅಲ್ಲಿಯೂ ಉಂಟು, ಇಲ್ಲಿಯೂ ಉಂಟು. ಅವನು ಒಳಗೂ ಉಂಟು, ಹೊರಗೂ ಉಂಟು ' ( ಈಶ, ಮಂ ೪, ೫ ). ಕಠೋಪನಿಷತ್ತಿನಲ್ಲಿ ಒಬ್ಬ ಧೀರನಾದ ಅನುಭಾವಿಯು ಪ್ರಶ್ನೆಮಾಡುವುದೇನಂದರೆ, 'ನಿಂತಲ್ಲಿಯೆ ನಿಂತು ನಡೆದಾಡುವವನೂ ಮಲಗಿದಲ್ಲಿಯೆ ಮೂಲೋಕಗಳಲ್ಲಿ ಅಲೆದಾಡುವವನೂ ಹಾಗೂ ಹಿಗ್ಗಿ ಹಿಗ್ಗದವನೂ ಆದ ಆತ್ಮನನ್ನು ನನ್ನ ಬಿಟ್ಟಿನ್ನಾರು ಕಾಣಬಲ್ಲರು? ' ( ಕಠ, ಅ ೧, ವ ೨, ಮಂ ೨೧ ). ಮುಂಡಕದಲ್ಲಿ ಆತ್ಮನ ಸ್ವರೂಪವರ್ಣನೆಯು ಹೀಗೆ ವಿರೋಧಾಭಾಸಯುಕ್ತವಾಗಿ ಮಾಡಲ್ಪಟ್ಟಿದೆ, ' ದಿವ್ಯನೂ ಅಚಿಂತ್ಯನೂ ಆದ ಆತ್ಮನು ವಿಶ್ವದಲ್ಲಿ ಪಿರಿದಾದ ವಸ್ತುವಿನಿಂದ ಪಿರಿಯನೂ ಕಿರಿನಿಂದ ಕಿರಿಯನೂ ಆಗಿರುವನು ; ದೂರವೆಂದರೆ ಅವನಷ್ಟು ದೂರದಲ್ಲಿ ಆರೂ ಇಲ್ಲ. ನೆರೆಯಲ್ಲಿಯೆಂದರೆ ಅವನಿಗಿಂದ ನೆರೆಯಲ್ಲಿಪ್ಪುದು ಆವುದೂ ಇಲ್ಲ. ನೋಡಿಕೊಂಡರೆ ಇಲ್ಲಿ ಅಂತರ್ಗುಹೆಯಲ್ಲಿದ್ದಾನೆ' (ಮುಂ ೩, ಖಂ ೧, ಮಂ ೭ ). ಇದೇ ಮೇರೆಗೆ ಉಪನಿಷತ್ತಿದಭ್ಯಾಸಿಗಳ ತುದಿನಾಲಗೆಯ ಮೇಲಿರುವ ಕಠೋಪನಿಷತ್ತಿನ ಒಂದು ಮಂತ್ರದಲ್ಲಿಯ ಆತ್ಮನ ವರ್ಣನೆಯು ಕೆಳಗಿನಂತೆ ಇದೆ. ' ಆತ್ಮನು ಸಣ್ಣದಕ್ಕಿಂತ ಸಣ್ಣವನೂ, ದೊಡ್ಡದಕ್ಕಿಂತ ದೊಡ್ಡವನೂ ಆಗಿದ್ದು ಜೀವಿಗಳ ಹೃದಯದಲ್ಲಿ ಇದ್ದಿರುವನು' ಎಂದು ಅದರಲ್ಲಿ ಹೇಳಿದೆ ( ಕಠ, ಅ ೧, ವ ೨, ಮಂ ೨೦ ). ಆದರೆ ಶ್ವೇತಾಶ್ವತರ ಹಾಗೂ ಕಠೋಪನಿಷತ್ತುಗಳಲ್ಲಿರುವಂತೆ ಸ್ವಲ್ಪ ಭಿನ್ನವಾದ ವರ್ಣ

ನಾಂಶಗಳಿಗೂ ಕೊರತೆಯಿಲ್ಲ. 'ಆತ್ಮನು ಹೆಬ್ಬೆರಳಿನಷ್ಟಿದ್ದು ಸೂರ್ಯನಂತೆ ಹೊಳ ಪುಳ್ಳವನು. ಸೂಜಿಯ ಸೂಕ್ಷ್ಮತುದಿಗಿಂತಲೂ ಸಣ್ಣನು. ಅಥವಾ ಒಂದು ಸಣ್ಣ ಕೂದ ಲೆಳೆಯ ನೂರನೆಯ ಪಾಲಿನೊಳಗಣ ಒಂದರ ನೂರು ಚೂರುಮಾಡಲು ಅದರಲ್ಲೊಂದ ರಷ್ಟು ಇರುವನು' (ಶ್ವೇ, ಅ ೫, ಮಂ ೮–೯) ಮತ್ತು (ಕಠ, ಅ ೨, ವ ೬, ಮಂ ೧೭). ಇಂತು ಒಂದಕ್ಕೊಂದು ವಿಪರೀತವಾಗಿ ಇಬ್ಬಗೆಯಿಂದ ಆತ್ಮನನ್ನು ಏಕೆ ಬಣ್ಣಿಸಿರುವ ರೆಂಬುದು ಅನುಭಾವಿಗಳಿಗಲ್ಲದೆ ಇತರೇ ಜನಗಳಿಗೆ ತಿಳಿಯದು. ಈ ಮೇಲ್ತೋರಿಕೆಯ ವಿರೋಧವು ಅನಂತನೂ ದಿವ್ಯನೂ ಆದ ಆತ್ಮನಲ್ಲಿ ಹೇಗೆ ಮೇಳಗೊಳ್ಳುತ್ತದೆಂಬುದು ಬರಿಯ ಶಬ್ದಾರ್ಥವನ್ನರಿಯುವ ಹೊರವಿಚಾರಿಗಳಿಗೆ ಹೊಳೆಯದು.

**೧೬. ಅನುಭಾವಿಯ ಮೇಲಾಗುವ ಆತ್ಮಸಾಕ್ಷಾತ್ಕಾರದ ಪರಿಣಾಮಗಳು—** ಸಿದ್ಧನ ಮೇಲಾಗುವ ಸಾಕ್ಷಾತ್ಕಾರದ ಪರಿಣಾಮಗಳನ್ನು ಉಪನಿಷತ್ತು ಗಳು ಹಲವೆಡೆಗಳಲ್ಲಿ ವರ್ಣಿಸಿವೆ. 'ನಾನೇ ಅವನು ಎಂದು ಆತ್ಮನನ್ನು ತಿಳಿದವನಿಗೆ ಏತರ ಬಯಕೆ ? ಏತರ ಬದುಕು? ಏತರ ಬಾಳ್ವೆ ? ಅವನು ಏತಕ್ಕಾಗಿ ಈ ಭವದ ಬೇನೆ ಯಲ್ಲಿ ಬಳಲಬೇಕು ! ಅವನು ಏತಕ್ಕಾಗಿ ಕರ್ಮದಲ್ಲಿ ತೊಡಕಜೇಕು ? ' ( ಬೃ, ಅ ೪, ಬ್ರಾ ೪, ಮಂ ೧೨ ) ಎಂದು ಜನಕನಿಗೆ ಯಾಜ್ಞವಲ್ಕ್ಯನು ಕೇಳುತ್ತಾನೆ. ಸಾಧಕನು ಸಿದ್ಧನಾದೊಡನೆ, ಆತನ ದೇಹಭಾವವಳಿದು ಆತ್ಮಭಾವವು ನೆಲೆಗೊಂಡೊಡನೆ, ಬದುಕು ಬಾಳ್ವೆಯ ಬಯಕೆಗಳೆಲ್ಲ ತಾವಾಗಿ ತತ್ಕ್ಷಣಕ್ಕೆ ಬಯಲಾಗುವವೆಂದೇ ಮೇಲಣ ಮಂತ್ರದ ಮಥಿತಾರ್ಥವು. ಇದೇ ಮೇರೆಗೆ ಇನ್ನೊಂದು ಪರಿಣಾಮವನ್ನು ಮುಂಡಕದಲ್ಲಿ ಹೇಳಿ ರುವುದೇನಂದರೆ, 'ಸರ್ವಕ್ಕೂ ಹಿರಿಯನಾದ ಆತನನ್ನು ಕಣ್ಣಾರೆ ಕಂಡಬಳಿಕ ಎದೆಯೊಳ ಗಣ ಕಗ್ಗಂಟುಗಳೆಲ್ಲ ಉಚ್ಚಿಹೋಗುವವು, ಸಂಶಯದ ತೊಡಕುಗಳೆಲ್ಲ ಹರಿದು ಹೋಗು ವವು. ಭವದ ಬಂಧನವು ಬಿಚ್ಚಿಹೋಗುವುದು. ಕರ್ಮನಾಶವಾಗುವುದು ' (ಮುಂ ೨, ಖಂ ೨, ಮಂ ೮). ಅಡಿಗಡಿಗೆ ಅಡ್ಡಾಗುವ ಸಂಶಯಗಳು ಹೋಗಿ ತನ್ನ ಬಂಧಕತ್ವದಿಂದ ಬಂಧಿಸುವ ಕರ್ಮವು ನಷ್ಟವಾಗಿ ಸಾಕ್ಷಾತ್ಕಾರಿಯು ಸಂಶಯರಹಿತ ನಿಜಜ್ಞಾನದಲ್ಲಿ ನಿಲ್ಲು ವನು. ಇದೇ ಉಪನಿಷತ್ತು ಇನ್ನೊಂದೆಡೆಗೆ ಮತ್ತೊಂದು ಲಕ್ಷಣವನ್ನು ಹೇಳಿದೆ. ಸಾಧ ಕನು ಅನುಭಾವಿಯಾಗುವ ಮೊದಲಿನ ಅಶಕ್ತತೆಯ ಹಾಗೂ ಸಿದ್ಧನಾದ ಮೇಲಿನ ಸಮ ರ್ಥಸ್ಥಿತಿಯ ವ್ಯತ್ಯಾಸಗಳ ವರ್ಣನೆಯು ಅದರಲ್ಲಿದೆ. 'ಒಂದೇ ಮರದಲ್ಲಿ ಪರಮಾತ್ಮ ನೊಡನೆ ಜೀವಾತ್ಮನು ಕೂಡಿರುತ್ತಿದ್ದರೂ ( ಕೂಟದ ಹಿಗ್ಗಿಗೆ ಎರವಾಗಿ ) ತನ್ನ ಹೇಡಿ ತನದ ಮೂಲಕ ಮೂಢನಂತೆ ಮಿಡುಕುತ್ತಿದ್ದನು. ಆದರೆ ಘನಮಹಿಮನೂ ಸರ್ವಶಕ್ತಿ ಮಂತನೂ ಆದ ಆ ಪರಮಾತ್ಮನನ್ನು ಕಂಡುಂಡಕೂಡಲೆ ದುಃಖಶೋಕಗಳೊಳಗಿಂದ

೬. ಪರಿಚ್ಛೇದ ೧೪.

**ಛಾ, ಅ ೭, ಖಂ ೨೨–೨೫** — ಯದಾ ವೈ ಸುಖಂ ಲಭತೇಽಥ ಕರೋತಿ, ನಾಸುಖಂ ಲಬ್ಧ್ವಾ ಕರೋತಿ ಸುಖಮೇವ ಲಬ್ಧ್ವಾ ಕರೋತಿ, ಸುಖಂ ತ್ವೇವ ವಿಜಿಜ್ಞಾಸಿತವ್ಯಮ್……। ಯೋ ವೈ ಭೂಮಾ ತತ್ಸುಖಂ, ನಾಲ್ಪೇ ಸುಖಮಸ್ತಿ। ಭೂಮಾ ತ್ವೇವ ವಿಜಿಜ್ಞಾಸಿತವ್ಯಃ। ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ । ಅಥ ಯತ್ರಾನ್ಯತ್ಪಶ್ಯತಿ, ಅನ್ಯಚ್ಛೃಣೋತಿ, ಅನ್ಯದ್ವಿಜಾನಾತಿ ತದಲ್ಪಮ್ । ಯೋ ವೈ ಭೂಮಾ ತದಮೃತಂ ಅಥ ಯದಲ್ಪಂ ತನ್ಮರ್ತ್ಯಮ್ । ಸ ( ಭೂಮಾ ) ಭಗವಃ ಕಸ್ಮಿನ್ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನಿ ಇತಿ ಗೋ ಅಶ್ವಮಿಹ ಮಹಿಮೇತ್ಯಾಚಕ್ಷತೇ ಹಸ್ತಿಹಿರಣ್ಯಂ ದಾಸಭಾರ್ಯಂ ಕ್ಷೇತ್ರಾಣ್ಯಾಯತನಾನೀತಿ । ನಾಹಮೇವಂ ಬ್ರವೀಮಿ। ಸ ಏವಾಧಸ್ತಾತ್, ಸ ಉಪರಿಷ್ಟಾತ್ ಸ ಪಶ್ಚಾತ್, ಸ ಪುರಸ್ತಾತ್, ಸ ದಕ್ಷಿಣತಃ ಸ ಉತ್ತರತಃ ಸ ಏವೇದಂ ಸರ್ವಂ ಇತ್ಯಥಾತೋ ಅಹಂಕಾರಾದೇಶಃ, ಅಹಮೇವಾಧಸ್ತಾತ್, ಅಹಮುಪರಿಷ್ಟಾತ್, ಅಹಂ ಪಶ್ಚಾತ್, ಅಹಂ ಪುರಸ್ತಾತ್, ಅಹಂ ದಕ್ಷಿಣತೋ, ಅಹಮುತ್ತರತೋ, ಅಹಮೇವೇದಂ ಸರ್ವಮಿತ್ಯಥಾತ ಆತ್ಮಾದೇಶಃ ಆತ್ಮೈವಾಧಸ್ತಾತ್, ಆತ್ಮೋಪರಿಷ್ಟಾತ್, ಆತ್ಮಾ ಪಶ್ಚಾತ್, ಆತ್ಮಾ ಪುರಸ್ತಾತ್, ಆತ್ಮಾ ದಕ್ಷಿಣತಃ, ಆತ್ಮೋತ್ತರತಃ, ಆತ್ಮೈವೇದಂ ಸರ್ವಮಿತಿ, ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಡ್ ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ ।

೬. ಪರಿಚ್ಛೇದ ೧೫.

**ಕ, ಅ ೧, ವಲ್ಲಿ ೨, ಮಂ ೧೪**—ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ॥

**ಛಾಂ, ಅ ೮, ಖಂ ೧೨, ಮಂ ೧** — ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ।

**ಮುಂ ೩, ಖಂ ೧, ಮಂ ೩** — ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ । ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥

**ಬೃ, ಅ ೪, ಬ್ರಾ ೪, ಮಂ ೨೨**— ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿನ್ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವ ಅಸಾಧುನಾ ಕನೀಯಾನ್ ।

**ಬೃ, ಅ ೪, ಬ್ರಾ ೪, ಮಂ ೨೩** — ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ವರ್ಧತೇ ಕರ್ಮಣಾ ನೋ ಕನೀಯಾನ್ ।

## ೬. ಪರಿಚ್ಛೇದ ೧೬.

**ಬೃ, ಅ ೫, ಬ್ರಾ ೨, ಮಂ ೧–೩** — ತ್ರಯಃ ಪ್ರಾಜಾಪತ್ಯಾಃ ಪ್ರಜಾಪತೌ ಪಿತರಿ ಬ್ರಹ್ಮಚರ್ಯಮೂಷುರ್ದೇವಾ ಮನುಷ್ಯಾ ಅಸುರಾ ಉಷಿತ್ವಾ ಬ್ರಹ್ಮಚರ್ಯಂ ದೇವಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ೩ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದಾಮ್ಯತೇತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ । ಅಥ ಹೈನಂ ಮನುಷ್ಯಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದೇವಾಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ೩ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದತ್ತೇತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ। ಅಥ ಹೈನಮಸುರಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದೇವಾಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ೩ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದಯಧ್ವಮಿತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ ತದೇತದೇವೈಷಾ ದೈವೀ ವಾಗನುವದತಿ ಸ್ತನಯಿತ್ನುರ್ದ ದ ದ ಇತಿ ದಾಮ್ಯತ ದತ್ತ ದಯಧ್ವಮಿತಿ ತದೇತತ್ ತ್ರಯಂ ಶಿಕ್ಷೇದ್ದಮಂ ದಾನಂ ದಯಾಮಿತಿ ॥

## ೬. ಪರಿಚ್ಛೇದ ೧೭.

**ಛಾಂ, ಅ ೩, ಖಂ ೧೭, ಮಂ ೪**— ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾಃ ।

**ಛಾಂ, ಅ ೫, ಖಂ ೧೦, ಮಂ ೯**— ಸ್ತೇನೋ ಹಿರಣ್ಯಸ್ಯ, ಸುರಾಂ ಪಿಬಂಶ್ಚ, ಗುರೋಸ್ತಲ್ಪಮಾವಸನ್, ಬ್ರಹ್ಮಹಾ ಚೈತೇ ಪತಂತಿ ಚತ್ವಾರಃ ಪಂಚಮಶ್ಚಾಚರಂಸ್ತೈರಿತಿ ।

## ೬. ಪರಿಚ್ಛೇದ ೧೮.

**ತೈ, ವ ೧, ಅನು ೯** — ಋತಂ ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಂ ಚ° । ತಪಶ್ಚ° । ದಮಶ್ಚ° । ಶಮಶ್ಚ° । ಅಗ್ನಯಶ್ಚ° । ಅಗ್ನಿಹೋತ್ರಂ ಚ° । ಅತಿ

ಥಯಶ್ಚ° । ಮಾನುಷಂ ಚ° । ಪ್ರಜಾ ಚ° । ಪ್ರಜನಶ್ಚ° । ಪ್ರಜಾತಿಶ್ಚ° । ಸತ್ಯಮಿತಿ ಸತ್ಯವಚಾ ರಾಥೀತರಃ । ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ । ತದ್ಧಿ ತಪಸ್ತದ್ಧಿ ತಪಃ ।

**ತೈ, ವ ೧, ಅನು ೧೧, ಮಂ ೧–೩** —ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ । ಸತ್ಯಂ ವದ ಧರ್ಮಂ ಚರ ಸ್ವಾಧ್ಯಾಯಾನ್ಮಾ ಪ್ರಮದಃ ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ ...। ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ । ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ, ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ ।......। ಯೇ ಕೇ ಚಾಸ್ಮಚ್ಛ್ರೇಯಾಂಸೋ ಬ್ರಾಹ್ಮಣಾಃ ತೇಷಾಂ ತ್ವಯಾಽಽಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾ ದೇಯಂ, ಅಶ್ರದ್ಧಯಾಽದೇಯಮ್ । ಶ್ರಿಯಾ ದೇಯಂ, ಹ್ರಿಯಾ ದೇಯಂ, ಭಿಯಾ ದೇಯಂ, ಸಂವಿದಾ ದೇಯಂ ।

## ೬. ಪರಿಚ್ಛೇದ ೧೯.

**ಛಾಂ, ಅ ೪, ಖಂ ೪, ಮಂ ೧–೫**— ಸತ್ಯಕಾಮೋ ಹ ಜಾಬಾಲೋ ಜಬಾಲಾಂ ಮಾತರಮಾಮಂತ್ರಯಾಂಚಕ್ರೇ ಬ್ರಹ್ಮಚರ್ಯಂ ಭವತಿ ವಿವತ್ಸ್ಯಾಮಿ ಕಿಂ ಗೋತ್ರೋಽಹಮಸ್ಮೀತಿ । ಸಾ ಹೈನಮುವಾಚ ನಾಹಮೇತದ್ವೇದ ತಾತ ಯದ್ಗೋತ್ರಸ್ತ್ವಮಸಿ ಬಹ್ವಹಂ ಚರನ್ತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸಿ ಸ ಸತ್ಯಕಾಮ ಏವ ಜಾಬಾಲೋ ಬ್ರುವೀಥಾ ಇತಿ । ಸ ಹ ಹಾರಿದ್ರುಮತಂ ಗೌತಮಮೇತ್ಯೋವಾಚ ಬ್ರಹ್ಮಚರ್ಯಂ ಭಗವತಿ ವತ್ಸ್ಯಾಮ್ಯುಪೇಯಾಂ ಭಗವನ್ತಮಿತಿ ತಂ ಹೋವಾಚ ಕಿಂ ಗೋತ್ರೋ ನು ಸೋಮ್ಯಾಸೀತಿ ಸ ಹೋವಾಚ ನಾಹಮೇತದ್ವೇದ ಭೋ ಯದ್ಗೋತ್ರೋಽಹಮಸ್ಮ್ಯಪೃಚ್ಛಂ ಮಾತರಂ ಸಾ ಮಾ ಪ್ರತ್ಯಬ್ರವೀತ್ ಬಹ್ವಹಂ ಚರನ್ತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸೀತಿ ಸೋಽಹಂ ಸತ್ಯಕಾಮೋ ಜಾಬಾಲೋಽಸ್ಮಿ ಭೋ ಇತಿ । ತಂ ಹೋವಾಚ ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಾಹರೋಪ ತ್ವಾ ನೇಷ್ಯೇ ನ ಸತ್ಯಾದಗಾ ಇತಿ ।

**ಛಾಂ, ಅ ೬, ಖಂ ೧೬, ಮಂ ೧-೨** -- ಪುರುಷಂ ಸೋಮ್ಯೋತ ಹಸ್ತಗೃಹೀತಮಾನಯನ್ತ್ಯಪಹಾರ್ಷೀತ್ಸ್ತೈತ್ ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿಸಂಧೋಽ ನೃತೇನಾತ್ಮಾನಮನ್ತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ । ಅಥ ಯದಿ ತಸ್ಯಾಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನಾತ್ಮಾನಮನ್ತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥ ಮುಚ್ಯತೇ ।

**ಪ್ರ ೬, ಮಂ ೧**— ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿ ವದತಿ । ತಸ್ಮಾನ್ನಾರ್ಹಾಮಿ ಅನೃತಂ ವಕ್ತುಮ್ ।

**ಮುಂ ೩, ಖಂ ೧, ಮಂ ೬**— ಸತ್ಯಮೇವ ಜಯತೇ ನಾನೃತಂ ಸತ್ಯೇನ ಪನ್ಥಾ ವಿತತೋ ದೇವಯಾನಃ । ಯೇನಾಕ್ರಮನ್ತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಂ ನಿಧಾನಮ್ ॥

**ಛಾಂ, ಅ ೭, ಖಂ ೧೬, ಮಂ ೧೭**— ಸತ್ಯಂ ಭಗವೋ ವಿಜಿಜ್ಞಾಸ ಇತಿ ।........। ಯದಾ ವೈ ವಿಜಾನಾತ್ಯಥ ಸತ್ಯಂ ವದತಿ ನಾವಿಜಾನನ್ ಸತ್ಯಂ ವದತಿ ವಿಜಾನನ್ನೇವ ಸತ್ಯಂ ವದತಿ ।

## ೬. ಪರಿಚ್ಛೇದ ೨೦.

**ಬೃ, ಅ ೪, ಬ್ರಾ ೪, ಮಂ ೫** — ಅಥೋ ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ । ಸ ಯಥಾ ಕಾಮೋ ಭವತಿ ತತ್‌ಕ್ರತುರ್ಭವತಿ, ಯತ್ ಕ್ರತುರ್ಭವತಿ ತತ್ಕರ್ಮ ಕುರುತೇ, ತದಭಿಸಂಪದ್ಯತೇ ।

**ಕೌ, ಅ ೩, ಮಂ ೯**— ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತ ಏಷ ಉ ಏವಾಸಾಧು ಕರ್ಮ ಕಾರ ಯತಿ ತಂ, ಯಮಧೋ ನಿನೀಷತ, ಏಷ ಲೋಕಪಾಲಃ ಏಷ ಲೋಕಾಧಿಪತಿರೇಷ ಲೋಕೇಶಃ ಸ ಮ ಆತ್ಮೇತಿ ವಿದ್ಯಾತ್ ಸ ಮ ಆತ್ಮೇತಿ ವಿದ್ಯಾತ್ ।

**ಛಾಂ, ಅ ೮, ಖಂ ೧, ಮಂ ೬** — ಯ ಇಹಾತ್ಮಾನಮನನುವಿದ್ಯ ವ್ರಜಂತಿ ತೇಷಾಂ ಸರ್ವೇಷು ಲೋಕೇಷು ಅಕಾಮಚಾರೋ ಭವತಿ । ಯ ಇಹಾ ತ್ಮಾನಂ ಅನುವಿದ್ಯ ವ್ರಜಂತಿ ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ।

**ಛಾಂ, ಅ ೮, ಖಂ ೨, ಮಂ ೧೦**— ಯಂ ಯಂ ಅಂತಂ ಅಭಿಕಾಮೋ ಭವತಿ ಯಂ ಯಂ ಕಾಮಯತೇ ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠತಿ ತೇನ ಸಂಪನ್ನೋ ಮಹೀಯತೇ ।

**ಮುಕ್ತಿಕ, ಅ ೨, ಮಂ ೫-೬** — ಶುಭಾಶುಭಾಭ್ಯಾಂ ಮಾರ್ಗಾಭ್ಯಾಂ ವಹಂತೀ ವಾಸನಾಸರಿತ್ । ಪೌರುಷೇಣ ಪ್ರಯತ್ನೇನ ಯೋಜನೀಯಾ ಶುಭೇ ಪಥಿ । ಅಶುಭೇಷು ಸಮಾವಿಷ್ಟಂ ಶುಭೇಷ್ವೇವಾವತಾರಯೇತ್ ।

೬. ಪರಿಚ್ಛೇದ ೨೧.

**ಈ, ಮಂ ೭,** —ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ । ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ ।

**ಶ್ವೇ, ಅ ೬, ಮಂ ೨೦** — ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ । ತದಾ ದೇವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥

**ಮುಂ ೩, ಖಂ ೨, ಮಂ ೨** — ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ।

**ಛಾಂ, ಅ ೪, ಖಂ ೧೪, ಮಂ ೩** — ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಲಿಪ್ಯತೇ ।

**ತೈ, ವ ೨, ಅನು ೯** — ಏತಂ ಹ ವಾವ ನ ತಪತಿ ಕಿಮಹಂ ಸಾಧು ನ ಪಾಪಮಕರವಮಿತಿ ।

**ತೈ, ವ ೨, ಅನು ೯** — ಸ ಯ ಏವಂ ವಿದ್ವಾನ್ ಏತೇ ಆತ್ಮಾನಂ ಸ್ಪೃಣುತೇ, ಉಭೇ ಹ್ಯೇವೈಷ ಏತೇ ಆತ್ಮಾನಂ ಸ್ಪೃಣುತೇ ।

**ಛಾಂ, ಅ ೧, ಖಂ ೨, ಮಂ ೮**— ಏವಂ ಯಥಾಶ್ಮಾನಮಾಖಣಂ ಋತ್ವಾ ವಿಧ್ವಂಸತ, ಏವಂ ಹೈವ ಸ ವಿಧ್ವಂಸತೇ ಯ ಏವಂವಿದಿ ಪಾಪಂ ಕಾಮಯತೇ ಯಶ್ಚೈನಂ ಅಭಿದಾಸತಿ ಸ ಏಷೋಽಶ್ಮಾಖಣಃ ।

**ಶ್ವೇ, ಅ ೪, ಮಂ ೧೧** — ತಮೀಶಾನಂ ವರದಂ ದೇವಮೀಡ್ಯಂ ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ।

**ಕ, ಅ ೨, ವ ೬, ಮಂ ೧೦–೧೧** — ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ । ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ । ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।

**ಶ್ವೇ, ಅ ೬, ಮಂ ೧೨**— ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ।



## ೭ ನೆಯ ಪ್ರಕರಣವು

# ಆತ್ಮಸಾಕ್ಷಾತ್ಕಾರದ ಮುಂಗುರುತುಗಳು

೭. ಪರಿಚ್ಛೇದ ೨.

**ಮುಂ ೧, ಖಂ ೧, ಮಂ ೪-೫—** ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್ ಬ್ರಹ್ಮವಿದೋ ವದಂತಿ ಪರಾ ಚೈವಾಪರಾ ಚ । ತತ್ರ ಅಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ । ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ।

**ಛಾಂ, ಅ ೭, ಖಂ ೧, ಮಂ ೨-೩—** ಸ ಹೋವಾಚ ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನವಿದ್ಯಾಮೇತದ್ಭಗವೋಽಧ್ಯೇಮಿ ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾನ್ ಶೋಕಸ್ಯ ಪಾರಂ ತಾರಯತ್ವಿತಿ ।

**ಕೇ, ಖಂ ೨, ಮಂ ೧೩ —** ಇಹ ಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀನ್ಮಹತೀ ವಿನಷ್ಟಿಃ ।

**ಕ, ಅ ೨, ವ ೬, ಮಂ ೪ —** ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ । ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ।

೭. ಪರಿಚ್ಛೇದ ೩.

**ಕ, ಅ ೨, ವ ೪, ಮಂ ೧ —** ಪರಾಂಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ಪಶ್ಯತಿ ನಾಂತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್ ॥

**ಶ್ವೇ, ಅ ೩, ಮಂ ೧೮—** ನವದ್ವಾರೇ ಪುರೇ ದೇಹೀ ಹಂಸೋ ಲೇಲಾಯತೇ ಬಹಿಃ ।

**ಕ, ಅ ೧, ವ ೨, ಮಂ ೨೪—** ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ । ನಾಶಾನ್ತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥

**ಮುಂ ೩, ಖಂ ೧, ಮಂ ೫—** ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಗ್ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್। ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥

**ಕ, ಅ ೧, ವ ೨, ಮಂ ೨೨—** ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ।

**ಈ, ಮಂ ೯—** ಅಂಧಂ ತಮಃ ಪ್ರವಿಶಂತಿ ಯೇऽವಿದ್ಯಾಮುಪಾಸತೇ। ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ।

**ಮುಂ ೩, ಖಂ ೨, ಮಂ ೪—** ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ತಪಸೋ ವಾಪ್ಯಲಿಂಗಾತ್ ।

**ಮುಂ ೧, ಖಂ ೨, ಮಂ ೧೨ —** ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ। ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥

## ೭. ಪರಿಚ್ಛೇದ ೪.

**ಛಾಂ, ಅ ೪, ಖಂ ೯, ಮಂ ೩ —** ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತೀತಿ ।

**ಕ, ಅ ೧, ವ ೨, ಮಂ ೮–೯ —** ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ । ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥ ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।

**ಕ, ಅ ೧, ವ ೩, ಮಂ ೧೪ —** ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ । ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ಕವಯೋ ವದನ್ತಿ ॥

೭. ಪರಿಚ್ಛೇದ ೫.

**ಛಾಂ, ಅ ೬, ಖಂ ೧೪, ಮಂ ೧-೨ —** ಯಥಾ ಸೋಮ್ಯ ಪುರುಷಂ ಗಂಧಾರೇಭ್ಯೋಽಭಿನದ್ಧಾಕ್ಷಮಾನೀಯ ತಂ ತತೋಽತಿಜನೇ ವಿಸೃಜೇತ್ಸ ಯಥಾ ತತ್ರ ಪ್ರಾಙ್ವೋದಙ್ವಾಽಧರಾಙ್ವಾ ಪ್ರತ್ಯಙ್ವಾ ಪ್ರಧ್ಮಾಯೀತಾಭಿನದ್ಧಾಕ್ಷ ಆನೀತೋಽಭಿನದ್ಧಾಕ್ಷೋ ವಿಸೃಷ್ಟಃ ॥ ೧ ॥ ತಸ್ಯ ಯಥಾಭಿನಹನಂ ಪ್ರಮುಚ್ಯ ಪ್ರಬ್ರೂಯಾದೇತಾಂ ದಿಶಂ ಗಂಧಾರಾ ಏತಾಂ ದಿಶಂ ವ್ರಜೇತಿ ಸ ಗ್ರಾಮಾದ್ ಗ್ರಾಮಂ ಪೃಚ್ಛನ್ ಪಂಡಿತೋ ಮೇಧಾವಿ ಗಂಧಾರಾನೇವೋಪಸಂಪದ್ಯೇತ ಏವಮೇವೇಹಾಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯ ಇತಿ ॥ ೨ ॥

೭. ಪರಿಚ್ಛೇದ ೬

**ಮುಂ ೩, ಖಂ ೨, ಮಂ ೧೦ —** ಕ್ರಿಯಾವನ್ತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ । ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ॥

**ಛಾಂ, ಅ ೩, ಖಂ ೧೧, ಮಂ ೫-೬ –** ಇದಂ ವಾವ ತಜ್ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾತ್ಪ್ರಣಾಯ್ಯಾಯ ವಾನ್ತೇವಾಸಿನೇ । ನಾನ್ಯಸ್ಮೈ ಕಸ್ಮೈಚನ ಯದ್ಯಪ್ಯಸ್ಮಾ ಇಮಾಮದ್ಭಿಃ ಪರಿಗೃಹೀತಾಂ ಧನಸ್ಯ ಪೂರ್ಣಾಂ ದದ್ಯಾದೇತದೇವ ತತೋ ಭೂಯ ಇತ್ಯೇತದೇವ ತತೋ ಭೂಯ ಇತಿ ॥

**ಶ್ವೇ, ಅ ೬, ಮಂ ೨೨-೨೩—** ವೇದಾಂತೇ ಪರಮಂ ಗುಹ್ಯಂ ಪುರಾಕಲ್ಪೇ ಪ್ರಚೋದಿತಮ್ । ನಾಪ್ರಶಾನ್ತಾಯ ದಾತವ್ಯಂ ನಾಪುತ್ರಾಯಶಿಷ್ಯಾಯ ವಾ ಪುನಃ ॥ ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ಪ್ರಕಾಶನ್ತೇ ಮಹಾತ್ಮನಃ ॥

೭. ಪರಿಚ್ಛೇದ ೭.

**ಕ, ಅ ೧, ವ ೨, ಮಂ ೧೫-೧೬—** ಸರ್ವೇ ವೇದಾ ಯತ್ಪದಮಾಮನನ್ತಿ ತಪಾಂಸಿ ಸರ್ವಾಣಿ ಚ ಯದ್ವದನ್ತಿ । ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥ ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥

**ಛಾಂ, ಅ ೨, ಖಂ ೨೩, ಮಂ ೩**— ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನಿ ಏವಮೋಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಓಂಕಾರ ಏವೇದಂ ಸರ್ವಮ್ ।

**ಮುಂ ೨, ಖಂ ೨, ಮಂ ೩–೪** — ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂಧಯೀತ । ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥ ೩ ॥ ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ । ಅಪ್ರಮತ್ತೇನ ವೇದ್ಧವ್ಯಂ ಶರ ವತ್ತನ್ಮಯೋ ಭವೇತ್ ॥ ೪ ॥

**ಛಾಂ, ಅ ೧, ಖಂ ೫, ಮಂ ೧–೩** — ಓಂ ಇತಿ ಹ್ಯೇಷ ಸ್ವರನ್ನೇತಿ ।

**ಪ್ರ ೫, ಮಂ ೧–೫** — ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ । ಸ ಯೋ ಹ ವೈತದ್ ಭಗವನ್ಮನುಷ್ಯೇಷು ಪ್ರಾಯಣಾನ್ತಮೋಂಕಾರಮಭಿಧ್ಯಾಯೀತ ಕತಮಂ ವಾವ ಸ ತೇನ ಲೋಕಂ ಜಯತೀತಿ । ತಸ್ಮೈ ಸ ಹೋವಾಚ ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ವಿದ್ವಾನೇತೇನೈವಾಯತನೇನೈಕತರಮನ್ವೇತಿ ।...... ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ।

## ೭. ಪರಿಚ್ಛೇದ ೮.

**ಮಾಂ, ಮಂ ೧–೧೨** — ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ ॥ ೧ ॥ ಸರ್ವಂ ಹ್ಯೇತದ್ ಬ್ರಹ್ಮಾಯಮಾತ್ಮಾ ಬ್ರಹ್ಮ । ಸೋಽಯಮಾತ್ಮಾ ಚತುಷ್ಪಾತ್ ॥ ೨ ॥ ಜಾಗರಿತಸ್ಥಾನೋ ಬಹಿಃ ಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ॥ ೩ ॥ ಸ್ವಪ್ನಸ್ಥಾನೋಽನ್ತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥ ೪ ॥ ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ಸುಷುಪ್ತಂ । ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥ ೫ ॥ ಏಷ ಸರ್ವೇ

ಶ್ವರ ಏಷ ಸರ್ವಜ್ಞ ಏಷೋಽನ್ತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್ ॥ ೬ ॥ ನಾನ್ತಃಪ್ರಜ್ಞಂ ನ ಬಹಿಃಪ್ರಜ್ಞಂ ನೋಭಯುತಃಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಮ್ ನಾಪ್ರಜ್ಞಮ್ । ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿನ್ತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ ಪ್ರಪಞ್ಚೋಪಶಮಂ ಶಾನ್ತಂ ಶಿವಮದ್ವೈತಂ ಚತುರ್ಥಂ ಮನ್ಯನ್ತೇ ಸ ಆತ್ಮಾ ಸ ವಿಜ್ಞೇಯಃ ॥ ೭ ॥ ಸೋಽಯಮಾತ್ಮಾಧ್ಯಕ್ಷರಮೋಂಕಾರೋಽಧಿಮಾತ್ರಂ ಪಾದಾ ಮಾತ್ರಾ ಮಾತ್ರಾಶ್ಚ ಪಾದಾ ಅಕಾರ ಉಕಾರ ಮಕಾರ ಇತಿ । ೮ ॥........॥ ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತಂ ಏವಮೋಂಕಾರ ಆತ್ಮೈವ ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ ಯ ಏವಂ ವೇದ ॥೧೨॥

೭. ಪರಿಚ್ಛೇದ ೯.

**ಶ್ವೇ, ಅ ೧, ಮಂ ೧೪—** ಸ್ವದೇಹಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಮ್ । ಧ್ಯಾನನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್ ॥

**ಕ, ಅ ೨, ಖಂ ೪, ಮಂ ೮ —** ಅರಣ್ಯೋರ್ನಿಹಿತೋ ಜಾತವೇದ ಗರ್ಭ ಇವ ಸುಭೃತೋ ಗರ್ಭಿಣೀಭಿಃ । ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿಃ ಮನುಷ್ಯೇಭಿರಗ್ನಿಃ ॥

**ಕ, ಅ ೨, ಖಂ ೫, ಮಂ ೩—**ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥

**ಮುಂ ೩, ಖಂ ೧, ಮಂ ೯ —** ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ ಯಸ್ಮಿನ್ವಿಶುದ್ಧೇ ವಿಭವತ್ಯೇಷ ಆತ್ಮಾ ॥

೭. ಪರಿಚ್ಛೇದ ೧೦

**ಶ್ವೇ, ಅ ೨, ಮಂ ೮-೧೦ —** ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸಂನಿವೇಶ್ಯ । ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ ಸ್ರೋತಾಂಸಿ ಸರ್ವಾಣಿ ಭಯಾವಹಾನಿ ॥ ೮ ॥ ಪ್ರಾಣಾನ್ಪ್ರಪೀಡ್ಯೇಹ ಸಯುಕ್ತಚೇಷ್ಟಃ ಕ್ಷೀಣೇ ಪ್ರಾಣೇ ನಾಸಿಕಯೋಚ್ಛ್ವಸೀತ್ । ದುಷ್ಟಾಶ್ವಯುಕ್ತಮಿವ ವಾಹಮೇನಂ ವಿದ್ವಾನ್ಮನೋ ಧಾರಯೇತಾಪ್ರಮತ್ತಃ ॥ ೯ ॥ ಸಮೇ ಶುಚೌ ಶರ್ಕ

ರಾವಹ್ನಿವಾಲುಕಾವಿವರ್ಜಿತೇ ಶಬ್ದಜಲಾಶ್ರಯಾದಿಭಿಃ। ಮನೋನುಕೂಲೇ ನ ತು ಚಕ್ಷುಪೀಡನೇ ಗುಹಾನಿವಾತಾಶ್ರಯಣೇ ಪ್ರಯೋಜಯೇತ್ । ೧೦ ॥

**ಶ್ವೇ, ಅ ೨, ಮಂ ೧೨-೧೩** — ಪೃಥಿವ್ಯಪ್ತೇಜೋಽನಿಲಖೇ ಸಮುತ್ಥಿತೇ ಪಂಚಾತ್ಮಕೇ ಯೋಗಗುಣೇ ಪ್ರವೃತ್ತೇ । ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಂ ॥ ೧೨ ಲಘುತ್ವಮಾರೋಗ್ಯಮಲೋಲುಪತ್ವಂ ವರ್ಣಪ್ರಸಾದಃ ಸ್ವರಸೌಷ್ಟವಂ ಚ । ಗಂಧಃ ಶುಭೋ ಮೂತ್ರಪುರೀಷಮಲ್ಪಂ ಯೋಗಪ್ರವೃತ್ತಿಂ ಪ್ರಥಮಾಂ ವದನ್ತಿ ॥ ೧೩ ॥

## ೭. ಪರಿಚ್ಛೇದ ೧೧.

**ಕ, ಅ ೨, ವ ೬, ಮಂ ೯** — ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ । ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏತದ್ವಿದುರಮೃತಾಸ್ತೇ ಭವನ್ತಿ ॥

**ಕ, ಅ ೨, ವ ೬, ಮಂ ೧೨** — ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ । ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥

**ಕ, ಅ ೧, ವ ೩, ಮಂ ೧೨** — ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೇ । ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥

**ಮುಂ ೩, ಖಂ ೧, ಮಂ ೮** — ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವಸ್ತಪಸಾ ಕರ್ಮಣಾ ವಾ। ಜ್ಞಾನಪ್ರಸಾದೇನ ವಿಶುದ್ಧಸತ್ವಃ ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥

**ಕ, ಅ ೧, ವ ೨, ಮಂ ೨೦** — ತಮಕ್ರತುಃ ಪಶ್ಯತಿ ವೀತಶೋಕೋ ಧಾತುಪ್ರಸಾದಾನ್ಮಹಿಮಾನಮಾತ್ಮನಃ ।

## ೭. ಪರಿಚ್ಛೇದ ೧೨.

**ಕ, ಅ ೨, ವ ೬, ಮಂ ೧೭** — ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಞ್ಜಾದಿವೇಷೀಕಾಂ ಧೈರ್ಯೇಣ । ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ ॥

**ಕೌ, ಅ ೪, ಮಂ ೨೦**—ತದ್ಯಥಾ ಕ್ಷುರಃ ಕ್ಷುರಧಾನೇ ಹಿತಃ ವಿಶ್ವಂಭರೋ ವಾ ವಿಶ್ವಂಭರಕುಲಾಯೇ ಏವಮೈವ ಏಷ ಪ್ರಜ್ಞಾತ್ಮಾ ಇದಂ ಶರೀರಂ ಅನುಪ್ರವಿಷ್ಟಃ ಆಲೋಮಭ್ಯಃ ಆನಖೇಭ್ಯಃ ।

**ಶ್ವೇ, ಅ ೧, ಮಂ ೧೫** — ತಿಲೇಷು ತೈಲಂ ದಧನೀವ ಸರ್ಪಿರಾಪಃ ಸ್ರೋತಃಸ್ವರಣೀಷು ಚಾಗ್ನಿಃ । ಏವಮಾತ್ಮಾತ್ಮನಿ ಗೃಹ್ಯತೇಽಸೌ ಸತ್ಯೇನೈನಂ ತಪಸಾ ಯೋಽನುಪಶ್ಯತಿ ॥

**ಶ್ವೇ, ಅ ೪, ಮಂ ೧೬** — ಘೃತಾತ್ಪರಂ ಮಂಡಮಿವಾತಿಸೂಕ್ಷ್ಮಂ ಜ್ಞಾತ್ವಾ ಶಿವಂ ಸರ್ವಭೂತೇಷು ಗೂಢಮ್ । ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಪೈಃ ॥

೭. ಪರಿಚ್ಛೇದ ೧೩.

**ಶ್ವೇ, ಅ ೨, ಮಂ ೧೧**—ನೀಹಾರಧೂಮಾರ್ಕಾನಲಾನಿಲಾನಾಂ ಖದ್ಯೋತವಿದ್ಯುತ್‌ಸ್ಫಟಿಕಶಶಿನಾಮ್ । ಏತಾನಿ ರೂಪಾಣಿ ಪುರಃಸರಾಣಿ ಬ್ರಹ್ಮಣ್ಯಭಿವ್ಯಕ್ತಿಕರಾಣಿ ಯೋಗೇ ॥

**ಬೃ, ಅ ೨, ಬ್ರಾ ೩, ಮಂ ೬**— ತಸ್ಯ ಹ ಏತಸ್ಯ ಪುರುಷಸ್ಯ ರೂಪಂ ಯಥಾ ಮಹಾರಜನಂ ವಾಸೋ, ಯಥಾ ಪಾಣ್ಡ್ವಾವಿಕಂ, ಯಥೇಂದ್ರಗೋಪೋ, ಯಥಾ ಅಗ್ನ್ಯರ್ಚಿಃ. ಯಥಾ ಪುಣ್ಡರೀಕಂ, ಯಥಾ ಸಕೃದ್ವಿದ್ಯುತ್ । ತೇ ಹ ವಾ ಅಸ್ಯ ಶ್ರೀರ್ಭವತಿ ಯ ಏವಂ ವೇದ ।

**ಬೃ, ಅ ೫, ಬ್ರಾ ೯, ಮಂ ೧ ; ಮೈ, ಅ ೨, ಮಂ ೬**— ಅಯಮಗ್ನಿರ್ವೈಶ್ವಾನರೋ ಯೋಽಯಮಂತಃಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ ತಸ್ಯೈಷ ಘೋಷೋ ಭವತಿ ಯಮೇತತ್ಕರ್ಣಾವಪಿಧಾಯ ಶೃಣೋತಿ ಸ ಯದೋತ್ಕ್ರಮಿಷ್ಯನ್ ಭವತಿ ನೈನಂ ಘೋಷಂ ಶೃಣೋತಿ ।

**ಛಾಂ, ಅ ೩, ಖಂ ೧೩, ಮಂ ೮**— ತದಸ್ಮಿನ್ ಶರೀರೇ ಸಂಸ್ಪರ್ಶೇನೋಷ್ಣಿಮಾನಂ ವಿಜಾನಾತಿ । ತಸ್ಯೈಷಾ ಶ್ರುತಿಃ । ಯತ್ರ ಕರ್ಣಾವಪಿಗೃಹ್ಯ ನಿನದಮಿವ, ನದಥುರಿವ, ಅಗ್ನೇರಿವ ಜ್ವಲತ ಉಪಶೃಣೋತಿ ।

**ಮುಂ ೨, ಖಂ ೨, ಮಂ ೯—** ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥ ೯ ॥

**ಛಾಂ, ಅ ೮, ಖಂ ೪, ಮಂ ೨—** ಏತಂ ಸೇತುಂ ತೀರ್ತ್ವಾ ಅಂಧಃ ಸನ್ನನಂಧೋ ಭವತಿ, ವಿದ್ಧಃ ಸನ್ನವಿದ್ಧೋ ಭವತಿ, ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಪಿ ನಕ್ತಮಹರೇವಾಭಿನಿಷ್ಪದ್ಯತೇ । ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮ ಲೋಕಃ ॥

**ಛಾಂ, ಅ ೩, ಖಂ ೧೧, ಮಂ ೨–೩—** ನ ವೈ ತತ್ರ ನ ನಿಮ್ಲೋಚ ನೋದಿಯಾಯ ಕದಾಚನ । ದೇವಾಸ್ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣಾ ॥ ೨ ॥ ನ ಹ ವಾ ಅಸ್ಮಾ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈವಾಸ್ಮಿ ಭವತಿ ಯ ಏತಾಂ ಬ್ರಹ್ಮೋಪನಿಷದಂ ವೇದ ॥ ೩ ॥

**ಶ್ವೇ, ಅ ೪, ಮಂ ೧೮—** ಯದಾಽತಮಃ ತನ್ನ ದಿವಾ ನ ರಾತ್ರಿರ್ನ ಸನ್ನ ಚಾಸನ್ ಶಿವ ಏವ ಕೇವಲಃ ।

## ೭. ಪರಿಚ್ಛೇದ ೧೪.

**ಮುಂ ೩, ಖಂ ೨, ಮಂ ೩ —** ಯಮೇವೈಷ ವೃಣುತೇ ತೇನೈವ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ।

**ಛಾಂ, ಅ ೧, ಖಂ ೬, ಮಂ ೬ —** ಯ ಏಷೋಂತರಾದಿತ್ಯೇ ಹಿರ ಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಸ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ ಸರ್ವ ಏವ ಸುವರ್ಣಃ ।

**ಈ, ಮಂ ೧೬—** ಯೋಽಸಾವಸೌ ಪುರುಷಃ ಸೋಹಮಸ್ಮಿ ।

**ಶ್ವೇ, ಅ ೨, ಮಂ ೧೪–೧೫—** ಯಥೈವ ಬಿಂಬಂ ಮೃದಯೋಪಲಿಪ್ತಂ ತೇಜೋಮಯಂ ಭ್ರಾಜತೇ ತತ್ಸುಧಾತಮ್ । ತದ್ವಾತ್ಮತತ್ತ್ವಂ ಪ್ರಸಮೀಕ್ಷ್ಯ ದೇಹೀ ಏಕಂ ಕೃತಾರ್ಥೋ ಭವತೇ ವೀತಶೋಕಃ ॥ ೧೪ ॥ ಯದಾತ್ಮತತ್ತ್ವೇನ ತು ಬ್ರಹ್ಮತತ್ತ್ವಂ ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್ । ಅಜಂ ಧ್ರುವಂ ಸರ್ವ ತತ್ತ್ವೈರ್ವಿಶುದ್ಧಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥ ೧೫ ॥

**ಮೈ, ಅ ೨, ಮಂ ೧-೩—** ಅಯಂ ವಾವ ಖಲ್ವಾತ್ಮಾ ತೇ । ಯಃ ಕತಮೋ ಭಗವ ಇತಿ । ತಂ ಹೋವಾಚ । ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್‌ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಇತ್ಯೇಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್‌ಬ್ರಹ್ಮೇತಿ । ಅಥ ಖಲ್ವಿಯಂ ಬ್ರಹ್ಮವಿದ್ಯಾ ಸರ್ವೋಪನಿಷದ್ವಿದ್ಯಾ ವಾ ರಾಜನ್ನಸ್ಮಾಕಂ ಭಗವತಾ ಮೈತ್ರಿಣಾಽಽಖ್ಯಾತಾ ।

## ೭. ಪರಿಚ್ಛೇದ ೧೫.

**ಶ್ವೇ, ಅ ೫, ಮಂ ೧೦—** ನೈಷ ಸ್ತ್ರೀ ನ ಪುಮಾನೇಷ ನ ಚೈವಾಯಂ ನಪುಂಸಕಃ । ಯದ್ಯಚ್ಛರೀರಮಾದತ್ತೇ ತೇನ ತೇನ ಸ ರಕ್ಷ್ಯತೇ ॥

**ಈ, ಮಂ ೪-೫—** ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ ಪೂರ್ವಮರ್ಶತ್ । ......... ತದೇಜತಿ ತನ್ನೈಜತಿ ತದ್ದೂರೇ ತದ್ವನ್ತಿಕೇ। ತದನ್ತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥

**ಕ, ಅ ೧, ವ ೨, ಮಂ ೨೧—** ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ । ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥

**ಮುಂ ೩, ಖಂ ., ಮಂ ೭ —** ಬೃಹಚ್ಚ ತದ್ದಿವ್ಯಮಚಿನ್ತ್ಯರೂಪಂ ಸೂಕ್ಷ್ಮಾಚ್ಚ ತತ್ಸೂಕ್ಷ್ಮತರಂ ವಿಭಾತಿ । ದೂರಾತ್ಸುದೂರೇ ತದಿಹಾನ್ತಿಕೇ ಚ ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಂ ॥

**ಕ, ಅ ೧, ವ ೨, ಮಂ ೨೦ —** ಅಣೋರಣೀಯಾನ್ಮಹತೋ ಮಹೀಯಾನಾತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಮ್ ।

**ಶ್ವೇ, ಅ ೫, ಮಂ ೮-೯—** ಅಂಗುಷ್ಠಮಾತ್ರೋ ರವಿತುಲ್ಯರೂಪಃ ಸಂಕಲ್ಪಾಹಂಕಾರಸಮನ್ವಿತೋ ಯಃ । ಬುದ್ಧೇರ್ಗುಣೇನಾತ್ಮಗುಣೇನ ಚೈವ ಆರಾಗ್ರಮಾತ್ರೋ ಹ್ಯವರೋಽಪಿ ದೃಷ್ಟಃ ॥ ೮ ॥ ಬಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಃ ಸ ವಿಜ್ಞೇಯಃ ಸ ಚಾಽಽನಂತ್ಯಾಯ ಕಲ್ಪತೇ ॥ ೯ ॥

**ಕ, ಅ ೨, ವ ೬, ಮಂ ೧೭ —** ಅಂಗುಷ್ಠಮಾತ್ರಃ ಪುರುಷೋಽನ್ತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ ।

೭. ಪರಿಚ್ಛೇದ ೧೬.

**ಬೃ, ಅ ೪, ಬ್ರಾ ೪, ಮಂ ೧೨** — ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ । ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ॥

**ಮುಂ ೨, ಖಂ ೨, ಮಂ ೮** — ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ ॥

**ಮುಂ ೩, ಖಂ ೧, ಮಂ ೨** — ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತಿ ಅನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥

**ಬೃ, ಅ ೪, ಬ್ರಾ ೩, ಮಂ ೨೧** — ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚಿನ ವೇದ, ನಾಂತರಂ, ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ, ನಾನ್ತರಮ್. ತದ್ವಾ ಅಸ್ಯ ಏತದಾಪ್ತಕಾಮಂ ಆತ್ಮಕಾಮಮ್ ಅಕಾಮಮ್ ರೂಪಮ್ ॥

**ತೈ, ವ ೨, ಅನು ೪** — ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕದಾಚನ ।

**ತೈ, ವ ೨, ಅನು ೭** – ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇ ಅನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿನ್ದತೇ । ಅಥ ಸೋಽಭಯಂ ಗತೋ ಭವತಿ ।

**ಛಾಂ, ಅ ೧, ಖಂ ೩, ಮಂ ೧೨** — ಆತ್ಮಾನಮಂತೇ ಉಪಸೃತ್ಯ ಸ್ತುವೀತ ಕಾಮಂ ಧ್ಯಾಯನ್ ಅಪ್ರಮತ್ತೋ, ಅಭ್ಯಾಶೋ ಹ ಯತ್, ಅಸ್ಮೈ ಸ ಕಾಮಃ ಸಮೃಧ್ಯೇತ ಯತ್ಕಾಮಃ ಸ್ತುವೀತೇತಿ ॥

**ಛಾಂ, ಅ ೮, ಖಂ ೭, ಮಂ ೧** — ಯ ಆತ್ಮಾಽಪಹತಪಾಪ್ಮಾ ವಿಜರೋ, ವಿಮೃತ್ಯುಃ, ವಿಶೋಕೋಽವಿಜಿಘತ್ಸೋಽಪಿಪಾಸಃ, ಸತ್ಯಸಂಕಲ್ಪಃ, ಸೋಽನ್ವೇಷ್ಟವ್ಯಃ, ಸ ವಿಜಿಜ್ಞಾಸಿತವ್ಯಃ । ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ।

**ಮುಂ ೩, ಖಂ ೧, ಮಂ ೧೦** — ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿಕಾಮಃ ॥

೭. ಪರಿಚ್ಛೇದ ೧೭.

**ಮುಂ ೨, ಖಂ ೨, ಮಂ ೧೧—** ಬ್ರಹ್ಮೈವೇದಮಮೃತಂ ಪುರಸ್ತಾದ್ ಬ್ರಹ್ಮ ಪಶ್ಚಾದ್ ಬ್ರಹ್ಮ ದಕ್ಷಿತಶ್ಚೋತ್ತರೇಣ ಅಧಶ್ಚೋರ್ಧ್ವಂ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್ ॥

**ಬೃ, ಅ ೧, ಬ್ರಾ ೪, ಮಂ ೧೦—** ಬ್ರಹ್ಮ ಹ ವಾ ಇದಮಗ್ರ ಆಸಿತ್ತದಾತ್ಮಾನಮವೇತ್ । ಅಹಂ ಬ್ರಹ್ಮಾಸ್ಮೀತಿ । ತಸ್ಮಾತ್ ತತ್ಸರ್ವಮಭವತ್ । ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ ತಥಾ ಋಷೀಣಾಂ ತಥಾ ಮನುಷ್ಯಾಣಾಮ್। ತದ್ಧೈತತ್ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ ।

**ಛಾಂ, ಅ ೮, ಖಂ ೧೩, ಮಂ ೧—**ಅಶ್ವ ಇವ ರೋಮಾಣಿ ವಿಧೂಯ ಪಾಪಂ, ಚಂದ್ರ ಇವ ರಾಹೋರ್ಮುಖಾತ್ಪ್ರಮುಚ್ಯ, ಧೂತ್ವಾ ಶರೀರಂ, ಅಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮೀತಿ ।

**ತೈ, ವ ೧, ಅನು ೧೦ —** ಅಹಂ ವೃಕ್ಷಸ್ಯ ರೇರಿವ । ಕೀರ್ತಿಃ ಪೃಷ್ಠಂ ಗಿರೇರಿವ । ಉರ್ಧ್ವಪವಿತ್ರೋ ವಾಜಿನೀವಸ್ವಮೃತಮಸ್ಮಿ। ದ್ರವಿಣಂ ಸವರ್ಚಸಮ್ । ಸುಮೇಧಾ ಅಮೃತೋಽಕ್ಷಿತಃ । ಇತಿ ತ್ರಿಶಂಕೋರ್ವೇದಾನುವಚನಮ್ ।

**ತೈ, ವ ೩, ಅನು ೧೦, ಮಂ ೫–೬ —** ಸ ಯ ಏವಂವಿತ್ । ಅಸ್ಮಾಲ್ಲೋಕಾತ್ಪ್ರೇತ್ಯ, ಏತಮನ್ನಮಯಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ, ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾꣳಲೋಕಾನ್‌ಕಾಮಾನ್ನೀಕಾಮರೂಪ್ಯನುಸಂಚರನ್ । ಏತತ್ಸಾಮ ಗಾಯನ್ನಾಸ್ತೇ । ಹಾ ೩ ವು ಹಾ ೩ ವು ಹಾ ೩ ವು । ಅಹಮನ್ನಮಹಮನ್ನಮಹಮನ್ನಮ್ । ಅಹಮನ್ನಾದೋ ೩ ಽಹಮನ್ನಾದೋ ೩ ಽಹಮನ್ನಾದಃ ಅಹꣳ ಶ್ಲೋಕಕೃದಹꣳ ಶ್ಲೋಕಕೃದಹꣳಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ ೩ ಸ್ಯ । ಪೂರ್ವಂ ದೇವೇಭ್ಯೋಽಮೃತಸ್ಯ ನಾ ೩ ಭಾಯಿ । ಯೋ ಮಾ ದದಾತಿ ಸ ಇದೇವ ಮಾ ೩ ವಾಃ । ಅಹಮನ್ನಮನ್ನಮದನ್ತಮಾ ೩ ದ್ಮಿ। ಅಹಂ ವಿಶ್ವಂ ಭುವನಮಭ್ಯಭವಾ ೩ ಮ್। ಸುವರ್ಣ ಜ್ಯೋತಿಃ ॥

---

# ಬೇರೆ ಬೇರೆ ಉಪನಿಷತ್ ಗ್ರಂಥಗಳ ಇತಿವೃತ್ತವು

## ೧. ಬರಿಯ ಮೂಲಮಂತ್ರಗಳುಳ್ಳ ಪುಸ್ತಕಗಳು

ಮುಂಬೈಯ ನಿರ್ಣಯಸಾಗರ ಮುದ್ರಣಾಲಯದಲ್ಲಿ ೨೮ ಉಪನಿಷತ್ತುಗಳ ಪ್ರತಿಯು ಒಂದು ಅಚ್ಚಾಗಿದ್ದು ಬಹಳ ಮಾಟಾಗಿದೆ. ಅದರಲ್ಲಿ ಮೈತ್ರಿಯನ್ನೊಂದುಳಿದು ಎಲ್ಲ ಮಹತ್ವದ ಉಪನಿಷತ್ತುಗಳೂ ಇವೆ. ಮುಂಬೈಯ ವೆಂಕಟೇಶ್ವರ ಮುದ್ರಾಮಂದಿರ ದವರು ಪ್ರಕಟಿಸಿದ ೨೮ ಉಪನಿಷತ್ತುಗಳ ಇನ್ನೊಂದು ಪ್ರತಿಯೂ ದೊರೆಯುತ್ತದೆ. ಪುಣೆಯ ಆನಂದಾಶ್ರಮದವರು ೩೨ ಉಪನಿಷತ್ತುಗಳುಳ್ಳ ಒಂದು ಪುಸ್ತಕವನ್ನು ಅಚ್ಚು ಹಾಕಿಸಿದ್ದಾರೆ ; ಆದರೆ ಅದರಲ್ಲಿ ಹೆಸರಾದ ದಶೋಪನಿಷತ್ತುಗಳೇ ಇಲ್ಲ ; ಆದರೂ ಉಳಿದ ಉಪನಿಷತ್ತುಗಳೊಡನೆ ಕೌಷೀತಕಿ ಮತ್ತು ಮೈತ್ರಿ ಉಪನಿಷತ್ತುಗಳು ಅದರಲ್ಲಿವೆ ನಾರಾಯಣ ಮತ್ತು ಶಂಕರಾನಂದರ ಭಾಷ್ಯದೊಡನೆ ಅದು ಅಚ್ಚಾಗಿದೆ. ಜೇಕಬ ಸಾಹೇಬರು ' ಅಥರ್ವಣದ ಹನ್ನೊಂದು ಉಪನಿಷತ್ತುಗಳು ' ಎಂಬ ಹೆಸರಿನಿಂದ ಮುಂಬೈಯ ಸಂಸ್ಕೃತಗ್ರಂಥಮಾಲೆಯಲ್ಲಿ ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಪ್ರಸಿದ್ಧವಿರುವ ದಶೋಪನಿಷತ್ತುಗಳು ಇದರಲ್ಲಿಯೂ ಇಲ್ಲ. ಮದ್ರಾಸಿನ ಅಡ್ಯಾರ ಗ್ರಂಥಸಂಗ್ರಹಾಲಯದಿಂದ ಕೆಲವು ಕಿರುಕುಳ ಉಪನಿಷತ್ತುಗಳ ಸುಂದರವಾದ ಪ್ರತಿಯು ಪ್ರಕಟವಾಗಿದೆ ; ಹಸ್ತಲಿಖಿತ ಮಾತೃಕೆಗಳ ಪಾರುಪತ್ಯಗಾರರು ( Director of manuscripts' library ) ಇದರ ಸಂಪಾದಕರು. ಕ್ರಿಸ್ತಾಬ್ದ ೧೯೧೨ನೆಯ ವರುಷ ಅಲ್ಲಿಯ ಪಾರುಪತ್ಯಗಾರರಾದ ಡಾ. ಶ್ರೇಡರರೆಂಬವರು ( Dr. Schrader ) ಅದೇ ವರ್ಷ ' ಸನ್ಯಾಸ ಉಪನಿಷತ್ತು ' ಗಳನ್ನು ಸಂಗ್ರಹಿಸಿ ಪ್ರಕಟಿಸಿವರು. ಮುಂದೆ ಮಹಾಯುದ್ಧವು ಆರಂಭವಾದ ಬಳಿಕ ಅವರಿಗೆ ಯುರೋಪಕ್ಕೆ ಹೋಗಲೇಬೇಕಾಯಿತು. ಆಗ ಆ ಸ್ಥಳಕ್ಕೆ ಮೈಸೂರ ಕರ್ನಾಟಕದ ಪ್ರಸಿದ್ಧ ವಿದ್ವಾಂಸರಾದ ಏ ಮಹಾದೇವಶಾಸ್ತ್ರಿಗಳು ಬಂದರು. ಇವರು ೧೯೨೦ರಲ್ಲಿ ' ಯೋಗ ಉಪನಿಷತ್ತು ' ಗಳನ್ನೂ, ೧೯೨೧ರಲ್ಲಿ ' ವೇದಾಂತ ಉಪನಿಷತ್ತು' ಗಳನ್ನೂ, ೧೯೨೩ರಲ್ಲಿ ' ವೈಷ್ಣವ ಉಪನಿಷತ್ತು ' ಗಳನ್ನೂ ಬೆಳಕಿಗೆ ತಂದರು. ಇವರ ಎಣಿಕೆಯಂತೆ ' ಶೈವೋಪನಿಷತ್ತು ' ಗಳೆಂಬುದೊಂದು ಮಾತ್ರ ಇನ್ನೂ ಹೊರಬೀಳಬೇಕಾಗಿರುವಂತೆ ತೋರುತ್ತದೆ. ಇವೆಲ್ಲವೂ ಉಪನಿಷದ್ಬ್ರಹ್ಮಯೋಗಿಯೆಂಬವರ

ಭಾಷ್ಯವನ್ನೊಳಗೊಂಡಿವೆ. ಇವೆಲ್ಲವುಗಳ ಮುದ್ರಣ ಮುಂತಾದ್ದರಲ್ಲಿ ಹೆಸರಿಡಲಿಕ್ಕೆ ಎಳ್ಳಷ್ಟೂ ಅನುವಿಲ್ಲ. ಸಣ್ಣ ಉಪನಿಷತ್ತುಗಳ ಓದುಗನಿಗೆ ಅಡ್ಯಾರದಿಂದ ಪ್ರಕಾಶಿತವಾದ ಮುದ್ದಾಗಿಯೂ ಮಾಟಾಗಿಯೂ ಇರುವ ಈ ಉಪನಿಷತ್ತುಗಳನ್ನು ಬಿಟ್ಟು, ಇದಕ್ಕೂ ಸುಂದರವಾಗಿರುವ ಬೇರೆಯಾವ ಪುಸ್ತಕವನ್ನೂ ನಾವು ಬೆರಲುಮಾಡಿ ತೋರಿಸುವುದು ಸಾಧ್ಯವಿಲ್ಲ.

ಒಂದುನೂರಾ ಎಂಟು ಉಪನಿಷತ್ತುಗಳುಳ್ಳ ಪ್ರತಿಯನ್ನು ಸುಬ್ರಹ್ಮಣ್ಯ ಶಾಸ್ತ್ರಿಗಳು ಮದ್ರಾಸಿನಲ್ಲಿ ೧೮೮೩ ರಲ್ಲಿ ಪ್ರಕಟಿಸಿದರು. ಇದೇ ಗ್ರಂಥವನ್ನೆ ಮುಂದೆ ಮುಂಬೈಯ ತತ್ವವಿವೇಚಕ ಮುದ್ರಾಮಂದಿರದವರು ಅಚ್ಚು ಹಾಕಿದರು. ಇಷ್ಟೆ ಉಪನಿಷತ್ತುಗಳುಳ್ಳ ಸುಂದರವಾದ ಗ್ರಂಥವು ಮುಂಬೈ ನಿರ್ಣಯಸಾಗರ ಮುದ್ರಣಾಲಯದಲ್ಲಿಯೂ ಈವಾಗ ದೊರೆಯುತ್ತದೆ. ಇದಕ್ಕೂ ವಿಶ್ವಾಸಾರ್ಹವಾದ ಬೇರೊಂದು ಪ್ರತಿಯು ದೊರೆಯದಿರುವಾಗ, ಉಪನಿಷನ್ಮಂತ್ರಗಳನ್ನು ವಿಸ್ತಾರವಾಗಿ ಅಭ್ಯಾಸಮಾಡಬೇಕೆಂಬುವ ಉಪನಿಷತ್ತಿನ ಎಲ್ಲ ಅಭ್ಯಾಸಿಗಳಿಗೆ ನಿರ್ಣಯಸಾಗರದ ಈ ಪ್ರತಿಯನ್ನೆ ಕೊಳ್ಳಲಿಕ್ಕೆ ನಾವು ಸೂಚಿಸುತ್ತೇವೆ. ಉಪನಿಷತ್ತುಗಳು ನಿಜವಾಗಿ ಒಂದುನೂರಾ ಎಂಟೇ ಇಲ್ಲ. ಇನ್ನೂ ಎಷ್ಟೋ ಉಂಟು. ಅಡ್ಯಾರ ಗ್ರಂಥಸಂಗ್ರಹಾಲಯದವರು ಪ್ರಕಟಿಸಿದ ಪುಸ್ತಕಗಳ ಪಟ್ಟಿಯಲ್ಲಿ ಅವುಗಳ ಹೆಸರುಗಳನ್ನು ಕಾಣಿಸಿದ್ದಾರೆ; ಆದರೆ ಅವಕ್ಕಿಂತ ಹೆಚ್ಚು ಸಂಪೂರ್ಣವಾಗಿಯೂ ಸುವ್ಯಸ್ಥಿತವಾಗಿಯೂ ಇರುವ ಪಟ್ಟಿಯು ಡಾ. ಬೆಲವಲಕರ ಮತ್ತು ಪ್ರೊ. ರಾನಡೆಯವರು ಬರೆದ " Creative Period of Indian Philosophy " ಎಂಬ ಗ್ರಂಥದಲ್ಲಿ ದೊರೆಯುತ್ತದೆ.

ಸಂಪೂರ್ಣವಾಗಿ ವಿಶ್ವಸನೀಯವಾಗುವಂತೆ ಆಕ್ಷೇಪ ಪ್ರಕ್ಷೇಪಗಳೇನೂ ಹೊರಡದಂತೆ ಉಪನಿಷತ್ತುಗಳ ಮೂಲಮಂತ್ರಗಳನ್ನು ಅಚ್ಚುಹಾಕಿದ ಒಂದೂ ಪ್ರತಿಯು ಪ್ರಕಟವಾಗದಿರುವದು ವಿಚಿತ್ರವಾಗಿದೆ ಈ ಬಗೆಯ ಒಂದು ಪ್ರತಿಯನ್ನು ಪ್ರಕಾಶಗೊಳಿಸಬೇಕೆಂದು ಉಪನಿಷತ್ತಿನ ಎಲ್ಲ ವಾಙ್ಮಯಾಭ್ಯಾಸಿಗಳಿಗೆ ನಮ್ಮದೊಂದು ಬಿನ್ನಹವುಂಟು. ' ಎಲ್ಲ ಹಳೆಯ ಉಪನಿಷತ್ತುಗಳನ್ನು ವಿಮರ್ಶಿಸಿ ಅವುಗಳ ಮೂಲಮಂತ್ರಗಳನ್ನು ಸುವ್ಯವಸ್ಥಿತವಾಗಿ ಸೇರಿಸಿ ಶಬ್ದಕ್ಕೆ ಸರಿಯಾದ ಅರ್ಥದೊಂದಿಗೆ ಅನೇಕ ಉಪಯುಕ್ತವಾದ ಪರಿಶಿಷ್ಟಗಳನ್ನು ಹಾಕಿ ಒಂದು ಗ್ರಂಥವನ್ನು ಪ್ರಕಟಿಸುವದು ಉಪನಿಷತ್ತಿನ ಭಾಷಾಭ್ಯಾಸಕ್ಕೆ ಅತ್ಯಂತ ಅವಶ್ಯಕವಾಗಿದೆ ' ಎಂದು ಲಾನ್ಮನ್ (Lanman) ಎಂಬವನು " Beginnings of Hindu Pantheism, " ' ಹಿಂದೂ ಸರ್ವೇ

ಶ್ವರವಾದದ ಆರಂಭ ' ವೆಂಬ ತನ್ನ ಗ್ರಂಥದಲ್ಲಿ ಬರೆದ ಮಾತು ಈಗ್ಯೂ ಸಂಪೂರ್ಣ ಸತ್ಯವಾಗಿದೆ.

ಕರ್ನಲ ಜೇಕಬನು ಮುಖ್ಯ ೫೬ ಉಪನಿಷತ್ತು ಹಾಗೂ ಭಗವದ್ಗೀತೆ 'Concordance to the principal Upanishads ' ಎಂಬ ಗ್ರಂಥವನ್ನು ಸಿದ್ಧಪಡಿಸಿ ಅಖಿಲ ಉಪನಿಷದಭ್ಯಾಸಿಗಳ ಮೇಲೆ ತುಂಬಾ ಉಪಕಾರಮಾಡಿದ್ದಾನೆ. ಹಿಂದೀ ಸೈನ್ಯದಲ್ಲಿ ದಂಡನಾಯಕನಿದ್ದವನು ವಾಙ್ಮಯದಲ್ಲಿಯೂ ತನ್ನ ಕೈಗುಣವನ್ನು ತೋರಿದುದು ಆತನಿಗೆ ವಿಶೇಷ ಭೂಷಣಾಸ್ಪದವಾಗಿದೆ. ಭಾರತೀಯ ಸೇನಾಧಿಕಾರಿಗಳಿಂದ ಈ ಬಗೆಯ ಇದಕ್ಕೂ ಸೋಜಿಗದ ಸಂಗತಿಗಳು ಒದಗಲೆಂದು ಹಾರೈಕೆ.

## ೨. ಭಾಷ್ಯಗಳು

ಬ್ರಹ್ಮಸೂತ್ರ ಮತ್ತು ಭಗವದ್ಗೀತೆಗಳ ಮೇಲಿರುವಂತೆ ಉಪನಿಷತ್ತುಗಳ ಮೇಲೆಯೂ ವೇದಾಂತ ತತ್ವಜ್ಞಾನದ ಎಲ್ಲ ಮಹತ್ವದ ಶಾಖೆಗಳ ಆಚಾರ್ಯರ ಟೀಕೆಗಳೂ ಉಂಟು. ಪುಣೆಯ ಆನಂದಾಶ್ರಮ ಮುದ್ರಾಮಂದಿರದಲ್ಲಿ ಹಲವು ಉಪನಿಷತ್ತುಗಳ ಶಾಂಕರಭಾಷ್ಯವು ಅಚ್ಚಾಗಿದೆ. ಅದರಂತೆ ವಾಣೀವಿಲಾಸ ಮುದ್ರಣಾಲಯದಲ್ಲಿ ಶಾಂಕರಭಾಷ್ಯದ ಸಂಗ್ರಹವು ಅಚ್ಚಾಗಿದೆ. ಪುಣೆಯ ಹ. ರ. ಭಾಗವತರು ಶಾಂಕರಭಾಷ್ಯದ ಉಪನಿಷತ್ತುಗಳ ಒಂದು ಗ್ರಂಥವನ್ನು ಪ್ರಕಟಿಸಿದ್ದಾರೆ. ಮುಂಡಕೋಪನಿಷತ್ತಿನ ಗೌಡಪಾದರ ಟೀಕೆಯ ಮೇಲಿನ ಹಾಗೂ ಬೃಹದಾರಣ್ಯಕದ ಮೇಲಿನ ಶಾಂಕರಭಾಷ್ಯವು ಬಹಳ ಪ್ರಖ್ಯಾತವಾಗಿದೆ. ಬೃಹದಾರಣ್ಯಕದ ಮೇಲಿನ ಶಾಂಕರಭಾಷ್ಯಕ್ಕೆ ಸುರೇಶ್ವರಾಚಾರ್ಯರು ವಾರ್ತಿಕ ಬರೆದಿರುವರು. ಶ್ವೇತಾಶ್ವತರದ ಶಾಂಕರಭಾಷ್ಯವು ಶಂಕರಾಚಾರ್ಯರದೋ ಎಂದು ಕೆಲಸಾರೆ ಆಕ್ಷೇಪವುಂಟಾಗಿದೆ; ಆದರೆ ಉಳಿದ ಉಪನಿಷತ್ತುಗಳ ಮೇಲಿನ ಶಾಂಕರಭಾಷ್ಯವು ನಿಸ್ಸಂದಿಗವಾಗಿ ಅವರದೇ ಎಂದು ತಿಳಿಯುತ್ತದೆ. ಸ್ವಾಮಿ ಅಚಿಂತ್ಯಭಗವಾನ ಎಂಬವರ ಟೀಕೆಯುಳ್ಳ ಮುಖ್ಯ ಹನ್ನೊಂದು ಉಪನಿಷತ್ತುಗಳ ಒಂದು ಗ್ರಂಥವನ್ನು ೧೯೧೦ ರಲ್ಲಿ ನಿರ್ಣಯಸಾಗರದವರು ಪ್ರಕಟಿಸಿದ್ದಾರೆ; ಇದು ಬಹು ಚನ್ನಾಗಿದೆ; ಶಾಂಕರಮತವೆ ಈ ಟೀಕೆಯ ತಿರುಳಾಗಿದೆ. ಉಪನಿಷತ್ತಿನ ಶಾಂಕರಭಾಷ್ಯಸಾರವು ಬೇಕಾಗಿದ್ದರೆ ಈ ಅಚಿಂತ್ಯಭಗವಾನ ಸ್ವಾಮಿಗಳ ಟೀಕೆಯ ಈ ಪ್ರತಿಯನ್ನು ಕೊಳ್ಳಬೇಕು; ಪ್ರತಿಯು ಬಲು ಮಾಟಾಗಿಯೂ ಮುದ್ರಣವು ಮುದ್ದಾಗಿಯೂ

ಇದೆ. ಸುವಿಖ್ಯಾತರಾದ ಮಾಧವಾಚಾರ್ಯರು ಬರೆದ ‘ ಅನುಭೂತಿ ಪ್ರಕಾಶ ’ ದಲ್ಲಿ ಹಲವು ಉಪನಿಷತ್ತುಗಳ ಮೇಲೆ ಅದ್ವೈತ ತತ್ವಕ್ಕನುಸರಿಸಿದ ಸಾಮಾನ್ಯ ಟೀಕೆಯಿದೆ.

ಶ್ರೀರಾಮಾನುಜರ ಉಪನಿಷದ್ಭಾಷ್ಯವು ಬ್ರಹ್ಮಸೂತ್ರಭಾಷ್ಯದಷ್ಟು ಬಹಳ ಹೆಸರಾಗಿಲ್ಲ. ಮದ್ರಾಸಿನಲ್ಲಿ ಅಚ್ಚಾದ ಒಂದು ಪ್ರತಿಯಲ್ಲಿ ಇವರ ಉಪನಿಷದ್ಭಾಷ್ಯಗಳು ಉಂಟೆಂದು ಉಲ್ಲೇಖವಿದೆ; ಅದೇಂತಿದ್ದರೂ ಅವು ತೀರ ಸಹಜವಾಗಿ ದೊರೆಯುವದಿಲ್ಲ. ಆದರೆ ರಂಗರಾಮಾನುಜರು ವಿಶಿಷ್ಟಾದ್ವೈತ ಮತಕ್ಕನುಸರಿಸಿ ಬರೆದ ಹಲವು ಉಪನಿಷದ್ಭಾಷ್ಯಗಳು ಹೆಚ್ಚು ಪ್ರಸಿದ್ಧವಾಗಿವೆ. ರಂಗರಾಮಾನುಜರ ಬೃಹದಾರಣ್ಯಕ, ಛಾಂದೋಗ್ಯ, ಕಠ, ಕೇನೋಪನಿಷತ್ತುಗಳ ಭಾಷ್ಯವನ್ನು ಆನಂದಾಶ್ರಮ ಮುದ್ರಾಮಂದಿರದವರು ಅಚ್ಚು ಹಾಕಿಸಿದ್ದಾರೆ. ಕೊನೆಯ ಎರಡು ಉಪನಿಷತ್ತುಗಳನ್ನು ಪುಣೆಯ ಡೆಕ್ಕನ ಕಾಲೇಜಿನ ಪಾಠಕ ಶ್ರೀಧರ ಶಾಸ್ತ್ರಿಗಳೂ ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಶ್ರೀಮಧ್ವಾಚಾರ್ಯರ ಉಪನಿಷದ್ಭಾಷ್ಯಗಳು ಕುಂಭಕೋಣಂದಲ್ಲಿ ಮಧ್ವವಿಲಾಸ ಗ್ರಂಥಪ್ರಸಾರಕ ಮಂಡಲದವರಲ್ಲಿ ದೊರೆಯುತ್ತವೆ. ಪ್ರಯಾಗದ ಪಾಣಿನಿಕಾರ್ಯಾಲಯದವರು ಮಾಧ್ವಭಾಷ್ಯದ ಹಲಕೆಲವು ಅವತರಣಿಕೆಗಳನ್ನು ಮೂಲ ಉಪನಿಷತ್ತುಗಳೊಡನೆ ಪ್ರಕಟಿಸಿದ್ದಾರೆ.

ಬ್ರಹ್ಮಸೂತ್ರಗಳಲ್ಲಿ ‘ ಕಿರಿದರೊಳು ಪಿರಿದರ್ಥ ’ ವನ್ನು ಹೇಳಿದೆ; ಅವು ಸೂತ್ರಗಳು. ಅವುಗಳಲ್ಲಿಯ ಶಬ್ದ ಮತ್ತು ಅರ್ಥಗಳಿಗೆ ಉಪನಿಷತ್ತುಗಳೇ ಆಧಾರಗಳು. ಜಗತ್ಕರ್ತ ಮತ್ತು ಜಗತ್ತಿನ ಮೂಲತತ್ವಗಳ ವಿವೇಚನೆಯೆ ಅವುಗಳಲ್ಲಿ ಪೂರ್ತಿಯಾಗಿ ತುಂಬಿದೆ. ಶ್ರೀಮದಾಚಾರ್ಯರ ಉಪನಿಷದ್ಭಾಷ್ಯಗಳಿಗಿಂತಲೂ ಬ್ರಹ್ಮಸೂತ್ರಭಾಷ್ಯಗಳೆ ಸುವಿಖ್ಯಾತವಾಗಿವೆ. ಈ ಭಾಷ್ಯಗಳು ಅರ್ವಾಚೀನ ವೇದಾಂತಪದ್ಧತಿಯನ್ನು ಅನುಸರಿಸಿವೆ. ಮುನ್ನುಡಿಯಲ್ಲಿ ಸೂಚಿಸಿದಂತೆ ಪ್ರತಿಯೊಬ್ಬರೂ ತಮ್ಮ ತಮ್ಮ ಸಾಂಪ್ರದಾಯದ ತರ್ಕಪದ್ಧತಿಯಿಂದಲೆ ಉಪನಿಷದ್ರಹಸ್ಯವನ್ನು ವಿವೇಚಿಸಿದ್ದಾರೆ; ಆದರೆ ಅಂತರಾತ್ಮನ ಅನುಭಾವವನ್ನು ವ್ಯಕ್ತಪಡಿಸುವ ಪದ್ಧತಿಯನ್ನು ಅನುಸರಿಸಿಲ್ಲ.

## ೩. ಭಾಷಾಂತರಗಳು

ಉಪನಿಷತ್ತುಗಳ ವಿಷಯಕ್ಕೆ ಆದ ಮಹತ್ವದ ಕಾರ್ಯವೆಂದರೆ ಅವುಗಳ ಭಾಷಾಂತರವು. ಅನೇಕ ವರ್ಷಗಳಿಂದ ಭಾಷಾಂತರಕಾರರಿಗೆ ಉಪನಿಷತ್ತುಗಳನ್ನು ತಮ್ಮ ತಮ್ಮ

ಭಾಷೆಗಳಲ್ಲಿ ಭಾಷಾಂತರಿಸಿಕೊಳ್ಳಬೇಕೆಂಬ ಹಂಬಲವಿದ್ದುದು ಕಂಡು ಬರುತ್ತದೆ. ಶಹಾಜಾನನ ಮಗನಾದ ದಾರಾನು ಕ್ರಿಸ್ತಾಬ್ದ ೧೬೫೬-೧೬೫೭ರಲ್ಲಿ ಫಾರ್ಸಿಯಲ್ಲಿ ಭಾಷಾಂತರಿಸಿದುದೆ ಈ ಬಗೆಯ ಮೊದಲನೆಯ ಪ್ರಯತ್ನವೆಂದು ತಿಳಿಯುತ್ತದೆ. ಪಾಶ್ಚಾತ್ಯರಿಗೆ ಮೊಟ್ಟಮೊದಲು ಉಪನಿಷತ್ತುಗಳ ಪರಿಚಯವುಂಟಾದುದು ಕ್ರಿಸ್ತಾಬ್ದ ೧೮೦೧-೧೮೦೨ರಲ್ಲಿ ; ಅಂಕ್ವೆಟಿಲ-ಡು-ಪೆರೋನ ( Anquetil due Perron ) ಎಂಬವನಿಂದ ಸ್ಟ್ರಾಸಬರ್ಗದಲ್ಲಿ ' Oupnek ' hat ' ಎಂದು ಫಾರ್ಶಿಯಿಂದ ಲ್ಯಾಟಿನ ಭಾಷೆಯಲ್ಲಿ ಪರಿವರ್ತಿಸಲ್ಪಟ್ಟವು. ಅವು ಫಾರ್ಶಿ ಉಪನಿಷತ್ತುಗಳ ಭಾಷಾಂತರಗಳೆ. ೧೮೩೨ರಲ್ಲಿ ಜೆ. ಡಿ. ಲಾನಜುಯಿನೇಸನು (Lanjuinais)ಅದೇ ವರುಷದ "Recherches sur les Langues, la Litterature, la Religion et la Philosophie des Indiens " ದಲ್ಲಿ ಮೇಲ್ಕಾಣಿಸಿದ ಲ್ಯಾಟಿನ ಭಾಷಾಂತರದ ಸಾರಾಂಶವನ್ನು ಫ್ರೆಂಚ ಭಾಷೆಯಲ್ಲಿ ಬರೆದನು. ಇದೇ ವರುಷವೆ ರಾಜಾ ರಾಮಮೋಹನರಾಯರು ಈಶ, ಕೇನ, ಕಠ ಮತ್ತು ಮುಂಡಕೋಪನಿಷತ್ತುಗಳನ್ನು ಭಾಷಾಂತರಿಸಿ ಪ್ರಕಟಿಸಿದರು. ಮುಂದೆ ಸರಿಯಾಗಿ ೫೦ ವರುಷಗಳ ನಂತರ ಡ್ರೆಸಡೆನ ಪಟ್ಟಣದಲ್ಲಿ ಲ್ಯಾಟಿನಭಾಷೆಯೊಳಗಿನ 'Oupnek' hat' ದ ಭಾಷಾಂತರವು ಜರ್ಮನ್ ಭಾಷೆಯಲ್ಲಿ ಆಯಿತು. ದಾರಾನ ಕಾಲಕ್ಕೆ ಫಾರ್ಶಿಭಾಷೆಯಲ್ಲಾದ ಭಾಷಾಂತರವು ಕಳೆದ ಶತಮಾನದ ಆರಂಭದಲ್ಲಿ ಲ್ಯಾಟಿನಭಾಷೆಯಲ್ಲಿ ಪರಿವರ್ತಿಸಲ್ಪಟ್ಟು ಅದೇ ಶತಮಾನದ ಕೊನೆಯೊಳಗಾಗಿ ಲ್ಯಾಟಿನ ಭಾಷೆಯಿಂದ ಫ್ರೆಂಚ ಮತ್ತು ಜರ್ಮನ್ ಭಾಷೆಯೊಳಗೂ ಭಾಷಾಂತರಿತವಾಗಿ ಹೋಯಿತು.

ಇಂಗ್ಲೀಷಭಾಷೆಯಲ್ಲಿ ಮೊಟ್ಟಮೊದಲು ಭಾಷಾಂತರಿಸಿದವನು ರೋಅರನು ( Roer ) ; ಇವನು ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೀಯ ಮತ್ತು ಶ್ವೇತಾಶ್ವತರ ಎಂಬ ಒಂಬತ್ತು ಉಪನಿಷತ್ತುಗಳನ್ನು ಭಾಷಾಂತರಿಸಿ ೧೮೫೩ರಲ್ಲಿ ಕಲಕತ್ತೆಯಲ್ಲಿ ಪ್ರಕಟಿಸಿದನು. ಇವನ ಬೃಹದಾರಣ್ಯಕದ ಭಾಷಾಂತರವು ಮುಂದೆ ಕೆಲದಿನಗಳ ಬಳಿಕ ಪ್ರಕಟವಾಯಿತು. ಮಹತ್ವದ ಉಪನಿಷತ್ತುಗಳನ್ನೆಲ್ಲ ಸುವ್ಯವಸ್ಥಿತವಾಗಿ ಮೊದಲು ಭಾಷಾಂತರಿಸಿದವನು ಮ್ಯಾಕ್ಸಮುಲ್ಲರನು ; ಇವನ ಭಾಷಾಂತರಗಳು ಎರಡು ಭಾಗಗಳಲ್ಲಿ ಕ್ಲಾರೆಂಡನ್ ಪ್ರೆಸ್ಸಿನವರು ೧೮೭೯-೧೮೮೪ರಲ್ಲಿ ಪ್ರಸಿದ್ಧಗೊಳಿಸಿದರು. ವ್ಹಿಟ್ನೀಯೆಂಬವನು (American Journal of Philosophy)ಎಂಬ ಪತ್ರಿಕೆಯಲ್ಲಿ ೧೮೮೬ರಲ್ಲಿ ' ಉಪನಿಷತ್ತುಗಳೂ ಅವುಗಳ ಇತ್ತೀಚಿನ ಭಾಷಾಂತರಗಳೂ ' ಎಂಬ ಒಂದು ಪ್ರಬಂಧವನ್ನು ಬರೆದು ಮ್ಯಾಕ್ಸಮುಲ್ಲರನ ಭಾಷಾಂತರಗಳ ವಿಮರ್ಶೆಮಾಡಿ

ದನು. ಡಾಯುಸನ್ನನು ‘ Sechzig Upanishads’ des Vedas ’ ಎಂಬ ೯೪೬ ಪುಟದ ವಿಖ್ಯಾತ ಗ್ರಂಥವನ್ನು ಬರೆದು ೧೮೯೭ರಲ್ಲಿ ಲೆಪ್ಸಿಕ್ ಎಂಬಲ್ಲಿ ಪ್ರಕಟಿಸಿದನು. ಇದರಲ್ಲಿ ಲ್ಯಾಟಿನಿನಲ್ಲಿ ಭಾಷಾಂತರಿತವಾದ ‘ Oupnek’ hat, ’ ಮತ್ತು ಬೇರೆ ಹತ್ತು ಅಥರ್ವಣದ ಉಪನಿಷತ್ತುಗಳೂ ಸೇರಿ ಒಟ್ಟು ಐವತ್ತು ಉಪನಿಷತ್ತುಗಳಿವೆ. ಆದರೆ ಇಂಥ ಮಹತ್ವದ ಗ್ರಂಥವು ಇಂಗ್ಲೀಷಿನಲ್ಲಿ ಭಾಷಾಂತರಿಸಲ್ಪಡದಿದ್ದುದು ಶೋಚನೀಯವಾಗಿದೆ. ಎಲ್ಲ ಉಪನಿಷತ್ತುಗಳ ಮತ್ತು ಅವುಗಳ ಭಾಗಗಳ ವಿಚಾರದಲ್ಲಿ ಅತ್ಯಂತ ಉಪಯುಕ್ತವಾದ ಮುನ್ನುಡಿಯು ಇದರಲ್ಲಿದೆ. ಈ ಗ್ರಂಥವನ್ನು ಬೋಥಲಿಂಕ ಎಂಬವನು ೧೮೯೭ರಲ್ಲಿ ‘ Bemerleungen zueinigen Upanishaden ’ ಎಂಬ ಹೆಸರಿನ ಪ್ರಬಂಧವನ್ನು ಬರೆದು ವಿಮರ್ಶೆಮಾಡಿದ್ದಾನೆ ; ಅದರಲ್ಲಿ ತನಗೂ ಡಾಯುಸೆನ್ನನಿಗೂ ಹಲವು ಮಾತಿನಲ್ಲಿರುವ ಮತಭೇದವನ್ನು ಸೂಚಿಸಿದ್ದಾನೆ. ಜಿ. ಆರ್. ಎಸ್. ಮೀಡನು ಜೆ. ಸಿ. ಚಟ್ಟೋಪಾಧ್ಯಾಯರೆಂಬವರೊಡಗೂಡಿ ೧೮೯೬ರಲ್ಲಿ ಬರೆದ ಉಪನಿಷದ್ಗ್ರಂಥವು ಲಂಡನ್ನಿನ ಥಿಯೋಸೊಫಿಕಲ ಸೊಸೈಟಿಯಿಂದ ಎರಡು ಭಾಗಗಳಲ್ಲಿ ಪ್ರಸಿದ್ಧಿಸಲ್ಪಟ್ಟಿತು. ಮೊದಲನೆಯ ಭಾಗದಲ್ಲಿ ಈಶ, ಕಠ, ಕೇನ, ಪ್ರಶ್ನ, ಮುಂಡಕ, ಮಾಂಡೂಕ್ಯಗಳಿವೆ ; ಎರಡನೆಯದರಲ್ಲಿ ಐತರೇಯ, ತೈತ್ತಿರೀಯ ಮತ್ತು ಶ್ವೇತಾಶ್ವತರ ಉಪನಿಷತ್ತುಗಳಿವೆ. ಮೀಡನ ಈ ಭಾಷಾಂತರವು ಯುರೋಪದಲ್ಲಿ ಉಪನಿಷತ್ತುಗಳ ಬಗ್ಗೆ ಅತೀವ ಜಿಜ್ಞಾಸೆಯನ್ನುಂಟು ಮಾಡಿತು; ಇದರ ಪರಿಣಾಮದಿಂದಲೆ ಈತನ ಗ್ರಂಥವು ಫ್ರೆಂಚ ಮತ್ತು ಡಚ್ಚ ಭಾಷೆಗಳಲ್ಲಿ ಅನುಕ್ರಮವಾಗಿ ೧೯೦೫ ಮತ್ತು ೧೯೦೮ರಲ್ಲಿ ಪರಿವರ್ತಿಸಲ್ಪಟ್ಟಿತು. ಮದ್ರಾಸಿನ ನಟೇಸನ್ ಕಂಪನಿಯು ೧೮೯೮-೧೯೦೧ರಲ್ಲಿ ಪ್ರಕಟಿಸಿದ, ಎಸ್. ಸೀತಾರಾಮಶಾಸ್ತ್ರಿಗಳು ಮತ್ತು ಗಂಗಾನಾಥ ಝಾ ಇವರು ಭಾಷಾಂತರಿಸಿದ ಉಪನಿಷತ್ತುಗಳ ಐದು ಭಾಗಗಳುಂಟು; ಇವುಗಳಲ್ಲಿ ಈಶ, ಕೇನ, ಮುಂಡಕ, ಕಠ, ಪ್ರಶ್ನ, ಛಾಂದೋಗ್ಯ ಐತರೇಯ ಮತ್ತು ತೈತ್ತಿರೀಯ ಉಪನಿಷತ್ತುಗಳು ಶಾಂಕರಭಾಷ್ಯದೊಡನೆ ಬಹು ಚನ್ನಾಗಿ ಕೊಡಲ್ಪಟ್ಟಿವೆ ; ಇವೈದೂ ಭಾಗಗಳು ಬಹು ಮುದ್ದಾಗಿ ಅಚ್ಚಾಗಿವೆ. ಇವನ್ನು ಕಂಡೊಡನೆಯೇ ಮನಸು ಮೆಚ್ಚುವುದು; ಉಪನಿಷತ್ತುಗಳನ್ನು ಓದಲು ಆರಂಭಿಸಿದವನಿಗೆ ಅಭ್ಯಾಸಮಾಡಬೇಕೆಂಬ ಉತ್ಸಾಹವುಂಟಾಗುವುದು. ನಟೇಸನರು ಇನ್ನುಳಿದ ಮಾಂಡೂಕ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಕೌಷೀತಕಿ, ಮೈತ್ರಿಗಳೆಂಬ ಐದೂ ಉಪನಿಷತ್ತುಗಳನ್ನು ಪ್ರಕಟಿಸಿದರೆ ಬಲು ಸೊಗಸಾಗುವುದೆಂಬ ವಿಚಾರವು ಯಾರಿಗಾದರೂ ಉಂಟಾಗದಿರದು. ಯಾಕಂದರೆ ಈ ಮೊದಲೆ ಪ್ರಕಟವಾದ ಎಂಟು ಉಪನಿಷತ್ತುಗಳ ಭಾಷಾಂತರಕ್ಕೆ ಇವೈದರ ಭಾಷಾಂತರದ ಜೋಡು ಸಿಕ್ಕರೆ ಮಹತ್ವದ ಉಪನಿಷತ್ತುಗಳೆಲ್ಲ ಮೂಲಸಹಿತವಾಗಿ ಭಾಷಾಂತರ

ದೊಡನೆ ಅಂದವಾಗಿ ಅಚ್ಚಾಗಿದಂತಾಗುವುದು. ೧೯೦೦ರಲ್ಲಿ ಕಲಕತ್ತೆಯೊಳಗೆ ಸೀತಾನಾಥ ತತ್ವಭೂಷಣರು ಪರಿವರ್ತಿಸಿ ಮೂರುಭಾಗಗಳಲ್ಲಿ ಅಚ್ಚುಹಾಕಿಸಿ ಪ್ರಕಟಿಸಿದ ಉಪನಿಷದ್ಗ್ರಂಥದಲ್ಲಿ ಮೈತ್ರಾಯಣಿಯ ಹೊರತು ಉಳಿದೆಲ್ಲ ಮುಖ್ಯ ಉಪನಿಷತ್ತುಗಳೂ ಒಳಗೊಂಡಿವೆ. ಎಸ್. ಸಿ. ವಾಸು ಎಂಬವರು ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯಗಳನ್ನು ಮಧ್ವಾಚಾರ್ಯರ ಭಾಷ್ಯದೊಳಗಿನ ಅವತರಣಿಕೆಗಳೊಡನೆ ಸಂಗ್ರಹಿಸಿದುದನ್ನು ಪ್ರಯಾಗದ ಪಾಣಿನಿ ಕಾರ್ಯಾಲಯದವರು ೧೯೧೧ರಲ್ಲಿಪ್ರಸಿದ್ಧ ಮಾಡಿದ್ದಾರೆ. ಇದೆ ಮಹಾಶಯರೆ ಛಾಂದೋಗ್ಯ ಮತ್ತು ಬೃಹದಾರಣ್ಯಕಗಳನ್ನು ಭಾಷಾಂತರಿಸಿ ಮಧ್ವಾಚಾರ್ಯರ ಭಾಷ್ಯದ ಅವತರಣಿಕೆಗಳೊಂದಿಗೆ ಅಚ್ಚುಹಾಕಿಸಿದ್ದಾರೆ. ನಿರ್ಣಯಸಾಗರ ಮುದ್ರಣಾಲಯದ ಒಡೆಯರಾದ ತುಕಾರಾಮ ತಾತ್ಯಾ ಎಂಬವರು ಮಹತ್ವದ ಹನ್ನೆರಡು ಉಪನಿಷತ್ತುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ ಐತರೇಯ, ತೈತ್ತಿರೀಯ, ಶ್ವೇತಾಶ್ವತರ, ಮತ್ತು ಬೃಹದಾರಣ್ಯಕಗಳ ಸಾರ ಸಂಗ್ರಹವನ್ನು ರೋಅರ ಎಂಬವರಿಂದಲೂ ಛಾಂದೋಗ್ಯದ ಸಾರಸಂಗ್ರಹವನ್ನು ರಾಜೇಂದ್ರಲಾಲ ಮಿತ್ರರಿಂದಲೂ ಕೌಷೀತಕಿಯ ಸಾರಸಂಗ್ರಹವನ್ನು ಕಾವೆಲ್ಲರಿಂದಲೂ ಮಾಡಿಸಿ ಅವೆಲ್ಲವುಗಳನ್ನು ಭಾಷಾಂತರಿಸಿ ಪ್ರಕಟಿಸಿದ್ದಾರೆ ; ಈ ಗ್ರಂಥವು ಉಪನಿಷತ್ತಿನಿಂದ ತೆಗೆದ ಬೆಣ್ಣೆಯು ಇವರಲ್ಲಿ ಮೈತ್ರ್ಯುಪನಿಷತ್ತು ಮಾತ್ರ ಬಂದಿಲ್ಲ. ಆರ್. ಇ. ಹ್ಯೂಮರು ಸಂಗ್ರಹಿಸಿದ ಮುಖ್ಯ ಹದಿಮೂರು ಉಪನಿಷತ್ತುಗಳ ಭಾಷಾಂತರವನ್ನು ಆಕ್ಸಫರ್ಡ ಪ್ರೆಸ್ಸಿನವರು ೧೯೨೧ರಲ್ಲಿ ಪ್ರಸಿದ್ಧಪಡಿಸಿದ್ದಾರೆ. ಇತ್ತೀಚಿನ ಪ್ರತಿಯೆಂದರೆ ಇದೆ. ಬಲು ಮಾಟಾಗಿದೆ ; ಅತ್ಯಂತ ಉಪಯುಕ್ತವೂ ಇದೆ. ಮಿ. ಹ್ಯೂಮರಿಗೆ ಮೊದಲಿನ ಎಲ್ಲ ಭಾಷಾಂತರಗ್ರಂಥಗಳಿಂದ ಸಹಾಯವಾಗಿದೆ. ಇವರು ತಮ್ಮ ಗ್ರಂಥಕ್ಕೆ ಜೋಡಿಸಿದ ಆಧಾರಗ್ರಂಥಗಳ ಇತಿವೃತ್ತವು ಬಹು ಸುಸ್ಪಷ್ಟವಾಗಿಯೂ ಉಪಯುಕ್ತವಾಗಿಯೂ ಇದೆ. ನಾವು ಕೊಡುತ್ತಿರುವ ಈ ಆಧಾರಗ್ರಂಥಗಳ ಇತಿವೃತ್ತಕ್ಕೆ ಅವರ ಬರಹದ ನೆರವು ಅಷ್ಟಿಷ್ಟು ಆಗಿಲ್ಲ.

ಉಪನಿಷತ್ತುಗಳನ್ನು ಬಿಡಿಬಿಡಿಯಾಗಿ ಒಂದೊಂದನ್ನೆ ತಕ್ಕೊಂಡು ಭಾಷಾಂತರವನ್ನು ಕ್ರಮವಾಗಿ ಪ್ರಕಟಿಸುತ್ತ ಹೋದವರಲ್ಲಿ ಅರವಿಂದ ಘೋಷರನ್ನು ಮೊದಲು ಉಲ್ಲೇಖಿಸಬಹುದು. ಇವರು ಈಶ, ಕಠ, ಮತ್ತು ಬೇರೆ ಕೆಲವು ಉಪನಿಷತ್ತುಗಳನ್ನು ಭಾಷಾಂತರಿಸಿದ್ದಾರೆ. ಭಾಷಾಂತರಗಳಲ್ಲಿ ಮಧ್ಯೇಮಧ್ಯೇ ಲೇಖಕರ ತತ್ವವಿಚಾರಗಳೂ ಬೆರೆತುಕೊಂಡಿವೆ. ಪ್ರೋ. ಎಮ್. ಹಿರಿಯಣ್ಣನವರು ಕೇನ, ಕಠ, ಹಾಗೂ ಮತ್ತೂ ಕೆಲವು ಉಪನಿಷತ್ತುಗಳನ್ನು ಭಾಷಾಂತರಿಸಿದ್ದು ಅವು ಮೊನ್ನೆ ಮೊನ್ನೆಯೆ ಪ್ರಕಟವಾಗಿವೆ.

ಯೇಲ ಯುನಿವ್ಹರ್ಸಿಟಿಯ ಪ್ರೊ. ಓಯರ್ಟೆಲ ( Oertel ) ಎಂಬವರು ೧೮೯೪ ರಲ್ಲಿ ಕೇನೋಪನಿಷತ್ತನ್ನು ಭಾಷಾಂತರಿಸಿದ್ದು, ಇಂಗ್ಲೀಷ ಅಕ್ಷರದಲ್ಲಿ ಓದಿಕೊಳ್ಳಲಿಕ್ಕೆ ಬರುವಂತೆ ಮಂತ್ರಗಳನ್ನು ಅಚ್ಚು ಹಾಕಿಸಿದ್ದಾರೆ. ಎಲ್ಲ ಭಾಷಾಂತರಕಾರರ ಕೃಪಾಕಟಾಕ್ಷವು ಕಠೋಪನಿಷತ್ತಿನ ಮೇಲೆ ವಿಶೇಷವಿರುವಂತೆ ತೋರುತ್ತದೆ; ಯಾಕಂದರೆ ಅನೇಕಾನೇಕ ಭಾಷೆಗಳಲ್ಲಿ ಇದು ಪರಿವರ್ತಿಸಲ್ಪಟ್ಟಿದೆ. ಪಾಲ ರೆಗನಾಡನು ( Paul Regnaud ) ಪಾರಿಸ ಪಟ್ಟಣದಲ್ಲಿ ೧೮೯೮ ರಲ್ಲಿ ಕಠೋಪನಿಷತ್ತನ್ನು ಫ್ರೆಂಚ ಭಾಷೆಗೆ ಭಾಷಾಂತರಿಸಿದನು. ಬುಟೆನ್‌ಶಾನನು ( Butenschon ) ೧೯೦೨ ರಲ್ಲಿ ಸ್ಟಾಕಹೋಮ ಪಟ್ಟಣದಲ್ಲಿ ಸ್ವೀಡಿಶ್ ಭಾಷೆಯಲ್ಲಿ ಪರಿವರ್ತಿಸಿದನು. ಬೆಲೊನಿ ಫಿಲಿಪಿಯು ( Belloni Fillipi ) ೧೯೦೫ ರಲ್ಲಿ ಪೀಸಾಪಟ್ಟಣದಲ್ಲಿ ಇಟಾಲಿಯನ್ ಭಾಷೆಗೆ ತರ್ಜುಮೆ ಮಾಡಿದನು. ಆದರೆ ಇವುಗಳಲ್ಲಿ ಹ್ವಿಟ್ನಿಯು ( Whitney ) ೧೮೯೦ ರಲ್ಲಿ ಬೋಸ್ಟನ ಪಟ್ಟಣದಲ್ಲಿ ಪ್ರಕಟಿಸಿದ ಕಠೋಪನಿಷತ್ತಿನ ಭಾಷಾಂತರವು ಬಹು ಮಹತ್ವದ್ದಾಗಿದೆ ; ಯಾಕಂದರೆ ಈತನು ಮೂಲ ಮಂತ್ರಗಳಲ್ಲಿ ಎಷ್ಟೋ ತಪ್ಪುತಡಿಗಳನ್ನು ತೋರಿಸಿದ್ದು, ವಿಮರ್ಶಾತ್ಮಕವಾದ ಮಹತ್ವದ ಒಂದು ಮುನ್ನುಡಿಯನ್ನು ಬರೆದಿದ್ದಾನೆ.

ಜೋನ್ಸ ಹರ್ಟೆಲ್ಲನು ( Johannes Hertel ) ೧೯೨೪ರಲ್ಲಿ ಲೆಪ್ಸಿಕ್ ಪಟ್ಟಣದಲ್ಲಿ ವಿಮರ್ಶಾಪೂರ್ವಕವಾಗಿ ಮುಂಡಕೋಪನಿಷತ್ತನ್ನು ಪ್ರಕಟಿಸಿದ್ದಾನೆ. ಸೂರ್ಯನನ್ನು ನುಂಗಲು ಮುಗಿಲಿಗೆ ಹಾರಿದ ಹನುಮನಂತಹ ಮಹತ್ವಾಕಾಂಕ್ಷೆಯ ಪ್ರಯತ್ನವಿದು. ಈ ಉಪನಿಷತ್ತಿನ ಒಳಹೊರಗುಗಳನ್ನೆಲ್ಲ ಎಳ್ಳಷ್ಟೂ ಬಿಡದೆ ಕಂಡುಕೊಳ್ಳುವುದಕ್ಕಾಗಿ ಹವಣಿಸಿದ್ದಾನೆ. ಈ ಉಪನಿಷತ್ತಿನ ಛಂದಸ್ಸು, ಭಾಷೆ, ಮೂಲಮಂತ್ರಗಳಾವವು, ಪರಂಪರೆಯ ಪುಷ್ಟೀಕರಣಕ್ಕೆ ನಡುವೇ ಬೆರೆತು ಕೊಂಡಿರುವ ಮಂತ್ರಗಳಾವವು, ಎಂದು ಮುಂತಾಗಿ ವಿವೇಚಿಸಿ ಮೂಲಮಂತ್ರಗಳನ್ನು ಸಂಗ್ರಹಿಸಿಕೊಟ್ಟಿರುವನು ; ಬಳಿಕ ಅವರೊಳಗೆ ಬಂದ ವಿಚಾರಗಳನ್ನು ಚರ್ಚಿಸಿರುವನು ಮತ್ತು ಅವು ಹೇಗೆ ಮತ್ತು ಎಂದು ಹುಟ್ಟಿತು ಎಂಬದನ್ನು ವಿವೇಚಿಸಿರುವನು. ತರುವಾಯ ಜೈನಮತಕ್ಕೂ ಇದಕ್ಕೂ ಇರುವ ಸಂಬಂಧವನ್ನು ತೋರಿಸಿರುವನು. ಬಿಬ್ಲಿಯೋಥಿಕಾ ಇಂಡಿಕಾ ( Bibliothica Indica ) ಎಂಬ ಗ್ರಂಥದಲ್ಲಿದ್ದ ಪ್ರತಿಯಂತೆ ನಕಲುಮಾಡಿಸಿ ಮುಂಡಕೋಪನಿಷತ್ತಿನ ಮಂತ್ರಗಳನ್ನು ವಿಶೇಷರೀತಿಯಿಂದ ಅಚ್ಚುಹಾಕಿಸಿರುವನು. ಈ ಬಗೆಯಿಂದ ಬರೆವ ಸ್ಫೂರ್ತಿಯು ಹರ್ಟೆಲ್ಲನಿಗೆ ಫಾದರ ಝಿಮರಮನ್ನನು ಇದೇ ರೀತಿ ಬರೆದ ಮಹಾನಾರಾಯಣೋಪನಿಷತ್ತಿನಿಂದ ಉಂಟಾಗಿರುವ ಸಂಭವವಿದೆ. ಝಿಮರಮನ್ನನು (Zimmer-

man ) ಪಿ. ಎಚ್. ಡಿ ಉಪಾಧಿಯನ್ನು ದೊರಕಿಸುವುದಕ್ಕಾಗಿ ಬರೆದ ಪ್ರಬಂಧಗ್ರಂಥವದು. ಅವರಲ್ಲಿ ಮಹಾನಾರಾಯಣೋಪನಿಷತ್ತಿನ ( ಬೇರೆ ಬೇರೆ ಅವಧಿಗಳಲ್ಲಾದ ) ಸುಧಾರಿಸಿದ ಆವೃತ್ತಿಗಳಲ್ಲಿರುವ ಮಂತ್ರಗಳು, ಅವುಗಳ ಮೂಲ ಮತ್ತು ಭೇದಗಳ ವಿವೇಚನೆ ಮುಃಖ್ಯವಾದವುಗಳು ಇವೆ. ಪ್ರೊ. ಝಿಮರಮನ್ನನು ಬೇರೆ ಬೇರೆ ಪ್ರತಿಗಳಲ್ಲಿರುವ ಸಮಾನಭಾಗಗಳನ್ನು ತಕ್ಕೊಂಡು ಅವುಗಳ ಪರಸ್ಪರ ಸಂಬಂಧವನ್ನು ಕಂಡುಹಿಡಿದು ಆ ಉಪನಿಷತ್ತಿನ ವಿಷಯಗಳನ್ನೂ ಅವುಗಳಿಗೆ ಇರುವ ಮೂಲಾಧಾರಗಳನ್ನೂ ತೋರಿಸಿರುವನು. ಕೊನೆಗೆ ಅವರೊಳಗಿನ ವಿಷಯವನ್ನು ವ್ಯವಸ್ಥಿತವಾಗಿ ಕೊಟ್ಟಿರುವನು. ನಿಜವಾಗಿಯೂ ಪ್ರತಿಯೊಂದು ಉಪನಿಷತ್ತನ್ನು ಈ ಬಗೆಯಿಂದಲೆ ಬರೆಯಲಿಕ್ಕೆ ಬೇಕು. ಎಮ್. ಎನ್. ದ್ವಿವೇದಿಯವರು ಮಾಂಡೂಕ್ಯೋಪನಿಷತ್ತನ್ನು ಗೌಡಪಾದರ ಕಾರಿಕೆ ಮತ್ತು ಶಾಂಕರಭಾಷ್ಯಗಳೊಂದಿಗೆ ಭಾಷಾಂತರಿಸಿ ೧೮೯೪ರಲ್ಲಿ ಪ್ರಕಟಿಸಿದ್ದು ಹಲವು ಬಗೆಗಳಲ್ಲಿ ಸುಸ್ಮರಣೀಯವಾಗಿದೆ. ಹಿರಾಕ್ಲಿಟಸ್ಸನ ಮಾದರಿಯ ಮಹಾತತ್ವಜ್ಞಾನಿಗಳಾದ ಗೌಡಪಾದರ ಪರಿಚಯವುಂಟಾದುದು ಇಂಗ್ಲೀಷದಲ್ಲಿ ಇದೆ ಮೊದಲು. ಗೌಡಪಾದರಿಗೂ ಮತ್ತು ಮಾಧ್ಯಮಿಕ ಸೂತ್ರಗಳಿಗೂ ಇರುವ ಸಂಬಂಧವನ್ನು ತೋರ್ಪಡಿಸಲಿಕ್ಕೆ ಎಷ್ಟೋ ವಾಙ್ಮಯವು ಇತ್ತೀಚೆ ಪ್ರಕಟವಾಗುತ್ತಲಿದೆ. ಶಾಂತಿನಿಕೇತನದ ಪ್ರೊ. ವಿಧುಶೇಖರ ಭಟ್ಟಾಚಾರ್ಯರು ಗೌಡಪಾದರ ವಿಚಾರದಲ್ಲಿ ವಿಶೇಷ ಅಭ್ಯಾಸವನ್ನು ನಡೆಸಿದ್ದಾರೆ. ಗೌಡಪಾದರ ಗ್ರಂಥಗಳ ಭಾಷಾಂತರವು ಇಂಗ್ಲೀಷಿನಲ್ಲಿ ಚನ್ನಾಗಿ ಆದರೆ, ಮಾಧ್ಯಮಿಕ ಸೂತ್ರಗಳಿಗೆ ಇರುವ ಅವರ ಸಂಬಂಧವನ್ನು ತೋರಿಸಿಕೊಟ್ಟರೆ, ಮತ್ತು ತತ್ವಜ್ಞಾನ ಭಾಂಡಾರಕ್ಕೆ ಅವರು ಕೊಟ್ಟಕಾಣಿಕೆಯ ಎಣಿಕೆಯನ್ನು ಮಾಡಿದರೆ ವಿಚಾರಲೋಕದಲ್ಲಿ ಬೆರಗುವುಂಟಾಗದಿರದು. ಎ. ಮಹಾದೇವಶಾಸ್ತ್ರಿಗಳು ತೈತ್ತಿರೀಯೋಪನಿಷತ್ತನ್ನು ಇಂಗ್ಲೀಷಿನಲ್ಲಿ ಪರಿವರ್ತಿಸಿದ್ದು ಶಂಕರಾಚಾರ್ಯ, ಸುರೇಶ್ವರಾಚಾರ್ಯ ಮತ್ತು ವಿದ್ಯಾರಣ್ಯರ ಭಾಷ್ಯಗಳೊಂದಿಗೆ ಒಳ್ಳೇ ಆಧಾರಗ್ರಂಥವಾಗುವಂತೆ ಪ್ರಕಟಿಸಿದ್ದಾರೆ ; ಇದು ೧೯೦೩ರಲ್ಲಿ ಮೈಸೂರಿನಲ್ಲಿ ಪ್ರಕಟವಾಗಿದ್ದು ಪುಟಗಳ ಸಂಖ್ಯೆಯು ೭೯೧ ಇದೆ. ತೈತ್ತಿರೀಯದ ಅಭ್ಯಾಸಿಗಳಿಗೆ ಇದು ಅತ್ಯಂತ ಉಪಯುಕ್ತವಾಗಿದೆ.

ಒಟ್ಟೊ ಬೋಥಲಿಂಕನು ಉಪನಿಷತ್ತುಗಳಲ್ಲೆಲ್ಲ ದೊಡ್ಡವಾದ ಬೃಹದಾರಣ್ಯಕ ಮತ್ತು ಛಾಂದೋಗ್ಯಗಳನ್ನು ಭಾಷಾಂತರಿಸಿ ಬಹು ಮಹತ್ವದ ಕಾರ್ಯವನ್ನು ಮಾಡಿದ್ದಾನೆ. ಒಂದು ಸೆಂಟಪಿಟರ್ಸಬರ್ಗಿನಲ್ಲಿಯೂ ಮತ್ತೊಂದು ಲೆಪ್ಸಿಕ್ಕಿನಲ್ಲಿಯೂ ಅಚ್ಚಾಗಿದೆ. ಇವೆರಡೂ ಒಂದೇ ಸಮಯದಲ್ಲಿ ಅಚ್ಚಾಗಿ, ಒಂದೇ ವರುಷ ಅಂದರೆ ೧೮೮೯ರಲ್ಲಿ ಹೊರಗೆ ಬಂದವೆಂಬುದು ನೆನಪಿಡುವಂತಿದೆ; ಇವೆರಡೂ ಗ್ರಂಥಗಳು ಬಹಳ ಮನನ

ಮಾಡಿ ಬರೆಯಲ್ಪಟ್ಟಿವೆ; ಛಾಂದೋಗ್ಯವಂತೂ ನೋಟಕರ ಚಿತ್ತಾಕರ್ಷಣ ಮಾಡುವುದು. ಪ್ರತಿಯೊಂದು ಪ್ರಕರಣದಲ್ಲಿಯೂ ಪರಿಚ್ಛೇದಗಳನ್ನು ಕಲ್ಪಿಸಿಕೊಳ್ಳುವ ತತ್ವವು ಅನುಸರಿಸಲ್ಪಟ್ಟದೆ. ಬೋಥಲಿಂಕನು ಹಲವೆಡೆಗಳಲ್ಲಿ ಮೂಲಮಂತ್ರಗಳಲ್ಲಿ ಕಂಡುಬರುವ ತಪ್ಪುಗಳನ್ನು ತಿದ್ದಿರುವನು; ಆದರೆ ಎಲ್ಲೆಡೆಗಳಲ್ಲಿಯೂ ಸರಿಯಾಗಿಯೆ ತಿದ್ದಿರುವನೆಂದು ಹೇಳಲಿಕ್ಕಾಗುವದಿಲ್ಲ. ಉದಾಹರಣಾರ್ಥವಾಗಿ ಬೋಥಲಿಂಕನು ಛಾಂದೋಗ್ಯದಲ್ಲಿ ( ಅ ೪, ಖಂ ೧, ಮಂ ೪, ) 'ವಿಜಿತಾಯ' ಎಂಬುದರ ಬದಲು 'ವಿಜಿತ್ವರಾಯ' ಎಂಬುದನ್ನು ಸೇರಿಸಿರುವನು; 'ತಜ್ಜಲಾನಿತಿ' ( ಛಾಂ, ಅ ೩, ಖಂ ೧೪, ಮಂ ೧ ) ಎಂಬ ಮಂತ್ರಕ್ಕೆ 'ತಜ್ಜನಾನೀತಿ' ಎಂಬ ಪಾಠಾಂತರವನ್ನು ಹಾಕಿರುವನು. ಇವೆರಡರಲ್ಲಿ ಮೊದಲನೆಯದು ಅನವಶ್ಯಕವೂ ಎರಡನೆದು ಅಂದವಿಲ್ಲದ್ದೂ ಆಗಿದೆ. ಹೀಗಿದ್ದರೂ ಬೋಥಲಿಂಕನು ಮೂಲ ಮತ್ತು ಭಾಷಾಂತರಗಳೊಂದಿಗೆ ಪ್ರಕಟಿಸಿದ ಬೃಹದಾರಣ್ಯಕ ಮತ್ತು ಛಾಂದೋಗ್ಯ ಉಪನಿಷತ್ತುಗಳು ಇನ್ನೂ ಮೊದಲನೆಯ ತರಗತಿಯವಾಗಿಯೆ ಇವೆ. ಆದರೆ ಈ ಪುಸ್ತಕಗಳು ಹಿಂದುಸ್ತಾನದಲ್ಲಿ ಮಾತ್ರ ಸಹಜವಾಗಿ ಸಿಕ್ಕುವದಿಲ್ಲ. ಈ ಕಾರ್ಯವು ಕೊನೆಗಂಡೊಡನೆಯೆ ಬೋಥಲಿಂಕನು ಕಠ, ಐತರೇಯ ಪ್ರಶ್ನೋಪನಿಷತ್ತುಗಳಿಗೆ ಜರ್ಮನ್‌ಭಾಷೆಯಲ್ಲಿ ಭಾಷಾಂತರ ಮತ್ತು ಟಿಪ್ಪಣಿಗಳನ್ನು ಬರೆದು ದೇವನಾಗರಿ ಲಿಪಿಯಲ್ಲಿ ಮೂಲಮಂತ್ರಗಳನ್ನು ಅಚ್ಚುಹಾಕಿಸಿ ೧೮೯೦ ರಲ್ಲಿ ಲೆಪ್ಸಿಕ್ ಪಟ್ಟಣದಲ್ಲಿ ಪ್ರಕಟಿಸಿದನು. ವ್ಹಿಟ್ನಿಯು ( American journal of Philology ) ಎಂಬ ಪತ್ರಿಕೆಯಲ್ಲಿ ಬೋಥಲಿಂಕನ ಬೇರೆ ಬೇರೆ ಉಪನಿಷದ್ಭಾಷಾಂತರಗಳ ವಿಸ್ತೃತ ಮಿಮರ್ಶೆಯನ್ನು ಪ್ರಕಟಿಸಿದ್ದುದಕ್ಕೆ ಬೋಥಲಿಂಕನು ೧೮೯೧ ರಲ್ಲಿ ಉತ್ತರಕೊಟ್ಟನು. ಇದೆಲ್ಲವೂ ಸಾಹಿತ್ಯಲೋಕದೊಳಗಿನ ಕೊಡಕೊಳ್ಳುವ ವ್ಯವಹಾರವು! ಉಪನಿಷತ್ತುಗಳನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ಅಭ್ಯಾಸಮಾಡುವವರಿಗೆ ಇದರಲ್ಲಿ ತುಂಬಾ ಆನಂದವುಂಟಾಗದಿರದು.

ಈ. ಬಿ. ಕೊವೆಲ್ಲನು ( Cowell ) ಕೌಷೀತಕಿ ಮತ್ತು ಮೈತ್ರಿ ಉಪನಿಷತ್ತುಗಳನ್ನು ಭಾಷಾಂತರಿಸಿ ರಾಮತೀರ್ಥರ ಭಾಷ್ಯದೊಂದಿಗೆ ೧೮೬೧ ಮತ್ತು ೧೮೭೦ ರಲ್ಲಿ ಪ್ರಕಟಿಸಿದ್ದುದು ಮೊದಲನೆಯ ತರಗತಿಯದೆಂದೇ ಎಣಿಸಲ್ಪಡುತ್ತದೆ. ಏ. ಮಹಾದೇವ ಶಾಸ್ತ್ರಿಗಳು ಪ್ರಕಟಿಸಿದ ಅಮೃತಬಿಂದು ಮತ್ತು ಕೈವಲ್ಯೋಪನಿಷತ್ತುಗಳ ಸಮೂಲ ಭಾಷಾಂತರದ ಪ್ರತಿಯು ಸಣ್ಣದೂ ಸುಂದರವಾದುದೂ ಆಗಿದೆ. ನಾರಾಯಣಸ್ವಾಮಿ ಅಯ್ಯರರು ಮೂವತ್ತು ಚಿಕ್ಕ ಉಪನಿತ್ತುಗಳನ್ನು ಭಾಷಾಂತರಿಸಿ ೧೯೧೪ ರಲ್ಲಿ ಮದ್ರಾಸಿನಲ್ಲಿ ಪ್ರಕಟಿಸಿರುವರು. ಶ್ರೀ. ಕೃ. ಬೆಲವಲಕರರು ಬಾಷ್ಕಲ, ಛಾಗಲೇಯ, ಆರ್ಷೇಯ

ಮತ್ತು ಶೌನಕಗಳೆಂಬ ನಾಲ್ಕು ಉಪನಿಷತ್ತುಗಳನ್ನು ಸಮೂಲ ಭಾಷಾಂತರದೊಂದಿಗೆ ೧೯೨೫ ರಲ್ಲಿ ಅಚ್ಚುಹಾಕಿಸಿದ್ದಾರೆ. ಇವುಗಳಲ್ಲಿ ಮೊದಲನೆಯದನ್ನು ಡಾ. ಶ್ರೇಡರನು ಮೊದಲು ಅಚ್ಚುಹಾಕಿಸಿದ್ದನು. ಉಳಿದ ಮೂರು ಅಡ್ಯಾರ ಗ್ರಂಥಸಂಗ್ರಹಾಲಯದಲ್ಲಿ ಕೈಬರಹದ ಪ್ರತಿಗಳಿದ್ದವು; ಅವುಗಳನ್ನು 'ಅಕ್ಯಾಡೆಮಿ ಆಫ್ ಫಿಲೋಸಫಿ ಆಂಡ ರಿಲಿಜನ್' ಎಂಬ ಸಂಸ್ಥೆಯವರು ಪ್ರಕಟಿಸಿವರು; ಇವುಗಳನ್ನು ಅಪೇಕ್ಷಿಸುವವರು ಈ ಸಂಸ್ಥೆಯ ಪುಣೆಯ ಶಾಖೆಗೆ ಬರೆದು ತರಿಸಿಕೊಳ್ಳಬಹುದು.

ದೇಶೀಯ ಭಾಷೆಗಳಲ್ಲಿ ಪರಿವರ್ತಿಸಲ್ಪಟ್ಟ ಉಪನಿಷತ್ತುಗಳು ಅನೇಕವಾಗಿವೆ. ಚಿಂ. ಗಂ. ಭಾನು ಇವರು ಶಾಂಕರಭಾಷ್ಯದೊಡನೆ ಮರಾಠಿಯಲ್ಲಿ ಭಾಷಾಂತರಿಸಿ ಹಲವು ಭಾಗಗಳಲ್ಲಿ ಪ್ರಕಟಿಸಿರುವರು ಮತ್ತು ಹ. ರ. ಭಾಗವತರು ಎರಡು ಭಾಗಗಳಲ್ಲಿ ಮೂಲ ಮತ್ತು ಅದರ ಭಾಷಾಂತರವನ್ನು ಕೊಟ್ಟಿದ್ದಾರೆ; ಮೊದಲನೆಯ ಭಾಗದಲ್ಲಿ ಮುಖ್ಯ ಉಪನಿಷತ್ತುಗಳೂ ಎರಡನೆಯದರಲ್ಲಿ ಕೆಲವು ಅಮುಖ್ಯ ಉಪನಿಷತ್ತುಗಳೂ ಅಡಕವಾಗಿವೆ. ವಿಷ್ಣುಶಾಸ್ತ್ರಿ ಬಾಪಟರು ಎಲ್ಲ ಭಾಷಾಂತರಕಾರರಿಗಿಂತಲೂ ಬಹಳ ಶ್ರಮ ವಹಿಸಿ ಉಪನಿಷತ್ತುಗಳನ್ನೂ ಅವುಗಳ ಶಾಂಕರಭಾಷ್ಯವನ್ನೂ ಮರಾಠಿಯಲ್ಲಿ ಭಾಷಾಂತರಿಸಿದ್ದಾರೆ. ಹಿಂದುಸ್ಥಾನದ ಎಲ್ಲ ಭಾಷೆಗಳಲ್ಲಿಯೂ ಉಪನಿಷತ್ತುಗಳು ಪರಿವರ್ತಿಸಲ್ಪಟ್ಟಿವೆ, ಅದರೊಳಗೂ ಬಂಗಾಳಿಯಲ್ಲಿ ಹೆಚ್ಚಾಗಿವೆ. ಇದೆಲ್ಲದರ ಇತಿವೃತ್ತವನ್ನು ಸ್ಥಳ ಸಂಕೋಚದ ಮೂಲಕ ಕೊಡುವುದು ಶಕ್ಯವಿಲ್ಲ. ಆದರೆ ಕನ್ನಡದಲ್ಲಿ ಪ್ರಕಟವಾದ ಉಪನಿಷತ್ತುಗಳ ಉಲ್ಲೇಖವನ್ನು ಪ್ರತ್ಯೇಕವಾಗಿ ಕೊನೆಗೆ ಮಾಡಿದ್ದೇವೆ.

## ೪. ಉಪನಿಷತ್ತಿನ ಆಯ್ಕೆಗಳು (Selections)

ಉಪನಿಷತ್ತುಗಳಿಂದ ಆರಿಸಿತೆಗೆದ ಮೊಟ್ಟಮೊದಲ ಆಯ್ಕೆಯು ಫ್ರೆಂಚಭಾಷೆಯಲ್ಲಿ. ೧೮೭೬ ನೆಯ ಇಸವಿಯಲ್ಲಿ ಆಯ್ಕೆಗಾರನು ಪಾಲ ರೆಗ್ನಾಡ ( Paul Regnaud ) ಎಂಬವನು. ಆಯ್ಕೆಯು ಪ್ರಕಟವಾದದ್ದು ಪಾರೀಸಿನಲ್ಲಿ. ಮೂಲ ಉಪನಿಷತ್ತುಗಳೊಳಗಿಂದ ಎಷ್ಟೋ ಭಾಗಗಳನ್ನು ಆಯ್ದುಕೊಂಡು ಅವನ್ನು ಫ್ರೆಂಚ ಅಕ್ಷರಗಳಲ್ಲಿ ಬರೆದು ಫ್ರೆಂಚ ಭಾಷಾಂತರದೊಂದಿಗೆ ಮುದ್ರಿಸಿರುವನು; ಬೇರೆ ಬೇರೆ ಉಪನಿಷತ್ತಿನ ಒಂದೊಂದು ವಿಷಯಕ್ಕೆ ಸಂಬಂಧಿಸಿದವುಗಳನ್ನು ಒತ್ತೊತ್ತಟ್ಟಿಗೆ ಶೇಖರಿಸಿರುವನು. ಭಾರತೀಯರ

ತತ್ವಜ್ಞಾನದ ಸಂಕ್ಷಿಪ್ತ ವೃತ್ತವು ತಿಳಿಯಬೇಕೆಂಬ ಉದ್ದೇಶದಿಂದ ಅವನು ಇದನ್ನು ಸಂಗ್ರಹಿಸಿದನು. ಇನ್ನೊಂದು ಆಯ್ಕೆಯು ಇಂಗ್ಲೀಷಿನಲ್ಲಿದೆ. ಆಯ್ಕೆಗಾರನು ಜಾನ ಮುರಡೊಕ್. ೧೮೯೫ ರಲ್ಲಿ ಮದ್ರಾಸಿನಲ್ಲಿ ಪ್ರಕಟವಾಯ್ತು. ಔಪನಿಷದಿಕ ತತ್ವಜ್ಞಾನದ ಶ್ರೇಷ್ಠತೆಯನ್ನು ತೋರಿಸುವ ಉದ್ದೇಶಕ್ಕಿಂತಲೂ ಹಿಂದೂ ತತ್ವಜ್ಞಾನದಿಂದ ಕ್ರಿಸ್ತೀಮತವು ಎಷ್ಟು ಹೆಚ್ಚಿನದಿದೆಂಬುದನ್ನು ಸಿದ್ಧಪಡಿಸುವ ಉದ್ದೇಶವೇ ಈ ಆಯ್ಕೆಯಲ್ಲಿ ಮುಖ್ಯವಾಗಿದೆ. ಎಲ್. ಡಿ. ಬಾರ್ನೆಟನು ಲಂಡನಿನಲ್ಲಿ ೧೯೦೫ ರಲ್ಲಿ 'ಉಪನಿಷತ್ತಿನೊಳಗಿನ ಲೋಕೋಕ್ತಿಗಳು' ಎಂಬುದನ್ನೂ ೧೯೦೭ ರಲ್ಲಿ ಬ್ರಹ್ಮ ಜ್ಞಾನವೆಂಬುದನ್ನೂ ಪ್ರಕಟಿಸಿರುವನು. ಆನಂದದಾಯಕವಾದ ಇವೆರಡೂ ಸಣ್ಣ ಪುಸ್ತಕಗಳು ಉಪನಿಷತ್ತಿನ ಗುಟ್ಟನ್ನೇ ಹೇಳುತ್ತವೆ. ಡಾಯಸೆನ್ನನು ಹದಿನಾಲ್ಕು ಉಪನಿಷತ್ತುಗಳಿಂದ ಆಯ್ದುಕೊಂಡು ಒಂದು ಗ್ರಂಥವನ್ನು ಪ್ರಕಟಿಸಿರುವನು; ಇದು ೧೯೦೭ ರಲ್ಲಿ ಲೆಪ್ಸಿಕ್ಕಿನಲ್ಲಿ ಪ್ರಕಟವಾಗಿದೆ. ಆತನೆ ಬರೆದ ಉಪನಿಷತ್ತಿನ ಮಹಾಗ್ರಂಥದ ಸಾರಾಂಶವನ್ನು ಹೇಳುವ ಉದ್ದೇಶದಿಂದ ಈ ಆಯ್ಕೆಯನ್ನು ಪ್ರಕಟಿಸಿದ್ದುದು. ಸುಪ್ರಸಿದ್ಧ ವೇದಾಭ್ಯಾಸಿಯೆನಿಸಿದ ಹಿಲ್ಡೆಬ್ರಾಂಡ್ಟನು ಬ್ರಾಹ್ಮಣ ಮತ್ತು ಉಪನಿಷತ್ತುಗಳಿಂದ ಆಯ್ದು ಒಂದು ಆಯ್ಕೆಯನ್ನು ಜೇನಾದಲ್ಲಿ ಪ್ರಕಟಿಸಿದ್ದಾನೆ. ಒಂದೊಂದು ವಿಶಿಷ್ಟ ವಿಚಾರದ ಭಾಗಗಳನ್ನು ಬ್ರಾಹ್ಮಣ ಮತ್ತು ಉಪನಿಷತ್ತುಗಳಿಂದ ತಕ್ಕೊಂಡಿದ್ದಾನೆ. ಭಾರತವರ್ಷದ ಪ್ರಾಚೀನ ತತ್ವಜ್ಞಾನವನ್ನು ಬೆಳಕಿಗೆ ತರಬೇಕೆಂಬುದೆ ಈ ಆಯ್ಕೆಯ ಉದ್ದೇಶವು. ಹಿಲ್ಡೆಬ್ರಾಂಡ್ಟನು ಬ್ರಾಹ್ಮಣ ಮತ್ತು ಉಪನಿಷತ್ತುಗಳಲ್ಲಿ ಸಾಕಷ್ಟು ಭೇದವನ್ನು ಕಲ್ಪಿಸುವದಿಲ್ಲ. ಆದುದರಿಂದ ಅವನ ಆ ಸಣ್ಣಪುಸ್ತಕದಲ್ಲಿ ಆತನಿಗೆ 'ತತ್ವಜ್ಞಾನದ ಶುದ್ಧ ವಿಚಾರಗಳಲ್ಲಿ ತಾಂತ್ರಿಕಕರ್ಮಗಳೂ ಅಂಧಶ್ರದ್ಧೆಯ ಗ್ರಹಿಕೆಗಳೂ ಬೇಕಾದಂತೆ ಬೆರೆತುದು ಕಾಣುತ್ತವೆ. ಹಲವೆಡೆಗಳಲ್ಲಿ ಓಲ್ಡೆನಬರ್ಗನ ವಿಚಾರಗಳೊಡನೆ ತನ್ನ ವಿಚಾರಗಳು ಸರಿಹೋಗುತ್ತವೆಂದು ಅವನು ಹೇಳುತ್ತಾನೆ. ಉಪನಿಷತ್ತುಗಳ ತತ್ವಜ್ಞಾನವು ಕಾಂಟ ಮತ್ತು ಶಾಪೆನಹೌಏರನ ತತ್ವಜ್ಞಾನಕ್ಕೆ ಎಳ್ಳಷ್ಟೂ ಸಾಟಿಯಾಗಲಾರದೆಂದು ಹೇಳುವ ಓಲ್ಡೆನಬರ್ಗನ ವಿಚಾರವು ವಿಶೇಷವಾಗಿ ಹಿಲೆಬ್ರಾಂಡ್ಟನಿಗೂ ಸಮ್ಮತವು. ಆದುದರಿಂದ ಓಲ್ಡೆನಬರ್ಗನ ವಿಷಯಕ್ಕೆ ನಾವು ಮುನ್ನುಡಿಯಲ್ಲಿ ಮಾಡಿದ ಟೀಕೆಗೆ ಇವನೂ ಗುರಿಯಾಗುವನು. ಜೊಹಾನ್ಸಹಾರ್ಟೆಲನ ಅಂದವಾದ ಪುಟ್ಟ ಪುಸ್ತಕವು ಮುಂಚೆನದಲ್ಲಿ ೧೯೨೧ ರಲ್ಲಿ ಪ್ರಸಿದ್ಧವಾಗಿದೆ. ಇದು ಕೆಲವೆಡೆಯಲ್ಲಿ ಪಕ್ಷಪಾತಿತ್ವದ ದೋಷವುಳ್ಳದ್ದೆನಿಸಿದರೂ ಒಟ್ಟನಲ್ಲಿ ಹಿಲೆ ಬ್ರಾಂಡ್ಟನ ಪುಸ್ತಕಕ್ಕಿಂತ ವಿಚಾರಪ್ರವರ್ತಕವಾಗಿದೆ. ಹರ್ಟೆಲನು ಈಶ, ಕೇನ, ಕಠ, ಛಾಂದೋಗ್ಯ, ಬೃಹದಾರಣ್ಯಕ, ಐತರೇಯಮತ್ತು ಕೌಷೀತಕಿ ಉಪನಿಷತ್ತುಗಳೊಳಗಿಂದ ಆಯ್ದುಕೊಂಡು ಕಲೆಹಾಕಿದ್ದಾನೆ.

ಒಳ್ಳೆ ಜರ್ಮನ್ ಭಾಷೆಯಲ್ಲಿ ಉಪನಿಷತ್ತುಗಳನ್ನು ಓದಲು ಅನುಕೂಲಮಾಡಿಕೊಡಬೇಕೆಂಬುದೆ ತನ್ನ ಮುಖ್ಯ ಉದ್ದೇಶವೆಂದೂ ಈ ಪುಸ್ತಕವು ಆರ್ಯಭಾಷಾಭ್ಯಾಸಿಗಳಿಗೆ ವಿಶೇಷವಾಗಿಉಪಯೋಗವಾಗಲೇಬೇಕೆಂದು ತನ್ನ ಗುರಿಯಿಲ್ಲವೆಂದೂ ಈತನು ಬರೆಯುತ್ತಾನೆ. ಹರ್ಟೆಲನ ಕೊನೆಯ ನಿರ್ಣಯಗಳು ಎಲ್ಲೆಡೆಗಳಲ್ಲಿ ಸರಿಯಿರದಿದ್ದರೂ ಅವನ ಬರಹವು ವಿಚಾರಪ್ರವರ್ತಕವಾಗಿದೆ. ಕೇನೋಪನಿಷತ್ತಿನ ಎರಡು ಸಣ್ಣ ಮಾತಿನಲ್ಲಿ ಹರ್ಟೆಲನು ಹೇಳುವ ಅರ್ಥವು ನಮಗೆ ಹೇಗೆ ಸಮ್ಮತವಿಲ್ಲವೆಂಬುದನ್ನು ಪ್ರಸ್ತಾವನೆಯಲ್ಲಿ ತೋರಿಸಿದೆ. ಹರ್ಟೆಲನು ಪ್ರತಿಯೊಂದು ಉಪನಿಷತ್ತಿನ ಆಯ್ಕೆಗೂ ಒಂದೊಂದು ಮುನ್ನುಡಿಯನ್ನು ಬರೆದಿದ್ದಾನೆ; ಇದರಿಂದ ಈತನ ಪುಸ್ತಕವು ಮತ್ತಿಷ್ಟು ಮಹತ್ವದ್ದಾಗಿದೆ. ಆದರೆ ಹಿಲೆಬ್ರಾಂಡ್ಟನ ಪುಸ್ತಕಕ್ಕೆ ಈ ಬಗೆಯ ಮುನ್ನುಡಿಗಳಿಲ್ಲ. ಪಾಲ ಎಬರಹಾರ್ಡ್ಟನು (Paul Eberhardt) ೧೯೨೦ ರಲ್ಲಿ ಜೇನಾದಲ್ಲಿ ಒಂದು ಆಯ್ಕೆಯನ್ನು ಪ್ರಕಟಿಸಿರುವನು; ಇದರಲ್ಲಿ ಮೂವತ್ತೇಳು ಉಪನಿಷದ್ಭಾಗಗಳನ್ನು ವಿಷಯಕ್ಕನುಸರಿಸಿ ವಿಭಾಗಿಸಿದ್ದಾನೆ. ಮುಖ್ಯವಾಗಿ ಆಧ್ಯಾತ್ಮಿಕ ದೃಷ್ಟಿಯಿಂದಲೆ ಉಪನಿಷನ್ಮಂತ್ರಗಳನ್ನು ಆಯ್ದುಕೊಂಡು ಒಂದು ಆಯ್ಕೆಯನ್ನು ಪ್ರಕಟಿಸಬೇಕೆಂದು ಪ್ರಸ್ತುತಗ್ರಂಥಕಾರನ ಕೋರಿಕೆಯೂ ಉಂಟು. ತನ್ನ ದೇಶದ ನೈತಿಕ ಮತ್ತು ಧಾರ್ಮಿಕ ಉನ್ನತಿಗೆ ಉಳಿದ ಆವ ಪ್ರಯತ್ನಗಳಿಗಿಂತಲೂ ಉಪನಿಷತ್ತುಗಳ ಆಯ್ಕೆಗಳನ್ನು ಅಚ್ಚುಹಾಕಿಸಿ ನಾಡಿನಲ್ಲೆಲ್ಲ ಹರಡುವಂತೆ ಮಾಡುವುದೆ ಉತ್ತಮೋಪಾಯವೆಂದು ರಾಮಮೋಹನರಾಯರ ಅಭಿಪ್ರಾಯವಿತ್ತು. ಪ್ರಸ್ತುತ ಗ್ರಂಥಕಾರನು ಅಧ್ಯಾತ್ಮದೃಷ್ಟಿಯಿಂದ ಮಾಡಬೇಕೆಂದಿರುವ ಆಯ್ಕೆಯ ಪುಸ್ತಕವೆ ಈವಾಗ ಅತ್ಯಗತ್ಯವಾಗಿ ಬೇಕಾಗಿರುವ ಮೇಲ್ಕಾಣಿಸಿದ ಬಗೆಯ ಪುಸ್ತಕದ ಅವಶ್ಯಕತೆಯನ್ನು ಹೋಗಲಾಡಿಸೀತೆಂದು ಆಶೆಯಿದೆ.

## ೫. ಉಪನಿಷತ್ತಿನ ಉಲ್ಲೇಖಗಳು

ಉಪನಿಷತ್ತುಗಳ ಉಲ್ಲೇಖವು ಹಲವೆಡೆಗಳಲ್ಲಿ ಹಲವು ಬಗೆಯಿಂದ ಬಂದಿದೆ. ಆದರೆ ನಾವು ಇಲ್ಲಿ (೧) ವಾಙ್ಮಯದ ಇತಿಹಾಸ, (೨) ಧರ್ಮದ ಇತಿಹಾಸ ಮತ್ತು (೩) ತತ್ತ್ವಜ್ಞಾನದ ಇತಿಹಾಸ ಹೀಗೆ ಮೂರು ಸ್ಥಳಗಳಲ್ಲಿ ಬರುವ ಉಲ್ಲೇಖಗಳನ್ನಷ್ಟೆ ಸಂಗ್ರಹಿಸುವವರಿದ್ದೇವೆ. ವೆಬರನ Weber Indisehe Studien ಎಂಬ ಗ್ರಂಥದ ಎರಡು

ಭಾಗಗಳಲ್ಲಿ ಐತರೇಯ, ಬೃಹದಾರಣ್ಯಕಗಳನ್ನು ಬಿಟ್ಟು ಪ್ರಸ್ತುತ ಗ್ರಂಥದಲ್ಲಿರುವ ಬಹುತರ ಎಲ್ಲ ಉಪನಿಷತ್ತುಗಳನ್ನು ಕುರಿತು ಲೇಖಮಾಲೆಯೆ ಇದೆ. 'ಹಿಂದೂ ವಾಙ್ಮಯದ ಇತಿಹಾಸ' ವೆಂಬ ಪುಸ್ತಕದಲ್ಲಿಯೂ ಅದರಂತೆ ಮೋನಿಯರ ವಿಲ್ಲಿಯಮ್ಸನ (Monier Williams) 'ಭಾರತೀಯರ ಬುದ್ಧಿವಂತಿಕೆ' ಎಂಬ ಗ್ರಂಥದೊಳಗೂ ಉಪನಿಷತ್ತುಗಳನ್ನು ಕುರಿತು ವಿವೇಚನೆಯಿದೆ. ಉಪನಿಷತ್ತಿನ ತತ್ವಜ್ಞಾನದ ಉಲ್ಲೇಖವು ಲಿವೊಪೋಲ್ಡ ವ್ಹಾನ ಶ್ರೋಡರನು (Sehroeder) ೧೮೮೭ರಲ್ಲಿ ಬರೆದ ಹಿಂದೂ ವಾಙ್ಮಯ ಮತ್ತು ಸಂಸ್ಕೃತಿಯೆಂಬ ಗ್ರಂಥದಲ್ಲಿಯೂ ಪ್ರೋ. ಮ್ಯಾಕಡೊನೆಲ್ಲನು (Macdonnel) ಬರೆದ ಸಂಸ್ಕೃತವಾಙ್ಮಯದ ಇತಿಹಾಸವೆಂಬ ಗ್ರಂಥದ ಪುಟ ೨೧೮-೨೪೩ ರೊಳಗೂ ಅದೇಮೇರೆಗೆ ವಿಂಟರನಿಟ್ಸನು (Winternitz) ಬರೆದ Geschichte der Indichen litteratur ಎಂಬ ಗ್ರಂಥದ ಮೊದಲನೆ ಭಾಗ ಪುಟ ೨೦೦-೨೨೯ರಲ್ಲಿ ದೊರೆಯುತ್ತದೆ. ಇವೆಲ್ಲ ಬರಹಗಳಲ್ಲಿ ಉಪನಿಷತ್ತಿನ ಸಂದೇಶವೇನೆಂಬುದರ ಸಾರಾಂಶವನ್ನು ಸ್ವಲ್ಪದರಲ್ಲಿ ಹೇಳಲಿಕ್ಕೂ ಸಂಸ್ಕೃತವಾಙ್ಮಯದಲ್ಲಿ ಉಪನಿಷತ್ತುಗಳ ಸ್ಥಾನವೇನೆಂಬುದನ್ನು ತೋರಿಸಲಿಕ್ಕೂ ಪ್ರಯತ್ನಮಾಡಿದ್ದಾರೆ.

ಧರ್ಮಗಳ ಇತಿಹಾಸದೊಳಗಿನ ಉಲ್ಲೇಖಗಳವಿಚಾರವಾಗಿ ಹೊಪಕಿನ್ಸನ (Hopkins) 'ಹಿಂದೂದೇಶದ ಧರ್ಮಗಳು' ಎಂಬುದನ್ನೂ ಗೆಡೆನ್ನನ (Geden) 'ಪೂರ್ವದೇಶದ ಧರ್ಮಗಳ ಅಧ್ಯಯನವು' ಎಂಬುದನ್ನೂ ಮತ್ತು ಈತನೆ ಮುಂದೆ ಕೆಲ ದಿನಗಳ ಬಳಿಕ ಬರೆದ ಇದೇ ಬಗೆಯ ಗ್ರಂಥವನ್ನೂ ನಿರ್ದೇಶಿಸಬಹುದು. ಹಿಂದೂ ಧಾರ್ಮಿಕ ವಿಚಾರದಲ್ಲಿ ಉಪನಿಷತ್ತುಗಳಿಗೆ ಎಷ್ಟೊಂದು ಇಂಬಿದೆಯೆಂಬದು ಮೇಲ್ಕಾಣಿಸಿದ ಉಲ್ಲೇಖಗಳಲ್ಲಿ ಕಂಡುಬರುತ್ತದೆ.

ಹಿಂದೂ ತತ್ವಜ್ಞಾನದ ಇತಿಹಾಸಗಳಲ್ಲಿ ಬಂದಿರುವ ಉಲ್ಲೇಖಗಳನ್ನು ಕುರಿತು ಪ್ರೊ. ರಾಧಾಕೃಷ್ಣನ್ನರ ಹಿಂದೂ ತತ್ವಜ್ಞಾನವೆಂಬ ಗ್ರಂಥದ ೧ನೆಯ ಭಾಗ, ಮತ್ತು ದಾಸಗುಪ್ತರ ಹಿಂದೂ ತತ್ವಜ್ಞಾನದ ಇತಿಹಾಸ ಎಂಬ ಗ್ರಂಥದ ೧ನೆಯ ಭಾಗಗಳನ್ನು ನೋಡಬೇಕೆಂದು ನಾವು ವಿಶೇಷವಾಗಿ ಹೇಳಬಹುದು. ಸ್ಟ್ರಾಸ್‌ನು (Strauss) ಬರೆದ 'ಭಾರತೀಯ ತತ್ವಜ್ಞಾನ' ಗ್ರಂಥದಲ್ಲಿ ಪುಟ ೪೨-೬೧ರಲ್ಲಿ ಹಳೆ ಉಪನಿಷತ್ತುಗಳ ತತ್ವಜ್ಞಾನ ವಿಚಾರವೂ, ಪುಟ ೬೨-೮೫ರಲ್ಲಿ ಹೊಸ ಉಪನಿಷತ್ತುಗಳ ತತ್ವಜ್ಞಾನವೂ ಅಡಕವಾಗಿದ್ದು ವಾಚಕರಿಗೆ ಒಳ್ಳೇ ಲಾಭದಾಯಕವಿದೆ.

ಉಪನಿಷತ್ತುಗಳ ಉಲ್ಲೇಖವು ಇನ್ನುಳಿದ ಕಡೆಯಲ್ಲಿ ಬಂದದ್ದೆಂದರೆ 'ಕೆಂಬ್ರೀಜ ಹಿಸ್ಟರಿ ಆಫ್ ಇಂಡಿಯಾ' ಎಂಬ ಗ್ರಂಥದ ಮೊದಲನೆಯ ಭಾಗದ ೫ ನೆಯ ಪ್ರಕರಣ ದಲ್ಲಿ ಪ್ರೊ. ಕೀಥನು (Keith) ಬರೆದ ಔಪನಿಷದಿಕ ಕಾಲವೆಂಬ ಪ್ರಬಂಧದಲ್ಲಿ. ಇದ ರಲ್ಲಿ ಇವನು ಪ್ರತಿಪಾದಿಸಿರುವುದೇನಂದರೆ, ಬ್ರಾಹ್ಮಣಕಾಲದಲ್ಲಿ ಪುನರ್ಜನ್ಮದ ಉಲ್ಲೇ ಖವು ಏನೂ ಇಲ್ಲದೆ ಇರುವುದರಿಂದ ಉಪನಿಷತ್ತುಗಳ ಕಾಲದಲ್ಲಿ ಕಾಣುವ ಈ ವಿಚಾರವು (ಪುನರ್ಜನ್ಮ) ಹೊಚ್ಚಹೊಸತು. ವೈದಿಕರು ಯಜ್ಞಯಾಗಾದಿ ಕರ್ಮಕಾಂಡಕ್ಕೆ ಅಂಟಿಕೊಂಡು ನಿಂತುದರಿಂದ ಪ್ರತಿಕ್ರಿಯಾರೂಪದಿಂದ ಕ್ಷತ್ರಿಯವರ್ಗದಲ್ಲಿ ಬ್ರಹ್ಮವಾದವು ಹೊರಟಿತು ಎಂದು ಹೇಳುವುದು ತಪ್ಪು ಎಂದು ಈತನು ಸೂಚಿಸಿದ್ದಾನೆ. ಬ್ರಾಹ್ಮಣರು ತಮ್ಮ ಕಾರ್ಯಸಾಧಿಸುವವಕ್ಕಾಗಿಯೆ ಬ್ರಹ್ಮವಾದವನ್ನು ಹುಡುಕಿ ತೆಗೆದ ಶ್ರೆಯಸ್ಸನ್ನು ಕ್ಷತ್ರಿಯರಿಗೆ ಕೊಟ್ಟರೆಂದು ಈತನು ಹೇಳುತ್ತಾನೆ (ಪುಟ ೧೪೨-೧೪೪). ನಾವು ಈ ಗ್ರಂಥದ ಮೂರನೆಯ ಅಧ್ಯಾಯದಲ್ಲಿ ಪುನರ್ಜನ್ಮಕಲ್ಪನೆಯು ವೇದಕಾಲದಲ್ಲಿಯೂ ಇತ್ತೆಂಬುದನ್ನು ಸಿದ್ಧಪಡಿಸಿದ್ದೇವೆ ; ಆದುದರಿಂದ ಉಪನಿಷತ್ತುಗಳಿಗೆ ಇದು ಸಂಪೂರ್ಣ ವಾಗಿ ಹೊಸಕಲ್ಪನೆಯೇ ಅಲ್ಲ. ಅವರಂತೆ ಬ್ರಹ್ಮಜ್ಞಾನವು ಕೇವಲ ಬ್ರಾಹ್ಮಣರದೂ ಅಲ್ಲ, ಅಥವಾ ಕ್ಷತ್ರಿಯರದೂ ಅಲ್ಲ. ಆವುದೆ ವರ್ಣದವನಿರಲಿ, ಆರಿಗೆ ಜ್ಞಾನವಾಯಿತೊ ಅವನು 'ಜ್ಞಾನಿ' 'ಋಷಿ' ಯೆನಿಸಿಕೊಂಡನು, ಎಂದು ನಾವು ಮೊದಲನೆಯ ಅಧ್ಯಾ ಯದ ಕೊನೆಗೆ ಸೂಚಿಸಿರುವೆವು. ಬರಿಯ ಬ್ರಾಹ್ಮಣರಮೇಲೆ ಒಳಸಂಚಿನ ಆರೋಪ ಹೊರಿಸಿದರೆ ಕ್ಷತ್ರಿಯರು ಬ್ರಹ್ಮಜ್ಞಾನದಲ್ಲಿ ಬ್ರಾಹ್ಮಣರ ಗುರುಗಳು ಹೇಗೆ ಆದರು ಎಂಬು ದನ್ನು ನಿರ್ಣಯಿಸಿದಂತಾಗಲಿಲ್ಲ.

ಉಪನಿಷತ್ತುಗಳ ಕೊನೆಯ ಉಲ್ಲೇಖವು ಡಾಯಸೆನ್ನನ (Deussen) ಉಪ ನಿಷತ್ತತ್ವಜ್ಞಾನಗ್ರಂಥದ ಭಾಷಾಂತರಕರ್ತನಾದ ರೆವರೆಂಡ ಎ. ಎಸ್. ಗೆಡೆನ್ನನು 'ಧರ್ಮ ಮತ್ತು ನೀತಿಯ ವಿಶ್ವಕೋಶ' ದಲ್ಲಿ ಉಪನಿಷತ್ತುಗಳನ್ನು ಕುರಿತು ಬರೆದ ಒಂದು ಲೇಖ ದಲ್ಲಿದೆ. ಈ ವಿಶ್ವಕೋಶದ ಸಂಪಾದಕರಿಗೆ ಉಪನಿಷತ್ತುಗಳನ್ನು ಕುರಿತು ಲೇಖ ಬರೆ ಯಲು ಇವನಿಗಿಂತ ಹೆಚ್ಚು ತಕ್ಕವನಾದ ಬೇರೊಬ್ಬನು ಸಿಕ್ಕುವ ಸಂಭವವೆ ಇದ್ದಿಲ್ಲ. ಈ ಲೇಖಕನು ಅಷ್ಟೊಂದು ಯೋಗ್ಯನಿರುವನು. ಲೇಖದ ಕೊನೆಗೆ ಆಧಾರಗ್ರಂಥಗಳ ಉಪ ಯುಕ್ತವಾದ ಸಣ್ಣದೊಂದು ಪಟ್ಟಿಯೂ ಇದೆ.



## ೬. ಪ್ರಬಂಧಗಳೂ ಗ್ರಂಥಗಳೂ

ಔಪನಿಷದಿಕ ತತ್ವಜ್ಞಾನದ ಕೆಲವೊಂದು ಅಂಗವನ್ನಾಗಲಿ ಸಂಪೂರ್ಣ ತತ್ವಜ್ಞಾನ ವನ್ನಾಗಲಿ ಕುರಿತು ಬರೆದ ಎಷ್ಟೊ ನಿಬಂಧಗಳೂ ನಿರೂಪಣೆಗಳೂ ಉಂಟು. ಪಾಣಿನಿ ವ್ಯಾಕರಣದ ಒರೆಹಚ್ಚಿ ಉಪನಿಷತ್ತುಗಳ ಕಾಲನಿರ್ಣಯ ಮಾಡಬೇಕೆಂಬುವ ಒಟ್ಟೊ ವೆಕ ರನ ತೈಲಬುದ್ಧಿಯ ಕಲ್ಪನೆಯಿಂದ ಬರೆದ ಆತನ ಜರ್ಮನ್ ಗ್ರಂಥದ ಉಲ್ಲೇಖವನ್ನೆ ಇಲ್ಲಿ ಮೊದಲು ಮಾಡಬಹುದು. ಈ ಗ್ರಂಥವನ್ನು ಟುಬಿನ್‌ಜೆನ್ ಎಂಬಲ್ಲಿ ಇವನು ೧೯೨೫ರಲ್ಲಿ ಪ್ರಕಟಿಸಿದನು. ಪ್ರಮುಖ ದಶೋಪನಿಷತ್ತುಗಳ ಅನೇಕ ಪದಪ್ರಯೋಗಗಳ ವಿಮರ್ಶೆ ಮಾಡಿ ಪಾಣಿನಿಗಿಂತ ಹಿಂದೆ ಆದ ಉಪನಿಷತ್ತುಗಳಾವವು, ಪಾಣಿನಿಯ ಮುಂದೆ ಆದವು ಗಳಾವವು ಎಂದು ಅವುಗಳನ್ನು ಕಾಲಕ್ರಮದಲ್ಲಿ ಗೊತ್ತುಪಡಿಸಿದ್ದಾನೆ. ಇದು ಈ ದೃಷ್ಟಿ ಯಿಂದ ಮಹತ್ವದ ಕಲ್ಪನೆಯಿರುತ್ತದೆ. ಔಪನಿಷದಿಕ ಕಾಲವು ಮುಗಿದು ಹೋಗುವ ಮುನ್ನವೆ ಪಾಣಿನಿಯು ಪ್ರಬಲನಾದಂತೆ ತೋರುತ್ತದೆ. ಆದುದರಿಂದ ಪಾಣಿನಿಯನ್ನು ಅನುಸರಿಸದಿದ್ದ ಉಪನಿಷತ್ತುಗಳು ಅವನ ಮುಂಚಿನವೆಂದೂ, ಅನುಸರಿಸಿದಂತಹವು ಅವನ ತರುವಾಯದವೆಂದೂ ನಿರಾತಂಕವಾಗಿ ಹೇಳಬಹುದು. ಈ ಮಹತ್ವದ ಧೋರಣೆಯಿಂದಲೆ ವೆಕರನು ಉಪನಿಪತ್ತುಗಳಲ್ಲಿ ನಾಲ್ಕು ಗುಂಪುಗಳನ್ನು ಕಲ್ಪಿಸಿದ್ದಾನೆ. ಬೃಹದಾರಣ್ಯಕ, ಛಾಂದೋಗ್ಯ ಮತ್ತು ಕೌಷೀತಕಿಗಳು ಮೊದಲನೆಯ ಗುಂಪಿಗೆ ಸೇರಿದವುಗಳು; ಐತರೇಯ ತೈತ್ತಿರೀಯ ಮತ್ತು ಕಠ ಇವು ಎರಡನೆಯ ಗುಂಪಿನವು; ಕೇನ ಮತ್ತು ಈಶಗಳು ಮೂರ ನೆಯ ಗುಂಪಿಗೆ ಹೊಂದಿದಂತಹವು ; ಶ್ವೇತಾಶ್ವತರ ಮತ್ತು ಮೈತ್ರಿಗಳು ನಾಲ್ಕನೆಯ ಗುಂಪಿಗೆ ಸಂಬಂಧಪಟ್ಟವು. ಮೊದಲಿನ ಎರಡು ಗುಂಪುಗಳು ಪಾಣಿನಿಯ ಮುನ್ನಿನ ವೆಬುದು ಸ್ಪಷ್ಟವಿದೆ ; ಮೂರನೆಯದು ಪಾಣಿನಿಯ ಮುನ್ನ ಆಗಿರುವ ಸಂಭವವಿದೆ ಆದರೆ ಕೊನೆಯದು ಮಾತ್ರ ನಿಸ್ಸಂದಿಗ್ಧವಾಗಿ ಪಾಣಿನಿಯ ತರುವಾಯ ಆದುದು. ಪ್ರಸ್ತುತಗ್ರಂಥದ ಮೊದಲನೆಯ ಅಧ್ಯಾಯದಲ್ಲಿ ಉಲ್ಲೇಖಿಸಿರುವಂತೆ ಪುನರ್ಜನ್ಮದ ಕಲ್ಪ. ನೆಯು ಇರುವುದರ ಅಥವಾ ಇರದಿರುವುದರ ಮೇಲಿಂದ ಉಪನಿಷತ್ತುಗಳ ಕಾಲನಿರ್ಣಯ ಮಾಡುವ ಪದ್ಧತಿಗಿಂತಲೂ ವೆಕರನು ಹೇಳುವಂತೆ ವ್ಯಾಕರಣದ ಸಹಾಯದಿಂದ ಕಾಲ ವನ್ನು ಗೊತ್ತುಪಡಿಸುವ ಬಗೆಯು ಹೆಚ್ಚು ಹುರುಳುಳ್ಳದ್ದಾಗಿದೆ. ಅವತಾರಗಳ ಕಲ್ಪನೆಯ ಉಲ್ಲೇಖವೂ ಕಾಲನಿರ್ಣಯಕ್ಕೆ ಎಷ್ಟೋ ಸಹಕಾರಿ ಯಾಗಬಹುದಾಗಿತ್ತು ; ಆದರೆ ಇದನ್ನು ಇನ್ನೂ ಏಕೆ ಉಪಯೋಗಿಸಿಲ್ಲವೊ ಎಂಬ ಬಗ್ಗೆ ಸೋಜಿಗವೆನಿಸುತ್ತದೆ. ' ಉಪ

ನಿಷತ್ತುಗಳಲ್ಲಿರುವ ನಾಟ್ಯಾಂಶ ' ವೆಂಬ ಪ್ರಬಂಧವು ' ಮೋನಿಸ್ಟ ' (Monist) ಪತ್ರಿಕೆಯಲ್ಲಿ ೧೯೧೦ರಲ್ಲಿ ಪ್ರಕಟವಾಗಿದೆ ; ಇದನ್ನು ಬರೆದವನು ಚಾರ್ಲಸ ಜಾನ್ಸಟೊನ್ನನು ( Johnston ) ಆ ಬರಹದಲ್ಲಿ ಬೃಹದಾರಣ್ಯಕ, ಛಾಂದೋಗ್ಯ ಮತ್ತು ಬೇರೆ ಉಪನಿಷತ್ತುಗಳೊಳಗಿನ ಸಂಭಾಷಣೆಗಳ ವಿವೇಚನೆಯನ್ನು ಮಾಡಿದ್ದಾನೆ. ಎ. ಎಚ್. ಇವಿಂಗನು ( Ewing ) ' ಪ್ರಾಣ ( ಶ್ವಸನ ) ದ ಕಾರ್ಯ ' ಎಂಬುದರ ಬಗ್ಗೆ ಇದ್ದ ಹಿಂದೂಜನರ ಕಲ್ಪನೆಯನ್ನು ಆಶ್ರಯಿಸಿ ಉಪನಿಷತ್ತಿನಲ್ಲಿ ಹೇಳಿದ ಶರೀರ ಮತ್ತು ಮನಸು ಇವುಗಳ ಸಂಬಂಧದ ವಿಚಾರವನ್ನು ವಿವೇಚಿಸಿದ್ದಾನೆ. ಡಾ. ಬೆಟಿ ಹೆಮನ್ ( Heimann ) ಎಂಬವನು ೧೯೨೨ರಲ್ಲಿ ಉಪನಿಷತ್ತಿನೊಳಗಿನ ಗಾಢನಿದ್ರಾವಿಚಾರವನ್ನು ಕುರಿತು ವಿಮರ್ಶೆಯನ್ನು ಮಾಡಿದ್ದಾನೆ. ರಂಬಾಲನೆಂಬಾತನು ( Ramaball ) ೧೯೦೯ರಲ್ಲಿ ಉಪನಿಷತ್ತಿನಲ್ಲಿ ಬಂದಿರುವ ಪಾಪದ ಕಲ್ಪನೆಯನ್ನು ಕುರಿತು ವಿವೇಚಿಸಿದ್ದಾನೆ. ಇಂತು ಸಂಶೋಧಕರು ಬೇರೆ ಬೇರೆ ವಿಷಯಗಳ ಅಧ್ಯಯನಕ್ಕೋಸುಗ ಉಪನಿಷತ್ತುಗಳ ಪೃಥಕ್ಕರಣವನ್ನು ಮಾಡಿ ಎಷ್ಟೊಂದು ಸೂಕ್ಷ್ಮನಿರೀಕ್ಷಣೆಯನ್ನು ಮಾಡಿರುವರೆಂಬದು ನಮಗೆ ಕಂಡುಬರುತ್ತದೆ.

ಉಪನಿಷತ್ತಿನೊಳಗಿನ ಬೇರೆ ವಿಷಯಗಳನ್ನು ಕುರಿತು ಬರೆದ ಕೆಲವು ನಿಬಂಧಗಳ ಮಾತೂ ಹೀಗೆಯೆ ಇದೆ. ರಿಚರ್ಡ ಗಾರ್ಬೆಯು ( Garbe ) ೧೮೯೪ ರಲ್ಲಿ ಲೆಪ್ಸಿಕ್ಕಿನಲ್ಲಿ ಪ್ರಕಟಿಸಿದ ತನ್ನ ಗ್ರಂಥದಲ್ಲಿ ಉಪನಿಷತ್ತುಗಳಿಗೂ ಸಾಂಖ್ಯಪದ್ಧತಿಗೂ ಇರುವ ನಿಬಂಧವನ್ನು ವಿಸ್ತಾರವಾಗಿ ತೋರಿಸಿ ಸಾಂಖ್ಯ ತತ್ವಜ್ಞಾನವು ಉಪನಿಷತ್ಕಾಲದ ಮಧ್ಯದಲ್ಲಿ ಹೇಗೆ ಹುಟ್ಟಿತೆಂಬುದನ್ನು ಹೇಳಿರುವವನ್ನು ನಾವು ನಮ್ಮ ಮುನ್ನುಡಿಯಲ್ಲಿ ಉಲ್ಲೇಖಿಸಿದ್ದೇವೆ. ಡಾ. ಮ್ಯಾಕ್ನಿಕೋಲನು ( Macnicole ) ಹಿಂದೂ ದೇವವಿಚಾರ ( Indian Theism ) ಎಂಬ ಗ್ರಂಥ ಬರೆದಿದ್ದಾನೆ. ಅದರಲ್ಲಿ ಉಪನಿಷತ್ತಿನಲ್ಲಿರುವ ಜಗದೀಶ್ವರನ ವಿಚಾರವೆಂಬ ಅಧ್ಯಾಯವಿದೆ. ಅದರಲ್ಲಿ ಉಪನಿಷತ್ತಿನ ರಹಸ್ಯವಾವುದು ಎಂಬುದನ್ನು ಕುರಿತು ಬಹು ಜಾಣತನದ ವಿವೇಚನೆಯಿದೆ. ಉಪನಿಷತ್ತಿನಲ್ಲಿ ಮಾಯಾವಾದದ ಪ್ರತಿಪಾದನವೆ ಇಲ್ಲವೆಂದೂ ಆದುದರಿಂದ ಅದರಲ್ಲಿ ಪರಮೇಶ್ವರನ ವಿಚಾರವೆ ಉಂಟೆಂದೂ ಆತನ ಸಿದ್ಧಾಂತವಿದೆ, ಉಪನಿಷತ್ತುಗಳಲ್ಲಿ ಸರ್ವೇಶ್ವರವಾದವಿಲ್ಲ ( Pantheism ); ಈಶ್ವರನುಂಟು, ಆತನನ್ನು ಅನುಭಾವದಿಂದಲೆ ತಿಳಿಯಬೇಕು ಎಂಬುದು ಉಪನಿಷತ್ತುಗಳ ಸಂದೇಶವು ಎಂದು ಮ್ಯಾಕ್ನಿಕೋಲನ ಕೊನೆಯ ನಿರ್ಣಯವಿದೆ. ಡಾ. ಕೆಯರ್ಡನು ( Caird ) ನಿಸ್ಸಂದಿಗ್ಧವಾದ ತನ್ನ ವಿವೇಚನೆಯಲ್ಲಿ ಪ್ಲೋಟಿನಸನ ತೀರ

ಸಮಾನವಿಚಾರಗಳನ್ನು ಹೋಲಿಸಿ, ಉಪನಿಷತ್ತಿನಲ್ಲಿ ಸರ್ವೇಶ್ವರವಾದವಿಲ್ಲ ಅನುಭಾವವಾದವೆ ಉಂಟೆಂದು ವಿಂಗಡಿಸಿ ಹೇಳಿದ್ದಾನೆ ( ಪು. ೫೯). ಉಪನಿಷತ್ತಿನಲ್ಲಿ ಮಾಯಾವಾದವು ಇಲ್ಲವೆ ಇಲ್ಲವೆಂದು ಡಾ. ಮ್ಯಾಕ್ನಿಕೋಲನು ಹೇಳುವ ಮಾತು ನಮಗೆ ಸಮ್ಮತವಿಲ್ಲ; ಆದರೆ ಉಪನಿಷತ್ತಿನ ವಿಚಾರಪ್ರವಾಹವು ಅನುಭಾವಮಾರ್ಗದಗುಂಟವೆ ಇರುವದೆಂಬ ಮಾತು ನಮಗೆ ಸಂಪೂರ್ಣ ಸಮ್ಮತ. ಹೀಗಿದ್ದರೂ ಅನುಭಾವಕ್ಕೆ ಯಾವಾಗಲೂ ಈಶ್ವರವಾದದ ಅವಶ್ಯಕತೆಯುಂಟೇ ಉಂಟೆಂದು ತಿಳಿವ ಕಾರಣವಿಲ್ಲ. ಜೋನ್‌ಮೆಕೆಂಝಿಯು ( Mekenzie ) ಹಿಂದೂ ನೀತಿಶಾಸ್ತ್ರವೆಂಬ ಗ್ರಂಥವನ್ನು ಬರೆದು ಆಕ್ಸಫರ್ಡಿನಲ್ಲಿ ಪ್ರಕಟಿಸಿದ್ದಾನೆ. ಅದರಲ್ಲಿ ಔಪನಿಷಧಿಕ ನೀತಿಶಾಸ್ತ್ರದ ಮೇಲೆ (ಪುಟ ೬೭–೯೯) ಅತ್ಯುತ್ಕೃಷ್ಟ ನಿಬಂಧವನ್ನು ಬರೆದಿರುವನು. ಉಪನಿಷತ್ತಿನ ನೀತಿಶಾಸ್ತ್ರದ ವಿಚಾರವು ಮಾನವಜೀವಿತದ ಸೆಲೆನೆಲೆಗಳನ್ನು ಅರಿತು ಮಾಡಿದ್ದಾಗಿವೆ; ಅಧ್ಯಾತ್ಮತತ್ವದ ಸ್ಥಿರವಾದ ಅಡಿಗಲ್ಲ ಮೇಲೆ ಉಪನಿಷತ್ತಿನ ನೀತಿಶಾಸ್ತ್ರವು ನಿಂತಿದೆ ಎಂದು ಮ್ಯಾಕೆಂಝಿಯು ಹೇಳುವ ಮಾತುಗಳಿಗೆ ನಮ್ಮ ತುಂಬಾ ಒಪ್ಪಿಗೆ; ಆದರೆ ಅವನು ಔಪನಿಷಧಿಕ ನೀತಿವಿಚಾರವು ಪೊಳ್ಳು, ಪರಸ್ಪರ ವಿರೋಧಿಯು ಮತ್ತು ತೋರಿಕೆಯದೆಂದು ಹೇಳುವ ಮಾತಿಗೆ ನಮ್ಮ ಸಮ್ಮತಿಯಿಲ್ಲ. ನಾವು ಐದನೆಯ ಅಧ್ಯಾಯದಲ್ಲಿ ಉಪನಿಷತ್ತಿನ ನೀತಿವಿಚಾರದ ಬಗ್ಗೆ ಇರುವ ಹಲವು ಅಭಿಪ್ರಾಯಗಳನ್ನು ತೂಗಿ ಸರಿಬಾರದು ಈ ಬಗೆಯ ಅರ್ಧಮರ್ಧ ವಿಚಾರಗಳ ಖಂಡನವನ್ನು ಅದರಲ್ಲಿ ಮಾಡಿದ್ದನ್ನು ವಾಚಕರು ಓದಬಹುದು.

ವಿಶ್ವವೂ ವ್ಯಕ್ತಿಯೂ ( World and Individual ) ಎಂಬ ತನ್ನ ಗ್ರಂಥದಲ್ಲಿ ಜೋಶಿಯೂ ರಾಯಿಸ್ ( Royce ) ಎಂಬಾತನು Mystical Conception of Being ಎಂಬ ಗ್ರಂಥವನ್ನು ಕೇವಲ ತತ್ವಜ್ಞಾನದೃಷ್ಟಿಯಿಂದಲೆ ಮುಖ್ಯವಾಗಿ ಉಪನಿಷತ್ತುಗಳ ಉಲ್ಲೇಖಗಳಿಗನುಸರಿಸಿ ಬರೆದಿದ್ದಾನೆ. ತತ್ವಜ್ಞಾನದ ಅಳವಿನೊಳಗೆ ಒಳಗೊಳ್ಳುವ ಅನುಭಾವವಿಚಾರವನ್ನೆಲ್ಲ ಹೇಳಿರುವುದರಿಂದಲೆ ತಾನು ಇಷ್ಟು ವಿಸ್ತೃತವಾಗಿ ಉಪನಿಷತ್ತುಗಳ ವಿವೇಚನೆಯನ್ನು ಮಾಡಿರುವನು (ಪು ೧೭೬ ) ಎಂದು ರಾಯಿಸನು ಹೇಳುತ್ತಾನೆ. ರಾಯಿಸನು ಅನುಭಾವ ಮಾರ್ಗಕ್ಕೆ ಪ್ರತ್ಯಕ್ಷ ಜ್ಞಾನ, ಸಾಕ್ಷಾತ್ ಅನುಭವ ಮಾರ್ಗವೆಂದು ಹೇಳುವನು; ಇವನಿಗೆ ಅನುಭಾವಮಾರ್ಗದಲ್ಲಿ ಸಹಾನುಭೂತಿಯಿಲ್ಲವಾದರೂ ಇವನಷ್ಟು ಚೆನ್ನಾಗಿ ಬೇರೆ ಇನ್ನಾವನೂ ಇದನು ಬಿಚ್ಚಿಹೇಳಲಾರನು. ಪ್ರೊ. ರಾಧಾಕೃಷ್ಣರು ಬರೆದ ( Reign of Religion in Contemporary philosophy, Macmillan 1920 ) ಎಂಬ ಗ್ರಂಥದಲ್ಲಿ

' ಸದ್ವಸ್ತುವನ್ನು ಅರಿತುಕೊಳ್ಳಲು ಉಪನಿಷತ್ತಿನ ಕೆಲ ಸೂಚನೆಗಳು' ಎಂಬುದು ಕೊನೆಯ ಅಧ್ಯಾಯವಿದೆ. ಅದರಲ್ಲಿ ಉಪನಿಷತ್ತುಗಳು ಸದ್ಯದ ಸಮಕಾಲೀನ ತತ್ವಜ್ಞಾನಕ್ಕೆ ಕೂಡ ಹೊಸ ದೃಷ್ಟಿಯನ್ನು ಕೊಡಲು, ಒಂದು ದಾರಿಯನ್ನು ತೋರಲು, ಹೇಗೆ ಸಮರ್ಥ ವಿರುವವೆಂಬುದನ್ನು ರಾಧಾಕೃಷ್ಣರು ಹೇಳಿದ್ದು ಕಂಡುಬರುವದು. ಡಾಕ್ಕಾ ವಿಶ್ವವಿದ್ಯಾ ಲಯದ ಪ್ರೊ. ಲ್ಯಾಂಗಲೆ (Langley) ಎಂಬವರು ಇಂಡಿಯನ್ ಫಿಲಾಸಫಿಕಲ್ ರಿವ್ಯೂ ೧೯೨೦, ಪತ್ರಿಕೆಯಲ್ಲಿ ಉಪನಿಷತ್ತುಗಳಲ್ಲಿರುವ ' ಪರಮಾತ್ಮನ ಕಲ್ಪನೆಯೂ ಜೀವಾತ್ಮ ನೊಡನಿರುವ ಅವನ ಐಕ್ಯವೂ ' ಎಂಬ ಲೇಖಬರೆದಿರುತ್ತಾರೆ. ಅದರಲ್ಲಿ ಉಪನಿಷತ್ತುಗಳ ಮತವು ಕ್ಯಾಂಟನಿಂದ ಹೇಗೆ ಭಿನ್ನವಿದೆಯೆಂಬವನ್ನು ತೋರಿಸಿದ್ದಾರೆ. ಆದರೆ ಕ್ಯಾಂಟನ ವಿಚಾ ರಗಳೆ ಸರಿಯೆಂದು ಪ್ರೊ. ಲ್ಯಾಂಗಲೆಯವರು ಎದೆತಟ್ಟಿ ಹೇಳುವುದಿಲ್ಲ ; ಯಾಕಂದರೆ ' ಆತ್ಮವು ಶುದ್ಧಭಾವಗಳನ್ನು ಸಮನ್ವಯಿಸುವಾಗ ಮೂಲವಸ್ತುವಿನ ಯಾವ ಕಲ್ಪನೆಗಳ ಮೂಲಕ ಆ ಭಾವಗಳುಂಟಾಗಿರುವವೊ ಆ ಕಲ್ಪನೆಗಳಿಗೆ ಆತ್ಮವು ವಿಪರ್ಯಸ್ತಸ್ವರೂಪವನ್ನು ಕೊಡುವದೆಂದು ಕ್ಯಾಂಟನ ಮತವು; ಆದರೆ ಕ್ರೋಸನು ಇವನಿಗಿಂತ (ಕ್ಯಾಂಟ) ಹೆಚ್ಚು ಸರಿಯೆಂದು ಹೇಳಬಹುದು. ಯಾಕಂದರೆ ಆತ್ಮವು ಭಾವಗಳನ್ನು ಸಮನ್ವಯಿಸುವಾಗ ಅನುಭವದ ವಿಪರ್ಯಾಸಮಾಡುವ ಗೊಡವೆಗೆ ಹೋಗದೆ ತನ್ನ ಸ್ವರೂಪದ ಆವಿರ್ಭಾವ ವನ್ನು ಮಾತ್ರ ಮಾಡುವದು, ಎಂದು ಕ್ರೋಸನು ಹೇಳಿರುವನು ' (ಪುಟ. ೧೨೬–೧೨೭). ಡಾ. ಬಾರೂಆ ( Barua ) ಎಂಬವನು ೧೯೨೧ ರಲ್ಲಿ ಕಲಕತ್ತೆಯಲ್ಲಿ ಪ್ರಸಿದ್ಧವಾದ ' ಬೌದ್ಧಕಾಲಕ್ಕೂ ಮುಂಚಿನ ತತ್ವಜ್ಞಾನ ' ಎಂಬ ಗ್ರಂಥವನ್ನು ಬರೆದಿರುವನು. ಅದರಲ್ಲಿ ಬುದ್ಧನಿಗಿಂತ ಮೊದಲಿನ ಅಂದರೆ ಉದ್ದಾಲಕ, ಯಾಜ್ಞವಲ್ಕ್ಯ, ಪಿಪ್ಪಲಾದ ಮೊದಲಾದ ತತ್ವವಿದರ ವರ್ಣನೆಯನ್ನು ಅವನು ವಿಶದವಾಗಿ ಮಾಡಿರುವನು. ಆದರೆ ಉಪನಿಷತ್ಕಾ ಲದ ಈ ತತ್ವಜ್ಞಾನಿಗಳ ವ್ಯಕ್ತಿತ್ವ ಮತ್ತು ವಿಚಾರಗಳನ್ನು ಸ್ಪಷ್ಟವಾಗಿ ಕಂಡುಹಿಡಿಯುವುದೆ ಬಲು ಗಡಚಾಗಿದೆ ; ಇದು ಸಾಧ್ಯವಾದರೆ ಡಾ. ಬರ್ನೆಟನು ( Burnet ) ' ಪ್ರಾಚೀನ ಗ್ರೀಕತತ್ವಜ್ಞಾನಿಗಳು ' ಎಂಬ ಗ್ರಂಥದಲ್ಲಿ ಬರೆದ ರೀತಿಯಿಂದ ' ಉಪನಿಷತ್ಕಾಲದ ತತ್ವ ಜ್ಞರು ' ಎಂಬೊಂದು ಗ್ರಂಥವನ್ನೆ ಪ್ರಕಟಿಸಬಹುದು. ಈ ಬಗೆಯಲ್ಲಿ ಬರೆಯಬಹುದಾದ ಗ್ರಂಥದ ಅಲ್ಪಸ್ವಲ್ಪ ದಿಗ್ದರ್ಶನವು ಈಗಲೆ ಆಗಿದ್ದು ಅದನ್ನು ಈ ಗ್ರಂಥದ ಮೊದಲನೆಯ ಅಧ್ಯಾಯದಲ್ಲಿ ಕಾಣಬಹುದು.

ಹಿಂದೂದೇಶದ ವಿವಿಧವಿಚಾರಗಳನ್ನು ಅರಿತುಕೊಳ್ಳಲು ಇಲ್ಲಿಯ ಕ್ರಿಸ್ತೀ ಮಿಶನ್ನು ಗಳು ಸಂಶೋಧನವನ್ನು ನಡೆಸಿದುದು ಅಭಿನಂದನೀಯವಾಗಿದೆ. ಉಪನಿಷತ್ತುಗಳೂ ಇವರ ತೀಕ್ಷ್ಣದೃಷ್ಟಿಗೆ ಬೀಳದೆ ಇಲ್ಲ. ಇವರ ವಿಚಾರಗಳು ಕ್ರಿಸ್ತೀಮತಕ್ಕೆ ಪೋಷಕವಾಗಿ ಇರು

ವುದು ಅನಿವಾರ್ಯವಾಗಿದ್ದರೂ ಇವರು ತಾವು ಕೈಕೊಂಡ ವಿಷಯಗಳ ವಿಚಾರದಲ್ಲಿ ಮಾಡಿದ ಪರಿಶ್ರಮದಬಗ್ಗೆ ಯಾರ ಮತಭೇದವೂ ಇಲ್ಲ. ಸ್ಲೇಟರನು ( Slater ) ಬರೆದ ' ಉಪನಿಷತ್ತುಗಳ ಅಭಾಸ್ಯವು ' ಎಂಬ ಹೊತ್ತಿಗೆಯು ೧೮೯೭ರಲ್ಲ ಮದರಾಸಿನಲ್ಲಿ ಪ್ರಕಟವಾಗಿದೆ. ಇದು ಬಹಳ ಚೆನ್ನಾದ ಹಾಗೂ ಜಾಣ್ಮೆಯುಳ್ಳ ಪುಸ್ತಕವಾಗಿದೆ. ಉಪನಿಷತ್ತುಗಳು ಮಾನವ ( universal ) ಧರ್ಮವನ್ನು ಬೋಧಿಸಲು ಮಾತ್ರ ಅಸಮರ್ಥವಾಗಿವೆಯೆಂದು ಸ್ಲೇಟರನು ಬಗೆಯುವನು. ಇವನು ಬರೆದಿರುವುದೇನಂದರೆ, ' ಮಾನವ ಧರ್ಮವು ಇಡೀ ವಿಶ್ವಕ್ಕೆ ಒಂದೇ ಇರಬೇಕೆಂಬ ಕನಸುನನಸಿದ್ದರೆ—ವಿಶ್ವಕ್ಕೆ ಒಂದೇ ಒಂದು ಶಾಸ್ತ್ರವಿದೆ. ಪರಮಾತ್ಮನ ಪಿತೃತ್ವವೂ ವಿಶ್ವದ ಬಂಧುತ್ವವೂ ಸತ್ಯವಿರುವುದರಿಂದ ಈ ಬಗೆಯ ಮಾನವ ಕುಟುಂಬಕ್ಕೆ ಒಂದೇಒಂದು ಧರ್ಮಬಂಧನವಿರುವದು ಸಾಧ್ಯವು—ಅಂತಹ ಧರ್ಮವು ನನಗೆ ಉಪನಿಷತ್ತುಗಳಿಂದ ದೊರೆಯದು. ಉಪನಿಷತ್ತಿನ ಧರ್ಮವೆ ನಿಮ್ಮದೆಂದು ನೀವು ತಿಳಿದರೆ ಭೂಗೋಲದ ಒಂದು ಮೂಲೆಯಲ್ಲಿ ಎಲ್ಲೋ ಅದು ಇದೆ ಎಂದು ತಿಳಿದು ಸಂತುಷ್ಟರಾಗಬೇಕಾಗುವದು; ಮತ್ತು ಆ ಮೂಲೆಯೊಳಗೂ ಯಂಕ-ನೋಣ-ಶೀನರೆಂಬ ವಿಶಿಷ್ಟ ಗುಂಪಿನಲ್ಲೆ ಆ ಧರ್ಮವು ಉಳಿಯುವದು; ಯಾಕಂದರೆ ಮೂಲ ಸಂಸ್ಕೃತದಲ್ಲಿ ಓದಿದರೆ ಮಾತ್ರ ಆ ಪ್ರಾಚೀನ ತತ್ವಜ್ಞಾನವು ಸರಿಯಾಗಿ ತಿಳಿಯುವುದು. ಅಂದಬಳಿಕ ಸತ್ಯಧರ್ಮದ ಉತ್ತಮ ಜ್ಞಾನವಾಗಲಿಕ್ಕೆ ಒಳ್ಳೆ ಬುದ್ಧಿವಂತಿಕೆಯಲ್ಲದೆ ವಿಶೇಷ ಭಾಷಾಜ್ಞಾನವೂ ಬೇಕು. ಅಲ್ಲದೆ ಮೃತಭಾಷೆಯನ್ನು ಕಲಿಯಲಿಕ್ಕೆ ಬುದ್ಧಿಯೂ ಬೇಕು; ಇದಿಷ್ಟು ಕನಿಷ್ಟಬೇಕು. ಆದುದರಿಂದಲೆ ಆ ಧರ್ಮವು ಅವ್ಯವಹಾರ್ಯವು ' (ಪುಟ. ೭೨). ಮಾನವಧರ್ಮಕ್ಕೂ ಭಾಷೆಗೂ ಏನು ಸಂಬಂಧವೊ ನಾವರಿಯೆವು ! ಧರ್ಮವು ಯಾವ ಭಾಷೆಯಲ್ಲಿದ್ದರೇನು? ಅದರ ಭಾವವು ಮುಖ್ಯ, ಭಾಷೆಯಲ್ಲ. ಎಚ್. ಡಿ. ಗ್ರಿಸವೋಲ್ಡನು (Griswold) ತನ್ನ ಭಾರತೀಯ ತತ್ವಜ್ಞಾನದ ಇತಿಹಾಸದಲ್ಲಿ ' ಬ್ರಹ್ಮ ' ನ ವಿಷಯಕ್ಕೆ ಒಂದು ಪ್ರಬಂಧವನ್ನು ಬರೆದಿದ್ದಾನೆ ; ಇದರಲ್ಲಿ ಉಪನಿಷತ್ತಿನೊಳಗಿನ ಬ್ರಹ್ಮನ ವಿಚಾರವನ್ನು ವಿಸ್ತೃತವಾಗಿ ವಿವೇಚಿಸಿ, ಬ್ರಹ್ಮಸಿದ್ಧಾಂತಕ್ಕನುಸರಿಸಿ ಧಾರ್ಮಿಕ, ನೈತಿಕ, ಮತ್ತು ತಾತ್ವಿಕ ಪರಿಣಾಮಗಳನ್ನು ವಿಚಾರಿಸಿದ್ದಾನೆ. ಉರ್ಕಹಾರ್ಟನು ( Urquhart ) ೧೯೧೬ರಲ್ಲಿ ಕಲಕತ್ತೆಯಲ್ಲಿ ' ಉಪನಿಷತ್ತುಗಳೂ ಜೀವನವೂ ' ಎಂಬುವನ್ನು ಪ್ರಕಟಿಸಿರುವನು. ಇದರಲ್ಲಿ ಉಪನಿಷತ್ತುಗಳಲ್ಲಿರುವ ಆಸ್ತಿಕ್ಯವಾದ ಮತ್ತು ನಿರಾಶಾವಾದಗಳ ವಿವೇಚನೆ ಮಾಡಿ ಅಧ್ಯಾತ್ಮದೃಷ್ಟಿಯಿಂದ ಅವುಗಳ ಕೊರತೆಗಳನ್ನು ತೋರಿಸಿರುವನು ಮತ್ತು ಇದರ ಧಾರ್ಮಿಕ ಹಾಗೂ ನೈತಿಕ ಪರಿಣಾಮಗಳನ್ನು ಹೇಳಿ, ಕೊನೆಗೆ ಹಿಂದುಸ್ತಾನಕ್ಕೆ ಕ್ರಿಸ್ತೀಧರ್ಮದ ಸಂದೇಶವನ್ನು ಅರುಹಿರುವನು.

ಎಲ್ಲ ಬಗೆಯಿಂದಲೂ ಉಪನಿಷತ್ತಿನ ತತ್ವಜ್ಞಾನದ ವಿಚಾರಮಾಡಿ ಸುವ್ಯವಸ್ಥಿತವಾಗಿ ಬರೆದ ಗ್ರಂಥವೆಂದರೆ ಮೊದಲು ಎ. ಇ. ಗಫ್. (Gough) ಎಂಬವನದು. ಇವನು ೧೮೮೨ ರಲ್ಲಿ ಲಂಡನಿನಲ್ಲಿ ತನ್ನ ಗ್ರಂಥವನ್ನು ಪ್ರಕಟಿಸಿದನು. ಈ ವಿಷಯದಲ್ಲಿ ಬಹುತರ ಇದೆ ಮೊದಲನೆಯ ಗ್ರಂಥವಾಗಿರಬೇಕು. ಇವನ ಬರಹದಲ್ಲಿ ಸಹಾನುಭೂತಿಯ ದೃಷ್ಟಿಯಿಲ್ಲದೆಯಿರುವುದು ನಿಜವಾಗಿದ್ದರೂ ಗ್ರಂಥವು ಬಹಳ ಚನ್ನಾಗಿ ಬರೆಯಲ್ಪಟ್ಟಿದೆಯೆಂಬುದು ಸುಳ್ಳಲ್ಲ. ಉಪನಿಷತ್ತುಗಳ ವಿಚಾರದ ಪರಿಣತಸ್ವರೂಪವೆ ಶಂಕರಾಚಾರ್ಯರ ತತ್ವಜ್ಞಾನವು ಎಂದು ಈತನ ಅಭಿಪ್ರಾಯವಿದೆ; ಆದರೆ ಇವನ ಅಭಿಪ್ರಾಯವು ತಪ್ಪಾಗಿದೆಯೆಂದೂ ಶಾಂಕರ ತತ್ವಜ್ಞಾನವು ಉಪನಿಷದ್ವಿಚಾರಗಳ ಫಲಿತವು ಎಂದು ಹೇಳಲಾಗದೆಂದೂ ಟೀಕಾಕಾರರು ಬರೆದಿದ್ದಾರೆ. ಡಾಯಸೆನ್ನನು ಜರ್ಮನ್ ಭಾಷೆಯಲ್ಲಿ ಬರೆದ 'ಉಪನಿಷತ್ತತ್ವಜ್ಞಾನ' ಎಂಬ ಗ್ರಂಥವನ್ನು ರೆವರಂಡ ಎ. ಎಸ್. ಗೆಡೆನ್ ಎಂಬವನು ೧೯೦೬ ರಲ್ಲಿ ಭಾಷಾಂತರಿಸಿದನು. ಇದುವೆ ಉಪನಿಷತ್ತತ್ವಜ್ಞಾನ ವಿಷಯಕ ಸುವ್ಯವಸ್ಥಿತವಾದ ಎರಡನೆಯ ಮಹತ್ವದ ಗ್ರಂಥವು. ಡಾಯಸೆನ್ನನು ತನ್ನ ಗ್ರಂಥ ವಿಷಯದಲ್ಲಿ ಅನೇಕಾನೇಕ ವರ್ಷಗಳವರೆಗೆ ಅಭ್ಯಾಸಮಾಡಿದವನಾದುದರಿಂದ ಉಪನಿಷದ್ರಹಸ್ಯವು ಅವನ ಮುಖದಿಂದ ಅಧಿಕಾರಯುಕ್ತವಾಗಿ ಹೊರಬೀಳುತ್ತದೆ. ಉಪನಿಷತ್ತಿನ ಅಭ್ಯಾಸಿಗಳು ಡಾಯಸೆನ್ನನ ಈ ಗ್ರಂಥವನ್ನು ಬಿಟ್ಟು ನಡೆವಂತೆಯೆ ಇಲ್ಲ. ಪ್ರೊ. ರಾಧಾಕೃಷ್ಣರು ತಮ್ಮ ಭಾರತೀಯತತ್ವಜ್ಞಾನ ಎಂಬ ಗ್ರಂಥದ ಮೊದಲನೆಯ ಭಾಗದೊಳಗಿಂದ ಉಪನಿಷತ್ತುಗಳ ತತ್ವಜ್ಞಾನವೆಂಬ ಭಾಗವನ್ನು ಎತ್ತಿ ಇತ್ತೀಚೆ ಸ್ವತಂತ್ರವಾಗಿ ಅಚ್ಚುಹಾಕಿಸಿದ್ದಾರೆ. ಪಾಶ್ಚಾತ್ಯ ತತ್ವಜ್ಞಾನದ ಆಳವಾದ ಅಭ್ಯಾಸವನ್ನು ಮಾಡಿದಂತಹರಿಂದ ಸುಂದರವಾಗಿ ಬರೆಯಲ್ಪಟ್ಟ ಲೇಖನವಿದು. ಡಾ. ಬೆಲವಲಕರ ಮತ್ತು ಆರ್. ಡಿ. ರಾನಡೇಯವರು ಕೂಡಿ ಬರೆದ 'ಭಾರತೀಯ ತತ್ವಜ್ಞಾನದೊಳಗಿನ ಉಚ್ಛ್ರೇಯ ಕಾಲ' ಎಂಬ ಗ್ರಂಥದಲ್ಲಿ ಹಲವು ಉಪನಿಷತ್ತುಗಳ ವಿಷಯಗಳು ಕಾಲಾನುಕ್ರಮದಲ್ಲಿ ಕೊಡಲ್ಪಟ್ಟಿವೆ. ಅಲ್ಲದೆ ಆ ಗ್ರಂಥದಲ್ಲಿ ಒಂದು ನೂರು ಸಣ್ಣ ಉಪನಿಷತ್ತುಗಳ ಪರೀಕ್ಷಣ ನಿರೀಕ್ಷಣವಿದೆ. ಈ ನೂರು ಉಪನಿಷತ್ತುಗಳಲ್ಲಿ ಕೆಲವು ಇನ್ನೂ ಭಾಷಾಂತರಿಸಲ್ಪಟ್ಟಿಲ್ಲ; ಇನ್ನು ಕೆಲವು ಈ ವರೆಗೆ ಅಚ್ಚಾಗಿಯೂ ಇಲ್ಲ.

ಉಪನಿಷತ್ತತ್ವಜ್ಞಾನವನ್ನು ಕುರಿತು ಇನ್ನು ಎರಡು ಸುಂದರವಾದ ಪ್ರಬಂಧಗಳುಳ್ಳವು. ಇವುಗಳಲ್ಲಿ ಒಂದು ಓಲ್ತ್ರಾಮಾರನಿಂದ (Oltramare) ಮತ್ತೊಂದು ಓಲ್ಡೆನಬರ್ಗನಿಂದ (Oldenberg) ಬರೆಯಲ್ಪಟ್ಟಿದೆ. ಮೊದಲನೆಯದು ೧೯೦೬ ರಲ್ಲಿ ಪಾರೀಸಿನಲ್ಲಿ ಪ್ರಕಟವಾಗಿದ್ದು ೬೩ ರಿಂದ ೧೩೧ ಪುಟಗಳ ವರೆಗೆ ಫ್ರೆಂಚಭಾಷೆಯಲ್ಲಿ

ಉಪನಿಷತ್ತತ್ವಜ್ಞಾನದ ಪೂರ್ಣ ವಿಚಾರವು ಕೊಡಲ್ಪಟ್ಟಿದೆ. ಓಲ್ಡ್ರಾಮಾರನು ಮೊದಲು ಬ್ರಹ್ಮ, ಜೀವಾತ್ಮ, ಆತ್ಮಪರಮಾತ್ಮಗಳ ಐಕ್ಯ ಈ ಬಗೆಯ ವಿಷಯಗಳನ್ನು ವಿವೇಚಿಸಿದ್ದಾನೆ. ಬಳಿಕ 'ತತ್ವಮಸಿ' ಯ ವಿಚಾರವನ್ನು ಕೊಟ್ಟಿದ್ದಾನೆ. ಬಳಿಕ ಪರಮಾತ್ಮನು ಜೀವಾತ್ಮನಾದುದನ್ನೂ ಜೀವಾತ್ಮ-ಪರಮಾತ್ಮರಿಗೆ ಜಗತ್ತಿನ ಸಂಬಂಧವು ಏನಿದೆಯೆಂಬುದನ್ನೂ ಹೇಳಿದ್ದಾನೆ. ಅಲ್ಲಿಂದ ಸಂಸಾರ ಮತ್ತು ಮೋಕ್ಷಗಳ ವಿಚಾರವನ್ನು ಮಾಡಿದ್ದಾನೆ. ಈ ವಿಷಯಗಳ ವಿವೇಚನೆಯಲ್ಲಿಯೆ ಪುನರ್ಜನ್ಮಚಕ್ರ, ಕರ್ಮವೂ ಮೋಕ್ಷವೂ, ಜ್ಞಾನವೂ ಮೋಕ್ಷವೂ, ಮತ್ತು ಮೋಕ್ಷವೆಂದರೇನು ಎಂಬೀ ಪ್ರಶ್ನೆಗಳ ಚರ್ಚೆಯನ್ನೂ ಮಾಡಿದ್ದಾನೆ. ಕಟ್ಟಕಡೆಗೆ ಉಪನಿಷತ್ತುಗಳೊಳಗಿರುವ ಧರ್ಮವಿಚಾರದ ನವ ಪ್ರವೃತ್ತಿಯನ್ನೂ ಉಪನಿಷತ್ತುಗಳ ಬೌದ್ಧಿಕ ಮತ್ತು ನೈತಿಕ ವರ್ಚಸ್ಸಿನ ಪರೀಕ್ಷಣವನ್ನೂ ಮಾಡಿ ಗ್ರಂಥವನ್ನು ಮುಗಿಸಿರುವನು. ಓಲ್ಡೆನಬರ್ಗನ ಗ್ರಂಥವು ೧೯೧೫ ರಲ್ಲಿ ಗೊಟಿಂಜೆನ್ನಿನಲ್ಲಿ ಪ್ರಕಟವಾಯಿತು. ಇದು ಅವನಂತಹ ವಿದ್ವಾಂಸನ ಕೀರ್ತಿಗೆ ತಕ್ಕಂತಹದೆ ಆಗಿದೆ. ಈ ಗ್ರಂಥದ ಮೊದಲನೆಯ ವಿಭಾಗದಲ್ಲಿ ಹಳೆಯ ಉಪನಿಷತ್ತುಗಳ ವಿವೇಚನೆಮಾಡಿರುವನು. ಎರಡನೆಯ ಭಾಗದಲ್ಲಿ ಹೊಸ ಉಪನಿಷತ್ತುಗಳ ಮತ್ತು ಸಾಂಖ್ಯ ಹಾಗೂ ಯೋಗಗಳ ವಿಚಾರಮಾಡಿರುವನು. ಮೂರನೆಯ ವಿಭಾಗದಲ್ಲಿ ಬೌದ್ಧ ಧರ್ಮಾರಂಭದ ವಿಚಾರಮಾಡಿದ್ದಾನೆ. ಪೀಠಿಕಾ ಪ್ರಕರಣದಲ್ಲಿ ಇಲ್ಲಿಯ ಜನರು, ಅವರ ದೇಶ, ಇತಿಹಾಸ, ಪೂರ್ವಕಾಲದ ಸ್ಥಿತಿ, ವೈದಿಕ ದೇವತೆಗಳು, ಮರಣವೂ ಪರಲೋಕವೂ ಮುಂತಾದ ಈಬಗೆಯ ಸಂಗತಿಗಳ ವಿಚಾರಮಾಡಿ, ಓಲ್ಡೆನಬರ್ಗನು ಬ್ರಹ್ಮ, ಆತ್ಮ, ಮತ್ತು ಬ್ರಹ್ಮಾತ್ಮೈಕ್ಯಗಳ ವಿಚಾರದಲ್ಲಿ ಸೇರಿ ಉಪನಿಷತ್ತಿನ ತಿರುಳಿಗೆ ಕೈಹಾಕಿದ್ದಾನೆ. ಬಳಿಕ ಆತನು ಪರಬ್ರಹ್ಮನ ಸಂಬಂಧವು ಜಗತ್ತಿಗೆ ಆವ ಬಗೆಯಿಂದಿದೆ ಎಂಬ ವಿಚಾರವನ್ನು ಮಾಡಿ ಏಕ ಮತ್ತು ಅನೇಕಗಳ ಅರ್ಥವಿವರಣೆ ಮಾಡಿದ್ದಾನೆ. ತರುವಾಯ ಪರಬ್ರಹ್ಮಸ್ವರೂಪದ, ಸಗುಣನಿರ್ಗುಣಬ್ರಹ್ಮಗಳ ವಿವೇಚನೆಯನ್ನು ನಡೆಸಿದ್ದಾನೆ. ಅನಂತರ ಮೋಕ್ಷ, ಜ್ಞಾನ ಮತ್ತು ಕರ್ಮ, ಬ್ರಹ್ಮಜ್ಞಾನದ ಶಕ್ಯಾಶಕ್ಯತೆ ಈ ಪ್ರಶ್ನೆಗಳ ಚರ್ಚೆಮಾಡಿದ್ದಾನೆ. ಸಾಹಿತ್ಯದ ದೃಷ್ಟಿಯಿಂದ ಉಪನಿಷತ್ತಿನ ವಿಚಾರಮಾಡಿ, ಅದರ ಗದ್ಯ, ಪದ್ಯ, ಸಂವಾದಗಳು ಮುಂತಾದ ಸಂಗತಿಗಳ ಬಗ್ಗೆ ಬರೆದು ಮೊದಲನೆಯ ಭಾಗವನ್ನು ಮುಗಿಸಿದ್ದಾನೆ. ಎರಡನೆಯ ಭಾಗದಲ್ಲಿ ಸಾಂಖ್ಯ ಮತ್ತು ಯೋಗಶಾಸ್ತ್ರಗಳ ಆರಂಭವನ್ನು ಕುರಿತು ವಿವೇಚಿಸಿದ್ದಾನೆ; ಅವರಲ್ಲಿ ಸತ್ವರಜತಮೋಗುಣಗಳು, ಪುರುಷನು, ಪ್ರಕೃತಿಯು, ಪ್ರಾಣಾಯಾಮ, ಆಸನ, ಸಿದ್ಧಿಗಳು ಎಂಬೀ ಬಗೆಯ ಹಲವು ಸಂಗತಿಗಳ ವಿಚಾರಮಾಡಿದ್ದಾನೆ. ಮೂರನೆಯ ಭಾಗದಲ್ಲಿ ಬೌದ್ಧಧರ್ಮದ ಆರಂಭವು ಹೇಗಾಯಿತೆಂಬ ಬಗ್ಗೆ ಸುಮಾರು

೬೦ ಪುಟಗಳಲ್ಲಿ ವಿಸ್ತೃತವಾಗಿ ವಿವೇಚಿಸಿದ್ದಾನೆ. ಓಲ್ಡೆನ್‌ಬರ್ಗರ ಮತ್ತು ಓಲ್ಡೆನಬರ್ಗರ ಗ್ರಂಥಗಳೊಳಗಿನ ಮೇಲ್ಕಾಣಿಸಿದ ವಿಷಯಸೂಚಿಯನ್ನು ನೋಡಿದರೆ ಇವರಿಗೆ ಮೊದಲಿಗನಾದ ಶ್ರೇಷ್ಠಪಂಡಿತ ಡಾಯಸೆನ್ನನ ಗ್ರಂಥದಂತೆಯೆ ಇವರ ಗ್ರಂಥಗಳಾದರೂ ತತ್ತ್ವವಿಚಾರದಿಂದ ತುಂಬಿದವುಗಳೂ ಉಪನಿಷತ್ತಿನ ತಿರುಳಿಗೆ ಕೈಹಾಕಿದಂತಹವುಗಳೂ ಆಗಿವೆಯಷ್ಟೆ. ಆದರೆ ಅವುಗಳು ವಿಧಾಯಕ ರೀತಿಯಲ್ಲಿರದೆ ವಿವರಣಾತ್ಮಕ ರೀತಿಯಿಂದ ಬರೆಯಲ್ಪಟ್ಟಿವೆ; ಅವು ಪ್ರಾಚೀನ ತತ್ತ್ವಜ್ಞಾನದ ದೃಷ್ಟಿಯಿಂದ ರಚಿಸಲ್ಪಟ್ಟಿವೆ. ಇದರ ಮೇಲಿಂದ ಆಧುನಿಕ ತತ್ತ್ವಜ್ಞಾನದ ದೃಷ್ಟಿಯಿಂದ ಉಪನಿಷತ್ತತ್ತ್ವವಿಚಾರಗಳನ್ನು ವಿಧಾಯಕವಾಗಿ ನಿರೀಕ್ಷಿಸಿ ಪರೀಕ್ಷಿಸಿ ಬರೆಯುವದು ಈಗ ಎಷ್ಟು ಅತ್ಯಾವಶ್ಯಕವಾಗಿತ್ತೆಂಬುದು ಸಹಜವಾಗಿ ಕಂಡುಬರುವಂತಿರುವದು. ಆ ಕೊರತೆಯನ್ನು ಈ ಗ್ರಂಥವು ಎಷ್ಟರಮಟ್ಟಿಗೆ ಪೂರೈಸಿದೆ ಎಂಬುದನ್ನು ವಾಚಕರೇ ಅರಿತಿರುವರು.

## ೭. ಕನ್ನಡದಲ್ಲಿ ಉಪನಿಷತ್ತುಗಳು

ಇನ್ನು ಕನ್ನಡದಲ್ಲಿ ಆದ ಉಪನಿಷತ್ತುಗಳನ್ನು ಉಲ್ಲೇಖಿಸಿ ಈ ಪ್ರಕರಣವನ್ನು ಮುಗಿಸಬೇಕಾಗಿದೆ. ಇದುವರೆಗೆ ಆದ ಎಲ್ಲ ಕನ್ನಡ ಪುಸ್ತಕಗಳು ನಮಗೆ ದೊರೆತಿಲ್ಲ. ನಮಗೆ ನೋಡಲಿಕ್ಕೆ ದೊರೆತವುಗಳನ್ನು ಮಾತ್ರ ನಾವು ಇಲ್ಲಿ ಉಲ್ಲೇಖಿಸಿದ್ದೇವೆ. ಕನ್ನಡಿಸಲ್ಪಟ್ಟ ಉಪನಿಷತ್ತುಗಳಲ್ಲಿ ಬಹುಶಃ ಎಲ್ಲವೂ ದ್ವೈತ ಅದ್ವೈತ ವಿಶಿಷ್ಟಾದ್ವೈತಗಳಲ್ಲಿ ಯಾವದೊಂದು ಸಾಂಪ್ರದಾಯಕ್ಕೆ ಅನುಸರಿಸಿದವುಗಳೇ ಇರುವವು. ಅವುಗಳಲ್ಲಿ ವಿಮರ್ಶಾತ್ಮಕವಾದ ಅಥವಾ ಐತಿಹಾಸಿಕ ದೃಷ್ಟಿಯಿಂದ ಬರೆದ ಗ್ರಂಥಗಳು ಇಲ್ಲವೇ ಇಲ್ಲವೆಂದರೂ ಸಲ್ಲುವದು. ಉಪನಿಷತ್ತುಗಳು ಶ್ರುತಿಗಳು ; ಅಂದಮೇಲೆ ಅವುಗಳಬಗ್ಗೆ ವಿಮರ್ಶಾತ್ಮಕವಾಗಿ ಅಥವಾ ಟೀಕಾತ್ಮಕವಾಗಿ ಅಥವಾ ಚರ್ಚಾತ್ಮಕವಾಗಿ ಬರೆಯುವದು ಅಸಂಗತವೆಂದು ಹಾಗೆ ಬರೆಯುವದನ್ನು ವಿದ್ವಾಂಸರು ಬಿಟ್ಟಿರುವರೆಂಬದು ಸ್ಪಷ್ಟವಿದೆ. ಶ್ರುತಿಗಳನ್ನು ಕನ್ನಡಿಸಕೂಡದು, ಯಾವ ಪ್ರಾಕೃತ ಭಾಷೆಯಲ್ಲಿಯೂ ಅವುಗಳನ್ನು ಬರೆಯಕೂಡದು, ಎಂಬ ನಿರ್ಬಂಧವಾದರೂ ಕನ್ನಡದಲ್ಲಿ ಸಾಕಷ್ಟು ಪರಿವರ್ತನೆಗಳಾಗದಿರುವುದಕ್ಕೆ ಕಾರಣವಾಗಿರಬೇಕೆಂದು ನಮ್ಮ ಊಹೆಯು.

ಈ ಗ್ರಂಥದಲ್ಲಿ ಮುಖ್ಯವಾದವುಗಳೆಂದು ಹೇಳಿದ ೧೩ ಉಪನಿಷತ್ತುಗಳು ಅಥವಾ ಪ್ರಾಯಃ ಮುಖ್ಯವೆಂದು ಭಾವಿಸಲ್ಪಟ್ಟ ದಶೋಪನಿಷತ್ತುಗಳು ಎಲ್ಲವೂ ಕನ್ನಡದಲ್ಲಿ

ಚನ್ನಾಗಿ ಕನ್ನಡಿಸಲ್ಪಟ್ಟು ಅಂದವಾಗಿ ಒಂದೇ ಗ್ರಂಥದಲ್ಲಿ ಇನ್ನೂ ಅಚ್ಚಾಗದೆ ಇರುವುದು ಶೋಚನೀಯವೆ ಸೈ. ಈ ತರದ ಪ್ರಯತ್ನಗಳೇನೋ ಆಗಿವೆ. ಆದರೆ ಅವು ಯಾವೂ ಪೂರ್ಣವಾಗಿ ಕೊನೆಗಂಡಂತೆ ಕಾಣುವುದಿಲ್ಲ. ಇರಲಿ. ಇನ್ನು ಆದ ಪ್ರಯತ್ನಗಳನ್ನಷ್ಟು ಉಲ್ಲೇಖಿಸುವ.

( ೧ ) ಶ್ರೀ. ದೊಡ್ಡಬೆಲೆ ನಾರಾಯಣ ಶಾಸ್ತ್ರಿಯವರು ಪರಿಷ್ಕರಿಸಿದ ' ಶ್ರೀಮದ್ದ ಶೋಪನಿಷದಃ ' ಎಂಬ ಹತ್ತು ಉಪನಿಷತ್ತುಗಳು ಕನ್ನಡಲಿಪಿಯಲ್ಲಿ ೧೯೧೨ ರಲ್ಲಿ ಪ್ರಕಟವಾಗಿವೆ. ಮೂಲ ಮಂತ್ರಗಳು ಮಾತ್ರ ಅದರಲ್ಲಿವೆ. ಇದೇ ಗ್ರಂಥಕರ್ತರು ಈಶ ಕೇನ ಕಠೋಪನಿಷತ್ತಾತ್ಪರ್ಯ-ಸಾರ ಮತ್ತು ಪ್ರಶ್ನ ಮುಂಡಕ ಶಿಕ್ಷಾವಲ್ಲಿಯ ತಾತ್ಪರ್ಯ ಸಾರ ಎಂಬ ಎರಡು ಗ್ರಂಥಗಳನ್ನು ಸಮೂಲ, ಕನ್ನಡ ಅರ್ಥಸಹಿತ ಪ್ರಕಟಮಾಡಿದ್ದಾರೆ.

( ೨ ) ಬೆಂಗಳೂರಿನ ಶ್ರೀ. ವೈ. ಸುಬ್ಬರಾವ್ ಎಂಬವರು ಅಧ್ಯಾತ್ಮಪ್ರಕಾಶ ಎಂಬ ಹೆಸರಿನಿಂದ ಒಂದು ಗ್ರಂಥಾವಳಿಯನ್ನು ಹೊರಡಿಸಿ ಈಶ, ಮುಂಡಕ, ಮಾಂಡೂಕ್ಯ ಮತ್ತು ಪ್ರಶ್ನ ಉಪನಿಷತ್ತುಗಳನ್ನು ಹೊರಡಿಸಿದ್ದಾರೆ. ಇವುಗಳಲ್ಲಿ ಸಂಸ್ಕೃತ ಮೂಲ, ಕನ್ನಡ ಅರ್ಥ, ಶಾಂಕರಭಾಷ್ಯದ ಅನುವಾದ, ಅಡಿಯಲ್ಲಿ ಟಿಪ್ಪಣಿಗಳು, ಸಾರಾಂಶ ಇಷ್ಟು ವಿಷಯಗಳಿರುವವು. ಮಾಂಡೂಕ್ಯದಲ್ಲಿ ಗೌಡಪಾದೀಯ ಕಾರಿಕೆಯ ಆಗಮ ಪ್ರಕರಣವೂ ಅದರ ಅರ್ಥವೂ ಇರುವದು. ಇದೆಲ್ಲವೂ ಕನ್ನಡ ಲಿಪಿಯಲ್ಲಿಯೇ ಇರುವದು. ಮುಂದೆ ಉಳಿದ ಎಲ್ಲ ಉಪನಿಷತ್ತುಗಳನ್ನೂ ಈ ಪ್ರಕಾರ ಹೊರಡಿಸುವವರಿದ್ದಾರೆಂದು ತೋರುವದು.

( ೩ ) ಕುಂಭಕೋಣದ ಶ್ರೀ. ಟೀ. ಆರ್. ಕೃಷ್ಣಾಚಾರ್ಯರು ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೀಯ ಉಪನಿಷತ್ತುಗಳನ್ನು ಮಧ್ವ ಮತಾನುಸಾರವಾಗಿ ಕನ್ನಡಿಸಿ ಪ್ರಕಟಿಸಿದ್ದಾರೆ. ಛಾಂದೋಗ್ಯ ಬೃಹದಾರಣ್ಯಕಗಳನ್ನು ಕನ್ನಡಿಸಿದಂತೆ ಕಂಡುಬರುವದಿಲ್ಲ. ಅಲ್ಲಿಯೇ ಇರುವ ಮಧ್ವವಿಲಾಸ ಬುಕ್‌ಡಿಪೋದಲ್ಲಿ ಆ ಗ್ರಂಥಗಳು ದೊರೆಯುವವೆಂದು ತಿಳಿಯುತ್ತಿದೆ.

( ೪ ) ಬ್ರಹ್ಮೋಪನಿಷತ್ತು ಮತ್ತು ಕೈವಲ್ಯೋಪನಿಷತ್ತು ಮೂಲ, ತಾತ್ಪರ್ಯ ಸಹಿತ. ಇವುಗಳನ್ನು ಶ್ರೀ. ಕ. ಶಿ. ಸಿದ್ದಪ್ಪಾಜಿಸ್ವಾಮಿಯವರು ಬರೆದು ಪ್ರಸಿದ್ಧಮಾಡಿರುವರು. ಇವು ತೀರ ಚಿಕ್ಕವಿದ್ದು ಅಚ್ಚು ಅಷ್ಟೊಂದು ಚನ್ನಾಗಿಲ್ಲ. ಡೆಮಿ ಅಷ್ಟಾಂಶ ೧೬ ಪುಟ ಮಾತ್ರ ಇರುವವು. ಆದರೆ ಇನ್ನಾರೂ ಈ ಎರಡು ಉಪನಿಷತ್ತುಗಳನ್ನು ಕನ್ನಡಿಸಿದಂತೆ ತೋರುವದಿಲ್ಲ.

( ೫ ) ಅಗಡಿಯ ( ಹಾವೇರಿ ) ಶ್ರೀ. ವಾಯ್. ಜಿ. ಕುಲಕರ್ಣಿಯವರು ಈಶಾವಾಸ್ಯೋಪನಿಷತ್ತನ್ನು ಮೂಲ, ಸಭಾಷ್ಯಾರ್ಥ ( ಶಾಂಕರ ), ರಾಮಚಂದ್ರ ಪಂಡಿತ ಮತ್ತು ಅನಂತಾಚಾರ್ಯರ ಟೀಕೆ ಸಹಿತ ಕನ್ನಡದಲ್ಲಿ ಅಂದವಾಗಿ ಪ್ರಕಟಿಸಿದ್ದಾರೆ. ಮೂಲವನ್ನು ಕನ್ನಡ ಹಾಗೂ ನಾಗರೀ ಲಿಪಿಯಲ್ಲಿ ಅಚ್ಚು ಹಾಕಿಸಿದ್ದಾರೆ. ಇದೇರೀತಿ ಬೇರೆ ಉಪನಿಷತ್ತುಗಳನ್ನಾದರೂ ಇವರು ಅಚ್ಚು ಹಾಕಿಸಿದರೆ ಕನ್ನಡಿಗರು ಉಪಕೃತ ರಾಗುವರು.

( ೬ ) ಮೈಸೂರ ಟ್ರೇನಿಂಗಕಾಲೇಜದಲ್ಲಿ ಸಂಸ್ಕೃತ ಪಂಡಿತರಿದ್ದ ಸಾಲಿಗ್ರಾಮ ನಾರಾಯಣಶಾಸ್ತ್ರಿಗಳು ಕಠಕ್ಕೆ ಒಂದು ಕನ್ನಡ ಅನುವಾದವನ್ನು ಬರೆದಿರುವರು.

( ೭ ) ಬೆಂಗಳೂರಿನ ಭಕ್ತಬಂಧು ಕಾರ್ಯಾಲಯದ ಶ್ರೀ. ಹೊಸಕೆರೆ ಚಿದಂಬ ರಯ್ಯನವರು ಈಶಾವಾಸ್ಯದ ಶಾಂಕರಭಾಷ್ಯಾನುವಾದವನ್ನು ಅಚ್ಚು ಹಾಕಿಸಿದ್ದಾರೆ. ಮಾಂಡೂಕ್ಯ ಭಾಷ್ಯವನ್ನೂ ಕನ್ನಡಿಸಿದ್ದಾರೆ. ಇವು ಚಿಕ್ಕವಾಗಿ ಸಂಗ್ರಾಹ್ಯವಾಗಿವೆ.

( ೮ ) ಬಳ್ಳಾರಿ ಜಿಲ್ಹೆಯಲ್ಲಿಯ ಚಾಕುಬಂಡೆಯ ಶ್ರೀ. ಎಂ. ಎಸ್. ಸುಬ್ಬಣ್ಣ ಎಂಬವರು ಛಾಂದೋಗ್ಯೋಪನಿಷತ್ತಿನ ೬ ನೆಯ ಅಧ್ಯಾಯದ ಸಾರವನ್ನು ' ಶಿವಾನು ಬೋಧೆ ' ಎಂಬ ಚಿಕ್ಕ ಗ್ರಂಥದಲ್ಲಿ ಪದ್ಯರೂಪವಾಗಿ ಬರೆದಿದ್ದಾರೆ. ನಿಜಗುಣಶಿವ ಯೋಗಿಗಳ ಪರಮಾನುಭವ ಬೋಧೆಯ ಸ್ವರದಂತೆ ಸ್ವರಗಳಿರುವವು. ಕ್ರೌನ ಅಷ್ಟಾಂಶ ದಷ್ಟಿದ್ದು ೧೦೨ ಪುಟಗಳಿರುವವು.

( ೯ ) ಧಾರವಾಡದ ಶ್ರೀ. ದಿವಾಕರ ರಂಗನಾಥರಾಯರು ' ಉಪನಿಷತ್ಪ್ರಕಾಶ ' ಎಂಬ ಎರಡು ಭಾಗಗಳನ್ನು ಇತ್ತೀಚೆ ೧೯೨೭ ರಲ್ಲಿ ಪ್ರಕಟಿಸಿದ್ದಾರೆ. ೧ ನೆಯ ಭಾಗ ದಲ್ಲಿ ಈಶ, ಕೇನ, ಕಠ, ಪ್ರಶ್ನ, ಮಾಂಡೂಕ್ಯಗಳನ್ನೂ ೨ ನೆಯ ಭಾಗದಲ್ಲಿ ಮುಂಡಕ, ಐತರೇಯ, ತೈತ್ತಿರೀಯಗಳನ್ನೂ ಅಚ್ಚು ಹಾಕಿಸಿದ್ದಾರೆ. ಪ್ರತಿ ಉಪನಿಷತ್ತಿನ ಸಾರಾಂಶ, ಮೂಲಮಂತ್ರ, ಅರ್ಥ, ನಾಲ್ಕು ನುಡಿಗಳು, ಕಠಿಣಶಬ್ದಾರ್ಥ ಇಷ್ಟು ವಿಷಯ ಗಳಿರುವುದಲ್ಲದೆ ೨ ನೆಯ ಭಾಗದ ಆದಿಗೆ ಒಂದು ವಿಸ್ತೃತವಾದ ಪ್ರಸ್ತಾವನೆ ಇರು ವದು. ಒಟ್ಟು ಪುಟಸಂಖ್ಯೆ ಸುಮಾರು ೪೦೦ ಕ್ರೌನ ಅಷ್ಟಾಂಶ ಇರುವದು. ಈ ಗ್ರಂಥವು ಯಾವ ಸಾಂಪ್ರದಾಯಕ್ಕೂ ಸೇರದೆ ಸರಲಾರ್ಥವನ್ನು ಕೊಡಲು ಯತ್ನಿಸುತ್ತಿದೆ.

ಮೇಲ್ಕಾಣಿಸಿದ ಬಹುಶಃ ಎಲ್ಲ ಕನ್ನಡ ಗ್ರಂಥಗಳು ಧಾರವಾಡದ ಶಂಕರ ಕರ್ನಾ ಟಕ ಪುಸ್ತಕ ಭಾಂಡಾರದಲ್ಲಿ ಮತ್ತು ' ಉಪನಿಷತ್ಪ್ರಕಾಶ ' ಭಾಗ ೧, ೨ ಇವು ದಿವಾಕರ, ಧಾರವಾಡ ಇವರಲ್ಲಿ ಮಾರಲಿಕ್ಕೆ ದೊರೆಯುವವು.

---

# ಉಪನಿಷತ್-ರಹಸ್ಯದ ಶಬ್ದಕೋಶವು

**ಟೀಪು:—** ಉಪನಿಷತ್ತುಗಳಲ್ಲಿಯ ವೇದಾಂತ-ತತ್ವಜ್ಞಾನವನ್ನು ಪಾಶ್ಚಾತ್ಯ ತತ್ವಜ್ಞಾನಕ್ಕೆ ಹೋಲಿಸಿ ಬರೆಯುವಾಗ ಆಧುನಿಕ ಪರಿಭಾಷೆಯನ್ನು ಉಪಯೋಗಿಸುವ ಪ್ರಸಂಗವು ಬಂದಿರುವದು. ಆದುದರಿಂದ ಕೆಲವು ಹೊಸಶಬ್ದಗಳನ್ನು ಉಪಯೋಗಿಸಬೇಕಾಗಿರುವದಲ್ಲವೆ ಹಲವು ಹಳೆಯ ಶಬ್ದಗಳನ್ನು ಹೊಸ ಅರ್ಥದಲ್ಲಿ ಪ್ರಯೋಗಿಸಬೇಕಾಗಿರುವದು. ಅಂಥ ಶಬ್ದಗಳು ಬಂದಲ್ಲಿ ಆವಷ್ಟುಮಟ್ಟಿಗೆ ಅಲ್ಲಿಯೇ ಸ್ಪಷ್ಟವಾದ ವಿವೇಚನೆಯನ್ನು ಕೊಟ್ಟುಬಿಟ್ಟದ್ದೇವೆ. ಆದರೂ ಕೆಲವು ಹಾಗೆಯೇ ಉಳಿದಿರಬಹುದು. ಅಂಥವುಗಳನ್ನೆಲ್ಲ ಇಲ್ಲಿಕೊಟ್ಟು ಅವುಗಳಿಗೆ ಅರ್ಥಗಳನ್ನು ಕೊಟ್ಟದ್ದೇವೆ. ಇದಲ್ಲದೆ ಅವಶ್ಯ ಕಂಡಲ್ಲಿ ಕೆಲವು ಟಿಪ್ಪಣಿಗಳನ್ನೂ ಕೊಟ್ಟದ್ದೇವೆ. ಶಬ್ದಗಳನ್ನು ಅಕ್ಷರಾನುಕ್ರಮದಿಂದ ಕೊಟ್ಟದ್ದೇವೆ.

**ಅನುವಾದಕರು.**

**ಅಜಾತವಾದವು**–ಜಗತ್ತು ನಿರ್ಮಾಣವೇ ಆಗಿಲ್ಲ ಹುಟ್ಟೇಇಲ್ಲ ಎಂಬ ವಾದವು.

ಅಟಮಟಿಗ–ಸುಳ್ಳುಗಾರ, ದಾಂಭಿಕ.

ಅತಿಪ್ರಶ್ನೆ–ಅಳತೆಗೆಟ್ಟಪ್ರಶ್ನೆ, ಮಿತಿಮೀರಿದ ಪ್ರಶ್ನೆ,

ಅತಿವಾದ–ಅತೀತವಾದ, ಸದ್ವಸ್ತುವು ಎಲ್ಲಕ್ಕೂ ಅತೀತವಿರುವದೆಂಬ ವಾದವು( trans–cendentalism )

ಅತಿಚೇತನಾವಸ್ಥೆ–ಸಾಮಾನ್ಯ ಚೇತನವಡಗಿ ಆತ್ಮಪ್ರತ್ಯಯವು ಮಾತ್ರ ಇರುವ ಅವಸ್ಥೆ.

ಅನುಭವಜನ್ಯ ಮಾನಸಶಾಸ್ತ್ರವು–ಮನುಷ್ಯನ ಅನುಭವಕ್ಕೆ ಬರುವ ಭಯಾದಿ ಮನೋವೃತ್ತಿ, ಸ್ಮೃತ್ಯಾದಿ ಮನೋವಿಭಾಗ ಇವುಗಳನ್ನು ವಿಚಾರಿಸುವ ಶಾಸ್ತ್ರವು.

ಅನುಪಾದಕ ಶರೀರ–ರಕ್ಷಕ ಶರೀರ, ಥಿಯಾಸಫಿಸ್ಟರ ಸಪ್ತಶರೀರಗಳಲ್ಲಿ ಒಂದು.

ಅನಾಹುತವು–ಅಕಸ್ಮಾತ್ತಾಗಿ ಬಂದ ದುರ್ಧರ ಪ್ರಸಂಗವು.

ಅನಿರ್ದೇಶ್ಯ–ಇಂತಹದೆಂದು ತೋರಿಸಲಿಕ್ಕೆ ಬಾರದ.

ಅಪರೋಕ್ಷ ಜ್ಞಾನವು–ಪರಮಾತ್ಮನ ಜ್ಞಾನವು, ಆತ್ಮಸಾಕ್ಷಾತ್ಕಾರವು.

ಅಪಾನ–ನಾವು ಒಳಗೆಳೆಕೊಳ್ಳುವ ಉಸುರು, ಹೊರಗೆ ಬಿಡುವುದಕ್ಕೆ ಪ್ರಾಣವೆನ್ನುವರು.

ಅಪರಾವಿದ್ಯೆ–ಆತ್ಮವಿದ್ಯೆ ಬಿಟ್ಟು ಮಿಕ್ಕ ಎಲ್ಲ ವಿದ್ಯೆಗಳು, ಆತ್ಮವಿದ್ಯೆಯೆ ಪರಾವಿದ್ಯೆ.

ಅನುಭಾವ, ಅನುಭಾವಿ, ಅನುಭಾವವಾದವು–ಸತ್ಯದ ಸಾಕ್ಷಾತ್ಕಾರವೆ ಆತ್ಮಸಾಕ್ಷಾತ್ಕಾರವೆ ಅನುಭಾವವು. ಅಂಥ ಸಾಕ್ಷಾತ್ಕಾರವಿದ್ದವನು ಅನುಭಾವಿಯು. ಅಂಥ ಸಾಕ್ಷಾತ್ಕಾರವೆ ಎಲ್ಲಕ್ಕೂ ಶ್ರೇಷ್ಠಜ್ಞಾನವು ಎಂಬುದೆ ಅನುಭಾವವಾದವು. ಇದಕ್ಕೆ ಇಂಗ್ಲೀಷಿನಲ್ಲಿ mysticism ಅಥವಾ doctrine of self-realisation ಎಂದೆನ್ನಬಹುದು.

ಅಯಾಚಿತ ವ್ರತ–ಯಾರನ್ನೂ ಏನೂ ಬೇಡದೆ ಯದೃಚ್ಛೆಯಿಂದ ಪ್ರಾಪ್ತವಾದುದನ್ನೆ ಸ್ವೀಕರಿಸಿ ಸಂತುಷ್ಟವಿರುವ ವ್ರತವು.

ಅರಿಸ್ಟಾಟಲ್–ಪ್ರಸಿದ್ಧ ಗ್ರೀಕ ದಾರ್ಶನಿಕನು (ಕ್ರಿ. ಶ. ಪೂ. ೩೮೪–೩೨೨).

ಅರಣಿ–ಯಜ್ಞಕ್ಕೆ ಬೇಕಾದ ಅಗ್ನಿಯನ್ನು ಒಂದಕ್ಕೊಂದು ತಿಕ್ಕಿ ಉತ್ಪನ್ನಮಾಡುವ ಕಟ್ಟಿಗೆಯ ಎರಡು ತುಂಡುಗಳು.

ಅರಿತ ಅಜ್ಞಾನಿ–ಅರಿತು ಅರಿಯದಂತೆ ಇದ್ದವನು.

ಅವಿದ್ಯೆ–ಇಂದ್ರಿಯಗೋಚರ ಸೃಷ್ಟಿಯ ಜ್ಞಾನ, ಅಥವಾ ಕರ್ಮ.

ಅಸದ್ವಾದವು–ಅಸತ್ ಅಥವಾ ಶೂನ್ಯ ಎಂಬುದೆ ವಿಶ್ವದ ಆದಿಯು ಎಂಬ ವಾದವು.

ಅಸಾಧಾರಣ ಮಾನಸಶಾಸ್ತ್ರವು–ನಿದ್ರೆ, ಹುಚ್ಚು, ಸ್ವಪ್ನ ಮುಂತಾದ ಮನಸ್ಸಿನ ಅಸಾಧಾರಣ ಅವಸ್ಥೆಗಳನ್ನು ವಿಚಾರಿಸುವ ಶಾಸ್ತ್ರವು.

ಅಸಂಭೂತಿ–ನಾಶವಂತವಾದ ಈ ಸೃಷ್ಟಿ.

ಅಜ್ಞೇಯವಾದವು–ಪರಮಾತ್ಮನ ಸ್ವರೂಪವು ಯಥಾರ್ಥವಾಗಿ ಮನುಷ್ಯನಿಗೆ ಗೋಚರವಾಗುವದಶಕ್ಯವು ಎಂಬ ವಾದವು.

ಅಟ್ರಿಬ್ಯೂಟ್ಸ್–ಗುಣಗಳು, ಲಕ್ಷಣಗಳು.

ಅನ್ನ–ತಿನ್ನಲಿಕ್ಕೆ ಯೋಗ್ಯವಾದ ವಸ್ತು, ಈ ಜಡಸೃಷ್ಟಿ.

ಅನ್ವಾಹಾರ್ಯಪಚನ–ಅಗ್ನಿಹೋತ್ರಿಗಳ ದಕ್ಷಿಣಾಗ್ನಿ. ಅಮಾವಾಸ್ಯೆಗೆ ಮಾಡತಕ್ಕ ಪಿತೃಶ್ರಾದ್ಧದ ಆಹುತಿಗಳು ಈ ಅಗ್ನಿಯಲ್ಲಿ ಕೊಡಲ್ಪಡುತ್ತಿವೆ.

ಅರ್ಚಿರ್ಮಾರ್ಗ–ದೇವಯಾನ, ಸೂರ್ಯಲೋಕದ ಮಾರ್ಗ, ಪ್ರಕಾಶಮಾರ್ಗ.

ಅಂತರಾದೇಶ–ಅಂತರಾತ್ಮನ ಅಪ್ಪಣೆಗಳು.

ಅಂಡಜ–ಮೊದಲು ತತ್ತಿಯಾಗಿ ಆ ತತ್ತಿಯಿಂದ ಉತ್ಪನ್ನವಾಗುವ ಜೀವಕೋಟಿ.

ಆತ್ಮೈಕಾಕಿತ್ವವಾದವು–'ನಮ್ಮ' ಹೊರ್ತು ಹೊರಗಿನದೇನೂ ನಮಗೆ ತಿಳಿಯುವದಶಕ್ಯವು ಎಂಬ ವಾದವು.

ಆದಿ ಶರೀರ–ಮೂಲ, ಮೊದಲಿನ ಶರೀರ. ಥಿಯಾಸಫಿಸ್ಟರ ಸಪ್ತಶರೀರಗಳಲ್ಲಿ ಒಂದು.
ಆಧ್ಯಾತ್ಮಿಕ–ಶರೀರಾಂತರ್ಗತ ಶಕ್ತಿಗೆ ಸಂಬಂಧಿಸಿದ ಅಥವಾ ಆತ್ಮನಿಗೆ ಸಂಬಂಧಿಸಿದ.
ಆಧಿದೈವಿಕ–ನಿಸರ್ಗಶಕ್ತಿಗಳಿಗೆ ಸಂಬಂಧಿಸಿದ ಅಥವಾ ದೇವತೆಗಳಿಗೆ ಸಂಬಂಧಿಸಿದ.
ಆನಂದವಾದವು–ಆತ್ಮನ ಆನಂದವೇ ಎಲ್ಲಕ್ಕೂ ಹೆಚ್ಚಿನದೆಂಬ ವಾದವು.
ಆನಂದತೀರ್ಥರು -ಮಧ್ವಾಚಾರ್ಯರು.
ಆಭಾಸ–ಕೇವಲ ಸುಳ್ಳು ತೋರಿಕೆ.
ಆಯ್ಕೆ–ಆರಿಸುವಿಕೆ.
ಆರಣ್ಯಕ–ಬ್ರಾಹ್ಮಣ ಗ್ರಂಥಗಳಲ್ಲಿಯ ಧಾರ್ಮಿಕ ಮತ್ತು ತಾತ್ವಿಕ ಭಾಗಗಳು. ಅರಣ್ಯದಲ್ಲಿ ಹೇಳಲ್ಪಟ್ಟಿರುವುದರಿಂದ ಅಥವಾ ಅರಣ್ಯದಲ್ಲಿದ್ದು ಓದತಕ್ಕವಾದವುಗಳೆಂದು ಆರಣ್ಯಕಗಳೆನಿಸುವವು.
ಆರ್ಜವ–ಸರಲತೆ, ಪ್ರಾಮಾಣಿಕತನ.
ಆರ್ತವು–ನಾಶವುಳ್ಳದ್ದು, ದುಃಖಮಯವು.
ಆರ್ಷ–ಋಷಿಗಳು ಹೇಳಿದ. ಅತ್ಯಂತಪ್ರಾಚೀನ
ಆಹವನೀಯ–ಅಗ್ನಿಹೋತ್ರಿಗಳ ಪೂರ್ವಾಗ್ನಿ. ಹವನಕ್ಕೆ ಯೋಗ್ಯವಾದುದರಿಂದ ಆಹವನೀಯವೆನಿಸುವದು. ಇದು ದಿನಾಲು ಗಾರ್ಹಪತ್ಯ ಅಗ್ನಿಯಿಂದ ಹೊತ್ತಿಸಲ್ಪಡುವದು.
ಆಹಿತಾಗ್ನಿ– ಅಗ್ನಿಹೋತ್ರಿ.

**ಇತಿ, ನೇತಿ**–ಹಾಗಿದೆ, ಹೀಗಿದೆ ಎಂದು ಹೇಳುವದು ಪರಮಾತ್ಮನ ಇತಿ-ವರ್ಣನೆಯು. ಹಾಗಿಲ್ಲ, ಹೀಗಿಲ್ಲ ಎಂದು ನಕಾರಾರ್ಥವಾಗಿ ಹೇಳುವದು ನೇತಿ-ವರ್ಣನೆಯು.
ಇರುಳುಹಕ್ಕಿ–ಇರುಳು ಹಾಡುವ 'ನಾಯಿಟಿಂಗೇಲ' ಎಂಬ ಯುರೋಪದ ಪಕ್ಷಿವಿಶೇಷವು.

**ಉದ್ಗೀಥ**–ಸಾಮಗಾಯನವು, ಓಂಕಾರದ ಗಾಯನವು.
ಉದ್ಭಿಜ್ಜ–ವನಸ್ಪತಿಗಳು ( ನೆಲವನ್ನು ಒಡೆದು ಮೇಲೆ ಬೆಳೆಯುವವರಿಂದ ).
ಉನ್ಮನಿ ಅವಸ್ಥೆ–ಪರಮಾತ್ಮನನ್ನು ಕಾಣಬೇಕೆಂದು ಅತ್ಯಂತ ಆತುರನಿರುವ ಜೀವಾತ್ಮನ ತಲ್ಲೀನ ಅವಸ್ಥೆ. ಕೇವಲ ಪರಮಾನಂದದ ಸ್ಥಿತಿ.
ಉಪಯೋಗವಾದ–ಪ್ರತ್ಯಕ್ಷ ಲೌಕಿಕ ಉಪಯೋಗವೆ ತತ್ವಜ್ಞಾನಗಳ ನಿಜವಾದ ಒರೆ ಎಂಬ ತತ್ವದ ಪ್ರತಿಪಾದನವು.
ಉಪಾದಾನ ಕಾರಣವು–ಮಣ್ಣು ಮಡಿಕೆಯ ಕಾರಣವಿದ್ದಂತೆ (material cause).
**ಊಳಿಗರು**–ಸೇವಕರು, ತೊತ್ತುಗಳು, ಕೂಲಿಯಿಂದ ಕೆಲಸಮಾಡುವವರು.

**ಋಣವಿದ್ಯುತ್ತು**–ನೈಸರ್ಗಿಕವಾಗಿರುವ ಎರಡು ವಿದ್ಯುತ್ಪ್ರವಾಹಗಳಲ್ಲಿ ಎರಡನೆಯದು.

**ಏಕದೇವತಾಪ್ರಧಾನ** ಅನೇಕದೇವತಾವಾದವು–ಅನೇಕದೇವತೆಗಳಿದ್ದರೂ ಅವುಗಳಲ್ಲಿ ಪುನಃ ಒಂದೇ ದೇವತೆಗೆ ಸರ್ವ ಶ್ರೇಷ್ಠತ್ವವನ್ನು ಕೊಟ್ಟು ಆ ದೇವತೆಯಿಂದ ಮಿಕ್ಕವರ ಇರವು ಎಂಬ ಪ್ರತಿಪಾದನೆಯು.

**ಒಗ್ಗಯ್ಯ**–ಮೈಮುರೆತು ಕುಣಿದಾಡಿ ಹಾಡುವ ಮೈಲಾರಲಿಂಗನ ಭಕ್ತ.

ಒಡನುಡಿಯುವ ಗುಡಿ–ದೇವವಾಣಿಯಾಗುವ ಗುಡಿ ( oracle ).

ಒಡಪು–ಒಗಟು, ಗೂಢಪ್ರಶ್ನೆ.

**ಓತಪ್ರೋತ**–ಸಂಪೂರ್ಣವ್ಯಾಪ್ತ, ಬಟ್ಟೆಯಲ್ಲಿ ಅಡ್ಡ ಉದ್ದ ಎಳೆಗಳನ್ನು ನೇಯ್ದುದಕ್ಕೆ ಓತಪ್ರೋತವೆನ್ನುವರು.

**ಔರ್ಧ್ವದೇಹಿಕ**–ಮನುಷ್ಯನ ದೇಹಪಾತವಾದ ನಂತರ ಅವನಿಗೆ ಸಂಬಂಧಿಸಿದ.

**ಕಗ್ಗ**–ರಗಳೆ, ಹಾಳಹರಟೆ.

ಕರ್ಮಮುಕ್ತಿ–ಜೀವಾತ್ಮನು ಕರ್ಮದಿಂದ ಮುಕ್ತನಾಗಿ ಪರಮಾತ್ಮನಲ್ಲಿರುವದು.

ಕಲ್ಪನಾ ಸಿದ್ಧಾಂತವು–ಮೂಲತಃ ಶುದ್ಧ ಪೂರ್ಣಕಲ್ಪನೆಗಳಿರುವುವು, ಅವುಗಳ ಅಪೂರ್ಣ ಪ್ರತಿಬಿಂಬವೆ ಈ ಸೃಷ್ಟಿಯಾಗಿ ಪರಿಣಮಿಸುವದು ಎಂಬ ಪ್ಲೇಟೋನ ಸಿದ್ಧಾಂತವು.

ಕವಲು–ಟೊಂಗೆ ಟಿಸಳು, ಶಾಖೆಗಳು.

ಕಂತಿಶರಣಮ್ಮ–ಬ್ರಹ್ಮಚರ್ಯದಿಂದಿರುವ ಭಿಕ್ಷುಕಿಯರು.

ಕಾರಿಬ್ಯಾಂಟಿಸ್–ಗ್ರೀಸದಲ್ಲಿ ‘ ಸಿಬೇಲಿ ’ ದೇವತೆಯ ಅರ್ಚಕರು. ಅವರಾವರೂ ದೇವರು ಮೈಯಲ್ಲಿ ಬಂದಾಗ ಮೈಮುರೆತು ಹಾಡುವರು ಕುಣಿಯುವರು.

ಕಿಡುಕ–ಕೆಡಕುಮಾಡುವವ.

ಕಿರಣವಕ್ರೀಕರಣ–ನೀರಲ್ಲಿಟ್ಟ ಪದಾರ್ಥಗಳು ಇದ್ದಕ್ಕಿದ್ದಲ್ಲಿ ಕಾಣದೆ ಸ್ವಲ್ಪ ಬೇರೆಕಡೆಗೆ ಕಾಣುವವು ; ಯಾಕಂದರೆ ನೀರಲ್ಲಿ ಹೋಗುವಾಗ ಪ್ರಕಾಶದ ಕಿರಣಗಳು ವಕ್ರವಾಗುವವು ( refraction ).

ಕ್ರತುವು–ಸಂಕಲ್ಪವು, ಕರ್ಮವು, ಕರ್ಮಪ್ರವೃತ್ತಿಯು.

ಕ್ರಿಸ್ತ, ಕ್ರಿಸ್ತೀ–ಜೀಸಸ್ ಕ್ರಾಯಿಸ್ತನು, ಕ್ರಿಶ್ಚನ್‌ಧರ್ಮದ ಪ್ರವರ್ತಕನು. ಕ್ರಿಸ್ತನಿಗೆ ಸಂಬಂಧಿಸಿದ್ದು ಕ್ರಿಸ್ತೀ ಎನಿಸುವದು.

ಕುರಾಣ–ಮುಸಲ್ಮಾನೀ ಧರ್ಮದ ಆದಿ ಮತ್ತು ಸರ್ವಶ್ರೇಷ್ಠ ಗ್ರಂಥವು.

ಕುಶಲ–ಆತ್ಯಂತಿಕ ಕಲ್ಯಾಣ, ನಿಶ್ರೇಯಸ, ಆತ್ಮಿಕ ಕಲ್ಯಾಣ.
ಕುರಿತರೆ–ವಿಚಾರಿಸಿದರೆ.
ಕೂಟಕೂರ್ಮೆ–ಸಂಗಸಹವಾಸಗಳು, ಪ್ರೇಮ ಪ್ರೀತಿಗಳು.
ಕೆಲಸುಗಲಿ–ಕರ್ಮಯೋಗಿ, ಕರ್ಮವೀರ.
ಕೋಶಗಳು–ಆವರಣಗಳು, ಒರೆಗಳು, ಇರುವ ಸ್ಥಾನಗಳು.

**ಖಪುಷ್ಪ**–ಆಕಾಶಪುಷ್ಪ, ಮಿಥ್ಯಾ ಎಂಬರ್ಥ.

**ಗಂಧರ್ವನಗರ**–ಆಕಾಶದಲ್ಲಿ ಮೋಡಗಳಿಂದಾಗುವ ಕಾಲ್ಪನಿಕ ನಗರಗಳು, ಮಿಥ್ಯೆ.
ಗಾರ್ಹಪತ್ಯ–ಅಗ್ನಿಹೋತ್ರಿಗಳ ಪಶ್ಚಿಮ ಕುಂಡದಲ್ಲಿರತಕ್ಕ ಅಗ್ನಿಯು. ಗೃಹಪತಿಗಳ ಮನೆಯಲ್ಲಿ ಸತತವೂ ಇರುವದರಿಂದ ಇದಕ್ಕೆ ಈ ಹೆಸರು.
ಗೋಚರ–ಇಂದ್ರಿಯಗಳಿಂದ ತಿಳಿಯುವ, ಇಂದ್ರಿಯ ಶಕ್ತಿಗಳಿಗೆ ಗಮ್ಯ.

**ಚಿದ್ಘನ**–ನಿಬಿಡ ಶುದ್ಧ ಚೈತನ್ಯ, ಬ್ರಹ್ಮಸ್ವರೂಪ.
ಚೇತನಾತೀತಾವಸ್ಥೆ–ಸಾಮಾನ್ಯಚೇತನವನ್ನು ದಾಟಿ ಆಚೆಗೆ ಇರುವ ತುರೀಯಾವಸ್ಥೆ ಆತ್ಮನ ಶುದ್ಧಾವಸ್ಥೆ ಅಥವಾ ಸಿದ್ಧಾವಸ್ಥೆ ( super-consciousness ).
ಚೇತನನಾಡಿ–ಜ್ಞಾನನಾಡಿ, ಯಾವುದರಿಂದ ಜೀವನಿಗೆ ಸಂವೇದಗಳ ಜ್ಞಾನವಾಗುವದೊ ಆ ನಾಡಿಗಳು ( sensory-nerves ).
ಚೋಟು–ಸುಮಾರು ೮ ಅಂಗುಲ, ೮ ಇಂಚು.

**ಜಡವಾದವು**–ದೃಗ್ಗೋಚರವಾದ ಜಡವೇ ಸತ್ಯವಸ್ತುವು ಎಂಬ ವಾದವು.
ಜಲಾಯುಕವು–ಜಿಗಳಿಯು.
ಜಲ್ಲುವರಿದು–ಮೈಥಳಿಬಿಟ್ಟು, ಬಲದಿಂದ, ಜೋರಿನಿಂದ.
ಜಾತವೇದ–ಅಗ್ನಿಯು, ಅಗ್ನಿಯ ಪರ್ಯಾಯನಾಮವು.
ಜಾರಣಮಾರಣ–ಮಂತ್ರತಂತ್ರಗಳಿಂದ ಪರಸ್ತ್ರೀ ವಶೀಕರಣ, ಶತ್ರುವಧ ಮುಂತಾದ ವಾಮ ಆಚಾರಗಳು.

ಜಾರುಜ–ತಿಳುವಾದ ಚರ್ಮದ ಚೀಲದಿಂದ ಹುಟ್ಟಿದ. ಮನುಷ್ಯ ಪಶ್ವಾದಿ ಜೀವಕೋಟಿ.
ಜಿಹ್ಮ–ವಕ್ರ, ಕೊಂಕು, ಅಪ್ರಾಮಾಣಿಕ.

**ಟಬ್ಬು**–ನೀರು ತುಂಬುವ ಕಬ್ಬಿನದ ಡೋಣಿ.

**ತಜ್ಜಲಾನ್**–ಛಾಂ, ಅ ೩, ಖಂ ೧೪, ಮಂ ೧. ನೋಡಬೇಕು. ವಸ್ತುಗಳ ಉಗಮ

ಮತ್ತು ಲಯಸ್ಥಾನ. ಇದನ್ನು ತಿಳಿದುಕೊಳ್ಳುವುದಕ್ಕೆ ಶಾಂಡಿಲ್ಲವಿದ್ಯೆ ಎಂದೆನ್ನುವರು.

**ತಮ**–ಪ್ರಕೃತಿಯ ಮೂರು ಗುಣಗಳಲ್ಲಿ ಒಂದು. ಅಜ್ಞಾನ, ಆಲಸ್ಯ, ಪ್ರಮಾದ ಇವೇ ಅದರ ಮುಖ್ಯ ಲಕ್ಷಣಗಳು.

ತರ್ಕಾತ್ಮಕವು–ತರ್ಕದಿಂದ ಉಂಟಾದದ್ದು, ತರ್ಕಮಯವು.

ತಿರ್ಯಗ್ಜಾತಿ–ಮನುಷ್ಯನಿಗಿಂತ ಕಡಿಮೆ ತರಗತಿಯ ಪಶುಪಕ್ಷ್ಯಾದಿ ಹೀನಸೃಷ್ಟಿ.

ತುರೀಯ–ಆತ್ಮನ ಎಲ್ಲಕ್ಕೂ ಶುದ್ಧ ಅವಸ್ಥೆ, ನಿಷ್ಕಲ ಅವಸ್ಥೆ.

ತೇಜೋಪುರುಷ–ಈ ಪುರುಷನಂತೆ ಇರುವ ತೇಜೋಮಯ ಸೂಕ್ಷ್ಮಪುರುಷ.

ತೊತ್ತು–ಆಳು, ದಾಸ,ಗುಲಾಮ.

ತೊಟ್ಟಿಗಳು–ಜೇನಿನ ಹುಟ್ಟಿನಲ್ಲಿರುವ ಷಟ್ಕೋನಾಕೃತಿ ಮನೆಗಳು.

ತ್ರಿಕರಣ–ಕಾಯಾ ವಾಚಾ ಮನವೆಂಬ ಮೂರು ಕರ್ಮಸಾಧನಗಳು

ತ್ರಿಪುಟಿ–ಜ್ಞಾನ ಜ್ಞೇಯ ಜ್ಞಾತಾ ಇವು ಮೂರು, ಅಥವಾ ಜೀವ ಜಗತ್ ಈಶ್ವರ ಇವು ಮೂರು.

ತ್ರಿವೃತ್ಕರಣ–ಉಪನಿಷತ್ ರಹಸ್ಯದ ಪ್ರಕರಣ ೨ ಪರಿಚ್ಛೇದ ೯ ನೋಡಬೇಕು.

ತ್ರೈತಾದ್ವೈತ–ಮೂರು ವಸ್ತುಗಳು ಐಕ್ಯವಾಗಿ ಒಂದರಲ್ಲಿರುವಿಕೆ.

**ಥಿಯಾಸಫಿಸ್ಟ**–ಸರ್ವಧರ್ಮ ಮತ್ತು ಸರ್ವ ತತ್ವಜ್ಞಾನವನ್ನು ಸಮನ್ವಯಿಸಬೇಕೆಂಬ ಮಾದಾಮ ಬ್ಲಾವ್ಯಾಟ್ಸಕೀಯವರು ಸ್ಥಾಪಿಸಿದ ಧರ್ಮಪಂಥವಿಶೇಷವು.

**ದರ್ಶನ**, ದಾರ್ಶನಿಕ–ತತ್ವಜ್ಞಾನ, ತತ್ವಜ್ಞ, ತತ್ವವೇತ್ತ.

ದಾವಾಗ್ನಿ–ಕಾಳ್ಗಿಚ್ಚು, ಅಡವಿಯ ಕಿಚ್ಚು.

ದೇವಯಾನ–ಉಪನಿಷತ್‌ರಹಸ್ಯದ ಪ್ರಕರಣ ೩ ಪರಿಚ್ಛೇದ ೩೫ ನೋಡಬೇಕು.

ದೇವೋನ್ಮಾದ–ದೈವೀಸ್ಫೂರ್ತಿಯಿಂದ ಮೈಮರೆಯೋಣ.

ದೇಹಿ–ದೇಹವುಳ್ಳವ, ದೇಹದಲ್ಲಿರುವ ಆತ್ಮನು.

ದ್ಯಾವಾಪೃಥ್ವಿ–ಆಕಾಶ ಮತ್ತು ಪೃಥ್ವಿ.

**ಧಡ**–ಅಟ್ಟೆ, ಮುಂಡ, ಕಬಂಧ.

ಧನವಿದ್ಯುತ್ತು–ನೈಸರ್ಗಿಕವಾಗಿರುವ ಎರಡು ವಿದ್ಯುತ್ಪ್ರವಾಹಗಳಲ್ಲಿ ಮೊದಲನೆಯದು ( positive electricity ).

ಧೂಮಮಾರ್ಗವು–ಪಿತೃಯಾನವು, ಕತ್ತಲೆಯಮಾರ್ಗವು, ಚಂದ್ರಲೋಕದ ಮಾರ್ಗವು.

ಧ್ಯೇಯವಾದವು–ಧ್ಯೇಯದಂತೆ ನಡೆಯಬೇಕೆಂಬ ತತ್ತ್ವವು.

**ನಡುಕ**–ನಡುವೆಯಾದವ ( medium ).

ನಡೆಕ–ನಡೆಯುವವ, ಸಹವಾಸಿ.

ನಿಮಿತ್ತವಾದವು–ದೇಹಮನಗಳು ತತ್ತ್ವತಃ ಬೇರೆ ಬೇರೆ ಇದ್ದರೂ ದೇವರಿಂದ ಅವು ಜೋಡಿಸಲ್ಪಟ್ಟು ತಮ್ಮ ಕಾರ್ಯಗಳನ್ನು ಸಹಕಾರದಿಂದ ಮಾಡುತ್ತವೆಂಬ ತತ್ತ್ವವು.

ನಿಯತಿ–ದೈವ, ಕಾಲ.

ನಿರುಕ್ತ–ಹೆಸರುಳ್ಳದ್ದು, ವ್ಯುತ್ಪತ್ತಿ, ಉಬ್ದಗಳ ಉಪಪತ್ತಿ.

ನಿರ್ವಹಣ–ನಾಶ ಅಥವಾ ರಕ್ಷಣ.

ನೆಚ್ಚಿದಂತೆ- ನಂಬಿದಂತೆ, ವಿಶ್ವಾಸವಿಟ್ಟಂತೆ.

ನೇತಿ ನೇತಿ–ಇದು ಅಲ್ಲ, ಹೀಗಿಲ್ಲ, ಪರಮಾತ್ಮವು ಅಗೋಚರವು ಎಂಬ ತತ್ತ್ವವು.

ನೇರವಾಗಿ–ನೀಟಾಗಿ, ನೆಟ್ಟಗೆ, ಸರಲವಾಗಿ.

ನೈಜ–ನಿಜವಾದ, ಸತ್ಯ, ನನ್ನಿ.

ನೈತಿಕವಿಧಿ–ನೀತಿಯ ನಿಯಮಗಳು.

ನೈತಿಕ ಆದರ್ಶ–ನೀತಿಯ ಧ್ಯೇಯ, ನೀತಿಯಿಂದ ಮುಟ್ಟುವ ಮೆಟ್ಟು.

ನ್ಯಾಯ–ಉಪನಿಷತ್‌ರಹಸ್ಯದ ಪ್ರಕರಣ ೪ ಪರಿಚ್ಛೇದ ೬ ನೋಡಬೇಕು.

**ಪರತತ್ತ್ವ**–ಎಲ್ಲಕ್ಕೂ ಹೆಚ್ಚಿನ ತತ್ತ್ವವು, ಪರಬ್ರಹ್ಮವು.

ಪರಲೋಕವಿದ್ಯೆ– ಮರಣ ಪಶ್ಚಾತ್ ಜೀವನ ಅವಸ್ಥೆಯ ವಿಚಾರ ( spiritism, spiritualism ).

ಪರಾವಿದ್ಯೆ–ಶ್ರೇಷ್ಠವಾದ, ಹೆಚ್ಚಿನ, ವಿದ್ಯೆ. ಆತ್ಮವಿದ್ಯೆ. ಉಪನಿಷತ್‌ರಹಸ್ಯದ ಪ್ರಕಗಣ ೬ ಪರಿಚ್ಛೇದ ೨ ನೋಡಬೇಕು.

ಪರಾನುವರ್ತನ–ಎರಡನೆಯವರ ವರ್ತನದಂತೆ ವರ್ತಿಸೋಣ.

ಪರಾಯಣ–ಕೊನೆಯ ಆಶ್ರಯಸ್ಥಾನವು.

ಪರಿಮರ–ಸರ್ವವಿನಾಶಕ ಕಾಲ.

ಪರೋಕ್ಷ–ಗುಪ್ತ, ಅದೃಶ್ಯ, ರಹಸ್ಯವುಳ್ಳ.

ಪರ್ಯಾಯಗಳು–ಅದೇ ಅರ್ಥವಿದ್ದ ಬೇರೆ ಶಬ್ದರೂಪಗಳು.

ಪವಾಡ–ಚಮತ್ಕಾರ, ಅದ್ಭುತ ( miracle ).

ಪಶು-ಪತಿ-ಪಾಶ–ನರನೆ ಪಶು, ಕರ್ಮಕಾಮಾದಿಗಳೆ ಅವನನ್ನು ಕಟ್ಟುವ ಪಾಶಗಳು,

ಅಂತರ್ಯಾಮಿಯಾದ ಶಿವನೆ ಪತಿಯು, ಅವನ ಸಹಾಯದಿಂದಲೆ ನರನು ಪಾಶ ದಿಂದ ಮುಕ್ತನಾಗತಕ್ಕದ್ದು.
ಪಾಯಲೆಟ್–ಜೀಸಸ್ ಕ್ರಾಯಿಸ್ಟನಿಗೆ ಮರಣದಂಡವನ್ನು ವಿಧಿಸಿದ ರೋಮನ್ ಅಧಿ ಕಾರಿಯು.
ಪಾಖಂಡ–ವೇದಬಾಹ್ಯ, ನಾಸ್ತಿಕ.
ಪಾರ್ಶ್ವಭೂಮಿ–ಭೂಮಿಕೆ, ಸುತ್ತಲಿನ ಪರಿಸ್ಥಿತಿ.
ಪಿಙ್ಗಲ–ಕಾವೀ ಬಣ್ಣದ.
ಪಿತೃಯಾನ–ಉಪನಿಷತ್‌ರಹಸ್ಯದ ಪ್ರಕರಣ ೩ ಪರಿಚ್ಛೇದ ೩೫ ನೋಡಬೇಕು.
ಪುರುಷವಿಧ–ಪುರುಷನ ಲಕ್ಷಣಗಳುಳ್ಳ, ವ್ಯಕ್ತಿತ್ವವಿಶಿಷ್ಟ.
ಪುರುಷಾಂಡ–ಪುರುಷ ಬೀಜ ( spermatozoa ).
ಪುರೀತತ್–ಹೃದಯದ ಆವರಣ, ರಹಸ್ಯದ ಪ್ರಕರಣ ೩ ಪರಿಚ್ಛೇದ ೧೧ ನೋಡಬೇಕು.
ಪೋಷಕ ನಾಡಿ–ದೇಹದಲ್ಲಿಯ ಪಚನಾದಿ ವಿವಿಧ ಕ್ರಿಯೆಗಳನ್ನು ನಡೆಸಲು ಸಹಾಯ ಕವಾದ ನಾಡಿಗಳು ( sympathetic nerves ).
ಪಂಚಕೋಶಗಳು–ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯ ಎಂಬ ಐದು ಕೋಶಗಳು. ಇವುಗಳಲ್ಲಿ ಆತ್ಮನು ಸಂಚರಿಸುವನು. ಇವು ಗಳನ್ನು ದಾಟಿ ಹೋಗುವುದೆ ಮುಕ್ತಿ.
ಪಂಚಾಗ್ನಿತತ್ತ್ವ–ರಹಸ್ಯದ ಪ್ರಕರಣ ೧ ಪರಿಚ್ಛೇದ ೧೭ ನೋಡಬೇಕು. ( ಬೃ, ಅ ೬, ಬ್ರಾ ೨, ಮಂ ೯–೧೩ ).
ಪಾಂಕ್ತ–ಪಂಚಾತ್ಮಕ. ತೈ ವ ೧, ಅನು ೭. ನೋಡಬೇಕು.
ಪಿಂಡಾಂಡ–ವ್ಯಷ್ಟಿ, ವ್ಯಕ್ತಿ, ( microcosm ).
ಪ್ರಕ್ರಿಯೆ– ಪದ್ಧತಿ, ಕ್ರಮ.
ಪ್ರಣವ–ಓಂಕಾರ ಮಂತ್ರವು.
ಪ್ರಶಾಸನ–ಅಪ್ಪಣೆ, ನಿಯಮನ.
ಪ್ರಸವ–ಹುಟ್ಟು.
ಪ್ರತೀಕ–ಚಿನ್ಹ, ಪ್ರತಿಮೆ.
ಪ್ರಜ್ಞಾನ–ಮೂಲ ಚೈತನ್ಯ.
ಪ್ರಜ್ಞಾನಘನ–ನಿಬಿಡ ಪ್ರಜ್ಞಾನ, ಚಿದ್ಘನ.

ಪ್ರಾಚ್ಯವಿದ್ಯೆಗಳು—ಪೌರ್ವಾತ್ಯದೇಶಗಳ ಭಾಷೆ, ಸಾಹಿತ್ಯ, ಕಲೆ ಮುಂತಾದವು.
ಪ್ರಾಣಸಂಶಿತ—ಪ್ರಾಣದಿಂದ ತೀಕ್ಷ್ಣವಾದ, ಪ್ರಾಣಪೂರ್ಣ.
ಪ್ರಾತಿಭಾಸಿಕ— ಸುಳ್ಳು, ಬರೀ ತೋರಿಕೆಯು, ಅಯಥಾರ್ಥ.
ಪ್ರಾಣ—ಜೀವ, ಉಸುರು, ಹೊರಗೆ ಬಿಡುವ ಉಸುರು.
ಪ್ರೇಯಸ್ಸು—ಪ್ರಿಯವಾದುದು, ಇಂದ್ರಿಯಸುಖ.

**ಫಿನಿಕ್ಸ ಪಕ್ಷಿ**—೫೦೦-೬೦೦ ವರುಷ ಬದುಕಿ ತನ್ನನ್ನು ತಾನೇ ಸುಟ್ಟುಕೊಂಡು ಪುನಃ ನವಜನ್ಮವನ್ನು ಹೊಂದುವ ಕಾಲ್ಪನಿಕ ಅರಬೀ ಪಕ್ಷಿ.
ಪ್ಲೇಟೋ—ಸಾಕ್ರೇಟೀಸನ ಶಿಷ್ಯನಾದ ಪ್ರಸಿದ್ಧ ಗ್ರೀಕ ತತ್ವಜ್ಞನು.

**ಬಡಕೊಂಡವರು**—ಮೈಯಲ್ಲಿ ದೆವ್ವ ಬಂದವರು.
ಬಹಿರಾದೇಶ—ಹೊರಗಿನ ಅಥವಾ ಹೊರಗಿನವರ ಅಪ್ಪಣೆ, ತದ್ವಿರುದ್ಧ ಅಂತರಾದೇಶವು.
ಬಾಯಬಲ್—ಕ್ರಿಶ್ಚನ್ ಧರ್ಮದ ಶ್ರೇಷ್ಠ ಗ್ರಂಥವು.
ಬಾಧ್ಯಸ್ಥ—ಬಾದ್ಯಸ್ತ, ಅಧಿಕಾರಿ.
ಬೇಹುಗಾರ—ಗುಪ್ತಚರ, ಸುದ್ದಿಗಾರ.
ಬೆಂಗಾಡು—ಸುಟ್ಟುಹೋದ ಕಾಡು.
ಬ್ಯಾಬಿಲೋನಿಯಾ—೫ ಸಾವಿರ ವರ್ಷ ಪೂರ್ವದಲ್ಲಿ ಯುಫ್ರತಿಸ್ ನದೀ ತೀರದಲ್ಲಿ ಅಭಿವೃದ್ಧ ಸ್ಥಿತಿಯಲ್ಲಿದ್ದ ರಾಷ್ಟ್ರವು.
ಬ್ರಾಹ್ಮಣಕಾಲವು—ವೇದಮಂತ್ರಗಳನ್ನು ಯಾವ ವಿಧಾನದಿಂದ ಯಾವ ಯಜ್ಞಗಳಲ್ಲಿ ಉಪಯೋಗಿಸಬೇಕೆಂಬ ಬಗ್ಗೆ ಬರೆಯಲ್ಪಟ್ಟ ಗ್ರಂಥಗಳು ಬ್ರಾಹ್ಮಣ ಗ್ರಂಥಗಳು, ಅವುಗಳ ಕಾಲವು.

**ಭೂತ**—ಅಸ್ತಿತ್ವದಲ್ಲಿ ಬಂದ ಪ್ರತಿಯೊಂದು ವಸ್ತು.
ಭೂತಪ್ರೇತವಿದ್ಯೆ—ಸತ್ತಮೇಲೆ ಮನುಷ್ಯನ ಜೀವವು ಬೇರೆ ಸೂಕ್ಷ್ಮರೂಪಗಳನ್ನು ಧರಿಸುವದು, ಅತ್ತಿತ್ತ ಸಂಚರಿಸುವದು, ಎರಡನೆಯವರ ಮೈಯಲ್ಲಿ ಬರುವದು ಎಂಬ ತಿಳುವಳಿಕೆಯು ಇರುವದು. ಆ ಮರಣಪಶ್ಚಾತ್ ಜೀವವನ್ನು ಗೊತ್ತು ಹಿಡಿಯುವದು ಮಾತಾಡಿಸುವದು ಮುಂತಾದ್ದು ಭೂತಪ್ರೇತವಿದ್ಯೆ ಎನಿಸುವದು. ಇದಕ್ಕೆ ಇಂಗ್ಲೀಷನಲ್ಲಿ ‘ spiritism ’ ಎಂಬ ಹೆಸರು.

ಭೂತಿ—ಲೌಕಿಕ ಅಭಿವೃದ್ಧಿ, ಅಭ್ಯುದಯ.
ಭ್ರೂಣಹತ್ಯೆ—ಗರ್ಭಗತ ಶಿಶುಹತ್ಯೆ.

**ಮಧುವಿದ್ಯೆ**–ಮಧು ಅಂದರೆ ಸಾರವು. ಪ್ರಕರಣ ೧ ಪರಿಚ್ಛೇದ ೧೯ ನೋಡಬೇಕು.
ಮಧುರಾಣಿ–ಜೇನುನೊಣಗಳ ರಾಣಿ ( queen bee ), ಜೇನುಗಳ ಅರಸಿ.
ಮಹದಾತ್ಮಾ–ಸಾಂಖ್ಯರ ಮಹತ್ತಿಗೆ ಸರಿಯಾದ ವೇದಾಂತಿಕ ತತ್ವ.
ಮಾತಾಳಿ–ಬಾಯಿಬಡಕ, ವಾಚಾಳ.
ಮಾತೃಕೆ–ಯಾವುದೊಂದು ಗ್ರಂಥದ ಮೂಲಪ್ರತಿ.
ಮಾನುಷ್ಯ–ಮನುಷ್ಯತ್ವ, ಮಾನವ್ಯ.
ಮಾತರಿಶ್ವನ್–ವಾಯುವು, ಆಕಾಶವಲ್ಲಿ ಸುಳಿದಾಡುವವ.
ಮೀಮಾಂಸಾ–ಯಜ್ಞಯಾಗಾದಿ ಕರ್ಮಮಾರ್ಗ.
ಮೈತುಂಬಿದವರು–ಮೈಯಲ್ಲಿ ದೇವರು ಬಂದವರು.
ಮೋಡಿ-ಮಂತ್ರವಿದ್ಯೆ–ಮಂತ್ರಸಾಮರ್ಥ್ಯದಿಂದ, ಒಂದು ಬಗೆಯ ಗಾರುಡದಿಂದ ದಿಗ್ಬಂಧನ ವಶೀಕರಣಾದಿಗಳನ್ನು ಮಾಡುವ ವಿದ್ಯೆ.
ಮೌಲಿಕ–ಮೂಲ, ನವಪ್ರತಿಭೆಯುಳ್ಳ, ಅಪೂರ್ವ.
ಮುಂಡಿಗೆ–ಒಗಟು, ಒಮ್ಮೆಲೆ ತಿಳಿಯದ ವಿಧಾನ ಅಥವಾ ವಾಕ್ಯ.
ಮೃಗತೃಷ್ಣಿಕಾ–ಮೃಗಜಲ, ಬಿಸಿಲ್ಗುದುರೆ.

**ಯದೃಚ್ಛೆ**–ಪ್ರಯತ್ನವಿಲ್ಲದೆ ಆಗೋಣ, ದೈವವಶಾತ್ ಆಗೋಣ.
ಯುಕ್ತಿಚಕ್ರ–ತರ್ಕಚಕ್ರ.
ಯೋಗ–ಚಿತ್ತವೃತ್ತಿನಿರೋಧರೂಪ ರಾಜಯೋಗ ಅಥವಾ ಮನಸ್ಸಿನ ಏಕಾಗ್ರ್ಯ.
ಯಂತ್ರ-ತಂತ್ರ–ತಾಯಿತ ಮುಂತಾದ ಮಂತ್ರಿತವಸ್ತು ಅಥವಾ ಬರೆಹಗಳು.

**ರಜ**–ಪ್ರಕೃತಿಯ ಮೂರು ಗುಣಗಳಲ್ಲಿ ಒಂದು. ಪ್ರವೃತ್ತಿಯೆ ಇದರ ಮುಖ್ಯ ಲಕ್ಷಣವು.
ರಯಿಃ-ಜಡ, ಅನ್ನ, ಇಂದ್ರಿಯಗೋಚರ ವಿಶ್ವವು ಯಾವುದರಿಂದಾಯಿತೊ ಆ ಮೂಲ ವಸ್ತು.
ರಾಜಸೂಯಯಜ್ಞ–ಚಕ್ರವರ್ತಿತ್ವದ ಚಿನ್ಹವೆಂದು ರಾಜರು ಮಾಡುವ ಯಜ್ಞವಿಶೇಷವು.

**ಲಿಂಗಶರೀರ**–ಸೂಕ್ಷ್ಮಶರೀರ.
ಲೆತ್ತ–ಅಕ್ಷ, ಪಾಶಕ, ಪಗಡೀ ಆಟ.
ಲೋಗೋಸ್–ಗ್ರೀಕ ತತ್ವಜ್ಞಾನದಲ್ಲಿ ದೇವರ ಆದಿ ಶಬ್ದವು, ಕ್ರಿಶ್ಚನರಲ್ಲಿ ದೇವರ ಪುತ್ರನು ಲೋಗೋಸ್ ಎನಿಸುವನು.

**ವದತೋವ್ಯಾಘಾತವು**–ಒಂದೇ ಮಾತಿನಲ್ಲಿ ಪರಸ್ಪರ ವಿರುದ್ಧ ವಿಧಾನಮಾಡುವುದು.

ವಾರ್ತಿಕ–ವಿವೇಚನಾತ್ಮಕ ಟೀಕೆ.

ವಾಚಾರಂಭಣವು–ಬಾಯಿಬಡಕತನವು.

ವಿಕಾಸವಾದವು–ಉತ್ಕ್ರಾಂತಿವಾದವು, ಸೃಷ್ಟಿಯು ಮೆಲ್ಲಮೆಲ್ಲನೆ ವಿಕಾಸಹೊಂದಿತು ಎಂಬ ವಾದವು ( evolution ).

ವಿಚಾರಸಾಮರ್ಥ್ಯ–ಎರಡನೆಯವರ ಮೇಲೆ ಪರಿಣಾಮಮಾಡುವ ವಿಚಾರದ ಶಕ್ತಿ (thought power ).

ವಿಚಾರಗಮ್ಯ ಮಾನಸಶಾಸ್ತ್ರವು– ಮನಸು ಆತ್ಮಾ ಇವುಗಳ ಸಂಬಂಧ, ಆತ್ಮನ ನಿವಾಸಸ್ಥಾನ ಮುಂತಾದವುಗಳ ವಿಚಾರ ಮಾಡುವ ಮಾನಸಶಾಸ್ತ್ರವು.

ವಿಧಿಶಾಸ್ತ್ರವು–ಯಜ್ಞಗಳನ್ನು ಹೇಗೆ ಮಾಡಬೇಕೆಂಬ ನಿಯಮಗಳನ್ನು ಹೇಳುವ ಶಾಸ್ತ್ರವು.

ವಿಧಿನಿಷೇಧಾತೀತವಾದವು–ಕೋ ವಿಧಿಃ ಕೋ ನಿಷೇಧಃ ಎಂಬ ಪರಮಹಂಸ ವೃತ್ತಿಯಿಂದ ಇರುವದು, ಆ ತತ್ವದ ಪ್ರತಿಪಾದನವು.

ವಿದೇಹಾವಸ್ಥೆ–ಜೀವನು ದೇಹವಿಲ್ಲದೆ ಇರುವದು.

ವಿದ್ಯೆ–ಸತ್ಯದ ಜ್ಞಾನವು, ಪರಮಾತ್ಮಜ್ಞಾನವು.

ವಿರಾಟಪುರುಷ–ಸೃಷ್ಟಿನಿರ್ಮಾಣದ ಪೂರ್ವದಲ್ಲಿ ಯಾವ ಪುರುಷನು ಮೊದಲು ನಿರ್ಮಾಣ ಮಾಡಲ್ಪಟ್ಟನೊ ಅವನು.

ವಿರಜ–ವಿಮಲ, ಶುದ್ಧ, ರಜೋರಹಿತ.

ವಿಶ್ರಬ್ಧರಾಗು–ಸಮಾಧಾನಹೊಂದು.

ವಿಶ್ವೋತ್ಪತ್ತಿಶಾಸ್ತ್ರ–ವಿಶ್ವವು ಯಾವಕಾರಣದಿಂದ, ಹೇಗೆ, ಯಾಕೆ, ಉತ್ಪನ್ನವಾಯಿತು ಎಂಬ ಶಾಸ್ತ್ರವು.

ವಿಜ್ಞಾನವಾದ–ಕಲ್ಪನೆಯ ಹೊರಗೆ ವಿಶ್ವಕ್ಕೆ ಅಸ್ತಿತ್ವವಿಲ್ಲವೆಂಬ ವಾದವು.

ವೇದಾಂತ–ವೇದಗಳ ಅಂತಿಮಭಾಗವು, ತತ್ವಜ್ಞಾನವು, ಬ್ರಹ್ಮವಿದ್ಯೆಯು.

ವೈಶೇಷಿಕ–ರಹಸ್ಯದ ಪ್ರಕರಣ ೪ ಪರಿಚ್ಛೇದ ೬ ನೋಡಬೇಕು.

ವೈಜ್ಞಾನಿಕ–ಶಾಸ್ತ್ರಜ್ಞ, ವಿಜ್ಞಾನವನ್ನರಿತವ ( scientist ).

ವ್ಯಷ್ಟಿ–ಒಂದು ಅಂಶ, ವ್ಯಕ್ತಿ, ತದ್ವಿರುದ ಸಮಷ್ಟಿ.

ವ್ಯತ್ಯಾಸ–ಭೇದ, ಅಂತರ.

ವ್ಯುತ್ಪತ್ತಿಶಾಸ್ತ್ರವು–ಶಬ್ದಗಳ ಹುಟ್ಟಿನ ಶಾಸ್ತ್ರವು, ನಿರುಕ್ತವು, ಉಪಪತ್ತಿ ಶಾಸ್ತ್ರವು.

**ಶಶವಿಷಾಣ**–ಮೊಲದ ಕೋಡು ( ಮಿಥ್ಯಾ ಎಂದು ಅರ್ಥ ).
ಶ್ರಮಣಕ–ಬುದ್ಧಧರ್ಮೀಯ ಭಿಕ್ಷು, ಬುದ್ಧಸನ್ಯಾಸಿ.
ಶ್ಯಾಮಾಕ-ಸಾಂವಿಯ ಅಕ್ಕಿ.
ಶ್ರುತಿ–ಕೇಳುವಿಕೆ, ವೇದಗಳು.
ಶ್ರೆಯಸ್ಸು–ಕಲ್ಯಾಣ, ಆತ್ಮಸುಖ.

**ಷೋಡಶಕಲೆಗಳು**–ಆತ್ಮನ ೧೬ ಅಂಶಗಳು. ಪ್ರ ೪, ಮಂ ೪ ನೋಡಬೇಕು.

**ಸತ್ತು**- ಸತ್, ನಿತ್ಯವಸ್ತು, ಸತ್ಯ.
ಸತ್ತೆ–ಅಸ್ತಿತ್ವ, ಇರವು.
ಸದ್ವಾದವು- ಸತ್ ಎಂಬುದೆ ಮೊದಲು ಇದ್ದುದು, ಅದರಿಂದಲೆ ಎಲ್ಲವು ಹುಟ್ಟಿತು ಎಂಬ ವಾದವು.

ಸಭ್ಯತೆ–ಸುಧಾರಣೆ, ಸಂಸ್ಕೃತಿ.
ಸತ್ವ–ಪ್ರಕೃತಿಯ ಮೂರು ಗುಣಗಳಲ್ಲಿ ಒಂದು. ಜ್ಞಾನ, ಪ್ರಕಾಶ, ಶಾಂತಿ, ಸಮತೆ ಇವೇ ಇದರ ಲಕ್ಷಣಗಳು.
ಸಮನ್ವಯಿಸು–ಏಕಸೂತ್ರದಲ್ಲಿ ತರು ( synthesise ).
ಸಮಸ್ಯೆಯು–ಕಠಿಣ ಪ್ರಶ್ನೆಯು, ಬಿಡಿಸಲವಶ್ಯವಾದ ಪ್ರಶ್ನೆಯು.
ಸಮಿತ್ಪಾಣಿ–ಕೈಯಲ್ಲಿ ಸಮಿಧೆಗಳನ್ನು ಹಿಡಿದುಕೊಳ್ಳುವದು, ಶಿಷ್ಯನಾಗುವ ಸಿದ್ಧತೆಯನ್ನು ತೋರಿಸುವ ಪದ್ಧತಿಯಿದು.

ಸಮಷ್ಟಿ–ಈ ಇಡೀ ವಿಶ್ವ, ತದ್ವಿರುದ್ಧ ವ್ಯಷ್ಟಿ ಅಂದರೆ ವ್ಯಕ್ತಿ.
ಸರಿದೊರೆ–ಸರಿಸಮಾನ, ಸಮ.
ಸಾತ್ವತಧರ್ಮ–ಭಾಗವತಧರ್ಮ, ಸಾತ್ವತವೆಂಬುವದು ಯಾದವಕುಲದ ಹೆಸರು.
ಸಾಯುಜ್ಯ–ಒಂದಾಗಿ ಹೋಗುವದು, ಅಥವಾ ಆತ್ಯಂತಿಕ ಸಾನ್ನಿಧ್ಯವು. ಎಲ್ಲಕ್ಕೂ ಶ್ರೇಷ್ಠ ತರಗತಿಯ ಮುಕ್ತಿ.

ಸಾಧ್ಯರು–ದೇವತೆಗಳು, ಸ್ವರ್ಗದ ನಿವಾಸಿಗಳು.
ಸಾಕ್ರೇಟಿಸ್–ಶ್ರೇಷ್ಠ ಗ್ರೀಕಸಾಧು ( ಕ್ರಿ. ಶ. ಪೂ. ೪೬೯–೩೯೯ ).
ಸುಫೀಸಾಧು–ಪವಿತ್ರ ಇರಾಣೀ ಸಾಧುಗಳು.
ಸುರುಟಮುರುಟ–ಸಂಕುಚಿತ, ರೋಗಿಷ್ಟ.

ಸುಷುಮ್ನಾ—ಯಾವ ನಾಡಿಯಲ್ಲಿ ಪ್ರಾಣವು ಸ್ಥಿರವಾಗಿ ಬ್ರಹ್ಮನೆಡೆಗೆ ಹೋಗುವದೊ ಆ ನಾಡಿಯು (ಯೋಗಶಾಸ್ತ್ರ). ಇಡಾಪಿಂಗಳಾ ಇವು ಪ್ರಾಣ ಅಪಾನ ವಾಯುಗಳು ಸುಳಿದಾಡುವ ಸುಷುಮ್ನನಾಡಿಯ ಎಡಬಲದ ಎರಡು ನಾಡಿಗಳು.

ಸೋಫಿಸ್ಟ್—ಹಣಪಡೆದು ಜ್ಞಾನಕೊಡುವ ಗ್ರೀಕಪಂಡಿತರು.

ಸಂಧಿಸು-ಕೂಡಿಸು ಅನ್ವಯಹಚ್ಚು, ಜೋಡಿಸು.

ಸಂಕಲ್ಪ—ಇಚ್ಛಾಶಕ್ತಿ, ಹೀಗೆ ಮಾಡಬೇಕು ಎಂಬ ನಿಶ್ಚಯ.

ಸಂಖ್ಯಾವಾದವು—ಸೃಷ್ಟಿಯ ನಿರ್ಮಾಣಕ್ಕೆ ಮತ್ತು ಧಾರಣಕ್ಕೆ ಸಂಖ್ಯೆಯೆ ಮೂಲವೆಂಬ ಪಾಯಥಾಗೋರಾಸನ ವಾದವು.

ಸಂಭೂತಿವಾದವು—ಒಂದರಿಂದ ಮತ್ತೊಂದು ಹುಟ್ಟಿತು ಎಂಬ ವಾದವು. ರಹಸ್ಯದ ಪ್ರಕರಣ ೨, ಪರಿಚ್ಛೇದ ೧೬ ನೋಡಬೇಕು.

ಸಂದರ್ಭ—ಪ್ರಸಂಗ.

ಸಂಭೂತಿ—ಮೂಲವಸ್ತು, ಬ್ರಹ್ಮ.

ಸಾಂಖ್ಯ—ಇದೊಂದು ದರ್ಶನವು, ೨೫ ಮೂಲವಸ್ತುಗಳುಳ್ಳ ಪ್ರಕೃತಿ ಮತ್ತು ಪುರುಷ ಇವುಗಳ ಅಸ್ತಿತ್ವವನ್ನು ಹೇಳಿ ಪ್ರಕೃತಿಯಿಂದ ಪುರುಷನ ಮುಕ್ತಿಯನ್ನು ಪ್ರತಿಪಾದಿಸುವ ತತ್ವಜ್ಞಾನವು.

ಸ್ವಸಂವೇದ-ತನ್ನ ಎಚ್ಚರವು ತನಗಾಗುವದು.

ಸ್ವಭಾವ—ಪ್ರಕೃತಿಯ ಹುಟ್ಟುಗುಣ, ಜನ್ಮಗುಣ.

ಸ್ವಸಂವಿತ್ತು—ತನ್ನರಿವು, ತನ್ನ ಎಚ್ಚರ.

ಸ್ವಾರಾಜ್ಯ-ಸ್ವರ್ಗರಾಜ್ಯ, ಶ್ರೇಷ್ಠ ಸೃಷ್ಟಿಯ ರಾಜ್ಯ.

ಸ್ಕ್ಯಾಂಡಿನೇವಿಯಾ—ನಾರವೇ ಸ್ವೀಡನ್ ಡೆನ್ಮಾರ್ಕ ಮತ್ತು ಆಯಿಸ್‌ಲಂಡ ದೇಶಗಳಿಗೆ ಕೂಡಿ ಈ ಹೆಸರು.

ಸ್ವಾಧ್ಯಾಯ—ವೇದಾಧ್ಯಯನ, ಪರಂಪರೆಯಿಂದ ನಿಯಮಿತವಾದ ವೇದಾಭ್ಯಾಸ.

ಸ್ತ್ರೀಬೀಜ—ಸ್ತ್ರೀಯೋನಿಯಲ್ಲಿಯ ಅಂಡ (ovum).

ಸ್ಫುರಣಾತ್ಮಕವು—ದೈವೀಸ್ಫೂರ್ತಿಯಿಂದುಂಟಾದುದು.

ಸ್ಕೂಲಮೆನ್—ಶುಷ್ಕ ತರ್ಕವಾದಿಗಳು.

ಸ್ವೇದಜ—ಬೆವರಿನಿಂದ ಹುಟ್ಟುವಕೃಮಿಕೀಟ ಮೊದಲಾದ ಜೀವಕೋಟಿ.

ಸ್ಟೋಯಿಕ್-ಗ್ರೀಕ ತತ್ವಜ್ಞಾನಿ ಝೀನೋ ( ಕ್ರಿ. ಶ. ಪೂ. ೩೦೮ ) ಇವನ ಶಿಷ್ಯರು. ಸದ್ಗುಣವೇ ಎಲ್ಲಕ್ಕೂ ಹೆಚ್ಚಿನದು ಮನುಷ್ಯನು ತನ್ನ ಕಾಮನೆಗಳನ್ನು ಕೆಳಗೆ ಒತ್ತಿ ಬಿಡಲಿಕ್ಕೆ ಬೇಕು ಎಂದು ಪ್ರತಿಪಾದಿಸುವವರು.

ಸ್ಫೋಟವಾದವು-ಧ್ವನಿಯು ಅನಾದಿಯು ಎಂಬ ಮೀಮಾಂಸಕರ ವಾದವು.

**ಹಕ್ಕುದಾರರು**-ಹಕ್ಕು ಇದ್ದವರು, ಬಾಧ್ಯರು, ಸೊತ್ತಿಗೆ ಅಧಿಕಾರವನ್ನು ಕೇಳುವವರು.

ಹಠಯೋಗ-ಆಸನ ಪ್ರಾಣಾಯಾಮಾದಿಗಳಿಂದ ಪ್ರಾಣವನ್ನು ಸ್ಥಿರಗೊಳಿಸಿ ಮನಸ್ಸನ್ನು ಗೆದ್ದು ಮೋಕ್ಷವನ್ನು ಪಡೆಯಬೇಕೆಂಬುವ ಯೋಗವು.

ಹಿಬ್ರೂ-ಜ್ಯೂ ಧರ್ಮದ ಜನರು.

ಹೆಳವ-ಪಂಗು, ಅಂಗಹೀನ.

ಹೆಮಿಸ್ಕ್ರಿಂಗಲಾ-ಸ್ಕ್ಯಾಂಡಿನೇವಿಯನ್ ಜನಾಂಗದ ಆದಿಮ ಗ್ರಂಥಗಳ ಹೆಸರು.

---

# ಒಪ್ಪೋಲೆ

## ಭಾಗ ೧

### ಮುನ್ನುಡಿ, ಪ್ರಸ್ತಾವನೆ ಮುಂತಾದ್ದು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೧ | ಅಚ್ಚ್ಕು | ಅಚ್ಚ್ಚಿ |
| ೭ | ೭ | ಬುದಿಯಿಂದಲೂ | ಬುದ್ಧಿಯಿಂದಲೂ |
| ೮ | ೧೫ | ಉಷನಿಷತ್ತಿನ | ಉಪನಿಷತ್ತಿನ |
| ೧೧ | ೨೫ | ಅವನ | ಪರಮಾತ್ಮನ |
| ೧೪ | ೧ | ಅದನು | ಅದನ್ನು |
| ೧೪ | ೭ | ಶುದಜ್ಞಾನ | ಶುದ್ಧಜ್ಞಾನ |
| ೧೬ | ೨೨ | ‘ ಈಶಾವಾಸ್ಯವಾದ ’ | ‘ ಈಶಾವಾಸ್ಯ ’ ವಾದ |
| ೧೯ | ೨ | ಅಧ್ಯಾತ್ಮವಿದಾ | ಅಧ್ಯಾತ್ಮವಿದ್ಯಾ |

### ಉಪನಿಷತ್–ರಹಸ್ಯವು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೮ | ಕೂಡಿಸಿದ್ದು | ಕೂಡಿಸಿ |
| ೩ | ೪ | ಮೊದಲನೆಯ ಮರದ | ಮರದ ಮೊದಲನೆಯ |
| ೩ | ೨೭ | ೩೨೯ | ೧೨೯ |
| ೪ | ೧ | ಸ್ವಸಂಪತ್ತಿನಿಂದ | ಸ್ವಸಂವಿತ್ತಿನಿಂದ |
| ೫ | ೩ | ಕಾಲಸೂಕ್ತನ | ಕಾಲಸೂಕ್ತದ |
| ೫ | ೧೬ | ‘ ದೈವಪಿರಿಮರ ’ | ‘ ದೈವಪರಿಮರ ’ |
| ೬ | ೧೩ | ಮಹತ್ವವನ್ನೂ | ಮಹತ್ವವನ್ನು |
| ೭ | ೨೪ | ಶ್ರುತಿ | ಶ್ರುತಿ |
| ೮ | ೬ | ಸೆಂಟಪಾಲ | ಸೆಂಟಪಾಲ |
| ೮ | ೯ | ಕ್ರಿಸ್ತನು | ಕ್ರಿಸ್ತನು |
| ೪ | ೧೦ | ಪ್ಲೇಟೋ | ಪ್ಲೇಟೋ |

| | | | |
|---|---|---|---|
| ೮ | ೨೬ | ಅಲ್ಲ | ಅಲ್ಲಿ |
| ೯ | ೧೭ | ಅಗಲಿ | ಆಗಲಿ |
| ೧೧ | ೧೨ | ಇನ್ನೊಂದೆಡೆಯಲ್ಲಿ | ಇನ್ನೊಂದು ಗ್ರಂಥದಲ್ಲಿ |
| ೧೨ | ೧೪ | ಕ್ರಿ. ಶ. | ಕ್ರಿ. ಶ. ಪೂ. |
| ೧೩ | ೧೪ | ಅನುವಾಕ ೨ | ಅನುವಾಕ ೭ |
| ೧೪ | ೧೫ | ಕ್ರಿ. ಪೂ. | ಕ್ರಿ. ಶ. ಪೂ. |
| ೧೪ | ೧೭ | ಂವದು | ವದು |
| ೧೫ | ೬ | ಅಶ್ನ | ಅಶ್ವ |
| ೧೫ | ೨೭ | ಅವನನು | ಅವನನ್ನು |
| ೧೬ | ೧೭ | ನಾಲ್ಕುನೆಯ | ನಾಲ್ಕನೆಯ |
| ೧೬ | ೧೯ | ಕಲಿ...ಕ್ತನಾ | ಕಲಿ...ಕ್ತನಾಗಿ |
| ೨೧ | ೪ | ಪಂಚಊಶಗಳ | ಪಂಚಕೋಶಗಳ |
| ೨೫ | ೨೬ | ಕೂಟಸ | ಕೂಟಸ್ಥ |
| ೨೬ | ೧೧ | ,, | ,, |
| ೨೯ | ೨೫ | ಖಂ, | ಬ್ರಾ, |
| ೩೨ | ೨೪ | ಪದತಿಯ | ಪದ್ಧತಿಯ |
| ೩೫ | ೬ | ಬ್ರಾ ೮–೯ | ಬ್ರಾ ೮, ಮಂ ೯ |
| ೩೭ | ೧೪ | ಅ ೭, ಖಂ ೧. | ಅ ೬, ಖಂ ೭, ಮಂ ೧. |
| ,, | ೨೪ | ತತವನ್ನು | ತತ್ವವನ್ನು |
| ೪೦ | ೧೯ | ಬೃ...ದಲ್ಲಿಯ | ಬೃ...ದಲ್ಲಿ |
| ೪೩ | ೨೫ | ಮಂತ್ರದೃಷ್ಟನು | ಮಂತ್ರದ್ರಷ್ಟನು |
| ೫೧ | ೨೮ | ಮಂ ೧–೧೭ | ಮಂ ೧–೭ |
| ೫೫ | ೧ | ಉಪ...ಭೂಮಿ | ವಿಶ್ವೋತ್ಪತ್ತಿಶಾಸ್ತ್ರದ ವಿಕಾಸವು |
| ೫೫ | ೯ | ಆಯುತು | ಆಯಿತು |
| ೫೭ | ೩ | ಹೆರಸು | ಹೆಸರು |
| ,, | ೯ | ವಿರುದರಿರುವರು | ವಿರುದ್ಧರಿರುವರು |
| ೬೧ | ೧೬ | ಪೃಥ್ವಿಯವಾಯಿತು | ಪೃಥ್ವಿಯಾಯಿತು |
| ೬೬ | ೫ | ಇಂದ್ರಯ | ಇಂದ್ರಿಯ |

| | | | |
|---|---|---|---|
| ೬೭ | ೨೮ | ಹೇಳಿದು | ಹೇಳಿದ್ದು |
| ೬೮ | ೨೩ | ಇಷ್ಟಂರಿದ | ಇಷ್ಟರಿಂದ |
| ೬೯ | ೨೪ | ಹುಟ್ಟುತು | ಹುಟ್ಟಿತು |
| ೭೧ | ೯ | ಈ ವಿಶ್ವದ | ವಿಶ್ವದ ಈ |
| ೭೯ | ೧ | ೭ | ೭೯ |
| ,, | ೧ | ವಿಶ್ವೋ...ಸವು | ಮಾನಸಶಾಸ್ತ್ರವಿಚಾರವು |
| ,, | ೨೪ | ಯಜ್ಞ | ಯಜ್ಞ |
| ೮೦ | ೪ | ಅಗ್ನಿಹೊತ್ರ | ಅಗ್ನಿಹೋತ್ರ |
| ೮೨ | ೧೬ | ಚಿತ್ತವೂ | ಚಿತ್ತವು |
| ೮೮ | ೧೧ | ಒರೆಗೆ | ವರೆಗೆ |
| ,, | ೨೫ | ಪ್ರಮೋಶಿಸಿದರೆ | ಪ್ರವೇಶಿಸಿದರೆ |
| ೯೨ | ೭ | ಖಂ ೨ | ಖಂ ೧೧ |
| ೯೬ | ೧೯ | ಸ್ವತಂತ್ರನು | ಸ್ವತಂತ್ರನೂ |
| ೧೦೦ | ೧ | ಆನಂತ | ಅನಂತ |
| ೧೦೧ | ೧ | ಚಿದನ | ಚಿದ್ಘನ |
| ೧೦೧ | ೧೮ | ಅವಸೆಯು | ಅವಸ್ಥೆಯು |
| ೧೦೩ | ೧೫ | ಆದೂ | ಅದೂ |
| ೧೧೧ | ೧೭ | ಮಂತ್ರದೃಷ್ಟ | ಮಂತ್ರದ್ರಷ್ಟ |
| ೧೧೩ | ೧೮ | ಅರೆಮರವಿನಿಂದ | ಅರೆಅರಿವಿನಿಂದ |
| ೧೧೪ | ೮ | ಹಣಾಗುವನು | ಹಣ್ಣಾಗುವನು |
| ೧೧೭ | ೧೫ | ಕಾಳತ್ತಲೆ | ಕಾಳ್ಗತ್ತಲೆ |
| ೧೧೯ | ೧೩ | ಶುಕಪಕ್ಷ | ಶುಕ್ಲ ಪಕ್ಷ |
| ೧೨೭ | ೨೬ | ( ಆನಾತ್ಮವಾದ ) | ( ಅನಾತ್ಮವಾದ ) |
| ೧೨೮ | ೮ | ಭಿಕ್ಷು–ಶ್ರಮಣರಕ | ಭಿಕ್ಷುಶ್ರಮಣಕರ |
| ೧೩೨ | ೭ | ಪುರುಪನನ್ನಾಗಿ | ಪುರುಷನನ್ನಾಗಿ |
| ೧೪೧ | ೧೭ | ಧೃಡವಾದ | ದೃಢವಾದ |
| ೧೪೨ | ೧ | ಅಶ್ವತದೊಡನೆಸ್ಥ್ಯಾಂಡಿ | ಅಶ್ವತ್ಥದೊಡನೆ ಸ್ಯಾಂಡಿ |
| ೧೪೪ | ೬ | ಕೃಷ್ಣನೂ | ಕೃಷ್ಣನೂ |

| | | | |
|---|---|---|---|
| ೧೪೪ | ೧೩ | ಕೃಷನ | ಕೃಷ್ಣನ |
| ೧೪೬ | ೧ | ಉಪನಿಷತ್ತುಗಳಗೂ | ಉಪನಿಷತ್ತುಗಳಿಗೂ |
| ,, | ೧೬ | ಅತ್ಯತಿಪ್ಮತ್ಸವನ್ನು | ಅತ್ಯತಿಷ್ಮತ್ವವನ್ನು |
| ೧೪೮ | ೧೬ | ಸಾಮಿಜ್ಯತೆ | ಸಾಯುಜ್ಯತೆ |
| ೧೫೨ | ೨೦ | ಅದ್ವೆತಮತವು | ಅದ್ವೈತ ಮತವು |
| ೧೫೩ | ೨೬ | ಇರುವವೆಂಬುವನ್ನು | ಇರುವದೆಂಬುವನ್ನು |
| ೧೫೫ | ೧೦ | ಯಾಜ್ಞದಲ್ಕ್ಯನು | ಯಾಜ್ಞವಲ್ಕ್ಯನು |
| ೧೬೮ | ೬ | ನಮು | ನಮ್ಮ |
| ೧೭೫ | ೨೧ | ಹೊ…ವವೆನ್ನಬೇಕೋ | ಹೊ…ವದೆನ್ನಬೇಕೋ |
| ೧೯೧ | ೨೫ | ಶುವ | ಶುದ್ಧ |
| ೧೯೨ | ೩ | ಒಂದಕ್ಕೊಂದು | ಒಂದಕ್ಕಿಂತ ಒಂದು |
| ೧೯೫ | ೮ | ನೀತಿಶಾಸ್ತ್ರಜರು | ನೀತಿಶಾಸ್ತ್ರಜ್ಞರು |
| ೨೦೨ | ೪ | ಪುತ್ರೈಷಣೆ | ಪುತ್ರೈಷಣೆ |
| ,, | ,, | ವಿತ್ರೈಷಣೆ | ವಿತ್ತೈಷಣೆ |
| ೨೦೬ | ೨೦ | ಮಾನಷಾನಂದವು | ಮಾನುಷಾನಂದವು |
| ೨೦೮ | ೪ | ಆತ್ಮಜ್ಯೋತಿಯು | ಆತ್ಮಜ್ಯೋತಿಯು |
| ೨೨೨ | ೧ | ಬುದಿಕೋಶದ | ಬುದ್ಧಿಕೋಶದ |
| ೨೨೪ | ೧೦ | ಮುಂ ಕೌ, | ಮುಂ ೧, |
| ೨೩೦ | ೨೭ | ನೋದುವದಾಗದಿದ್ದರೂ | ನೋಡುವದಾಗದಿದ್ದರೂ |
| ,, | ೨೭ | ದೃದಯ | ಹೃದಯ |
| ೨೩೩ | ೧೮ | ಮುಂ ೨ | ಮುಂ ೧೧ |
| ೨೩೪ | ೮ | ಶಾರೀರಿಕಸಿತಿಯು | ಶಾರೀರಿಕ ಸ್ಥಿತಿಯು |
| ,, | ೧೨ | ತಿಳಿದಬಂದಿಲ್ಲ | ತಿಳಿದುಬಂದಿಲ್ಲ |
| ೨೩೪ | ೨೨ | ಶಾಶತವಾದ | ಶಾಶ್ವತವಾದ |
| ೨೩೬ | ೨೨ | ಅವನಿಗಿಂದ | ಅವನಿಗಿಂತ |
| ,, | ೨೪ | ಉಪನಿಷತ್ತಿದಭಾಸಿ | ಉಪನಿಷತ್ತಿನಭ್ಯಾಸಿ |

# ಭಾಗ ೨

## ಆಧಾರಮಂತ್ರಗಳು ಮುಂತಾದ್ದು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧೩ | ಪ್ರಷ್ಟೇ | ಪೃಷ್ಟೇ |
| ೩ | ೨೨ | ಪಾಂಕ್ತ್ರಂನೈವ | ಪಾಂಕ್ತೇನೈವ |
| ೪ | ೪ | ನಿಕೃ…ಸಮಸತ್ವಮಿತಿ | ನಿಕೃ…ಸಮತ್ವಮಿತಿ |
| ,, | ೫ | ರತಿ…ಮೀರ್ಷಾ | ರತಿ…ಮೀರ್ಷ್ಯಾ |
| ,, | ೬ | ಜಿಹೀಷಾ | ಜಿಹೀರ್ಷಾ |
| ,, | ೧೩ | ಬದ್ಧೀಂ | ಬುದ್ಧೀಂ |
| ೫ | ೫ | ಪಂಚಸ್ರೋತೊಂಬುಂ | ಪಂಚಸ್ರೋತೋಂಬುಂ |
| ,, | ೧೮ | ಆಪ್ತೇ…ದಾ | ಆಪ್ತೇ…ದ್ವಾ |
| ,, | ೨೩ | ಗೃಹಣೇನ | ಗ್ರಹಣೇನ |
| ೬ | ೧೫ | ಏ…ದಂಸ್ಯಾನ್ಯಾನಿ | ಏ…ದಸ್ಯಾನ್ಯಾನಿ |
| ೧೦ | ೨೧ | ವಿಜಾತೀಯಾದಿತಿ | ವಿಜಾನೀಯಾದಿತಿ |
| ೧೨ | ೮ | ಗ್ರುಚ್ಛತಿ | ಗಚ್ಛತಿ |
| ,, | ೧೯ | ಬ್ರಹಾ | ಬ್ರಹ್ಮಾ |
| ,, | ೨೧ | ಹೋ…ತ್ರೂಃ | ಹೋ…ತ್ರುಃ |
| ,, | ೨೩ | ( ಗಾಗ್ರ್ಯಂ ) | ( ಗಾರ್ಗ್ಯಂ ) |
| ,, | ೨೬ | ಮತ್ಸ್ಯೇಷ್ಮು | ಮತ್ಸ್ಯೇಷು |
| ೧೩ | ೧೬ | ಉರ್ಧ್ವ | ಊರ್ಧ್ವ |
| ೧೬ | ೧೨ | ಜಾಯಾನ್ | ಜ್ಯಾಯಾನ್ |
| ೧೮ | ೨ | ಯದ್ವಿದ್ಯೂತೋ | ಯದ್ವಿದ್ಯುತೋ |
| ೧೯ | ೪ | ಶ್ರೋತಂ | ಶ್ರೋತ್ರಂ |
| ,, | ೧೫ | ಹ್ಯೆನಃ | ಹ್ಯೆನಂ |
| ,, | ೨೮ | ಸರ್ವ | ಸರ್ವಾ |
| ೨೦ | ೩ | ರವಿರ್ದೇವಃ | ರಯಿರ್ದೇವಃ |
| ೨೧ | ೨೫ | ಲೋಕಾನ್ನ | ಲೋಕಾನ್ನು |

| | | | |
|---|---|---|---|
| ,, | ೨೬ | ಲೊಕಾ | ಲೋಕಾ |
| ೨೨ | ೧೧ | ಭಾಗಿನ್ಯೊ | ಭಾಗಿನ್ಯಾ |
| ,, | ೧೫ | ತಸ್ಯಾ | ತಸ್ಯ |
| ೨೫ | ೧೦ | ಆಹಾರಶುದೋ | ಆಹಾರಶುದ್ಧೌ |
| ೨೫ | ೧೯ | ಪ್ರಾಣನ್ನನ | ಅಪ್ರಾಣನ್ನನ |
| ೨೬ | ೭ | ಚ ಉಧ್ಭಿಜ್ಜಾನಿ | ಚ ಸ್ವೇದಜಾನಿ ಚ |
| ,, | ೧೯ | ಲೊಕಃ | ಲೋಕಃ |
| ,, | ೧೮ | ಮನಸ್ತನ್ನಿಷ್ಠ | ಮನಾಸ್ತನ್ನಿಷ್ಠ |
| ,, | ೧೯ | ಗತಿರಿತ್ಯೇವ | ಗತಿರಿತ್ಯೇವಂ |
| ೩೨ | ೪ | ಏಷೋ…ಹೃದಯ | ಏಷೋ…ಹೃರ್ದಯ |
| ೩೫ | ೧೭ | ತಮು……ನ್ನೆಃ | ತಮು……ನ್ನೈಃ |
| ೩೬ | ೧ | ಶೃಣೊತೀತ್ಯಾಹುಃ | ಶೃಣೋತೀತ್ಯಾಹುಃ |
| ೩೬ | ೨೪ | ತದ್ಯ…ನಿರ್ಲ್ವಯನೀ | ತದ್ಯ…ಹಿನಿರ್ಲ್ವಯನಿ |
| ೩೮ | ೧ | ವಿದುರ್ಯೋ | ವಿದುರ್ಯೇ |
| ,, | ೧೮ | ಶ್ವಯಿೋನಿಂ | ಶ್ವಯೋನಿಂ |
| ,, | ೨೪ | ಮತ್ರ್ಯೋ | ಮತ್ರ್ಯೋ |
| ೩೯ | ೧೩ | ನದಿಂ | ನದೀಂ |
| ,, | ೩೮ | ತ…ತೊ | ತ…ತೇ |
| ೪೨ | ೧೩ | ವಹ್ನಿಃ | ಬಹ್ವೀಃ |
| ೪೪ | ೨೧ | ಕ್ರೃತಾರ್ಥೋ | ಕೃತಾರ್ಥೋ |
| ೪೫ | ೧೬ | ಪಿಂ…ನ್ಮಸ್ತಿಸ್ಮೃತಿ | ಪಿಂ…ಮ್ನಸ್ತಿಸ್ಮೃತಿ |
| ,, | ೨೬ | ಶಯೀತ್ | ಶಯೀತ |
| ೪೬ | ೧ | ಯೇನಾವೃತಂ | ಯೇನಾವೃತಂ ನಿತ್ಯಮಿದಂ |
| ,, | ೧೯ | ಶೇ | ಶ್ವೇ |
| ,, | ,, | ಘ್ರುತಾತ್ಪರಂ | ಘೃತಾತ್ಪರಂ |
| ೪೭ | ೧೭ | ಏನಾನಾ | ಏನಾನ್ |
| ,, | ೨೦ | ಮಾ…ನ್ನೆತೇ | ಮಾ…ನ್ನೈತೇ |
| ,, | ೨೪ | ಕುರ್ವನ್ನೆವೇಹ | ಕುರ್ವನ್ನೇವೇಹ |

| | | | |
|---|---|---|---|
| ೪೮ | ೨ | ಶ್ರೋತೇ | ಶ್ರೋತ್ರೇ |
| ೫೦ | ೮ | ನಿ…ಸಂಖ್ಯಂ | ನಿ…ಸಂಸ್ಥಂ |
| ,, | ೨೫ | ತತ್ಸೃಷ್ಟ್ವಾ | ತತ್ಸೃಷ್ಟ್ವಾ |
| ೫೨ | ೫ | ಸೋವ್ಯೈಕೇನ | ಸೋವ್ಯೈಕೇನ |
| ,, | ೧೬ | ಶಭ್ದಾನ್ | ಶಬ್ದಾನ್ |
| ,, | ೧೮ | ಬಾಹ್ಯಾಸ್ | ಬಾಹ್ಯಾನ್ |
| ,, | ೧೯ | ಗೃಹಣಾಯ | ಗ್ರಹಣಾಯ |
| ,, | ೨೦ | ಗೃಹೀತಃ | ಗೃಹೀತಃ |
| ,, | ೨೦ | ಮಿಣಾಯೈ | ವೀಣಾಯೈ |
| ,, | ೨೧ | ಗೃಹಣೇನ | ಗ್ರಹಣೇನ |
| ,, | ೨೧ | ವೀಣಾವಾದ್ಯಸ್ಯ | ವೀಣಾವಾದಸ್ಯ |
| ೫೩ | ೩ | ಮನ್ವೀತ್ | ಮನ್ವೀತ |
| ೫೪ | ೧೪ | ತದ್ಯಕೇತತ್ | ತದ್ಯದೇತತ್ |
| ೫೬ | ೭ | ಪಾರ್ಥಯಂತೇ | ಪ್ರಾರ್ಥಯಂತೇ |
| ೫೯ | ೭ | ಶ್ರುತಿರ್ಯಾತ್ರೈತತ್ | ಶ್ರುತಿರ್ಯತ್ರೈತತ್ |
| ೬೦ | ೮ | ಆಸ್ಮಾಕವ್ | ಅಸ್ಮಾಕವ್ |
| ,, | ೯ | ವಿಜಜ್ಞೇ | ವಿಜಜ್ಞೌ |
| ,, | ೧೦ | ವ್ಯಜಾನನ್ತ | ವ್ಯಜಾನನ್ತ ಕಿಮಿದಂ ಯಕ್ಷ<br>ಮಿತಿ। ತೇ ಅಗ್ನಿಮಬ್ರುವನ್<br>ಜಾತವೇದ ಏತದ್ |
| ೬೨ | ೨೨ | ತಥಾನ್ಯೋ | ತಥಾನ್ಯೇ |
| ೬೩ | ೧೪ | ಆಖಾನಗ್ರ | ಆನಖಾಗ್ರ |
| ೬೫ | ೨೧ | ಹೊವಾಚ | ಹೋವಾಚ |
| ,, | ೨೩ | ಅಪ್ರಾಪ್ಯೈಯ | ಅಪ್ರಾಪ್ಯೈವ |
| ,, | ೨೭ | ,, | ,, |
| ೬೬ | ೧ | ಜಾನಾತ್ಯಮನು | ಜಾನಾತ್ಯಯಮ |
| ೬೭ | ೧೪ | ದೃಷ್ಟ್ವಾ | ದ್ರಷ್ಟ್ವಾ |
| ,, | ೧೯ | ಕಮು | ಕರ್ಮ |

| | | | |
|---|---|---|---|
| ,, | ೨೭ | ದೃಷ್ಟವ್ಯಃ | ದ್ರಷ್ಟವ್ಯಃ |
| ೭೨ | ೧೪ | ವಿರಾನ್ಮಾ | ವೀರಾನ್ಮಾ |
| ೭೩ | ೧ | ಪನಿಷದಿಕ | ಔಪನಿಷದಿಕ |
| ,, | ೧೯ | ಕುರ್ಯಾಮು | ಕುರ್ಯಾಂ |
| ,, | ೨೨ | ದೃಷ್ಟವ್ಯಾಃ | ದ್ರಷ್ಟವ್ಯಃ |
| ೭೪ | ೨೦ | ದಾಸಭಾರ್ಯಾಂ | ದಾಸಭಾರ್ಯಾಂ |
| ,, | ,, | ಕ್ಷೇತ್ರಾಣ್ಯಯತ | ಕ್ಷೇತ್ರಾಣ್ಯಾಯುತ |
| ೭೭ | ೧೯ | ಕುರುತೇ, | ಕುರುತೇ, ಯತ್ಕರ್ಮ ಕುರುತೇ |
| ೭೭ | ೨೫ | ವೃಜಂತಿ | ವ್ರಜಂತಿ |
| ,, | ೨೬ | ,, | ,, |
| ೭೮ | ೩೩ | ಶ್ವೇ | ಶ್ವೇ |
| ೮೨ | ೨೬ | ಏ...ರಂ | ಏ...ರಂ ಬ್ರಹ್ಮ, ಏತದ್ಧ್ಯೇವಾಕ್ಷರಂ ಪರಂ, ಏತದ್ಧ್ಯೇವಾಕ್ಷರಂ |
| ೮೩ | ೧೦ | ಪಪೃಚ್ಛ | ಪಪ್ರಚ್ಛ |
| ೮೪ | ೧೪ | ಜಾತವೇದ | ಜಾತವೇದಾ |
| ೯೩ | ೨೩ | ನಿಸ್ಸಂದಿಗವಾಗಿ | ನಿಸ್ಸಂದಿಗ್ಧವಾಗಿ |
| ೧೦೦ | ೨೧ | ಅಭ್ಯಾಸಮೂಡು | ಅಭ್ಯಾಸಮಾಡು |
| ೧೦೨ | ೨೦ | ಉಪತಿಷತ್ತುಗಳ | ಉಪನಿಷತ್ತುಗಳ |
| ೧೦೨ | ೨೬ | ಹಿಲೆಬ್ರಾಂಡ್ಟನ | ಹಿಲೆಬ್ರಾಂಡ್ಟ್ಸನ |
| ೧೦೮ | ೧೫ | ಸರಿಬಾರದು | ಸರಿಬಾರದ |
| ೧೦೮ | ೨೭ | ಇವನು | ಇದನ್ನು |
| ೧೧೨ | ೪ | ಜೇವಾತ್ಮ | ಜೀವಾತ್ಮ |
| ೧೧೫ | ೭ | ಸಂಸ್ಪೃತ | ಸಂಸ್ಕೃತ |

ಓಂ ಶಾಂತಿಃ ಶಾಂತಿಃ ಶಾಂತಿಃ

## ಪ್ರೊ. ರಾನಡೇಯವರ 'A constructive survey of Upanishadic Philosophy' ಎಂಬ ಪುಸ್ತಕದ ಬಗ್ಗೆ ಮಹನೀಯರ ಅಭಿಪ್ರಾಯಗಳು

ಪ್ರೊ. ರಾನಡೇಯವರು ಪ್ರಕೃತಿಯ ಅಸ್ವಾಸ್ಥ್ಯದ ಮೂಲಕ ಪುಣೆಯ 'ಡೆಕ್ಕನ್ ಎಜ್ಯುಕೇಶನ್ ಸೊಸಾಯಟಿ' ಯ ಆಜೀವ ಸಭಾಸದತ್ವದಿಂದ ನಿವೃತ್ತರಾದಮೇಲೆ ನಿಂಬಾಳದಲ್ಲಿ ( ಜಿ. ವಿಜಾಪೂರ ) **ಅಧ್ಯಾತ್ಮಭವನ** ವೆಂಬ ( Academy of Philosophy and Religion) ಸಂಸ್ಥೆಯನ್ನು ಸ್ಥಾಪಿಸಿ ಅದರ ಪಾರುಪತ್ಯಗಾರರಾಗಿದ್ದಾರೆ ( Director ). ಈಗ ನಾಗಪೂರ ಮತ್ತು ಪುಣೆ ಎಂಬಲ್ಲಿ ಆ ಸಂಸ್ಥೆಯ ಶಾಖೆಗಳಿವೆ. ೧೬ ಸಂಪುಟಗಳಲ್ಲಿ ಭಾರತೀಯ ತತ್ವಜ್ಞಾನದ ಸಂಪೂರ್ಣ ಚರಿತ್ರವನ್ನು ( Encyclopaedic history of Indian Philosophy ) ಪ್ರಕಟಿಸುವದೆ ಸದ್ಯಕ್ಕೆ ಸಂಸ್ಥೆಯ ಮುಖ್ಯ ಕಾರ್ಯವಾಗಿದೆ. ಆ ಮಾಲೆಯಲ್ಲಿ ಮೇಲ್ಕಾಣಿಸಿದ ಗ್ರಂಥವು ೨ನೇ ಪುಷ್ಪವಾಗಿದೆ. ಅದೇ ಈಗ **ಉಪನಿಷತ್-ರಹಸ್ಯ**ವೆಂಬ ಹೆಸರಿನಿಂದ ಕನ್ನಡಿಸಲ್ಪಟ್ಟಿದೆ.

ಪ್ರೊ. ರಾನಡೇಯವರ 'A constructive survey of Upanishadic Philosophy' ಎಂಬ ಗ್ರಂಥವು ಹೊರಬಿದ್ದಂದಿನಿಂದ ಅಲ್ಲಲ್ಲಿಯ ಪಂಡಿತ ಮಹನೀಯರು ಪತ್ರದ್ವಾರಾ ಅಥವಾ ವೃತ್ತಪತ್ರಿಕೆಗಳದ್ವಾರಾ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವೆಲ್ಲವುಗಳನ್ನು ಅಥವಾ ಕೆಲವುಗಳನ್ನಾದರೂ ಪೂರ್ಣವಾಗಿ ಇಲ್ಲಿ ಕೊಡುವದು ಅಸಾಧ್ಯವು. ಅವು ಎಲ್ಲವೂ ಪ್ರಶಂಸಾತ್ಮಕವೆ ಇವೆ. ಆದುದರಿಂದ ಅವುಗಳಲ್ಲಿಯ ಕೆಲವೊಂದರಲ್ಲಿಯ ಭಾಗಗಳು ವಾಚಕರ ಅವಗಾಹನೆಗಾಗಿ ಈ ಕೆಳಗೆ ಕೊಡಲ್ಪಟ್ಟಿವೆ.

೧ ಅಮೇರಿಕಾಖಂಡದ ನ್ಯೂ ಹ್ಯಾವೆನ್‌ದಲ್ಲಿರುವ ( ಕಾನೆಟಿಕಟ್ ) ಈ. ವಾಶಬರ್ನ ಹಾಪಕಿನ್ಸ ಇವರು ೧-೬-೨೭ಕ್ಕೆ ಪ್ರೊ. ರಾನಡೇಯವರಿಗೆ ಬರೆದುದೇನಂದರೆ, ನೀವು ಬರೆದ 'ಔಪನಿಷದಿಕ ತತ್ವಜ್ಞಾನ' ವನ್ನು ಅದೆಷ್ಟೋ ಹರ್ಷದಿಂದ ಓದಿದೆನು. ವಾದವಿಷಯಗಳಾದ ಕರ್ಮ, ಮಾಯೆ ಮುಂತಾದ ವಿಷಯಗಳ ವಿವೇಚನೆಯು ಮನದಟ್ಟಾಗುವಂತಿದೆ. ನಿಮ್ಮ ರಚನಾಕ್ರಮವೂ ವಿವೇಚನರೀತಿಯೂ ನಿಜವಾಗಿ ಅಭಿನಂದನೀಯವು.

೨ ಸ್ವಿತ್ಸರಲಂಡದ ಮುಖ್ಯ ಪಟ್ಟಣವಾದ ಜಿನೀವಾ ಪಟ್ಟಣದಲ್ಲಿರುವ ಪಾಲ ಓಲ್ಟ್ರಾಮಾರ ಇವರು ೨೨-೬-೨೭ ಕ್ಕೆ ಪ್ರೊ. ರಾನಡೇಯವರಿಗೆ ಬರೆದುದೇನಂದರೆ, ನಿಮ್ಮ 'ಔಪನಿಷದಿಕ ತತ್ವಜ್ಞಾನವು' ಬಹು ರಮಣೀಯವಾಗಿದೆ.

೩ ಇಂಗ್ಲಂಡದ ರಾಜಧಾನಿಯಾದ ಲಂಡನದಲ್ಲಿ ' ದಿ ಸ್ಕೂಲ ಆಫ್ ಓರಿಯಂಟಲ್ ಸ್ಟಡೀಜ ' ಎಂಬಲ್ಲಿರುವ ಪ್ರೊ. ಏ. ಬಿ. ಕೀಥರು ೧೯೨೭ ರಲ್ಲಿ ಮೊದಲು ಕೆಲವು ಹೋಲಿಕೆ ಮುಂತಾದವುಗಳನ್ನು ಕೊಟ್ಟು, ಕೆಲವು ಅಂಶಗಳಲ್ಲಿ ತಮ್ಮ ಮತಭೇದವನ್ನು ತೋರಿಸಿ, ಕೊನೆಗೆ ಬರೆದುದೇನಂದರೆ, ಈ ವಿಷಯದ ಬಗ್ಗೆ ಈವಾಗಲೆ ಇರುವವಿ ಸ್ತೃತ ಗ್ರಂಥಭಾಂಡಾರಕ್ಕೆ ನಿಮ್ಮ ಅತ್ಯುಪಯುಕ್ತ ಗ್ರಂಥವು ಹೊಸದಾಗಿ ಸೇರಿದಂತಾಯಿತು.

೪ ಲಂಡನ್ನದ ಡಬ್ಲೂ. ಜೀ. ರಾಫೇ ಏ. ಆರ್. ಸೀ. ಏ, ಎಫ್. ಆರ್. ಎಸ್. ಏ. ಇವರು ೭-೧೨-೨೭ಕ್ಕೆ ಪ್ರೊ. ರಾನಡೇಯವರಿಗೆ ಬರೆದುದೇನಂದರೆ, ಕೆಲವೇ ತಾಸುಗಳ ವರೆಗೆ ಅಲ್ಲಲ್ಲಿ ನೋಡಿದರೂ ಕೃತಿಯು ಉಚಿತ ಯೋಜನೆಯುಳ್ಳದ್ದೆಂದೂ ವಿವೇಚನಾ ರೀತಿಯು ಶಾಸ್ತ್ರೀಯವೆಂದೂ ತೋರಿಬಂದಿತು.

೫ ಬಾನ್‌ದಿಂದ ೧೧-೧-೧೯೨೭ ನೆಯ ದಿನ ಪ್ರೊ. ಹರಮನ್ ಜಾಕೋಬಿ ಇವರು ಬರೆದುದೇನಂದರೆ, ಇದನ್ನು ಮನಗೊಟ್ಟು ಕೂಲಂಕಷವಾಗಿ ಓದಿ ನೋಡಿದೆನು. ಔಪನಿಷದಿಕ ತತ್ವಜ್ಞಾನವನ್ನು ಕುರಿತು ಬರೆಯಲ್ಪಟ್ಟ ಗ್ರಂಥಗಳಲ್ಲಿ ನಿಮ್ಮದೊಂದು ಹೌದೆನ್ನಿಸಿ ಕೊಳ್ಳುವಂತಹ ಕೃತಿಯಾಗಿರುವದೆಂದು ತುಂಬಾ ನಂಬಿದ್ದೇನೆ.

೬ ಟ್ಯೂಬಿನ್‌ಗೆನ್‌ದಿಂದ ಪ್ರೊ. ಆರ್. ಗಾರ್ಬೆಯವರು ೬-೧-೨೭ ಕ್ಕೆ ಬರೆಯುವದೇನಂದರೆ, ನೀವು ಪ್ರಕಟಿಸಿದ ಎಲ್ಲ ಕೃತಿಗಳನ್ನು, ವಿಶೇಷವಾಗಿ ನಿಮ್ಮ ' ಔಪನಿಷದಿಕ ತತ್ವಜ್ಞಾನ ' ವನ್ನು ಆಸ್ಥೆಯಿಂದೋದಿ ಬಹಳೇ ಪ್ರಯೋಜನ ಹೊಂದಿದೆನು.

೭ ಪ್ರೇಗದಿಂದಾ ಪ್ರೊ. ಎಮ್. ವಿಂಟರ್ನಿಟ್ಝ ಇವರು ೩೧-೧೨-೧೬ ನೆಯ ದಿನ ಬರೆಯುವದೇನಂದರೆ, ಈ ಕೃತಿಯು ಎಷ್ಟೋ ಮಹತ್ತರವಾದ ಸಿದ್ಧಾಂತಗಳನ್ನು ಹಾಕಿಕೊಡುವದೆಂಬುದನ್ನೂ ಎಷ್ಟೋ ವಿಷಯಗಳ ಬಗೆಗೆ ಹೊಸಬೆಳಕು ಕೊಡುವದೆಂಬುದನ್ನೂ ನಾನು ಕಾಣಬಲ್ಲೆನು.

೮ ಲೆನಿನ್‌ಗ್ರಾಡದ ಎಕೇಡೆಮಿ ಆಫ್ ಸಾಯನ್ಸದಲ್ಲಿರುವ ಪ್ರೊ. ಟೀ. ಎಚ್ ಸ್ಟೆಚರಬ್ಯಾಟ್ಸಕೀ ಇವರು ೩೦-೧-೧೯೨೭ ದಿನ ಬರೆಯುವದೇನಂದರೆ, ಯುರೋಪದ ತತ್ವಜ್ಞಾನವನ್ನು ಮುನ್ನವೇ ಕಂಡರಿತಿರುವ ಪ್ರಗೂಢ ಭಾರತೀಯ ತತ್ವಜ್ಞಾನವನ್ನು ಕೆಲವರು ದುರ್ಲಕ್ಷಿಸುವದುಂಟು. ಅದನ್ನು ಹೋಗಲಾಡಿಸಲೆತ್ನಿಸುವ ನಿಮ್ಮ ಕೃತಿಯನ್ನು ನಾನು ಅತ್ಯಂತ ಆದರದಿಂದ ಸ್ವೀಕರಿಸುತ್ತೇನೆ.

೯ ಬ್ರುಸೆಲ್ಸದಲ್ಲಿರುವ (ಬೆಲ್‌ಜಿಯಮ್) ಪ್ರೊ. ಲುಯಿ. ಡಿ. ಲಾ. ವ್ಹಾಲೇಪೂಸಿನ್ ಇವರು ಡಿಸೆಂಬರ ೧೯೨೬ ರಲ್ಲಿ ಬರೆಯುವದೇನಂದರೆ, ನಿಮ್ಮ ಗ್ರಂಥದಲ್ಲಿ ಉಜ್ವಲವಾದ ಭಾಗಗಳಿರುವದರಿಂದ ನಿಜವಾಗಿಯೂ ನಿಮ್ಮ ಸಾಹಸಕ್ಕೆ ಫಲವು ದೊರೆಯುವದು. ಇವ

ರಿಂದ ಲೋಕಕ್ಕೆ ಅತ್ಯಂತ ಪ್ರಯೋಜನವಾಗುವದು. ನಿಮ್ಮಂಥ ಭಾರತೀಯ ವಿದ್ವಾಂಸರಿಗೆ ಸಹಜವಾಗಿಯೆ ದೊರೆತ ಸಂಸ್ಕಾರಗಳನ್ನು ನಮ್ಮಂಥವರು ಎಷ್ಟೋ ವರ್ಷಗಳವರೆಗೆ ನಿಃಪಕ್ಷಪಾತಬುದ್ಧಿಯಿಂದ ಅಧ್ಯಯನಮಾಡಿ ದೊರಕಿಸಬೇಕಾಗುವದು.

೧೦ ಮುಂಬಯಿ ಝೇವಿಯುರ ಕಾಲೇಜದ ಪ್ರೊ. ಝಿಮರಮನ್ ಇವರು ೧೭-೧೧-೨೫ ನೆಯ ದಿನ ಅಂದದ್ದು. ನಿಮ್ಮ ಗ್ರಂಥದ ಕಡೆಗೆ ಸಹಜವಾಗಿ ಒಮ್ಮೆ ಕಣ್ಣು ಹಾಕಿನೋಡಿ ದರೂ ಉಪನಿಷತ್ತತ್ವಜ್ಞಾನದಲ್ಲಿ ಡಾಯಸೆನ್ನನಿಗಿಂತ ನಿಮ್ಮದೊಂದು ಕೈ ಮೇಲೆ ಇರುವ ದೆಂದು ಎನಿಸುವದು.

೧೧ ಪುಣೆಯ ಡೆಕ್ಕನಕಾಲೇಜದ ಪ್ರಿನ್ಸಿಪಾಲರಾದ ಪ್ರೊ. ಎಚ್. ಜೀ. ರಾಲಿನ್‌ಸನ್ ಇವರು ೧೬-೯-೧೯೨೬ ದಿನ ಬರೆದುದೇನಂದರೆ, ನಿಮ್ಮ ಮಹಾಗ್ರಂಥವು ನಿಮ್ಮ ಬಲ ವಾದ ಸಂಶೋಧನಶಕ್ತಿಯನ್ನೂ ವಿಶಾಲವಿದ್ವತ್ತೆಯನ್ನೂ ವ್ಯಕ್ತಪಡಿಸುವದು.

ಇಂಥ ಹಾಗೂ ಇದಕ್ಕೂ ಮೇಲ್ತರಗತಿಯ ಅಭಿಪ್ರಾಯಗಳನ್ನು ಆಕ್ಸಫರ್ಡದ ಜೇ. ಇಸ್ಟಲಿನ್ ಕಾರ್‌ಪೆಂಟರ, ಏ. ಏ. ವ್ಯಾಕಡೊನೆಲ್, ಇವರು ಕೊಟ್ಟಿರುತ್ತಾರೆ. ಕೇಂಬ್ರಿ ಜ್ಜದ ಈ. ಜೇ. ರ್‍ಯಾಪಸನ್ ಮತ್ತು ಜೆ. ಎಸ್. ಮ್ಯಾಕೆನ್‌ಝೀ, ಕ್ಯಾಲಿಫೋರ್ನಿಯಾದ ಜೇ. ಎಚ್. ಮುಯಿರಹೆಡ್, ಹಾರವರ್ಡ ಯುನಿವ್ಹರ್ಸಿಟಿಯ ಜೀ. ಫ್ಯಾಡೆಗನ್, ಬ್ರೆಸಲಾದ (ಜರ್ಮನಿ) ಹಿಲೆಬ್ರಾಂಡ್ಟ, ಬಡೋದೆಯ ಪ್ರೊ. ವಿಜು, ಕಲಕತ್ತಾವಿಶ್ವ ವಿದ್ಯಾಲಯದ ಸರ ಅಶುತೋಷ ಮುಕರ್ಜಿ, ಪುಣೆಯ ಆರ್. ಜೀ. ಭಾಂಡಾರಕರ, ಬಡೋದೆಯ ಮಹಾರಾಜರು ಮುಂತಾದವರೆಲ್ಲರೂ ಇದೇ ಬಗೆಯ ಮತಗಳನ್ನು ವ್ಯಕ್ತ ಪಡಿಸಿದ್ದಾರೆ.

ಇದಲ್ಲದೆ ‘ ದಿ ಕ್ವೆಸ್ಟ ’ ‘ ದಿ ನ್ಯೂ ಏಜ ’ ‘ ಜರ್ನಲ ಆಫ್ ರಾಯಲ್ ಏಶಿಯಾ ಟಿಕ್ ಸೊಸಾಯಟಿ ’ ಮುಂತಾದ ಪರದೇಶದ ಪತ್ರಿಕೆಗಳಲ್ಲಿಯೂ ‘ ಟಾಯಿಮ್ಸ, ’ ‘ ಕ್ರಾನಿಕಲ್, ’ ‘ ಹಿಂದೂ, ’ ‘ ಲೀಡರ ’ ‘ ಮೈಸೂರ ಯುನಿವ್ಹರ್ಸಿಟೀ ಮ್ಯಾಗಜಿನ್’ ‘ ಕೇಸರಿ ’ ಮುಂತಾದ ಹಿಂದುಸ್ತಾನದ ಪತ್ರಿಕೆಗಳಲ್ಲಿಯೂ ವಿಸ್ತೃತ ಮತ್ತು ಗುಣಗ್ರಾಹಿ ಲೇಖಗಳು ಬಂದಿವೆ.

ಇವೆಲ್ಲವುಗಳನ್ನು ವಿಮರ್ಶಿಸಿ ನೋಡಿದರೆ ಅಮೇರಿಕಾ, ಬೆಲ್‌ಜಿಯಮ್, ಇಂಗ್ಲಂಡ, ಜರ್ಮನಿ, ಸ್ವಿತ್ಸರಲಂಡ, ಹಾಲಂಡ ಮುಂತಾದ ಅನೇಕ ಪರದೇಶಗಳ ಪಂಡಿತರು ಸಹ ಈ ಗ್ರಂಥವನ್ನು ಒಳ್ಳೆ ಆದರದಿಂದ ಸತ್ಕರಿಸಿದ್ದಾರೆಂಬದು ಸ್ಪಷ್ಟವಿದೆ.

**ಅಧ್ಯಾತ್ಮಕಾರ್ಯಾಲಯ ಧಾರವಾಡ.**

